ವಿಷಯಾನುಕ್ರಮಣಿಕೆ

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯಾ ೧೭

# ಬ್ರಹ್ಮಾಂಡಪುರಾಣಂ

(ಕನ್ನಡ ಅನುವಾದಸಹಿತ)

ಸಂಚಿಕೆ ೪

ಅನುವಾದಕ:
ಆಸ್ಥಾನ ವಿದ್ವಾನ್ ಪಾಟಣಕರ ಚಂದ್ರಶೇಖರಭಟ್ಟ.

ಮೈಸೂರು :
ಮೈಸೂರು ಪ್ರಿಂಟಿಂಗ್ ಆಂಡ್ ಪಬ್ಲಿಷಿಂಗ್ ಹೌಸ್, ಮೈಸೂರು
೧೯೪೫

# ಮುನ್ನುಡಿ

ಬ್ರಹ್ಮಾಂಡ ಪುರಾಣದ ನಾಲ್ಕನೆಯ ಸಂಚಿಕೆಯು ಈಗ ವಾಚಕರ ಗಮನವನ್ನು ಸೆಳೆಯುವ ಸುಯೋಗವು ದೊರೆತಿರುವುದು ಇದು ವಿಶೇಷವಾದ ಪೌರಾಣಿಕ ಚರಿತ್ರ ಭಾಗವನ್ನು ಒಳಗೊಂಡಿರುವುದು. ಇದು ವಾಚಕರ ಮನ್ನಣೆಯನ್ನು ಹೊಂದಿ ನನ್ನ ಉದ್ಯಮದ ಅನುವೃತ್ತಿಯು ಅಮೋಘವಾಗಲೆಂದು ವಾಚಕರಲ್ಲಿ ಬೇಡಿಕೊಳ್ಳುತ್ತೇನೆ.

ಈ ಸಂಚಿಕೆಯಲ್ಲಿ ಮೂವತ್ತನಾಲ್ಕು ಅಧ್ಯಾಯಗಳು ಸೇರಿಕೊಂಡಿವೆ. ಕಾರ್ತವೀರ್ಯಾರ್ಜುನ ರಾಜನ ಕಾಮಧೇನು ಹರಣ ಪ್ರಯತ್ನದ ನಿಮಿತ್ತದಿಂದ ಪರಶುರಾಮನು ಕ್ಷತ್ರಿಯರನ್ನು ಇಪ್ಪತ್ತೊಂದು ಸಲ ಸಂಹಾರ ಮಾಡಿದ ಪ್ರಚಂಡ ದಿಗ್ವಿಜಯ, ಕಾರ್ತವೀರ್ಯಾರ್ಜುನನಲ್ಲಿದ್ದ ವಿಶೇಷ ಮಹಿಮಾತಿಶಯ, ಮತ್ತು ಸಗರ ಚಕ್ರವರ್ತಿಯ ಉಪಾಖ್ಯಾನಗಳು ಪ್ರತಿಪಾದ್ಯ ವಿಷಯಗಳಾಗಿವೆ. ಕಥಾಭಾಗ ಪರ್ಯಾಲೋಚನೆಯಲ್ಲಿ ಎಲ್ಲ ಪೌರಾಣಿಕ ವಿಷಯಗಳಲ್ಲಿಯೂ ಆಕ್ಷೇಪವು ಬರುವುದು ಸ್ವಭಾವವಾಗಿದೆ, ತಕ್ಕಮಟ್ಟಿಗೆ ಕೆಲ ಕೆಲವು ಆಕ್ಷೇಪಗಳಿಗೆ ಸಮಾಧಾನವನ್ನು ಮುಂದಿನ ಸಂಚಿಕೆಗಳಲ್ಲಿ ಕಾಣಬಹುದೆಂದು ಹಿಂದೆ ಅರಿಕೆ ಮಾಡಿಕೊಂಡಿದೆ. ಆ ಕೆಲವು ಅಂಶಗಳನ್ನು ಇಲ್ಲಿ ಗಮನಿಸಬೇಕು.

ಕಾರ್ತವೀರ್ಯಾರ್ಜುನನು ಅಮಿತಗುಣಗಳಿಂದ ಸಂಪನ್ನನೂ ದುರ್ಜಯನೂ ದೇವತಾಂಶ ಸಂಭೂತನೂ ಮತ್ತು ಶ್ರೀ ದತ್ತಗುರುಭಕ್ತನೂ ಆದ ಮಹಾತ್ಮನು, ಅವನಿಗೆ ಜಮದಗ್ನಿ ಮುನಿಯ ಕಾಮಧೇನುವಿನಲ್ಲಿ ಆಶಾಂಕುರವು ಹುಟ್ಟಿ ವಿಪರೀತಾನರ್ಥವು ಉಂಟಾಗುವುದು. ಭಾರ್ಗವ ರಾಮನು ಪವಿತ್ರ ವಿಪ್ರ ಕುಲದಲ್ಲಿ ಪ್ರಸೂತನಾಗಿ ಜಮದಗ್ನಿ ಮುಂತಾದ ಪಿತೃವರ್ಗದಲ್ಲಿ ಇದ್ದ ಶಮಾದಿ ಚಿಹ್ನಗಳನ್ನು ಬಿಟ್ಟು ಕ್ರೂರಕರ್ಮವನ್ನು ಆಚರಿಸಿದನು. ಮತ್ತು ಸಗರ ರಾಜನಿಗೆ ಸಂತತಿಯಿಲ್ಲದೆ ಔರ್ವ ಮುನಿಯ ಅನುಗ್ರಹದಿಂದ ಒಬ್ಬಳು ಪತ್ನಿಯಲ್ಲಿ ಏಕಮಾತ್ರ ಪುತ್ರನು ಜನಿಸಿದನು. ಮತ್ತೊಬ್ಬಳಲ್ಲಿ ವಿಸ್ಮಯವಾಗುವಂತೆ ಅರವತ್ತು ಸಹಸ್ರ ಪುತ್ರರನ್ನು ಗರ್ಭದಲ್ಲಿ ಇರಿಸಿದ ಮೊಟ್ಟೆಯು ಹುಟ್ಟುವುದು. ಒಂದು ವರ್ಷದ ಅವಧಿಯಲ್ಲಿ ಅದರಿಂದ ಪುತ್ರಾವಳಿಯು ಜನಿಸುವುದು. ಇದೆಲ್ಲ ಆಶ್ಚರ್ಯದ ಸಂಗತಿಯು, ಆದರೆ ಈ ವಿಷಯಗಳಿಗೆ ತಕ್ಕ ಸಮಾಧಾನಗಳನ್ನು ಹೇಳುವ ಮೊದಲು ಪುರಾಣಗಳ ತತ್ತ್ವವನ್ನು ನಾವು ಪರ್ಯಾಲೋಚಿಸುವುದು ಆವಶ್ಯಕವು.

ದೇವ-ಋಷಿಗಳು ಪ್ರತಿಯೊಂದು ಕಲ್ಪದಲ್ಲಿಯೂ ಪ್ರವಾಹ ರೂಪದಿಂದ ಅವತರಿಸುವರು, ಅವರಲ್ಲಿ ಮಾನವರಲ್ಲಿ ಇಲ್ಲದ ಅಪಾರ ಮಹಿಮೆಯು ಇರುವುದು, ಅದು ಅಂಶದಿಂದ ಅವತರಿಸಿದ ಮೂರ್ತಿಗಳಲ್ಲಿಯೂ ಇರುವುದು, ದೇವತಾ ತತ್ತ್ವವನ್ನು ವಿಮರ್ಶಮಾಡಿದ ಶಾಸ್ತ್ರಜ್ಞರು ಈ ಅಂಶವನ್ನು ನಂಬಿರುವರು. ದೇವತೆಗಳು ತಮ್ಮ ಸಂಕಲ್ಪವಶದಿಂದ ವೃದ್ಧಿ ಮುಂತಾದ ವಿಕಾರಗಳನ್ನು ಹೊಂದುವಂತೆ ಜನ್ಮವೆಂಬ ವಿಕಾರವನ್ನೂ ಹೊಂದುವರು, ಒಂದುಸಲ ತನ್ನ ಪುತ್ರನಾಗಿ ಜನಿಸಿದ ವ್ಯಕ್ತಿಯಲ್ಲಿ ಮತ್ತೊಂದು ಸಲ ತಾನೇ ಪುತ್ರನಾಗಿ ಹುಟ್ಟಬಹುದು. ಅಧಿಕಾರ ಪುರುಷರಿಗೆ ವಿವಿಧವಾದ ಜನ್ಮ ಪರಿಗ್ರಹವು ಸಮಂಜಸವಾಗಬಹುದು, ಪರಸ್ಪರ ಗುಣ-ಪ್ರಧಾನ ಭಾವವು ವ್ಯತ್ಯಾಸವನ್ನು ಹೊಂದಬಹುದು. ವ್ಯಕ್ತಿ ಸಂಖ್ಯೆ-ನಾಮಾಂಕನಗಳಲ್ಲಿ ವ್ಯತ್ಯಾಸವು ನಿರಾಪೇಕ್ಷವಾಗಿರಬಲ್ಲುದು. ಆದರೆ ಈ ಎಲ್ಲ ವ್ಯತ್ಯಾಸಗಳಿಗೆ ಯಾವುದೋ ಒಂದು ನಿಮಿತ್ತವನ್ನು ಅನುಸರಿಸುವರು.

ಸಾಮಾನ್ಯ ಕಾರ್ಯ ರಂಗದಲ್ಲಿ ಅನೇಕ ಮಹನೀಯ ವ್ಯಕ್ತಿಗಳಲ್ಲಿ ಒಂದಾವರ್ತಿ ಒಂದು ವ್ಯಕ್ತಿಗೆ ಅಗ್ರಸ್ಥಾನವು ದೊರೆತು ಮತ್ತೊಂದು ಕಾರ್ಯ ನಿರ್ವಾಹ ಪರ್ಯಾಯದಲ್ಲಿ ಮತ್ತೊಂದು ವ್ಯಕ್ತಿಗೆ ಅಗ್ರಸ್ಥಾನವು ದೊರೆಯುವುದು. ಇದರಂತೆ ದೇವಾದಿಗಳ ಜನ್ಮ-ಉಪಚಯ-ಅಪಚಯಾದಿ ವೃತ್ತದಲ್ಲಿಯೂ ನಡೆಯಬಹುದು. ಆದ್ದರಿಂದ ಒಂದೊಂದು ಪುರಾಣದಲ್ಲಿ ಒಂದೊಂದು ದೇವತಾ ಪ್ರಾಧಾನ್ಯವೂ ಮಿಕ್ಕ ದೇವತೆಗಳು ಆ ಪ್ರಧಾನ ದೇವತೆಯನ್ನು ಸ್ತುತಿಸುವುದೂ, ಪ್ರಧಾನ ದೇವತೆಯ ಶರಣಾಗತಿಯಿಂದ ತನ್ನ ನಿಖಿಲ ವ್ಯಾಪಾರ ಚಲನವೂ ಮುಂತಾದ ವಿಷಯಗಳು ವಿರುದ್ಧಗಳಲ್ಲ.

ಹಾಗೆಯೆ ರಾಜನೀತಿ-ಧಾರ್ಮಿಕ ಭಾವನೆಗಳಿಂದ ಪೂರ್ಣವಾದ ತಮ್ಮ ಚರಿತ್ರವನ್ನು ಮುಂದುವರಿಸುವರು. ಆ ಚರಿತ್ರೆಗಳ ಕೆಲವು ಭಾಗಗಳಲ್ಲಿ ಧಾರ್ಮಿಕ ತತ್ತ್ವದಲ್ಲಿ ಮುಖ್ಯ ತಾತ್ಪರ್ಯವು, ಮತ್ತೆ ಕೆಲವು ಭಾಗಗಳಲ್ಲಿ ನೀತಿ ಮಾರ್ಗವು ಪ್ರಧಾನ ಸ್ಥಾನವನ್ನು ಆಕ್ರಮಿಸುವುದು. ಇಂತಹ ಚರಿತ್ರಗಳನ್ನು ಪುರಾಣ-ಇತಿಹಾಸ ಗ್ರಂಥಗಳು ವರ್ಣಿಸುವುವು.

ಪುರಾಣಾದಿ ವಾಙ್ಮಯವು ಕಾವ್ಯ-ಶಾಸ್ತ್ರಗಳ ಛಾಯೆಯನ್ನು ಅನುಸರಿಸಿದೆ ಕಾವ್ಯಚ್ಛಾಯೆಯಿಂದ ವಸ್ತು ತತ್ತ್ವಸ್ವಭಾವವು ಮನರಂಜಕವಾಗುವ ಕವಿ ಮರ್ಯಾದೆಯಿಂದ ಅಲಂಕರಿಸಲ್ಪಟ್ಟಿರುವುದು, ಶಾಸ್ತ್ರಚ್ಛಾಯೆಯಿಂದ ವ್ಯಾವಹಾರಿಕ ವಿಷಯಗಳಲ್ಲಿ ಮಾಯಾ-ಕಪಟಾದಿ ಧರ್ಮಸಂಕರವನ್ನು ತೋರಿಸಿ ಲೋಕಾತೀತವಾದ ಪಾರಮಾರ್ಥಿಕ ತತ್ತ್ವದ ಗುರಿಯು ಮುಖ್ಯವೆಂದೂ ಅದಕ್ಕೋಸ್ಕರ ಶಾಂತಿ-ಸಮಾಧಾನಗಳು ಆವಶ್ಯಕವೆಂದೂ ಬೋಧಿಸಲ್ಪಡುವುವು. ಆದ್ದರಿಂದ ಪರಮಾರ್ಥ ದೃಷ್ಟಿಯಿಂದ ಎಲ್ಲ ಚರಿತ್ರಗಳು ಆಪಾತರಮಣೀಯಗಳಾಗಿರುವುವು. ಮತ್ತು ವಿಚಾರಕ್ಕೆ ಅರ್ಹ

ಗಳಲ್ಲ, ಆದರೆ ವ್ಯವಹಾರ ದೃಷ್ಟಿಯಿಂದ ಅಸಂಭವವಾದುವೆಂದು ಮಾತ್ರ ತೀರ್ಮಾನಿಸಲಾಗುವುದಿಲ್ಲ. ಕಾವ್ಯ ಮರ್ಯಾದೆಯು ಸ್ವಭಾವ ಶೋಭೆಯನ್ನು ಹೆಚ್ಚಿಸಿದೆ. ಮತ್ತು ಮನವನ್ನು ರಂಜಿಸಿದೆ. ಆದರೆ ಮೂಲತತ್ತ್ವ ಸಂಪರ್ಕವನ್ನು ಬಿಟ್ಟು ಹೋಗಿಲ್ಲ.

ಹಾಗೆಯೆ ಕಾರ್ತವೀರ್ಯಾರ್ಜುನನು ಶ್ರೀ ದತ್ತಶಿಷ್ಯನಾದ ಯೋಗೀಂದ್ರನಾಗಿ ತನ್ನ ಅವತಾರ ಪ್ರಯೋಜನವನ್ನು ಸಮಾಪ್ತಿಗೊಳಿಸಿದನು. ಆಗ ದುರ್ಜಯನಾದ ಅವನ ಅವತಾರ ಸಮಾಪ್ತಿಗೆ ಅಸಾಧಾರಣವಾದ ನಿಮಿತ್ತವು ಬೇಕಾಗುವುದು. ಅದಕ್ಕೆ ಜಾಮದಗ್ನ್ಯರಾಮನ ಕೋಪವು ನಿಮಿತ್ತವಾಯಿತು. ದುಷ್ಟ ಕ್ಷತ್ರಿಯರ ನಾಶಕ್ಕೆ ಪರಶುರಾಮನ ಪ್ರಚಂಡ ದಿಗ್ವಿಜಯವು ನಿಮಿತ್ತವಾಯಿತು. ಪರಶುರಾಮನು ವೀರ ಪ್ರತಿಜ್ಞೆಯನ್ನು ನಿರ್ವಹಿಸಿ ಧರ್ಮಸೇತುಪಾಲನೆಗೋಸ್ಕರ ಕ್ಷತ್ರಹತ್ಯಾಪ್ರಾಯಶ್ಚಿತ್ತವನ್ನು ಜನಕನ ಆಜ್ಞೆಯಂತೆ ಅಭಿನಯಿಸಿದನು. ಇದರಿಂದ ಧರ್ಮಾತಿಕ್ರಮವು ಪ್ರಾಯಶ್ಚಿತ್ತಾರ್ಹವೆಂದೂ ಅಧರ್ಮ ಸಂಪರ್ಕವಿಲ್ಲದ ಪರಮಾರ್ಥಧರ್ಮಗಳಿಗೆ ಮಹತ್ತ್ವವಿರುವುದೆಂದೂ ತೋರಿಸಲ್ಪಟ್ಟಿದೆ.

ಸಗರರಾಜ ಚರಿತ್ರೆಯಲ್ಲಿ ಮೊಟ್ಟೆಯು ಮೊದಲು ಹುಟ್ಟಿ ಅದರಿಂದ ಅರವತ್ತು ಸಹಸ್ರ ಪುತ್ರರು ಜನಿಸಿದರೆಂಬುದು ಸಾಮಾನ್ಯ ಕಾರಣದಿಂದ ಆಗುವುದಿಲ್ಲವೆಂಬುದು ನಿಜ. ಆದರೆ ಈಗಿನ ಪ್ರಪಂಚದಲ್ಲಿ ಎರಡು ತಲೆ, ಐದು ಕಾಲು ಮುಂತಾದ ವಿರೂಪ ಸನ್ನಿವೇಶದ ಪ್ರಾಣಿಗಳು ಹುಟ್ಟುವುದಿಲ್ಲವೆ. ಇದಕ್ಕೆ ಆಯಾಯ ಜಾತಿಯ ಜನ ಪ್ರಾಪಕವಾದ ಸಾಮಾನ್ಯ ಕಾರಣಕ್ಕಿಂತ ಬೇರೆಯಾಗಿ ಕರ್ಮ ದುರ್ವಿಪಾಕದ ಅತಿಶಯವು ನಿಮಿತ್ತವೆಂದು ಹೇಳುವುದಿಲ್ಲವೆ, ಹಾಗೆ ವಿರೂಪ-ವಿಷಮ ಕಾರ್ಯಗಳ ಉತ್ಪತ್ತಿಗೆ ಶುಭ ಅಥವಾ ಅಶುಭಗಳು ನಿಮಿತ್ತವಾಗುವುವು. ಇಂತಹ ನಿಮಿತ್ತಗಳನ್ನು ಹುಡುಕುವಾಗ ಎಲ್ಲೆಲ್ಲಿಯೂ ವಿಪ್ರರ ಶಾಪ-ಅನುಗ್ರಹಗಳಿಗೆ ಮುಖ್ಯಸ್ಥಾನವು ದೊರೆತಿದೆ. ಭಾವಿತಾತ್ಮರೆನಿಸಿರುವ ಆ ಮಹಾತ್ಮರ ಸಂಕಲ್ಪದಂತೆ ಬಾಹ್ಯ ಪ್ರಪಂಚವು ಪರಿವರ್ತನವಾಗುವುದು. ಕಾರಾಗೃಹದಲ್ಲಿ ಸೇರಿದ ಜನರಿಗೆ ತಮ್ಮ ಸ್ವೇಚ್ಛಾ ಪ್ರವೃತ್ತಿಗೆ ತಮ್ಮ ಅಪರಾಧ ಕರ್ಮ ಪ್ರವೃತ್ತಿಯೆಂಬ ಬಂಧಕವು ವಿಘಾತಕವು. ಮಹಾತ್ಮರಲ್ಲಿ ತಮ್ಮ ಸಂಕಲ್ಪವು ಯಥಾರ್ಥವಾಗಿ ನಡೆಯಲು ಯಾವ ಪ್ರತಿಬಂಧಕವೂ ಇಲ್ಲದ್ದರಿಂದ "ವಾಚಮರ್ಥೋಽನುಧಾವತಿ" ಎಂಬ ನ್ಯಾಯದಿಂದ ದುರ್ಘಟ ವಸ್ತುವು ಕೂಡ ಅದರಂತೆ ಘಟನ ಹೊಂದುವುದು. ಆದ್ದರಿಂದ ಈ ವಿಷಯಗಳಲ್ಲಿ ಸಾಮಾನ್ಯ ದೃಷ್ಟಿಯಿಂದ ತಲೆದೋರುವ ಆಕ್ಷೇಪಗಳಿಗೆ ಅವಕಾಶವಿಲ್ಲ.

ಹೀಗೆ ಒಂದು ಅವಾಂತರ ಕಥಾ ವಿಭಾಗದ ಅವಸಾನದೊಡನೆ ಈ ಸಂಚಿಕೆಯು ಕೊನೆಗಂಡಿರುವುದು. ಮಿಕ್ಕ ಕಥಾನಕವಸ್ತುವನ್ನು ಮುಂದಿನ ಸಂಚಿಕೆಯಲ್ಲಿ ಕಾಣಬಹುದು.

ಆಳುವ ಮಹಾಸ್ವಾಮಿಯವರು **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,** ಜಿ.ಸಿ.ಎಸ್.ಐ. ರವರ ಆಜ್ಞೆಯಂತೆ ಸಂಸ್ಕೃತದಲ್ಲಿದ್ದ ಈ ಗ್ರಂಥ ವನ್ನು ಕನ್ನಡಿಗರ ತಿಳಿವಳಿಕೆಗಾಗಿ ಕನ್ನಡಕ್ಕೆ ಪರಿವರ್ತನ ಮಾಡಿರುತ್ತೇನೆ. ಇದು ಉತ್ತಮ ರೀತಿಯಿಂದ ಅಂದವಾಗಿರುವಂತೆ ಮುದ್ರಿಸಲ್ಪಟ್ಟಿದೆ. ಈ ರೀತಿ ಈ ಗ್ರಂಥವು ಪ್ರಕಾಶಕ್ಕೆ ಬಂದು ಸಜ್ಜನರ ಸೇವೆ ಮಾಡಲು ಅವಕಾಶ ಮಾಡಿಕೊಟ್ಟ ಮಹನೀ ಯರಿಗೆ ತುಂಬ ಕೃತಜ್ಞನಾಗಿರುತ್ತೇನೆ.

**ಅನುವಾದಕ.**

# ವಿಷಯಾನುಕ್ರಮಣೀ

ಶ್ರೀಃ

# ಬ್ರಹ್ಮಾಂಡಪುರಾಣಂ

## ಪಂಚವಿಂಶತಿತಮೋಽಧ್ಯಾಯಃ

**ವಸಿಷ್ಠ ಉವಾಚ :—**

**ತತಸ್ತದ್ಭಕ್ತಿಯೋಗೇನ ಸ ಪ್ರೀತಾತ್ಮಾ ಜಗತ್ಪತಿಃ ।**
**ಪ್ರತ್ಯಕ್ಷಮಗಮತ್ತಸ್ಯ ಸರ್ವೈಃ ಸಹ ಮರುದ್ಗಣೈಃ ॥ ೧ ॥**

**ತಂ ದೃಷ್ಟ್ವಾ ದೇವದೇವೇಶಂ ತ್ರಿನೇತ್ರಂ ಚಂದ್ರಶೇಖರಮ್ ।**
**ವೃಷೇಂದ್ರವಾಹನಂ ಶಂಭುಂ ಭೂತಕೋಟಿಸಮನ್ವಿತಮ್ ॥ ೨ ॥**

**ಸಸಂಭ್ರಮಂ ಸಮುತ್ಥಾಯ ಹರ್ಷೇಣಾಕುಲಲೋಚನಃ ।**
**ಪ್ರಣಾಮಮಕರೋಚ್ಛಕ್ತ್ಯಾ ಶರ್ವಾಯ ಭುವಿ ಭಾರ್ಗವಃ ॥ ೩ ॥**

**ಉತ್ಥಾಯೋತ್ಥಾಯ ದೇವೇಶಂ ಪ್ರಣಮ್ಯ ಶಿರಸಾಸಕೃತ್ ।**
**ಕೃತಾಂಜಲಿಪುಟೋ ರಾಮಸ್ತುಷ್ಟಾವ ಚ ಜಗತ್ಪತಿಮ್ ॥ ೪ ॥**

---

೧. ವಸಿಷ್ಠಮುನಿಯು ಇಂತೆಂದನು :—ತರುವಾಯ ಆ ರಾಮನ ಭಕ್ತಿ ಯೋಗಕ್ಕೆ ಮೆಚ್ಚಿದ ಅಂತಃಕರಣವುಳ್ಳ ಜಗದೀಶ್ವರನಾದ ಶಂಕರನು ಸಮಸ್ತ ದೇವ ವೃಂದದೊಡನೆ ರಾಮನಿಗೆ ಪ್ರತ್ಯಕ್ಷನಾದನು.

೨. ಆಗ ರಾಮನು ದೇವೋತ್ತಮನೂ, ತ್ರಿನೇತ್ರನೂ, ಶಿರದಲ್ಲಿ ಚಂದ್ರನೆಂಬ ಆಭರಣವನ್ನು ಧರಿಸಿದವನೂ, ಶ್ರೇಷ್ಠವಾದ ವೃಷವಾಹನವುಳ್ಳವನೂ ಮತ್ತು ಕೋಟಿ ಗಟ್ಟಲೇ ಭೂತಸಂಘದಿಂದ ಸೇವಿಸಲ್ಪಟ್ಟವನೂ ಆದ ಶಿವನನ್ನು ಸಂದರ್ಶಿಸಿದನು.

೩. ಆಗ ಭಾರ್ಗವನು ಸಂಭ್ರಮದಿಂದ ಮೇಲಕ್ಕೆ ಎದ್ದು ನಿಂತು ಆನಂದದಿಂದ ವ್ಯಾಕುಲವಾದ ನೇತ್ರವುಳ್ಳವನಾಗಿ ಶಂಕರನಿಗೆ ನೆಲದಲ್ಲಿ ಬಿದ್ದು ದಂಡಪ್ರಣಾಮವನ್ನು ಮಾಡಿದನು.

೪. ರಾಮನು ಮತ್ತೆ ಮತ್ತೆ ಮೇಲಕ್ಕೆದ್ದು ಶಿರಸ್ಸಿನಿಂದ ದೇವೇಶ್ವರನನ್ನು ಅನೇಕಾವರ್ತಿ ವಂದಿಸಿ ಪಾಣಿಗಳಿಂದ ಅಂಜಲಿಯನ್ನು ಕಟ್ಟಿಕೊಂಡು ನಿಂತು ಜಗ ದೀಶ್ವರನನ್ನು ಸ್ತೋತ್ರಮಾಡಿದನು.

1

ರಾಮ ಉವಾಚ :—

ನಮಸ್ತೇ ದೇವದೇವೇಶ ನಮಸ್ತೇ ಪರಮೇಶ್ವರ ।
ನಮಸ್ತೇ ಜಗತೋ ನಾಥ ನಮಸ್ತೇ ತ್ರಿಪುರಾಂತಕ ॥ ೫ ॥

ನಮಸ್ತೇ ಸಕಲಾಧ್ಯಕ್ಷ ನಮಸ್ತೇ ಭಕ್ತವತ್ಸಲ ।
ನಮಸ್ತೇ ಸರ್ವಭೂತೇಶ ನಮಸ್ತೇ ವೃಷಭಧ್ವಜ ॥ ೬ ॥

ನಮಸ್ತೇ ಸಕಲಾಧೀಶ ನಮಸ್ತೇ ಕರುಣಾಕರ ।
ನಮಸ್ತೇ ಸಕಲಾವಾಸ ನಮಸ್ತೇ ನೀಲಲೋಹಿತ ॥ ೭ ॥

ನಮಃ ಸಕಲದೇವಾರಿಗಣನಾಶಾಯ ಶೂಲಿನೇ ।
ಕಪಾಲಿನೇ ನಮಸ್ತುಭ್ಯಂ ಸರ್ವಲೋಕೈಕಪಾಲಿನೇ ॥ ೮ ॥

ಶ್ಮಶಾನವಾಸಿನೇ ನಿತ್ಯಂ ನಮಃ ಕೈಲಾಸವಾಸಿನೇ ।
ನಮೋಽಸ್ತು ಪಾಶಿನೇ ತುಭ್ಯಂ ಕಾಲಕೂಟವಿಷಾಶಿನೇ ॥ ೯ ॥

---

೫. ರಾಮನು ಈ ರೀತಿಯಾಗಿ ಸ್ತುತಿಸಿದನು :—ದೇವಾಧಿದೇವನೆ! ನಿನಗೆ ನಮಸ್ಕಾರವು; ಪರಮೇಶ್ವರನೆ, ನಿನಗೆ ನಮಸ್ಕಾರವು; ಪ್ರಪಂಚಕ್ಕೆಲ್ಲ ಪ್ರಭುವೆ, ನಿನಗೆ ನಮಸ್ಕಾರವು; ತ್ರಿಪುರಾಸುರ ಸಂಹಾರಿಯೆ, ನಿನಗೆ ನಮಸ್ಕಾರವು.

೬. ಸಕಲ ಚರಾಚರಗಳಿಗೆ ಅಧ್ಯಕ್ಷನೂ, ಭಕ್ತರಲ್ಲಿ ಪ್ರೇಮಿಯೂ, ಸಮಸ್ತ ಪ್ರಾಣಿಗಳಿಗೆ ಪರಿಪಾಲಕನೂ ಮತ್ತು ವೃಷಭಚಿಹ್ನದಿಂದ ಕೂಡಿದ ಧ್ವಜವುಳ್ಳವನೂ ಆದ ಸ್ವಾಮಿಯೆ! ನಿನ್ನನ್ನು ಅನೇಕ ಸಲ ವಂದಿಸುವೆನು.

೭. ಸಕಲ ವಸ್ತ್ವಧೀಶ್ವರನೆ! ಕರುಣಾಕರನೆ! ಸಕಲ ಪ್ರಾಣಿಗಳಿಗೆ ಆವಾಸ ಪ್ರದನೆ! ಮತ್ತು ನೀಲ-ಲೋಹಿತ ವರ್ಣಕಾಂತಿಯಿಂದ ಉಜ್ವಲನೆ! ನಿನ್ನನ್ನು ಅಸಂಖ್ಯಾತವಾಗಿ ನಮಸ್ಕರಿಸುವೆನು.

೮. ದೇವಶತ್ರುಗಳಾದ ನಿಖಿಲ ಅಸುರ ಸಂಘವನ್ನು ನಾಶಮಾಡಿದ ಶೂಲಧರ ನಾದ ಶಿವನಿಗೆ ನಮಸ್ಕಾರವು. ಸಮಸ್ತಲೋಕಗಳನ್ನು ಮುಖ್ಯವಾಗಿ ಪಾಲಿಸುವ ಕಪಾಲಧರನಾದ ಶಿವನಿಗೆ ನಮಸ್ಕಾರವು.

೯. ಸರ್ವಕಾಲದಲ್ಲಿಯೂ ಶ್ಮಶಾನದಲ್ಲಿ ವಾಸಮಾಡುವವನೂ, ಕೈಲಾಸಾಚಲ ವೆಂಬ ವಾಸಭೂಮಿಯುಳ್ಳವನೂ, ಪಾಶವನ್ನು ಧರಿಸಿದವನೂ ಮತ್ತು ಕಾಲಕೂಟವೆಂಬ ವಿಷವನ್ನು ಪಾನಮಾಡಿದವನೂ ಆದ ಶಂಕರನನ್ನು ಮತ್ತೆ ಮತ್ತೆ ವಂದಿಸುವೆನು.

ವಿಭವೇಽಮರವಂದ್ಯಾಯ ಪ್ರಭವೇ ತೇ ಸ್ವಯಂಭುವೇ ।
ನಮೋಽಖಿಲಜಗತ್ಕರ್ಮಸಾಕ್ಷಿಭೂತಾಯ ಶಂಭವೇ । ॥ ೧೦ ॥

ನಮಸ್ತ್ರಿಪಥಗಾಫೇನಭಾಸಿತಾರ್ಧೇಂದುಮೌಲಿನೇ ।
ಮಹಾಭೋಗೀಂದ್ರಹಾರಾಯ ಶಿವಾಯ ಪರಮಾತ್ಮನೇ ॥ ೧೧ ॥

ಭಸ್ಮಸಂಛನ್ನದೇಹಾಯ ನಮೋಽರ್ಕಾಗ್ನೀಂದುಚಕ್ಷುಷೇ ।
ಕಪರ್ದಿನೇ ನಮಸ್ತುಭ್ಯಮಂಧಕಾಸುರಮರ್ದಿನೇ ॥ ೧೨ ॥

ತ್ರಿಪುರಧ್ವಂಸಿನೇ ದಕ್ಷಯಜ್ಞವಿಧ್ವಂಸಿನೇ ನಮಃ ।
ಗಿರಿಜಾಕುಚಕಾಶ್ಮೀರವಿರಂಜಿತಮಹೋರಸೇ ॥ ೧೩ ॥

ಮಹಾದೇವಾಯ ಮಹತೇ ನಮಸ್ತೇ ಕೃತ್ತಿವಾಸಸೇ ।
ಯೋಗಿಧ್ಯೇಯಸ್ವರೂಪಾಯ ಶಿವಾಯಾಚಿಂತ್ಯತೇಜಸೇ ॥ ೧೪ ॥

---

೧೦. ಸರ್ವವ್ಯಾಪಕನೂ, ದೇವತೆಗಳಿಂದ ನಮಸ್ಕಾರ್ಯನೂ, ಜಗತ್ಪ್ರಭುವೂ, ಸ್ವಯಂಭುವೂ ಮತ್ತು ಜಗತ್ತಿನ ಸಮಸ್ತ ವ್ಯಾಪಾರಗಳಿಗೆ ಸಾಕ್ಷಿಸ್ವರೂಪನೂ ಆದ ಶಂಭುವಿಗೆ ಅನೇಕ ನಮಸ್ಕಾರಗಳನ್ನು ಅರ್ಪಿಸುವೆನು.

೧೧. ಶಿರದಲ್ಲಿ ಧರಿಸಿರುವ ಗಂಗಾನದಿಯ ಫೇನಪುಂಜದಿಂದ ಪ್ರಕಾಶಿಸುವ ಅರ್ಧ ಚಂದ್ರನನ್ನು ಧರಿಸಿರುವವನೂ ಸರ್ಪರಾಜನಿಂದ ರಚಿಸಲ್ಪಟ್ಟ ಮಹಾಹಾರವನ್ನು ಧರಿಸಿದವನೂ, ಆದ ಶಿವಪರಮಾತ್ಮನನ್ನು ವಂದಿಸುವೆನು.

೧೨. ಭಸ್ಮೋದ್ಧೂಲನದಿಂದ ಮುಚ್ಚಲ್ಪಟ್ಟ ದೇಹವುಳ್ಳವನೂ, ಸೂರ್ಯ, ಚಂದ್ರ, ಅಗ್ನಿಯೆಂಬ ತೇಜಸ್ತ್ರಯರೂಪವಾದ ತ್ರಿನೇತ್ರವುಳ್ಳವನೂ, ಕಪರ್ದವೆಂಬ ಜಟಾಜೂಟವನ್ನು ಧರಿಸಿರುವವನೂ ಮತ್ತು ಅಂಧಕಾಸುರನನ್ನು ಸಂಹರಿಸಿದವನೂ ಆದ ಶಿವನಿಗೆ ನಮಸ್ಕಾರವು.

೧೩. ತ್ರಿಪುರಾಸುರನನ್ನು ಸಂಹರಿಸಿದವನೂ, ದಕ್ಷಬ್ರಹ್ಮನ ಯಜ್ಞವನ್ನು ಭಂಗಪಡಿಸಿದವನೂ ಮತ್ತು ಪಾರ್ವತೀದೇವಿಯ ಆಲಿಂಗನೋತ್ಸವದಲ್ಲಿ ಸ್ತನಗಳ ಕಾಶ್ಮೀರ ಗಂಧದಿಂದ ರಂಜಿಸಲ್ಪಟ್ಟ ವಿಶಾಲವಾದ ವಕ್ಷಸ್ಸುಳ್ಳವನೂ ಆದ ಶಿವನನ್ನು ವಂದಿಸುವೆನು.

೧೪. ದೇವತೆಗಳಲ್ಲಿ ಉತ್ತಮನೂ, ಮಹಾ ಪರಿಮಾಣವುಳ್ಳವನೂ, ಗಜ ಚರ್ಮವಸ್ತ್ರವನ್ನು ಧರಿಸಿದವನೂ, ಯೋಗಿಗಳ ಧ್ಯಾನಗಮ್ಯವಾದ ಸ್ವರೂಪವುಳ್ಳವನೂ ಮತ್ತು ಮನಸ್ಸಿನಿಂದ ಚಿಂತಿಸಲಾಗದ ತೇಜೋಮಯನೂ ಆದ ಶಿವನಿಗೆ ನಮಸ್ಕಾರವು.

**ಸ್ವಭಕ್ತಹೃದಯಾಂಭೋಜಕರ್ಣಿಕಾಮಧ್ಯವರ್ತಿನೇ ।**
**ಸಕಲಾಗಮಸಿದ್ಧಾಂತಸಾರರೂಪಾಯ ತೇ ನಮಃ ॥ ೧೫ ॥**

**ನಮೋ ನಿಖಿಲಯೋಗೇಂದ್ರ ಬೋಧನಾಯಾಮೃತಾತ್ಮನೇ ।**
**ಶಂಕರಾಯಾಖಿಲವ್ಯಾಪ್ತಮಹಿಮ್ನೇ ಪರಮಾತ್ಮನೇ ॥ ೧೬ ॥**

**ನಮಃ ಶರ್ವಾಯ ಶಾಂತಾಯ ಬ್ರಹ್ಮಣೇ ವಿಶ್ವರೂಪಿಣೇ ।**
**ಆದಿಮಧ್ಯಾಂತಹೀನಾಯ ನಿತ್ಯಾಯಾವ್ಯಕ್ತಮೂರ್ತಯೇ ॥ ೧೭ ॥**

**ವ್ಯಕ್ತಾವ್ಯಕ್ತಸ್ವರೂಪಾಯ ಸ್ಥೂಲಸೂಕ್ಷ್ಮಾತ್ಮನೇ ನಮಃ ।**
**ನಮೋ ವೇದಾಂತವೇದ್ಯಾಯ ವಿಶ್ವವಿಜ್ಞಾನರೂಪಿಣೇ ॥ ೧೮ ॥**

**ನಮಃ ಸುರಾಸುರಶ್ರೇಣೀಮೌಲಿಪುಷ್ಪಾರ್ಚಿತಾಂಘ್ರಯೇ ।**
**ಶ್ರೀಕಂಠಾಯ ಜಗದ್ಧಾತ್ರೇ ಲೋಕಕರ್ತ್ರೇ ನಮೋ ನಮಃ ॥ ೧೯ ॥**

---

೧೫. ತನ್ನ ಭಕ್ತಜನರ ಹೃದಯಕಮಲಗಳ ಕರ್ಣಿಕಾ ಮಧ್ಯಸ್ಥಾನದಲ್ಲಿ ವಾಸಿಸುವವನೂ, ಸಮಸ್ತ ಆಗಮ ಪ್ರತಿ ಪಾದ್ಯವಾದ ಸಿದ್ಧಾಂತಗಳ ಸಾರ ಸ್ವರೂಪನೂ ಆದ ಪರಮೇಶ್ವರನಿಗೆ ನಮಸ್ಕಾರವು.

೧೬. ನಿಖಿಲ ಯೋಗೀಂದ್ರರಿಗೆ ತತ್ತ್ವ ಬೋಧವನ್ನುಂಟುಮಾಡುವವನೂ ಅಮೃತಸ್ವರೂಪಿಯೂ ಪ್ರಪಂಚಕ್ಕೆ ಸುಖಕಾರಕನೂ ಮತ್ತು ಸರ್ವದೇಶಗಳಲ್ಲಿಯೂ ವ್ಯಾಪಿಸಿದ ಮಹಿಮೆಯುಳ್ಳವನೂ ಆದ ಪರಮಾತ್ಮನಿಗೆ ನಮಸ್ಕಾರವು.

೧೭. ಸುಖಕರನೂ, ನಿರ್ವಿಕಾರನೂ, ವಿಶ್ವರೂಪಿಯೂ, ಪರಿಚ್ಛೇದಶೂನ್ಯನೂ ಆದಿ-ಮಧ್ಯ-ಅಂತಗಳಿಂದ ವರ್ಜಿತನೂ, ಶಾಶ್ವತನೂ ಮತ್ತು ವಾಕ್-ಮಾನಸಗಳಿಗೆ ಅಗೋಚರವಾದ ಮೂರ್ತಿಯುಳ್ಳವನೂ ಆದ ಈಶ್ವರನನ್ನು ವಂದಿಸುವೆನು.

೧೮. ಜಗತ್ತಿನಲ್ಲಿರುವ ವ್ಯಕ್ತ-ಅವ್ಯಕ್ತ; ಸ್ಥೂಲ-ಸೂಕ್ಷ್ಮಗಳೆಂಬ ರಾಶಿದ್ವಯ ರೂಪದಿಂದ ವಿಭಾಗ ಹೊಂದಿರುವವನೂ, ವೇದಾಂತಗಳಿಂದ ವೇದ್ಯನಾಗಿರುವವನೂ ವಿಶ್ವದ ವಿಜ್ಞಾನಾಕಾರವುಳ್ಳವನೂ ಆದ ಶಿವನಿಗೆ ನಮಸ್ಕಾರವು.

೧೯. ಸುರ-ಅಸುರಶ್ರೇಣಿಯ ಶಿರದಲ್ಲಿ ಧರಿಸಿದ ಪುಷ್ಪಗಳಿಂದ ಪೂಜಿಸಲ್ಪಟ್ಟ ಪಾದಯುಗ್ಮವುಳ್ಳವನೂ, ವಿಷವನ್ನು ಕಂಠದಲ್ಲಿ ಇರಿಸಿಕೊಂಡವನೂ, ಜಗತ್ತನ್ನು ಧರಿಸಿದವನೂ ಮತ್ತು ಲೋಕನಿರ್ಮಾಣಕಾರಣನೂ ಆದ ಮಹೇಶ್ವರನನ್ನು ವಂದಿಸುವೆನು.

ರಜೋಗುಣಾತ್ಮನೇ ತುಭ್ಯಂ ವಿಶ್ವಸೃಷ್ಟಿವಿಧಾಯಿನೇ ।
ಹಿರಣ್ಯಗರ್ಭರೂಪಾಯ ಹರಾಯ ಜಗದಾದಯೇ ॥ ೨೦ ॥

ನಮೋ ವಿಶ್ವಾತ್ಮನೇ ಲೋಕಸ್ಥಿತಿವ್ಯಾಪಾರಕಾರಿಣೇ ।
ಸತ್ತ್ವವಿಜ್ಞಾನರೂಪಾಯ ಪರಾಯ ಪ್ರತ್ಯಗಾತ್ಮನೇ ॥ ೨೧ ॥

ತಮೋಗುಣವಿಕಾರಾಯ ಜಗತ್ಸಂಹಾರಕಾರಿಣೇ ।
ಕಲ್ಪಾಂತೇ ರುದ್ರರೂಪಾಯ ಪರಾಪರವಿದೇ ನಮಃ ॥ ೨೨ ॥

ಅವಿಕಾರಾಯ ನಿತ್ಯಾಯ ನಮಃ ಸದಸದಾತ್ಮನೇ ।
ಬುದ್ಧಬುದ್ಧಿಪ್ರಬೋಧಾಯ ಬುದ್ಧೀಂದ್ರಿಯವಿಕಾರಿಣೇ ॥ ೨೩ ॥

ವಸ್ವಾದಿತ್ಯಮರುದ್ಭಿಶ್ಚ ಸಾಧ್ಯರುದ್ರಾಶ್ವಿಭೇದತಃ ।
ಯನ್ಮಾಯಯಾಭಿನ್ನಮತಯೋ ದೇವಾಸ್ತಸ್ಮೈ ನಮೋ ನಮಃ ॥ ೨೪ ॥

---

೨೦. ರಜೋಗುಣಮಯವಾದ ಮೂರ್ತಿಯನ್ನು ಸ್ವೀಕರಿಸಿ ಹಿರಣ್ಯಗರ್ಭ ಅಥವಾ ಬ್ರಹ್ಮದೇವ ಸ್ವರೂಪದಿಂದ ವಿಶ್ವದ ಸೃಷ್ಟಿ ವ್ಯಾಪಾರವನ್ನು ನಿರ್ವಹಿಸುತ್ತಿರುವ ಜಗತ್ತಿಗೆ ಆದಿರೂಪನಾದ ಹರನಿಗೆ ನಮಸ್ಕಾರವು.

೨೧. ಸತ್ತ್ವಗುಣದ ವಿಜ್ಞಾನ ಪರಿಣಾಮಮೂರ್ತಿಯಿಂದ ವಿವಿಧರೂಪಗಳನ್ನು ಸ್ವೀಕರಿಸಿ ವಿಶ್ವದ ಸ್ಥಿತಿ ವ್ಯಾಪಾರವನ್ನು ನಿರ್ವಹಿಸುವ ಮತ್ತು ಪ್ರತ್ಯಗಾತ್ಮ ಸ್ವರೂಪಿಯಾದ ಪರಮಾತ್ಮನಿಗೆ ನಮಸ್ಕಾರವು.

೨೨. ಪ್ರಲಯ ಕಾಲದಲ್ಲಿ ತಮೋಗುಣ ಪ್ರಚುರವಾದ ರುದ್ರಮೂರ್ತಿ ರೂಪನಾಗಿ ಜಗತ್ತಿನ ಸಂಹಾರಕರ್ಮದಲ್ಲಿ ತೊಡಗಿರುವ ಪರ-ಅಪರ ವಸ್ತುಗಳ ತತ್ತ್ವಜ್ಞಾನವುಳ್ಳ ಮಹೇಶ್ವರನನ್ನು ವಂದಿಸುವೆನು.

೨೩. ವಿಕಾರಶೂನ್ಯನೂ, ಶಾಶ್ವತನೂ, ಸತ್-ಅಸತ್ ಎಂಬ ವಿಭಕ್ತ ವಸ್ತುಸ್ವರೂಪನೂ, ಅನೇಕ ವಿಧವಾಗಿ ಹುಟ್ಟುವ ಬುದ್ಧಿವೃತ್ತಿಗಳನ್ನು ಸಾಕ್ಷಿರೂಪದಿಂದ ಅರಿತಿರುವವನೂ ಮತ್ತು ಜ್ಞಾನೇಂದ್ರಿಯಗಳನ್ನು ವಿಕಾರಪಡಿಸುವವನೂ ಆದ ಶಂಕರನನ್ನು ವಂದಿಸುವೆನು.

೨೪. ವಸು, ಆದಿತ್ಯ, ಮರುತ್, ಸಾಧ್ಯ, ಅಶ್ವಿನೀ ಮತ್ತು ರುದ್ರರೆಂಬ ಗಣಸ್ವರೂಪರಾದ ದೇವತೆಗಳು ಯಾವ ಪರಮಾತ್ಮನ ಮಾಯೆಗೆ ವಶರಾಗಿ ಭ್ರಾಂತಿಗೊಂಡ ಮತಿಯುಳ್ಳವರಾಗಿರುವರೊ ಅಂತಹ ಪರಮಾತ್ಮನಿಗೆ ನಮಸ್ಕಾರವು.

ಅವಿಕಾರಮಜಂ ನಿತ್ಯಂ ಸೂಕ್ಷ್ಮರೂಪಮನೌಪಮಮ್ ।
ತವ ಯತ್ತನ್ನ ಜಾನಂತಿ ಯೋಗಿನೋಽಪಿ ಸದಾಮಲಾಃ ॥ ೨೫ ॥

ತ್ವಾಮವಿಜ್ಞಾಯ ದುರ್ಜ್ಞೇಯಂ ಸಮ್ಯಗ್ಬ್ರಹ್ಮಾದಯೋಽಪಿ ಹಿ ।
ಸಂಸರಂತಿ ಭವೇ ನೂನಂ ನ ತತ್ಕರ್ಮಾತ್ಮಕಾಶ್ಚಿರಮ್ ॥ ೨೬ ॥

ಯಾವನ್ನೋಪೈತಿ ಚರಣೌ ತವಾಜ್ಞಾನವಿಘಾತಿನಃ ।
ತಾವದ್ಭ್ರಮತಿ ಸಂಸಾರೇ ಪಂಡಿತೋಽಚೇತನೋಽಪಿ ವಾ ॥ ೨೭ ॥

ಸ ಏವ ದಕ್ಷಃ ಸ ಕೃತೀ ಸ ಮುನಿಃ ಸ ಚ ಪಂಡಿತಃ ।
ಭವತಶ್ಚರಣಾಂಭೋಜೇ ಯೇನ ಬುದ್ಧಿಃ ಸ್ಥಿರೀಕೃತಾ ॥ ೨೮ ॥

ಸುಸೂಕ್ಷ್ಮತ್ವೇನ ಗಹನಃ ಸದ್ಭಾವಸ್ತೇ ತ್ರಯೀಮಯಃ ।
ವಿದುಷಾಮಪಿ ಮೂಢೇನ ಸ ಮಯಾ ಜ್ಞಾಯತೇ ಕಥಮ್ ॥ ೨೯ ॥

---

೨೫. ನಿರ್ವಿಕಾರವೂ, ಜನನವರ್ಜಿತವೂ, ಶಾಶ್ವತವೂ, ನಿರುಪಮವೂ ಆಗಿರುವ ನಿನ್ನ ಸೂಕ್ಷ್ಮವಾದ ಪರಮಾರ್ಥರೂಪವನ್ನು ನಿಷ್ಕಳಂಕರಾದ ಯೋಗಿಗಳು ಕೂಡ ಯಾವಾಗಲೂ ತಿಳಿಯಲಾರರು.

೨೬. ಕರ್ಮಶೀಲರಲ್ಲದ ಬ್ರಹ್ಮನೆ ಮುಂತಾದ ದೇವತೆಗಳು ಕೂಡ ದುರ್ಜ್ಞೇಯನಾದ ನಿನ್ನ ತತ್ತ್ವಜ್ಞಾನವಿಲ್ಲದೆ ಆಯಾಯ ಅಸಾಧಾರಣ ವ್ಯಾಪಾರಶೀಲರಾಗಿ ನಿಜವಾಗಿ ಬಹು ಕಾಲದವರೆಗೆ ಸಂಸಾರದಲ್ಲಿ ಮುಳುಗಿದವರಾಗಿರುವರು.

೨೭. ಪಂಡಿತನಾಗಲಿ, ಅಚೇತನ ವಸ್ತುವಾಗಲಿ ಅಜ್ಞಾನವನ್ನು ಧ್ವಂಸ ಮಾಡುವ ನಿನ್ನ ಚರಣಗಳನ್ನು ಎದುವರೆಗೆ ಶರಣಹೊಂದುವುದಿಲ್ಲವೊ ಅದುವರೆಗೆ ಸಂಸಾರ ಚಕ್ರದಲ್ಲಿ ಭ್ರಮಿಸುತ್ತಿರುವನು.

೨೮. ಜಗತ್ಪೂಜ್ಯನಾದ ನಿನ್ನ ಚರಣಾರವಿಂದದಲ್ಲಿ ಬುದ್ಧಿಯನ್ನು ಸ್ಥಿರವಾಗಿ ಇಟ್ಟವನಾನವನು ದಕ್ಷನು, ಕೃತಕೃತ್ಯನು, ಮುನಿಯು ಮತ್ತು ಪಂಡಿತನು. ಅಂತಹವನು ಕರ್ತವ್ಯವನ್ನು ಮಾಡಿ ಜನ್ಮವನ್ನು ಸಾರ್ಥಕಪಡಿಸಿಕೊಳ್ಳುವನು.

೨೯. ವೇದತ್ರಯಮಾತ್ರದಿಂದ ವೇದ್ಯವಾಗಿರುವ ನಿನ್ನ ಅಸ್ತಿತ್ವವು ಅತ್ಯಂತ ಸೂಕ್ಷ್ಮವಾಗಿರುವುದರಿಂದ ವಿದ್ವಾಂಸರಿಗೂ ಕೂಡ ತಿಳಿಯಲು ಗಹನವಾಗಿರುವುದು. ಹೀಗಿರಲು ಮೂಢನಾದ ನನ್ನಿಂದ ಹೇಗೆ ತಿಳಿಯಲ್ಪಡುವುದು.

ಅಶಬ್ದಗೋಚರತ್ವೇನ ಮಹಿಮ್ನಸ್ತವ ಸಾಂಪ್ರತಮ್ ।
ಸ್ತೋತುಮಶಕ್ನುವನಲಂ ಸಮ್ಯಕ್ ತ್ವಾಮಹಂ ಜಡಧೀರ್ಯತಃ ॥ ೩೦ ॥

ತಸ್ಮಾದಜ್ಞಾನತೋ ವಾಪಿ ಮಯಾ ಭಕ್ತ್ಯೈವ ಸಂಸ್ತುತಃ ।
ಪ್ರೀತಶ್ಚ ಭವ ದೇವೇಶ ನನು ತ್ವಂ ಭಕ್ತವತ್ಸಲಃ ॥ ೩೧ ॥

ವಸಿಷ್ಠ ಉವಾಚ :—
ಇತಿ ಸ್ತುತಸ್ತದಾ ತೇನ ಭಕ್ತ್ಯಾ ರಾಮೇಣ ಶಂಕರಃ ।
ಮೇಘಗಂಭೀರಯಾ ವಾಚಾ ತಮುವಾಚ ಹಸನ್ನಿವ ॥ ೩೨ ॥

ಭಗವಾನುವಾಚ :—
ರಾಮಾಹಂ ಸುಪ್ರಸನ್ನೋಽಸ್ಮಿ ಶೌರ್ಯಶಾಲಿತಯಾ ತವ ।
ತಪಸಾ ಮಯಿ ಭಕ್ತ್ಯಾ ಚ ಸ್ತೋತ್ರೇಣ ಚ ವಿಶೇಷತಃ ॥ ೩೩ ॥

ವರಂ ವರಯ ತಸ್ಮಾತ್ತ್ವಂ ಯದ್ಯದಿಚ್ಛಸಿ ಚೇತಸಾ ।
ತುಭ್ಯಂ ತತ್ತದಶೇಷೇಣ ದಾಸ್ಯಾಮ್ಯಹಮಶೇಷತಃ ॥ ೩೪ ॥

---

೩೦. ನಿನ್ನ ಮಹಿಮೆಯು ನಾಲ್ಕು ನಿಮಿತ್ತಗಳಿಂದ ಪ್ರವರ್ತಿಸುವ ಸ್ವಭಾವವುಳ್ಳ ಶಬ್ದಕ್ಕೆ ಅಗೋಚರವಾದ್ದರಿಂದ ಈಗ ಜಡ ಬುದ್ಧಿಯುಳ್ಳ ನಾನು ನಿನ್ನನ್ನು ಚನ್ನಾಗಿ ಸ್ತುತಿಮಾಡಲು ಅಶಕ್ತನಾಗಿರುವೆನು.

೩೧. ದೇವೇಶ್ವರನೆ! ಆದ್ದರಿಂದ ಅಜ್ಞಾನದಿಂದಲಾದರೂ ನನ್ನಿಂದ ಭಕ್ತಿ ಪೂರ್ವಕವಾಗಿ ಸ್ತುತಿಸಲ್ಪಟ್ಟಿರುವ ನೀನು ನನ್ನಲ್ಲಿ ಸುಪ್ರೀತನಾಗಬೇಕು. ನೀನು ಭಕ್ತ ಪ್ರೇಮಿಯೆಂದೆನಿಸಿರುವೆಯಲ್ಲವೆ ?

೩೨. ವಸಿಷ್ಠ ಮುನಿಯು ಇಂತೆಂದನು :— ಆ ರಾಮನಿಂದ ಈ ರೀತಿಯಾಗಿ ಭಕ್ತಿಪೂರ್ವಕವಾಗಿ ಸ್ತುತಿಸಲ್ಪಟ್ಟಿರುವ ಶಂಕರನು ಆಗ ನಸುನಗುತ್ತ ಪರಶುರಾಮನನ್ನು ಕುರಿತು ಮೇಘಧ್ವನಿಯಂತೆ ಗಂಭೀರವಾದ ವಾಣಿಯಿಂದ ಮಾತನಾಡಿದನು.

೩೩. ಭಗವಂತನು ಈ ರೀತಿಯಾಗಿ ಹೇಳಿದನು :—ರಾಮನೆ! ನಿನ್ನಲ್ಲಿರುವ ಅಪಾರವಾದ ಶೌರ್ಯದಿಂದಲೂ, ತಪಶ್ಚರ್ಯೆಯಿಂದಲೂ, ಭಕ್ತಿಯಿಂದಲೂ ಮತ್ತು ವಿಶೇಷವಾದ ಈ ಸ್ತುತಿ ರಚನೆಯಿಂದಲೂ ನಾನು ಪ್ರಸನ್ನನಾಗಿರುವೆನು.

೩೪. ಆದುದರಿಂದ ನೀನು ಯಾವ ಯಾವ ಇಷ್ಟಗಳನ್ನು ಹೊಂದಲು ಮನಸ್ಸಿನಿಂದ ಆಶಿಸುತ್ತಿರುವೆಯೊ ಆ ವರಗಳನ್ನು ಕೇಳು. ನೀನು ಕೇಳಿಕೊಳ್ಳುವ ಆಯಾಯ ಸರ್ವವಿಧವಾದ ವರಗಳನ್ನೂ ಸಂಪೂರ್ಣವಾಗಿ ನಿನಗೆ ಕೊಡುವೆನು.

ವಸಿಷ್ಠ ಉವಾಚ :—

ಇತ್ಯುಕ್ತೋ ದೇವದೇವೇನ ತಂ ಪ್ರಣಮ್ಯ ಭೃಗೂದ್ವಹಃ ।
ಕೃತಾಂಜಲಿಪುಟೋ ಭೂತ್ವಾ ರಾಜನ್ನಿದಮುವಾಚ ಹ ॥ ೩೫ ॥

ಯದಿ ದೇವ ಪ್ರಸನ್ನಸ್ತ್ವಂ ವರಾರ್ಹೋಽಸ್ಮಿ ಚ ಯದ್ಯಹಮ್ ।
ಭವತಸ್ತದಭೀಪ್ಸಾಮಿ ಹೇತುಮಸ್ತ್ರಾಣ್ಯಶೇಷತಃ ॥ ೩೬ ॥

ಅಸ್ತ್ರೇ ಶಸ್ತ್ರೇ ಚ ಶಾಸ್ತ್ರೇ ಚ ನ ಮತ್ತೋಽಭ್ಯಧಿಕೋ ಭವೇತ್ ।
ಲೋಕೇಷು ಮಾಂ ರಣೇ ಜೇತಾ ನ ಭವೇತ್ತ್ವತ್ಪ್ರಸಾದತಃ ॥ ೩೭ ॥

ವಸಿಷ್ಠ ಉವಾಚ :—

ತಥೇತ್ಯುಕ್ತ್ವಾ ತತಃ ಶಂಭುರಸ್ತ್ರಶಸ್ತ್ರಾಣ್ಯಶೇಷತಃ ।
ದದೌ ರಾಮಾಯ ಸುಪ್ರೀತಃ ಸಮಂತ್ರಾಣಿ ಕ್ರಮಾನ್ನೃಪ ॥ ೩೮ ॥

ಸಪ್ರಯೋಗಂ ಸಸಂಹಾರಮಸ್ತ್ರಗ್ರಾಮಂ ಚತುರ್ವಿಧಮ್ ।
ಪ್ರಸಾದಾಭಿಮುಖೋ ರಾಮಂ ಗ್ರಾಹಯಾಮಾಸ ಶಂಕರಃ। ॥ ೩೯ ॥

---

೩೫. ವಸಿಷ್ಠಮುನಿಯು ಇಂತೆಂದನು :—ರಾಜನೆ! ದೇವೋತ್ತಮನಾದ ಪರಮೇಶ್ವರನಿಂದ ಈ ರೀತಿಯಾಗಿ ಹೇಳಲ್ಪಟ್ಟ ಭೃಗುವಂಶವರ್ಯನಾದ ರಾಮನು ಶಂಕರನನ್ನು ನಮಸ್ಕರಿಸಿ ಅಂಜಲಿಬಂಧವನ್ನು ರಚಿಸಿಕೊಂಡು ಈ ವಚನವನ್ನು ಆಡಿದನು.

೩೬. ದೇವನೆ! ನೀನು ನನ್ನಲ್ಲಿ ಪ್ರಸನ್ನನಾಗಿರುವೆಯಾದರೆ ಮತ್ತು ನಾನು ನಿನ್ನ ವರದಾನಕ್ಕೆ ಅರ್ಹನಾಗಿದ್ದರೆ ನಿನ್ನಿಂದ ಸಮಸ್ತ ಅಸ್ತ್ರಗ್ರಾಮವನ್ನು ಹೊಂದಲು ಇಷ್ಟವುಳ್ಳವನಾಗಿದ್ದೇನೆ.

೩೭. ಅಸ್ತ್ರ, ಶಸ್ತ್ರ, ಶಾಸ್ತ್ರ ಇವೆಲ್ಲದರಲ್ಲಿಯೂ ನನ್ನನ್ನು ಮೀರಿಸುವ ಅಧಿಕವಾದ ಶಕ್ತಿಯುಳ್ಳವನು ಇರಬಾರದು. ಲೋಕದಲ್ಲಿ ರಣದಲ್ಲಿ ನನ್ನನ್ನು ಜಯಿಸುವ ವೀರನು ಇರಬಾರದು. ಈ ವರಗಳು ನಿನ್ನ ಅನುಗ್ರಹದಿಂದ ನನಗೆ ಲಭ್ಯವಾಗಬೇಕು.

೩೮. ವಸಿಷ್ಠ ಮುನಿಯು ಈ ರೀತಿಯಾಗಿ ಹೇಳಿದನು :—ರಾಜನೆ! ಅನಂತರದಲ್ಲಿ ಹಾಗೆ ಆಗಲೆಂದು ರಾಮನ ಇಷ್ಟ ವರಪ್ರದಾನವನ್ನು ಅಂಗೀಕರಿಸಿ ಶಂಭುವು ಸುಪ್ರೀತನಾಗಿ ಕ್ರಮವಾಗಿ ಮಂತ್ರಪೂರ್ವಕವಾಗಿ ನಿಖಿಲ ಅಸ್ತ್ರ ಶಸ್ತ್ರಗಳನ್ನು ರಾಮನಿಗೆ ಉಪದೇಶಿಸಿದನು.

೩೯. ಶಂಕರನು ರಾಮನಲ್ಲಿ ಅತ್ಯಂತ ಪ್ರಸಾದದೃಷ್ಟಿಯುಳ್ಳವನಾಗಿ ಪ್ರಯೋಗ ಉಪಸಂಹಾರಗಳೊಡನೆ ಚತುರ್ವಿಧ ಅಸ್ತ್ರಗ್ರಾಮವನ್ನು ರಾಮನಿಗೆ ಉಪದೇಶ ಮಾಡಿದನು.

**ಅಸಂಗವೇಗಂ ಶುಭ್ರಾಶ್ವಂ ಸುಧ್ವಜಂ ಚ ರಥೋತ್ತಮಮ್ ।**
**ಇಷುಧೀ ಚಾಕ್ಷಯಶರೌ ದದೌ ರಾಮಾಯ ಶಂಕರಃ　　॥ ೪೦ ॥**

**ಅಭೇದ್ಯಮಜರಂ ದಿವ್ಯಂ ದೃಢಜ್ಯಂ ವಿಜಯಂ ಧನುಃ ।**
**ಸರ್ವಶಸ್ತ್ರಸಹಂ ಚಿತ್ರಂ ಕವಚಂ ಚ ಮಹಾಧನಮ್　　॥ ೪೧ ॥**

**ಅಜೇಯತ್ವಂ ಚ ಯುದ್ಧೇಷು ಶೌರ್ಯಂ ಚಾಪ್ರತಿಮಂ ಭುವಿ ।**
**ಸ್ವೇಚ್ಛಯಾ ಧಾರಣೇ ಶಕ್ತಿಂ ಪ್ರಾಣಾನಾಂ ಚ ನರಾಧಿಪ　　॥ ೪೨ ॥**

**ಖ್ಯಾತಿಂ ಚ ಬೀಜಮಂತ್ರೇಣ ತನ್ನಾಮ್ನಾ ಸಾರ್ವಲೌಕಿಕಮ್ ।**
**ತಪಃಪ್ರಭಾವಂ ಚ ಮಹತ್ ಪ್ರದದೌ ಭಾರ್ಗವಾಯ ಸಃ　　॥ ೪೩ ॥**

**ಭಕ್ತಿಂ ಚಾತ್ಮನಿ ರಾಮಾಯ ದತ್ತ್ವಾ ರಾಜನ್ ಯಥೋಚಿತಮ್ ।**
**ಸಹಿತಃ ಸಕಲೈರ್ಭೂತೈಶ್ಚಾಮರೈಶ್ಚಂದ್ರಶೇಖರಃ　　॥ ೪೪ ॥**

---

೪೦. ಹಾಗು ಅಪ್ರತಿಹತವಾದ ಗತಿವೇಗ, ಶುಭ್ರವಾದ ಅಶ್ವ, ಉತ್ತಮವಾದ ಧ್ವಜ, ಇವುಗಳಿಂದ ಕೂಡಿದ ಪ್ರಶಸ್ತವಾದ ರಥವನ್ನೂ ಅಕ್ಷಯವಾದ ಬಾಣಗಳಿಂದ ಕೂಡಿದ ಬತ್ತಳಿಕೆಗಳನ್ನೂ ಶಂಕರನು ರಾಮನಿಗೆ ಕೊಟ್ಟನು.

೪೧. ಅಭೇದ್ಯವಾಗಿಯೂ, ಜರಾರಹಿತವಾಗಿಯೂ, ದೃಢವಾದ ಮೌರ್ವೀ ಬಂಧನದಿಂದ ಕೂಡಿದ್ದಾಗಿಯೂ ಮತ್ತು ಜಯಶೀಲವಾಗಿಯೂ ಇರುವ ದಿವ್ಯ ಧನುಸ್ಸನ್ನೂ ಸರ್ವಶಸ್ತ್ರಘಾತವನ್ನು ಸಹಿಸಬಲ್ಲ ಅಮೂಲ್ಯವಾದ ಚಿತ್ರ ಕವಚವನ್ನೂ ಕೊಟ್ಟನು.

೪೨. ನರಾಧಿಪನೆ! ಹಾಗೆ ಯುದ್ಧದಲ್ಲಿ ಅಜೇಯತ್ವವನ್ನೂ ಭೂಮಿಯಲ್ಲಿ ನಿರುಪಮವಾದ ಶೌರ್ಯವನ್ನೂ ಮತ್ತು ಸ್ವೇಚ್ಛೆಗೆ ಅಧೀನವಾದ ಪ್ರಾಣಧಾರಣದಲ್ಲಿ ಶಕ್ತಿಯನ್ನೂ ವರವನ್ನಾಗಿ ಅನುಗ್ರಹಿಸಿದನು.

೪೩. ರಾಮನಾಮಾಂಕಿತವಾದ ಬೀಜಮಂತ್ರದಿಂದ ಸರ್ವಲೋಕಗಳಲ್ಲಿಯೂ ಅತಿಶಯವಾದ ಖ್ಯಾತಿಯನ್ನೂ ಮಹತ್ತಾದ ತಪಃ ಪ್ರಭಾವವನ್ನೂ ಶಂಕರನು ಭಾರ್ಗವ ರಾಮನಿಗೆ ವರವನ್ನಾಗಿ ಕರುಣಿಸಿದನು.

೪೪. ರಾಜನೆ! ಮತ್ತು ರಾಮನಿಗೆ ತನ್ನಲ್ಲಿ ಅಸಾಧಾರಣವೂ ಔಚಿತ್ಯಪರಿಪೂರ್ಣವೂ ಆದ ಭಕ್ತಿಯನ್ನು ಅನುಗ್ರಹಿಸಿ ಸಮಸ್ತ ಪರಿವಾರಭೂತಗಳಿಂದಲೂ ನಿಖಿಲ ದೇವತೆಗಳಿಂದಲೂ ಕೂಡಿ ಶಂಕರನು ಅದೃಶ್ಯನಾದನು.

ತೇನೈವ ವಪುಷಾ ಶಂಭುಃ ಕ್ಷಿಪ್ರಮಂತರಧಾದ್ಧರಃ ।
ಕೃತಕೃತ್ಯಸ್ತತೋ ರಾಮೋ ಲಬ್ಧ್ವಾ ಸರ್ವಮಭೀಪ್ಸಿತಮ್ ॥ ೪೫ ॥

ಅದೃಶ್ಯತಾಂ ಗತೇ ಶರ್ವೇ ಮಹೋದರಮುವಾಚ ಹ ।
ಮಹೋದರ ಮದರ್ಥೇ ತ್ವಮಿದಂ ಸರ್ವಮಶೇಷತಃ ॥ ೪೬ ॥

ರಥಚಾಪಾದಿಕಂ ತಾವತ್ ಪರಿರಕ್ಷಿತುಮರ್ಹಸಿ ।
ಯದಾ ಕೃತ್ಯಂ ಮಮೈತೇನ ತದಾನೀಂ ತ್ವಂ ಮಯಾ ಸ್ಮೃತಃ ॥
ರಥಚಾಪಾದಿಕಂ ಸರ್ವಂ ಪ್ರಹಿಣು ತ್ವಂ ಮದಂತಿಕಮ್ ॥ ೪೭ ॥

ವಸಿಷ್ಠ ಉವಾಚ :—
ತಥೇತ್ಯುಕ್ತ್ವಾ ಗತೇ ತಸ್ಮಿನ್ ಭೃಗುವರ್ಯೋ ಮಹೋದರೇ ।
ಕೃತಕೃತ್ಯೋ ಗುರುಜನಂ ದ್ರಷ್ಟುಂ ಗಂತುಮಿಯೇಷ ಸಃ ॥ ೪೮ ॥

ಗಚ್ಛನ್ನಥ ತದಾಸೌ ತು ಹಿಮಾದ್ರಿವನಗಹ್ವರೇ ।
ವಿವೇಶ ಕಂದರಂ ರಾಮೋ ಭಾವಿಕರ್ಮಪ್ರಚೋದಿತಃ ॥ ೪೯ ॥

---

೪೫. ಶಂಕರನು ಇದುವರೆಗೆ ಇದ್ದ ಕಿರಾತ ದೇಹದಿಂದಲೇ ಬೇಗ ಅಂತರ್ಧಾನವನ್ನು ಹೊಂದಿದನು. ತರುವಾಯ ರಾಮನು ತನ್ನ ಸರ್ವೇಷ್ಟಗಳನ್ನು ಹೊಂದಿದ್ದರಿಂದ ಕೃತಕೃತ್ಯನಾದನು.

೪೬. ಮತ್ತು ಶಿವನು ಅದೃಶ್ಯನಾಗಿ ಹೋಗಲು ಮಹೋದರನನ್ನು ನೋಡಿ ಈ ರೀತಿಯಾಗಿ ಹೇಳಿದನು. ಮಹೋದರನೆ, ಈ ಎಲ್ಲ ಉಪಕರಣಗಳನ್ನೂ ನೀನು ನನಗೋಸ್ಕರ ಸಂಪೂರ್ಣವಾಗಿ ರಕ್ಷಿಸು.

೪೭. ರಥ, ಬಿಲ್ಲು ಮುಂತಾದ ಸಮಸ್ತೋಪಕರಣಗಳನ್ನೂ ನನಗೋಸ್ಕರ ರಕ್ಷಿಸುತ್ತಿರು. ನನಗೆ ಇದರಿಂದ ಉಪಯೋಗವು ಒದಗಿದಾಗ ನಿನ್ನನ್ನು ಸ್ಮರಿಸುವೆನು. ಆಗ ನೀನು ರಕ್ಷಿಸುತ್ತಿರುವ ರಥ, ಚಾಪ ಮುಂತಾದ ಸಕಲ ಸಾಮಗ್ರಿಗಳನ್ನು ನನ್ನ ಬಳಿಗೆ ಕಳುಹಿಸು.

೪೮. ವಸಿಷ್ಠ ಮುನಿಯು ಇಂತೆಂದನು. ಹಾಗೇ ಆಗಲೆಂದು ಒಪ್ಪಿಕೊಂಡು ಆ ಮಹೋದರನು ಹೊರಟುಹೋಗಲಾಗಿ ಆ ಭೃಗುವಂಶ ಶ್ರೇಷ್ಠನಾದ ರಾಮನು ಕೃತಕೃತ್ಯನಾಗಿ ತನ್ನ ಗುರುಜನರನ್ನು ಸಂದರ್ಶಿಸಲು ಹೊರಡಬೇಕೆಂದು ಇಚ್ಛಿಸಿದನು.

೪೯. ಅನಂತರದಲ್ಲಿ ರಾಮನು ಅಲ್ಲಿಂದ ಪ್ರಯಾಣಮಾಡುತ್ತ ಆಗ ಅವಶ್ಯ ಭಾವಿಯಾದ ಕರ್ಮಕ್ಕೆ ಅಧೀನನಾಗಿ ಹಿಮಾಲಯ ಪರ್ವತದ ವನದ ದುರ್ಗಭೂಮಿಯಲ್ಲಿರುವ ಒಂದು ಗವಿಯನ್ನು ಪ್ರವೇಶಮಾಡಿದನು.

ಸ ತತ್ರ ದದೃಶೇ ಬಾಲಂ ಧೃತಪ್ರಾಣಮನುದ್ರುತಮ್ ।
ವ್ಯಾಘ್ರೇಣ ವಿಪ್ರತನಯಂ ರುದಂತಂ ಭೀತಭೀತವತ್ ॥ ೫೦ ॥

ದೃಷ್ಟ್ವಾನುಕಂಪಹೃದಯಸ್ತತ್ಪರಿತ್ರಾಣಕಾತರಃ ।
ತಿಷ್ಠ ತಿಷ್ಠೇತಿ ತಂ ವ್ಯಾಘ್ರಂ ವದನ್ನುಚ್ಚೈರಥಾನ್ವಯಾತ್ ॥ ೫೧ ॥

ತಮನುದ್ರುತ್ಯ ವೇಗೇನ ಚಿರಾದಿವ ಭೃಗೂದ್ವಹಃ ।
ಆಸಸಾದ ವನೇ ಘೋರಂ ಶಾರ್ದೂಲಮತಿಭೀಷಣಮ್ ॥ ೫೨ ॥

ವ್ಯಾಘ್ರೇಣಾನುದ್ರುತಃ ಸೋಽಪಿ ಪಲಾಯನ್ ವನಗಹ್ವರೇ ।
ನಿಪಪಾತ ದ್ವಿಜಸುತಸ್ತ್ರಸ್ತಃ ಪ್ರಾಣಭಯಾತುರಃ ॥ ೫೩ ॥

ರಾಮೋಽಪಿ ಕ್ರೋಧರಕ್ತಾಕ್ಷೋ ವಿಪ್ರಪುತ್ರಪರೀಪ್ಸಯಾ ।
ತೃಣಮೂಲಂ ಸಮಾದಾಯ ಕುಶಾಸ್ತ್ರೇಣಾಭ್ಯಮಂತ್ರಯತ್ ॥ ೫೪ ॥

---

೫೦. ಅಲ್ಲಿ ಆ ರಾಮನು ಒಂದು ವ್ಯಾಘ್ರದಿಂದ ಹಿಂಬಾಲಿಸಲ್ಪಟ್ಟು ಅತಿ ಭಯದಿಂದ ರೋದನಮಾಡುತ್ತಲಿರುವ, ಮತ್ತು ಪ್ರಾಣಮಾತ್ರವನ್ನು ಧರಿಸಿರುವ ಬಾಲಕನಾದ ವಿಪ್ರಪುತ್ರನನ್ನು ನೋಡಿದನು.

೫೧. ಆ ಸ್ಥಿತಿಯನ್ನು ನೋಡಿ ದಯಾಪೂರ್ಣವಾದ ಹೃದಯವುಳ್ಳವನಾಗಿ ಆ ಬಾಲಕನನ್ನು ರಕ್ಷಿಸುವುದರಲ್ಲಿ ಕಾತರನಾಗಿ ಆ ವ್ಯಾಘ್ರವನ್ನು ನೋಡಿ ನಿಲ್ಲು, ನಿಲ್ಲು ಎಂದು ಗಟ್ಟಿಯಾಗಿ ಕೂಗುತ್ತ ಅದನ್ನು ಹಿಂಬಾಲಿಸಿದನು.

೫೨. ಭೃಗುವಂಶವರ್ಯನಾದ ರಾಮನು ಬಹುವೇಗದಿಂದ ಹಿಂಬಾಲಿಸಿ ಧಾವಿಸಿ ಬಹಳ ಹೊತ್ತಾದ ಬಳಿಕ ವನದಲ್ಲಿ ಅತ್ಯುಗ್ರವೂ ಬಹು ಭಯಂಕರವೂ ಆದ ವ್ಯಾಘ್ರವನ್ನು ಹೊಂದಿದನು.

೫೩. ವ್ಯಾಘ್ರದಿಂದ ಬೆರಸಲ್ಪಟ್ಟಿರುವ ಆ ದ್ವಿಜಪುತ್ರನು ಗಹನವಾದ ವನದಲ್ಲಿ ಭಯದಿಂದ ಪಲಾಯನ ಮಾಡುತ್ತ ಪ್ರಾಣಭಯದಿಂದ ಪೀಡಿತನಾಗಿ ಕ್ಷೀಣಶಕ್ತಿಯಾಗಿ ಬಿದ್ದನು.

೫೪. ರಾಮನೂಕೂಡ ಕೋಪದಿಂದ ಕೆಂಪಾದ ಕಣ್ಣುಗಳುಳ್ಳವನಾಗಿ ದ್ವಿಜಪುತ್ರನನ್ನು ರಕ್ಷಿಸಬೇಕೆಂಬ ಸಂಕಲ್ಪದಿಂದ ಹುಲ್ಲಿನ ಬೇರನ್ನು ತೆಗೆದುಕೊಂಡು ಕುಶಾಸ್ತ್ರದಿಂದ ಅಭಿಮಂತ್ರಿಸಿದನು.

ತಾವತ್ತರಕ್ಷುರ್ಬಲವಾನಾದ್ರವತ್ ಪತಿತಂ ದ್ವಿಜಮ್ ।
ದೃಷ್ಟ್ವಾ ನನಾದ ಸುಭೃಶಂ ರೋದಸೀ ಕಂಪಯನ್ನಿವ ॥ ೫೫ ॥

ದಗ್ಧ್ವಾ ತ್ವಸ್ತ್ರಾಗ್ನಿನಾ ವ್ಯಾಘ್ರಂ ಪ್ರಹರಂತಂ ನಖಾಂಕುರೈಃ ।
ಅಕೃತವ್ರಣಮೇವಾಶು ಮೋಕ್ಷಯಾಮಾಸ ತಂ ದ್ವಿಜಮ್ ॥ ೫೬ ॥

ಸೋಽಪಿ ಬ್ರಹ್ಮಾಗ್ನಿನಿರ್ದಗ್ಧದೇಹಃ ಪಾಪ್ಮಾ ನಭಸ್ತಲೇ ।
ಗಾಂಧರ್ವಂ ವಪುರಾಸ್ಥಾಯ ರಾಮಮಾಹೇತಿ ಸಾದರಮ್ ॥ ೫೭ ॥

ವಿಪ್ರಶಾಪೇನ ಭೋ ಪೂರ್ವಮಹಂ ಪ್ರಾಪ್ತಸ್ತರಕ್ಷುತಾಮ್ ।
ಗಚ್ಛಾಮಿ ಮೋಚಿತಃ ಶಾಪಾತ್ತ್ವಯಾಹಮಧುನಾ ದಿವಮ್ ॥ ೫೮ ॥

ಇತ್ಯುಕ್ತ್ವಾ ತು ಗತೇ ತಸ್ಮಿನ್ ರಾಮೋ ವೇಗೇನ ವಿಸ್ಮಿತಃ ।
ಪತಿತಂ ದ್ವಿಜಪುತ್ರಂ ತಂ ಕೃಪಯಾ ವ್ಯವಪದ್ಯತ ॥ ೫೯ ॥

---

೫೫. ಅಷ್ಟರಲ್ಲಿಯೇ ಬಲಿಷ್ಠವಾದ ವ್ಯಾಘ್ರವು ಬಿದ್ದಿರುವ ದ್ವಿಜಪುತ್ರನನ್ನು ಎದುರಿಸಿ ಧಾವಿಸಿತು. ಮತ್ತು ಅವನನ್ನು ನೋಡಿ ದ್ಯಾವಾಪೃಥಿವಿಗಳನ್ನು ಅಲ್ಲಾಡಿಸುವಂತೆ ಪುನಃ ಪುನಃ ಗಟ್ಟಿಯಾಗಿ ಗರ್ಜಿಸಿತು.

೫೬. ಆಗ ಆ ರಾಮನು ದರ್ಭಾಸ್ತ್ರದಿಂದ ಉಗುರುಗಳಿಂದ ದ್ವಿಜಪುತ್ರನನ್ನು ಪ್ರಹರಿಸುತ್ತಿದ್ದ ವ್ಯಾಘ್ರವನ್ನು ಭಸ್ಮಮಾಡಿ ಆ ದ್ವಿಜನನ್ನು ವ್ರಣವಿಲ್ಲದ ಹಾಗೆಯೇ ಬಿಡಿಸಿದನು.

೫೭. ಆ ಪಾಪಿಯಾದ ವ್ಯಾಘ್ರವೂ ಕೂಡ ಬ್ರಹ್ಮಾಸ್ತ್ರಾಗ್ನಿಯಿಂದ ಭಸ್ಮವಾದ ದೇಹವುಳ್ಳದ್ದಾಗಿ ಗಂಧರ್ವ ದೇಹವನ್ನು ಹೊಂದಿ ರಾಮನನ್ನು ಕುರಿತು ಆದರದಿಂದ ಈ ರೀತಿಯಾಗಿ ಹೇಳಿತು.

೫೮. ಎಲೈ ಮಹಾತ್ಮನೆ! ಪೂರ್ವದಲ್ಲಿ ನಾನೊಬ್ಬ ಗಂಧರ್ವನು. ವಿಪ್ರಶಾಪದಿಂದ ವ್ಯಾಘ್ರ ಜನ್ಮವನ್ನು ಹೊಂದಿರುವೆನು. ಈಗ ನಿನ್ನಿಂದ ಶಾಪದಿಂದ ಬಿಡುಗಡೆ ಹೊಂದಿಸಲ್ಪಟ್ಟವನಾಗಿ ಸ್ವರ್ಲೋಕವನ್ನು ಕುರಿತು ಹೋಗುವೆನು.

೫೯. ಹೀಗೆಂದು ಹೇಳಿ ಆ ಗಂಧರ್ವನು ವೇಗದಿಂದ ಪ್ರಯಾಣಮಾಡಲು ರಾಮನು ವಿಸ್ಮಯಗೊಂಡವನಾಗಿ ಪತಿತನಾಗಿರುವ ಆ ದ್ವಿಜಪುತ್ರನನ್ನು ಸಂಧಿಸಿದನು.

ಮಾಭೈರೇವಂ ವದನ್ ವಾಣೀಮಾರಾದೇವ ದ್ವಿಜಾತ್ಮಜಮ್ ।
ಪರಾಮೃಶತ್ತದಂಗಾನಿ ಶನೈರುಜ್ಜೀವಯನ್ ನೃಪ ॥ ೬೦ ॥

ರಾಮೇಣೋತ್ಥಾಪಿತಶ್ಚೈವಂ ಸ ತದೋನ್ಮೀಲ್ಯ ಲೋಚನೇ ।
ವಿಲೋಕಯನ್ ದದರ್ಶಾಗ್ರೇ ಭೃಗುಶ್ರೇಷ್ಠಮವಸ್ಥಿತಮ್ ॥ ೬೧ ॥

ಭಸ್ಮೀಕೃತಂ ಚ ಶಾರ್ದೂಲಂ ದೃಷ್ಟ್ವಾ ವಿಸ್ಮಯಮಾಗತಃ ।
ಗತಭೀರಾಹ ಕಸ್ತ್ವಂ ಭೋಃ ಕಥಂ ವೇಹ ಸಮಾಗತಃ ॥ ೬೨ ॥

ಕೇನ ವಾಯಂ ನಿಹಂತುಂ ಮಾಮುದ್ಯತೋ ಭಸ್ಮಸಾತ್ಕೃತಃ ।
ತರಕ್ಷುರ್ಭೀಷಣಾಕಾರಃ ಸಾಕ್ಷಾನ್ಮೃತ್ಯುರಿವಾಪರಃ ॥ ೬೩ ॥

ಭಯಸಮ್ಮೂಢಮನಸೋ ಮಮಾದ್ಯಾಪಿ ಮಹಾಮತೇ ।
ಹತೇಽಪಿ ತಸ್ಮಿನ್ನಖಿಲಾ ಭಾಂತಿ ವೈ ತನ್ಮಯಾ ದಿಶಃ ॥ ೬೪ ॥

---

೬೦. ರಾಜನೆ! ದ್ವಿಜಪುತ್ರನ ಸಮೀಪಕ್ಕೆ ಹೋಗಿ ಹೆದರಬೇಡ ಎಂದು ಅಭಯ ವಚನವನ್ನು ಹೇಳುತ್ತ ಅವನನ್ನು ಸಂಜೀವನಗೊಳ್ಳಿಸುವನೋ ಎಂಬಂತೆ ಅವನ ಅಂಗವನ್ನು ಮೆಲ್ಲಗೆ ಸ್ಪರ್ಶಿಸಿದನು.

೬೧. ಈ ರೀತಿಯಾಗಿ ಹೇಳಿ ರಾಮನಿಂದ ಮೇಲಕ್ಕೆ ಎಬ್ಬಿಸಲ್ಪಟ್ಟ ಆ ದ್ವಿಜ ಪುತ್ರನು ಆಗ ಕಣ್ಣುಗಳನ್ನು ತೆರೆದು ಮುಂದುಗಡೆ ನಿಂತಿರುವ ಭೃಗುವಂಶ ಶ್ರೇಷ್ಠ ನಾದ ರಾಮನನ್ನು ನೋಡಿದನು.

೬೨. ಮತ್ತು ಭಸ್ಮವಾಗಿ ಬಿದ್ದಿರುವ ವ್ಯಾಘ್ರವನ್ನು ನೋಡಿ ವಿಸ್ಮಯವನ್ನು ಹೊಂದಿ ನಿರ್ಭಯನಾಗಿ ಎಲೈ ಮಹಾತ್ಮನೆ, ನೀನು ಯಾರು ? ಏಕೆ ಇಲ್ಲಿಗೆ ಬಂದೆ ? ಎಂದು ಪ್ರಶ್ನಿಸಿದನು.

೬೩. ನನ್ನನ್ನು ಸಂಹರಿಸಲು ಉದ್ಯುಕ್ತವಾದ, ಮೂರ್ತಿಮತ್ತಾದ ಮತ್ತೊಂದು ಮೃತ್ಯುವೋ ಎಂಬಂತೆ ಭೀಷಣವಾದ ವಿಗ್ರಹವುಳ್ಳ ಈ ವ್ಯಾಘ್ರವು ಯಾರಿಂದ ಭಸ್ಮಮಾಡಲ್ಪಟ್ಟಿತು ?

೬೪. ಮಹಾಜ್ಞಾನಿಯೆ, ಭೀತಿಯಿಂದ ಮೋಹಗೊಂಡ ನನಗೆ ಆ ವ್ಯಾಘ್ರವು ಭಸ್ಮವಾಗಿ ಬಿದ್ದರೂ ಈಗಲೂ ಕೂಡ ಅಖಿಲ ದಿಗಂತಗಳೂ ವ್ಯಾಘ್ರಮಯವಾಗಿ ತೋರುತ್ತಿವೆ.

ತ್ವಾಮೇವ ಮನ್ಯೇ ಸಕಲಂ ಪಿತಾ ಮಾತಾ ಸುಹೃದ್ಗುರುಃ ।
ಪರಮಾಪದಮಾಪನ್ನಂ ತ್ವಂ ಮಾಂ ಸಮುಪಜೀವಯನ್ ॥ ೬೫ ॥

ಆಸೀನ್ಮುನಿವರಃ ಕಶ್ಚಿಚ್ಛಾಂತೋ ನಾಮ ಮಹಾತಪಾಃ ।
ಪುತ್ರಸ್ತಸ್ಯಾಸ್ಮಿ ತೀರ್ಥಾರ್ಥೀ ಶಾಲಗ್ರಾಮಮುಯಾಸಿಷಮ್ ॥ ೬೬ ॥

ತಸ್ಮಾತ್ ಸಂಪ್ರಸ್ಥಿತಃ ಶೈಲಂ ದಿದೃಕ್ಷುರ್ಗಂಧಮಾದನಮ್ ।
ನಾನಾಮುನಿಗಣೈರ್ಜುಷ್ಟಂ ಪುಣ್ಯಂ ಬದರಿಕಾಶ್ರಮಮ್ ॥ ೬೭ ॥

ಗಂತುಕಾಮೋಽಪಹಾಯಾಹಂ ಪಂಥಾನಂ ತು ಹಿಮಾಚಲೇ ।
ಪ್ರವಿಶನ್ ಗಹನಂ ರಮ್ಯಂ ಪ್ರದೇಶಾಲೋಕನಾಕುಲಮ್ ॥ ೬೮ ॥

ದಿಶಂ ಪ್ರಾಚೀಂ ಸಮುದ್ದಿಶ್ಯ ಕ್ರೋಶಮಾತ್ರಮುಯಾಸಿಷಮ್ ।
ತತೋ ದಿಷ್ಟವಶೇನಾಹಂ ಪ್ರಾದ್ರವಂ ಭಯಪೀಡಿತಃ ॥ ೬೯ ॥

---

೬೫. ಪರಮ ವಿಪತ್ತಿಗೆ ಭಾಜನನಾದ ನನ್ನನ್ನು ಬದುಕಿಸಿ ಪ್ರಾಣದಾನ ಮಾಡಿದ ನಿನ್ನನ್ನು ತಂದೆ, ತಾಯಿ, ಮಿತ್ರ ಮತ್ತು ಗುರು ಈ ಎಲ್ಲರನ್ನಾಗಿಯೂ ನಾನು ಭಾವಿಸುತ್ತೇನೆ.

೬೬. ಮಹಾ ತಪಸ್ವಿಯೂ ಶಾಂತ ಎಂಬ ನಾಮಾಂಕಿತನೂ ಆದ ಒಬ್ಬ ಮಹರ್ಷಿ ಶ್ರೇಷ್ಠನು ಇದ್ದನು. ನಾನು ಆ ತಪಸ್ವಿಯ ಪುತ್ರನಾಗಿದ್ದೇನೆ. ತೀರ್ಥಯಾತ್ರಾಪೇಕ್ಷೆಯಿಂದ ಶಾಲಗ್ರಾಮ ಕ್ಷೇತ್ರಕ್ಕೆ ಹೋದೆನು.

೬೭. ಅಲ್ಲಿಂದ ಗಂಧಮಾದನ ಶೈಲವನ್ನು ನೋಡಬೇಕೆಂಬ ಕುತೂಹಲದಿಂ ಹೊರಟು ಕ್ರಮವಾಗಿ ಅನೇಕ ಮಹರ್ಷಿಗಳಿಂದ ಸೇವಿಸಲ್ಪಟ್ಟ ಪವಿತ್ರವಾದ ಬದರಿ ಶ್ರಮಕ್ಕೆ ಹೋಗಲು ಇಷ್ಟವುಳ್ಳವನಾದೆನು.

೬೮. ಆ ಇಚ್ಛೆಯಿಂದ ಹಿಮಾಲಯ ಪರ್ವತದಲ್ಲಿ ದಾರಿಯನ್ನು ಬಿಟ್ಟು ನಾ ದರ್ಶನೀಯವಾದ ಅನೇಕ ಪ್ರದೇಶಗಳಿಂದ ವ್ಯಾಪ್ತವೂ ರಮ್ಯವೂ ಆದ ಗಹ ಸೀಮೆಯನ್ನು ಪ್ರವೇಶಿಸಿದೆನು.

೬೯. ಅಲ್ಲಿಂದ ಪೂರ್ವದಿಕ್ಕಿಗೆ ಎದುರಾಗಿ ಒಂದು ಹರದಾರಿಯಷ್ಟು ಮಾ ಪ್ರಯಾಣ ಮಾಡಿದೆನು. ಅಷ್ಟರಲ್ಲಿ ಕಾಲಯೋಗದಿಂದ ನಾನು ಈ ರೀತಿಯಾ ಭಯಗ್ರಸ್ತನಾಗಿ ಧಾವಿಸಿದೆನು.

ಪತಿತಶ್ಚ ತ್ವಯಾ ಭೂಮಿಯೋ ಭೂಮೇರುತ್ಥಾಪಿತೋಽಧುನಾ ।
ಪಿತ್ರೇವ ನಿತರಾಂ ಪುತ್ರಃ ಪ್ರೇಮ್ಣಾತ್ಯರ್ಥಂ ದಯಾಲುನಾ ॥
ಇತ್ಯೇಷ ಮಮ ವೃತ್ತಾಂತಃ ಸಾಕಲ್ಯೇನೋದಿತಸ್ತವ ॥ ೭೦ ॥

ವಸಿಷ್ಠ ಉವಾಚ:

ಇತಿ ಪೃಷ್ಟಸ್ತದಾ ತೇನ ಸ್ವವೃತ್ತಾಂತಮಶೇಷತಃ ।
ಕಥಯಾಮಾಸ ರಾಜೇಂದ್ರ ರಾಮಸ್ತಸ್ಮೈ ಯಥಾಕ್ರಮಮ್ ॥ ೭೧ ॥

ತತಸ್ತೌ ಪ್ರೀತಿಸಂಯುಕ್ತೌ ಕಥಯಂತೌ ಪರಸ್ಪರಮ್ ।
ಸ್ಥಿತ್ವಾ ನಾತಿಚಿರಂ ಕಾಲಮಥ ಗಂತುಮಿಯೇಷ ಸಃ ॥ ೭೨ ॥

ಅನ್ವೀಯಮಾನಸ್ತೇನಾಥ ರಾಮಸ್ತಸ್ಮಾದ್ಗುಹಾಮುಖಾತ್ ।
ನಿಷ್ಕ್ರಮ್ಯಾವಸಥಂ ಪಿತ್ರೋಃ ಸಂಪ್ರತಸ್ಥೇ ಮುದಾನ್ವಿತಃ ॥ ೭೩ ॥

---

೭೦. ಮತ್ತು ಹಾಗೆಯೇ ಭೂಮಿಯಲ್ಲಿ ಪತಿತನಾದ ನಾನು ಮತ್ತೆ ಜನಕನಿಂದ ಪುತ್ರನು ಎಬ್ಬಿಸಲ್ಪಟ್ಟಂತೆ ಅತ್ಯಂತ ಪ್ರೇಮಾವಿಷ್ಟನೂ ದಯಾಲುವೂ ಆದ ನಿನ್ನಿಂದ ಈಗ ಮೇಲಕ್ಕೆಬ್ಬಿಸಲ್ಪಟ್ಟೆನು. ಈ ರೀತಿಯಾಗಿ ನಾನು ನನ್ನ ಸಂಪೂರ್ಣ ವೃತ್ತಾಂತ ವನ್ನು ನಿವೇದಿಸಿರುವೆನು.

೭೧. ವಸಿಷ್ಠ ಮುನಿಯು ಇಂತೆಂದನು:—ರಾಜೇಂದ್ರನೆ! ಆಗ ಆ ದ್ವಿಜ ಪುತ್ರನಿಂದ ತನ್ನ ಸಮಾಚಾರವನ್ನು ಪ್ರಶ್ನಿಸಲ್ಪಟ್ಟ ರಾಮನು ಅವನಿಗೆ ತನ್ನ ಸಂಪೂರ್ಣ ವೃತ್ತಾಂತವನ್ನು ಕ್ರಮವಾಗಿ ಹೇಳಿದನು.

೭೨. ತರುವಾಯ ಅವರಿಬ್ಬರು ಪರಸ್ಪರ ಪ್ರೀತಿಯಿಂದ ಕೂಡಿದವರಾಗಿ ಪರಸ್ಪರ ವಾಗಿ ಸಂಭಾಷಣವನ್ನು ಮಾಡುತ್ತ ಸ್ವಲ್ಪ ಕಾಲವನ್ನು ಕಳೆದರು. ಅನಂತರದಲ್ಲಿ ರಾಮನು ಅಲ್ಲಿಂದ ಹೊರಡಲು ಇಷ್ಟವುಳ್ಳವನಾದನು.

೭೩. ತರುವಾಯ ರಾಮನು ಆ ದ್ವಿಜಪುತ್ರನಿಂದ ಹಿಂಬಾಲಿಸಲ್ಪಟ್ಟವನಾಗಿ ಆ ಗವಿಯ ದ್ವಾರದಿಂದ ಹೊರಕ್ಕೆ ಬಂದು ತಂದೆತಾಯಿಗಳ ವಾಸಸ್ಥಾನವಾದ ಆಶ್ರಮಕ್ಕೆ ಸಂತೋಷದಿಂದ ತೆರಳಿದನು.

ಅಕೃತವ್ರಣ ವಿನಾಶೌ ವ್ಯಾಘ್ರೇಣ ಭುವಿ ಪಾತಿತಃ ।
ರಾಮೇಣ ರಕ್ಷಿತಶ್ಚಾಭೂದ್ವ್ಯಸ್ಮಾದ್ವ್ಯಾಘ್ರಂ ವಿನಿಘ್ನತಾ ॥ ೭೪ ॥

ತಸ್ಮಾತ್ತದೇವ ನಾಮಾಸ್ಯ ಬಭೂವ ಪ್ರಥಿತಂ ಭುವಿ ।
ವಿಪ್ರಪುತ್ರಸ್ಯ ರಾಜೇಂದ್ರ ತದೇತತ್ ಸೋಽಕೃತವ್ರಣಃ ॥ ೭೫ ॥

ತದಾಪ್ರಭೃತಿ ರಾಮಸ್ಯ ಛಾಯೇವಾತಪಗಾ ಭುವಿ ।
ಬಭೂವ ಮಿತ್ರಮತ್ಯರ್ಥಂ ಸರ್ವಾವಸ್ಥಾಸು ಪಾರ್ಥಿವ ॥ ೭೬ ॥

ಸ ತೇನಾನುಗತೋ ರಾಜನ್ ಭೃಗೋಽರಾಸಾದ್ಯ ಸನ್ನಿಧಿಮ್ ।
ದೃಷ್ಟ್ವಾ ಖ್ಯಾತಿಂ ಚ ಸೋಽಭ್ಯೇತ್ಯ ವಿನಯೇನಾಭ್ಯವಾದಯತ್ ॥ ೭೭ ॥

ಸ ತಾಭ್ಯಾಂ ಪ್ರೀಯಮಾಣಾಭ್ಯಾಮಾಶೀರ್ಭಿರಭಿನಂದಿತಃ ।
ದಿನಾನಿ ಕತಿಚಿತ್ತತ್ರ ನ್ಯವಸತ್ತತ್ಪ್ರಿಯೇಪ್ಸಯಾ ॥ ೭೮ ॥

---

೭೪. ಆ ದ್ವಿಜಪುತ್ರನು ವ್ಯಾಘ್ರದಿಂದ ಭೂಮಿಯಲ್ಲಿ ಕೆಡವಲ್ಪಟ್ಟವನಾಗಿ ಅವನ ದೇಹದಲ್ಲಿ ವ್ಯಾಘ್ರವು ಗಾಯವನ್ನುಕೂಡ ಮಾಡುವಷ್ಟರಲ್ಲಿಯೇ ಅದನ್ನು ಕೊಂದುಹಾಕಿ ಭಾರ್ಗವರಾಮನಿಂದ ರಕ್ಷಿಸಲ್ಪಟ್ಟವನಾದನು.

೭೫. ರಾಜೇಂದ್ರನೆ! ಆ ಕಾರಣದಿಂದ ಆ ದ್ವಿಜಪುತ್ರನಿಗೆ ಗಾಯವಾಗದವನು ಎಂಬ ಅರ್ಥವನ್ನುಕೊಡುವ ಅಕ್ಕತವ್ರಣ ಎಂಬ ಅನ್ವರ್ಥನಾಮವು ಭೂಮಿಯಲ್ಲಿ ಪ್ರಸಿದ್ಧವಾಯಿತು. ಆದ್ದರಿಂದ ಅವನು ಅಕೃತವ್ರಣನೆಂದು ಕರೆಯಲ್ಪಟ್ಟನು.

೭೬. ನೃಪತಿಯೆ! ಆ ಮೊದಲುಗೊಂಡು ಅಕೃತವ್ರಣನು ರಾಮನಿಗೆ ಎಲ್ಲ ಅವಸ್ಥೆಗಳಲ್ಲಿಯೂ ಜೊತೆಯಲ್ಲಿ ಸಂಚರಿಸುವ ನೆಲದಲ್ಲಿ ಬಿದ್ದಿರುವ ಬಿಸಲಿನ ಛಾಯೆಯಂತೆ ಎಡಬಿಡದಿರುವ ಪರಮ ಮಿತ್ರನಾದನು.

೭೭. ರಾಜನೆ! ಅಕೃತವ್ರಣನಿಂದ ಹಿಂಬಾಲಿಸಲ್ಪಟ್ಟಿರುವ ರಾಮನು ಭೃಗುಮುನಿಯ ಸನ್ನಿಧಿಯನ್ನು ಹೊಂದಿ ಹಾಗು ಖ್ಯಾತಿದೇವಿಯ ದರ್ಶನವನ್ನು ಮಾಡಿ ವಿನಯಪೂರ್ವಕವಾಗಿ ಅವರಿಬ್ಬರನ್ನು ವಂದಿಸಿದನು.

೭೮. ಅನಂತರದಲ್ಲಿ ಬಹುವಾಗಿ ಪ್ರೀತಿಸಿದ ಆ ಮುನಿ ಮತ್ತು ಮುನಿಪತ್ನಿಯರಿಂದ ಆಶೀರ್ವಚನಗಳಿಂದ ಅಭಿನಂದಿಸಲ್ಪಟ್ಟವನಾಗಿ ಅವರಿಗೆ ಪ್ರೀತಿಯನ್ನು ಉಂಟುಮಾಡುತ್ತ ಕೆಲವು ದಿನಗಳ ವರೆಗೆ ಅಲ್ಲಿಯೆ ವಾಸಮಾಡಿದನು.

ತತಸ್ತಯೋರನುಮತೇ ಚ್ಯವನಸ್ಯ ಮಹಾಮುನೇಃ ।
ಆಶ್ರಮಂ ಪ್ರತಿಚಕ್ರಾಮ ಶಿಷ್ಯಸಂಘೈಃ ಸಮಾವೃತಮ್ ॥ ೭೯ ॥

ನಿಯಂತ್ರಿತಾಂತಃಕರಣಂ ತಂ ಚ ಸಂಶಾಂತಮಾನಸಮ್ ।
ಸುಕನ್ಯಾಂ ಚಾಪಿ ತದ್ಭಾರ್ಯಾಮವಂದತ ಮಹಾಮನಾಃ ॥ ೮೦ ॥

ತಾಭ್ಯಾಂ ಚ ಪ್ರೀತಿಯುಕ್ತಾಭ್ಯಾಂ ರಾಮಃ ಸಮಭಿನಂದಿತಃ ।
ಔರ್ವಾಶ್ರಮಂ ಸಮಾಪೇದೇ ದ್ರಷ್ಟುಕಾಮಸ್ತಪೋನಿಧಿಮ್ ॥ ೮೧ ॥

ತಂ ಚಾಭಿವಾದ್ಯ ಮೇಧಾವೀ ತೇನ ಚ ಪ್ರತಿನಂದಿತಃ ।
ಉವಾಸ ತತ್ರ ತತ್ಪ್ರೀತ್ಯಾ ದಿನಾನಿ ಕತಿಚಿನ್ನೃಪ ॥ ೮೨ ॥

ವಿಸೃಷ್ಟಸ್ತೇನ ಶನಕೈರೃಚೀಕಭವನಂ ಮುದಾ ।
ಪ್ರತಸ್ಥೇ ಭಾರ್ಗವಃ ಶ್ರೀಮಾನ್ ಅಕೃತವ್ರಣಸಂಯುತಃ ॥ ೮೩ ॥

---

೭೯. ಅಲ್ಲಿಂದ ಮುಂದೆ ಅವರ ಸಮ್ಮತಿಯನ್ನು ಪಡೆದು ಚ್ಯವನ ಮಹಾಮುನಿಯ ದರ್ಶನಾರ್ಥವಾಗಿ ಅನೇಕ ಶಿಷ್ಯಸಂಘವೆಂಬ ಪರಿವಾರದಿಂದ ಕೂಡಿದ ಆ ಮುನಿಯ ಆಶ್ರಮಕ್ಕೆ ಹೊರಟನು.

೮೦. ಅಲ್ಲಿಗೆ ಬಂದು ಮಹಾಮನಸ್ವಿಯಾದ ರಾಮನು ನಿಗ್ರಹಿಸಲ್ಪಟ್ಟಿರುವುದರಿಂದ ನಿರ್ವಿಕಾರವಾದ ಮಾನಸವುಳ್ಳ ಚ್ಯವನ ಮಹಾಮುನಿಯನ್ನೂ ಸುಕನ್ಯಾ ಎಂಬ ಅವನ ಪತ್ನಿಯನ್ನೂ ನಮಸ್ಕರಿಸಿದನು.

೮೧. ಬಹು ಪ್ರೀತಿಯನ್ನು ತೋರಿಸಿದ ಆ ಮುನಿದಂಪತಿಗಳಿಂದ ರಾಮನು ಅಭಿನಂದಿಸಲ್ಪಟ್ಟವನಾಗಿ ಔರ್ವ ಮುನಿಯೆಂಬ ತಪಸ್ವಿಯನ್ನು ಸಂದರ್ಶಿಸಬೇಕೆಂಬ ಕುತೂಹಲದಿಂದ ಆ ಮುನಿಯ ಆಶ್ರಮವನ್ನು ಹೊಂದಿದನು.

೮೨. ರಾಜನೆ! ಮಹಾಮೇಧಾವಿಯೆನಿಸಿರುವ ರಾಮನು ಔರ್ವ ಮುನಿಯನ್ನು ಅಭಿವಂದನಮಾಡಿ ಅವನಿಂದ ಅಭಿನಂದಿಸಲ್ಪಟ್ಟು ಆ ಮುನಿಯ ಪ್ರೀತಿಗೋಸ್ಕರ ಕೆಲವು ದಿನಗಳವರೆಗೆ ಅಲ್ಲಿಯೇ ವಾಸಮಾಡಿದನು.

೮೩. ಮತ್ತು ಕೆಲವು ದಿನಗಳು ಕಳೆದ ತರುವಾಯ ಮೆಲ್ಲಗೆ ಕಳುಹಿಸಲ್ಪಟ್ಟವನಾಗಿ ಅಕೃತವ್ರಣನೆಂಬ ಮಿತ್ರನ ಸಂಗಡ ಕಾಂತ್ಯಾದಿಗುಣಭರಿತನಾದ ರಾಮನು ಸಂತೋಷದಿಂದ ಋಚೀಕ ಮುನಿಯ ಆಶ್ರಮಕ್ಕೆ ಹೊರಟನು.

2

ಅವಂದತ ಪಿತುಃ ಪಿತ್ರೋರ್ನತ್ವಾ ಪಾದೌ ಪೃಥಕ್ ಪೃಥಕ್ ।
ತೌ ಚ ತಂ ನೃಪ ಸಂಹರ್ಷಾಚ್ಚಾಶಿಷಾ ಪ್ರತ್ಯನಂದತಾಮ್ ॥ ೮೪ ॥

ಪೃಷ್ಟಶ್ಚ ತಾಭ್ಯಾಮಖಿಲಂ ನಿಜವೃತ್ತಮುದಾರಧೀಃ ।
ಕಥಯಾಮಾಸ ರಾಜೇಂದ್ರ ಯಥಾವೃತ್ತಮನುಕ್ರಮಾತ್ ॥ ೮೫ ॥

ಸ್ಥಿತ್ವಾ ದಿನಾನಿ ಕತಿಚಿತ್ತತ್ರಾಪಿ ತದನುಜ್ಞಯಾ ।
ಜಗಾಮಾವಸಥಂ ಪಿತ್ರೋರ್ಮುದಾ ಪರಮಯಾ ಯುತಃ ॥ ೮೬ ॥

ಅಭ್ಯೇತ್ಯ ಪಿತರೌ ರಾಜನ್ನಾಸೀನಾವಾಶ್ರಮೋತ್ತಮೇ ।
ಅವಂದತ ತಯೋಃ ಪಾದೌ ಯಥಾವದ್ಭೃಗುನಂದನಃ ॥ ೮೭ ॥

ಪಾದಪ್ರಣಾಮಾವನತಂ ಸಮುತ್ಥಾಪ್ಯ ಚ ಸಾದರಮ್ ।
ಆಶ್ಲಿಷ್ಯ ನೇತ್ರಸಲಿಲೈರ್ನಂದಂತೌ ಪರ್ಯಷಿಂಚತಾಮ್ ॥ ೮೮ ॥

---

೮೪. ರಾಜನೇ! ಆಗ ರಾಮನು ತನ್ನ ತಂದೆಯ ತಂದೆತಾಯಂದಿರನ್ನು ಬೇರೆ ಬೇರೆಯಾಗಿ ಪಾದಗಳನ್ನು ಸ್ಪರ್ಶಿಸಿ ನಮಸ್ಕರಿಸಿದನು. ಅವರು ಸಂತುಷ್ಟರಾಗಿ ಆಶೀರ್ವಚನಗಳನ್ನು ಕೊಟ್ಟು ರಾಮನನ್ನು ಅಭಿನಂದಿಸಿದರು.

೮೫. ರಾಜೇಂದ್ರನೇ! ಪಿತಾಮಹ ಪಿತಾಮಹಿಯರಿಂದ ತನ್ನ ಸಮಗ್ರ ವೃತ್ತಾಂತವನ್ನು ಪ್ರಶ್ನೆ ಮಾಡಲ್ಪಟ್ಟು ವಿಶಾಲಬುದ್ಧಿಯುಳ್ಳ ರಾಮನು ನಡೆದ ವೃತ್ತಾಂತ ವನ್ನೆಲ್ಲ ಕ್ರಮವಾಗಿ ಹೇಳಿದನು.

೮೬. ಅಲ್ಲಿಯೂ ಕೂಡ ಕೆಲವು ದಿನಗಳ ವರೆಗೆ ಮಾತ್ರ ವಾಸಮಾಡಿ ಅವ ರಿಂದ ಅನುಮತಿಯನ್ನು ಪಡೆದು ಪರಮಾನಂದದಿಂದ ಭರಿತನಾಗಿ ತಂದೆತಾಯಿಗಳ ಆಶ್ರಮಕ್ಕೆ ಹೊರಟನು.

೮೭. ಭೂಪತಿಯೆ! ಭೃಗುಮುನಿ ವಂಶದಲ್ಲಿ ಹುಟ್ಟಿದ ರಾಮನು ಉತ್ತಮ ವಾದ ಆಶ್ರಮದಲ್ಲಿ ವಾಸಿಸುತ್ತಿದ್ದ ತಂದೆತಾಯಿಗಳ ಸನ್ನಿಧಿಗೆ ಬಂದು ಯಥಾವಿಧಿ ಯಾಗಿ ಅವರಿಬ್ಬರ ಪಾದಗಳನ್ನು ನಮಸ್ಕರಿಸಿದನು.

೮೮. ಪಾದಪ್ರಣಾಮವನ್ನು ಮಾಡುತ್ತ ಕೆಳಕ್ಕೆ ಬಗ್ಗಿರುವ ರಾಮನನ್ನು ತಂದೆತಾಯಿಗಳು ಆದರದಿಂದ ಮೇಲಕ್ಕೆ ಎಬ್ಬಿಸಿ ಆಲಿಂಗಿಸಿಕೊಂಡು ಅಭಿನಂದಿಸಿ ಆನಂದಬಾಷ್ಪವೃಷ್ಟಿಯಿಂದ ಅವನ ಶರೀರವನ್ನು ನೆನೆಸಿದರು.

ಆಶೀರ್ಭಿರಭಿನಂದ್ಯಾಂಕೇ ಸಮಾರೋಪ್ಯ ಮುಹುರ್ಮುಖಮ್ ।
ವೀಕ್ಷಂತೌ ತಸ್ಯ ಚಾಂಗಾನಿ ಪರಿಸ್ಪೃಶ್ಯಾಪತುರ್ಮುದಮ್ ॥ ೮೯ ॥

ಅಪೃಚ್ಛತಾಂ ಚ ತೌ ರಾಮಂ ಕಾಲೇನೈತಾವತಾ ತ್ವಯಾ ।
ಕಿಂ ಕೃತಂ ಪುತ್ರ ಕೋ ವಾಯಂ ಕುತ್ರ ವಾ ತ್ವಮುಪಸ್ಥಿತಃ ॥ ೯೦ ॥

ಕಥಂ ಸಹ ಸಕಾಶೇ ತ್ವಮಾಸ್ಥಿತೋ ವಾತ್ರವಾಗತಃ ।
ತ್ವಯ್ಯೈತದಖಿಲಂ ವತ್ಸ ಕಥ್ಯತಾಂ ತಥ್ಯಮಾವಯೋಃ ॥ ೯೧ ॥

ಇತಿ ಶ್ರೀ ಬ್ರಹ್ಮಾಂಡ ಪುರಾಣೇ ಉತ್ತರಾರ್ಧೇ
ಪಂಚವಿಂಶತಿತಮೋಽಧ್ಯಾಯಃ

---

೮೯. ಮತ್ತು ಆಶೀರ್ವಾದಗಳಿಂದ ಅವನನ್ನು ಅಭಿನಂದಿಸಿ ತೊಡೆಯಲ್ಲಿ ಕುಳ್ಳಿರಿಸಿಕೊಂಡು ಪುತ್ತೆ ಮತ್ತೆ ಮುಖವನ್ನು ನೋಡುತ್ತ ಎಲ್ಲ ಅಂಗವನ್ನು ಪ್ರೀತಿಯಿಂದ ಸ್ಪರ್ಶಿಸುತ್ತ ಅತ್ಯಾನಂದವನ್ನು ಹೊಂದಿದರು.

೯೦. ಹಾಗೆ ಪುತ್ರನನ್ನು ಕುರಿತು ಈ ರೀತಿಯಾಗಿ ಪ್ರಶ್ನಿಸಿದರು :—ಪುತ್ರನೆ! ಇಲ್ಲಿಂದ ಹೊರಟು ಹೋದ ನೀನು ಇಷ್ಟು ಕಾಲದವರೆಗೂ ಏನೇನು ಮಾಡಿದೆ? ಜೊತೆಯಲ್ಲಿರುವ ಇವನು ಯಾರು? ನೀನು ಎಲ್ಲಿಗೆ ಹೋಗಿದ್ದೆ?

೯೧. ಈಗ ನೀನು ಇಲ್ಲಿ ನಮ್ಮ ಸಮೀಪಕ್ಕೆ ಬಂದಿರುವುದು ಏಕೆ? ಅಥವಾ ನಿನ್ನ ಸಮಗ್ರ ಕಾರ್ಯಗಳನ್ನು ಮುಗಿಸಿಕೊಂಡು ಇಲ್ಲಿಗೆ ಬಂದಿರುತ್ತೀಯಾ? ಪುತ್ರನೆ! ಈ ಎಲ್ಲ ವಿಷಯಗಳನ್ನು ತಾತ್ತ್ವಿಕವಾಗಿ ನಮಗೆ ಹೇಳು, ಎಂಬುದಾಗಿಪ್ರಶ್ನಿಸಿದರು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಇಪ್ಪತ್ತೈದನೆಯ ಅಧ್ಯಾಯವು
ಸಮಾಪ್ತವು.



## ಷಡ್ವಿಂಶತಿತಮೋಽಧ್ಯಾಯಃ

**ವಸಿಷ್ಠ ಉವಾಚ :—**

**ಇತಿ ಪೃಷ್ಟಸ್ತದಾ ತಾಭ್ಯಾಂ ರಾಮೋ ರಾಜನ್ ಕೃತಾಂಜಲಿಃ ।**
**ತಯೋರಕಥಯತ್ಸರ್ವಮಾತ್ಮನಾ ಯದನುಷ್ಠಿತಮ್ ॥ ೧ ॥**

**ನಿದೇಶಾದ್ಭೃಗೋಃ ಕುಲಗುರೋಸ್ತಪಶ್ಚರಣಮಾತ್ಮನಃ ।**
**ಶಂಭೋರ್ನಿದೇಶಾತ್ತೀರ್ಥಾನಾಮಟನಂ ಚ ಯಥಾಕ್ರಮಮ್ ॥ ೨ ॥**

**ತದಾಜ್ಞಯೈವ ದೈತ್ಯಾನಾಂ ವಧಂ ಚಾಮರಕಾರಣಾತ್ ।**
**ಹರಪ್ರಸಾದಾದತ್ರಾಪಿ ಹ್ಯಕೃತವ್ರಣದರ್ಶನಮ್ ॥ ೩ ॥**

**ಏತತ್ಸರ್ವಮಶೇಷೇಣ ಯದನ್ಯಚ್ಚಾತ್ಮನಾ ಕೃತಮ್ ।**
**ಕಥಯಾಮಾಸ ತದ್ರಾಮಃ ಪಿತ್ರೋಃ ಸಂಪ್ರೀಯಮಾಣಯೋಃ ॥ ೪ ॥**

---

೧. ವಸಿಷ್ಠಮುನಿಯು ಇಂತೆಂದನು :—ರಾಜನೇ ! ಮಾತಾಪಿತೃಗಳಿಂದ ಈ ರೀತಿಯಾಗಿ ಪ್ರಶ್ನಿಸಲ್ಪಟ್ಟ ಭಾರ್ಗವರಾಮನು ಅಂಜಲಿಬದ್ಧನಾಗಿ ನಿಂತು ತನ್ನ ನಿಖಿಲ ವೃತ್ತಾಂತವನ್ನು ಅವರಿಗೆ ಯಥಾಕ್ರಮವಾಗಿ ಹೇಳಿದನು.

೨. ಕುಲಗುರುವಾದ ಭೃಗುಮುನಿಯ ಆಜ್ಞೆಯಂತೆ ತಾನು ತಪಶ್ಚರ್ಯೆಯನ್ನು ಕೈಗೊಂಡಿರುವುದನ್ನೂ ತಪೋನುಷ್ಠಾನದಿಂದ ಪ್ರಸನ್ನನಾದ ಈಶ್ವರನ ಆದೇಶದಂತೆ ಅಲ್ಲಲ್ಲಿ ತೀರ್ಥಾಟನೆಯನ್ನು ಮಾಡಿದುದನ್ನೂ ಸಮಗ್ರವಾಗಿ ಹೇಳಿದನು.

೩. ಶಂಭುವಿನ ಆಜ್ಞೆಯಂತೆ ದೇವತೆಗಳ ಸಹಾಯಕ್ಕೋಸ್ಕರ ದೈತ್ಯರನ್ನು ಸಂಹಾರಮಾಡಿದುದನ್ನೂ ಮತ್ತು ಈಶ್ವರ ಪ್ರಸಾದದಿಂದ ಇಲ್ಲಿರುವ ಈ ಅಕೃತವ್ರಣನೆಂಬ ಮಿತ್ರನ ದರ್ಶನವಾದುದನ್ನೂ ತಿಳಿಸಿದನು.

೪. ಭಾರ್ಗವರಾಮನು ಇದೆಲ್ಲವನ್ನೂ ಸಂಪೂರ್ಣವಾಗಿ ತಿಳಿಸಿದುದಲ್ಲದೆ ತಾನು ಮಾಡಿದುದಿನ್ನೇನಿದ್ದರೂ ಅದನ್ನೂ ನಿಶ್ಶೇಷವಾಗಿ ಪ್ರೀತಿಸುತ್ತಿದ್ದ ಮಾತಾಪಿತೃಗಳಿಗೆ ಹೇಳಿದನು.

ತೌ ಚ ತೇನೋದಿತಂ ಸರ್ವಂ ಶ್ರುತ್ವಾ ತತ್ಕರ್ಮ ವಿಸ್ತರಮ್ ।
ಹೃಷ್ಟೌ ಹರ್ಷಾಂತರಂ ಭೂಯೋ ರಾಜನ್ನಾಪ್ನುವತಾವುಭೌ ॥ ೫ ॥

ಏವಂ ಪಿತ್ರೋರ್ಮಹಾರಾಜ ಶುಶ್ರೂಷಾಂ ಭೃಗುಪುಂಗವಃ ।
ಪ್ರಕುರ್ವಂಸ್ತದ್ವಿಧೇಯಾತ್ಮಾ ಭ್ರಾತೄಣಾಂ ಚಾವಿಶೇಷತಃ ॥ ೬ ॥

ಏತಸ್ಮಿನ್ನೇವ ಕಾಲೇ ತು ಕದಾಚಿದ್ಧೈಹಯೇಶ್ವರಃ ।
ಇಯೇಷ ಮೃಗಯಾಂ ಗಂತುಂ ಚತುರಂಗಬಲಾನ್ವಿತಃ ॥ ೭ ॥

ಸಂರಜ್ಯಮಾನೇ ಗಗನೇ ಬಂಧೂಕಕುಸುಮಾರುಣೈಃ ।
ತಾರಾಹಾರದ್ಯುತಿಹರೈಃ ಸಮಂತಾದರುಣಾಂಶುಭಿಃ ॥ ೮ ॥

ಮಂದಂ ವೀಜತಿ ಪ್ರೋದ್ಭೂತಕೇತಕೀವನರಾಜಿಭಿಃ ।
ಪ್ರಾಭಾತಿಕೇ ಗಂಧವಹೇ ಕುಮುದಾಕರಸಂಸ್ಪೃಶಿ ॥ ೯ ॥

---

೫. ರಾಜನೇ! ಆ ಮಾತಾಪಿತೃಗಳು ರಾಮನಿಂದ ಹೇಳಲ್ಪಟ್ಟ ಅವನು ಮಾಡಿದ ಸಾಹಸ ಕರ್ಮವನ್ನು ಸಂಪೂರ್ಣವಾಗಿ ವಿಸ್ತಾರದಿಂದ ಕೇಳಿ ಮತ್ತಷ್ಟು ಆನಂದವನ್ನು ಅನುಭವಿಸಿದರು.

೬. ಮಹಾರಾಜನೇ! ಈ ರೀತಿಯಾಗಿ ಭೃಗುವಂಶವರ್ಯನಾದ ರಾಮನು ಮಾತಾಪಿತೃಗಳ ಶುಶ್ರೂಷೆಯನ್ನು ಮಾಡುತ್ತ ಅವರಿಗೂ ಮತ್ತು ಸಹೋದರರೆಲ್ಲರಿಗೂ ವಿಧೇಯವಾದ ಅಂತಃಕರಣವುಳ್ಳವನಾಗಿದ್ದನು.

೭. ಈ ಸಮಯದಲ್ಲಿ ಒಂದುಸಲ ಹೈಹಯ ದೇಶಾಧಿಪತಿಯಾದ ಕಾರ್ತವೀರ್ಯ ರಾಜನು ಹಸ್ತ್ಯಶ್ವರಥಪದಾತಿಯೆಂಬ ಚತುರಂಗಸೇನಾಸಹಿತನಾಗಿ ಮೃಗಬೇಟೆಯನ್ನು ಆಡಲು ಇಚ್ಛೆಸಿದನು.

೮. ಅವನು ಉಷಃ ಕಾಲದಲ್ಲಿ ಸರಿಯಾಗಿ ಮೃಗಯಾವಿಹಾರಕ್ಕೆ ಹೊರಟಿದ್ದರಿಂದ ಆಗ ಆಕಾಶವು ಜಪಾಪುಷ್ಪದಂತೆ ಕೆಂಪಾದ ಮತ್ತು ನಕ್ಷತ್ರರಾಜಿಯ ಕಾಂತಿಯನ್ನು ಅಪಹರಿಸುವ ಸೂರ್ಯರಶ್ಮಿಗಳಿಂದ ಕೆಂಪಾಗುತ್ತಲಿತ್ತು.

೯. ಮತ್ತು ಅರಳಿದ ತಾಳೆಹೂಗಳ ಸಾಲನ್ನೂ, ತಾವರೆ, ನೈದಿಲೆಗಳಿಂದ ತುಂಬಿದ ಸರೋವರನ್ನೂ ಸ್ಪರ್ಶಮಾಡಿ ಸುಗಂಧ ಮತ್ತು ಶೈತ್ಯಗಳಿಂದ ಕೂಡಿದ ಪ್ರಭಾತ ಕಾಲದ ಮಂದಮಾರುತವು ಬೀಸುತ್ತಲಿತ್ತು.

ವಯಾಂಸಿ ನರ್ಮದಾತೀರ ತರುನೀಡಾಶ್ರಯೇಷು ಚ ।
ವ್ಯಾಹರನ್ ಸಕಲಾ ವಾಚೋ ಮನಃಶ್ರೋತ್ರಸುಖಾವಹಾಃ ॥ ೧೦ ॥

ನರ್ಮದಾತೀರತೀರ್ಥಂ ತಮವತೀಯಾಘಹಾರಿಣಿ ।
ತತ್ತೋಯೇ ಮುನಿವೃಂದೇಷು ಗೃಣತ್ಸು ಬ್ರಹ್ಮ ಶಾಶ್ವತಮ್ ॥ ೧೧ ॥

ವಿಧಿವತ್ ಕೃತಸ್ಕೃತ್ಯೇಷು ಸನ್ನಿವೃತ್ಯ ಸರಿತ್ತಟಾತ್ ।
ಆಶ್ರಮಂ ಪ್ರತಿ ಗಚ್ಛತ್ಸು ಮುನಿಮುಖ್ಯೇಷು ಕರ್ಮಿಷು ॥ ೧೨ ॥

ಪ್ರತ್ಯೇಕಂ ವೀರಪತ್ನೀಷು ವ್ಯಗ್ರಾಸು ಗೃಹಕರ್ಮಸು ।
ಹೋಮಾರ್ಥಂ ಮುನಿಕನ್ಯಾಭಿರ್ದುಹ್ಯಮಾನಾಸು ಧೇನುಷು ॥ ೧೩ ॥

ಸ್ಥಾನೇ ಮುನಿಕುಮಾರೇಷು ತಂ ದೋಹಂ ಹಿ ನಯತ್ಸು ಚ ।
ಅಗ್ನಿಹೋತ್ರಾಕುಲೇ ಜಾತೇ ಸರ್ವಭೂತಸುಖಾವಹೇ ॥ ೧೪ ॥

---

೧೦. ನರ್ಮದಾ ನದಿಯ ತೀರದಲ್ಲಿರುವ ಗಿಡಗಳಲ್ಲಿ ಗೂಡುಗಳನ್ನು ಕಟ್ಟಿಕೊಂಡು ವಾಸಿಸುವ ಪಕ್ಷಿಗಳು ಮನಸ್ಸಿಗೆ ಮತ್ತು ಕಿವಿಗೆ ಇಂಪಾಗಿ ಮಧುರವಾದ ಶಬ್ದವನ್ನು ಮಾಡುತ್ತಲಿದ್ದುವು.

೧೧. ಮತ್ತು ಪ್ರಾತಃ ಸಂಧ್ಯಾಕಾಲದಲ್ಲಿ ಮಹರ್ಷಿಗಳ ವೃಂದವು ಆ ನರ್ಮದಾನದೀತೀರಕ್ಷೇತ್ರಕ್ಕೆ ಬಂದು ಪಾಪಗಳನ್ನು ಧ್ವಂಸಮಾಡುವ ಆ ನದಿಯ ನೀರಿನಲ್ಲಿ ಶಾಶ್ವತವಾದ ಬ್ರಹ್ಮ ವಸ್ತುವನ್ನು ಸ್ತುತಿಸುತ್ತಿದ್ದರು.

೧೨. ಮತ್ತು ಸೂರ್ಯನನ್ನು ದ್ದೇಶಿಸಿ ಕರ್ತವ್ಯವಾದ ಅರ್ಘ್ಯದಾನಾದಿ ಕರ್ಮಗಳನ್ನು ಮುಗಿಸಿಕೊಂಡು ಕರ್ಮಠರಾದ ಮುನಿಪುಂಗವರು ನದೀತೀರದಿಂದ ಹಿಂತಿರುಗಿ ಆಶ್ರಮಕ್ಕೆ ತೆರಳುತ್ತಲಿದ್ದರು.

೧೩. ವೀರರಾದ ಉಪಾಸಕಮುನಿಗಳ ಪತ್ನಿಯರು ಪ್ರತ್ಯೇಕವಾಗಿ ತಮ್ಮ ತಮ್ಮ ಗೃಹಕರ್ಮವನ್ನು ನೆರವೇರಿಸುವುದರಲ್ಲಿ ತೊಡಗಿದ್ದರು. ಹಾಗು ಮುನಿಕನ್ಯೆಯರು ಹೋಮಕ್ಕೆ ಬೇಕಾದ ಕ್ಷೀರಾದಿ ಹವಿಸ್ಸಿಗೋಸ್ಕರ ಹೋಮಧೇನುಗಳನ್ನು ಹಾಲು ಕರೆಯುತ್ತಿದ್ದರು.

೧೪. ಹಾಲುಕರೆದು ಮುಗಿದ ಕೂಡಲೆ ಮುನಿಕುಮಾರರು ಬಂದು ಆ ಕ್ಷೀರವನ್ನು ಉಚಿತಸ್ಥಾನಕ್ಕೆ ಒಯ್ಯುತ್ತಲೂ ಮುನಿಗಳು ಸರ್ವ ಪ್ರಾಣಿಗಳ ಸುಖ ಶಾಂತಿಗೋಸ್ಕರ ಅಗ್ನಿಹೋತ್ರಾದಿ ಸತ್ಕರ್ಮಗಳನ್ನು ನೆರವೇರಿಸುತ್ತಲೂ ಇದ್ದರು.

ವಿಕಸತ್ಸು ಸರೋಜೇಷು ಗಾಯತ್ಸು ಭ್ರಮರೇಷು ಚ ।
ವಾಶತ್ಸು ನೀಡಾನ್ನಿಷ್ಪತ್ಯ ಪತತ್ರಿಷು ಸಮಂತತಃ ॥ ೧೫ ॥

ಅನತಿವ್ಯಗ್ರಮತ್ತೇಭತುರಂಗರಥಗಾಮಿನಾಮ್ ।
ಗಾತ್ರಾಹ್ಲಾದವಿವರ್ಧನ್ಯಾಂ ವೇಲಾಯಾಂ ಮಂದವಾಯುನಾ ॥ ೧೬ ॥

ಗಚ್ಛತ್ಸು ಚಾಶ್ರಮೋಪಾಂತಂ ಪ್ರಸೂನಜಲಹಾರಿಷು ।
ಸ್ವಾಧ್ಯಾಯದಕ್ಷೈರ್ಬಹುಭಿರಜಿನಾಂಬರಧಾರಿಭಿಃ ॥ ೧೭ ॥

ಸಮ್ಯಕ್ ಪ್ರಯುಜ್ಯಮಾನೇಷು ಮಂತ್ರೇಷೂಚ್ಚಾವಚೇಷು ಚ ।
ಸ್ತ್ರೈಷೇಷೂಚ್ಚಾರ್ಯಮಾಣೇಷು ಹೂಯಮಾನೇಷು ವಹ್ನಿಷು ॥ ೧೮ ॥

ಯಥಾವನ್ಮಂತ್ರತಂತ್ರೋಕ್ತಕ್ರಿಯಾಸು ವಿತತಾಸು ಚ ।
ಜ್ವಲದಗ್ನಿಶಿಖಾಕಾರೇ ತಮಸ್ತಪನತೇಜಸಿ ॥ ೧೯ ॥

---

೧೫. ಪ್ರಭಾತಕಾಲದ ಪ್ರಕೃತಿಯನ್ನು ಅನುಸರಿಸಿ ಕಮಲಗಳು ಅರಳುತ್ತಲೂ ದುಂಬಿಗಳು ಝೇಂಕಾರಧ್ವನಿಯನ್ನು ಗಾನಮಾಡುತ್ತಲೂ ಮತ್ತು ಹಕ್ಕಿಗಳು ಗೂಡಿನಿಂದ ಹೊರಕ್ಕೆ ಹಾರಿಬಂದು ಸುತ್ತಲೂ ಕೂಗುತ್ತಲೂ ಇದ್ದುವು.

೧೬. ಅತ್ಯಂತ ವ್ಯಗ್ರತೆಯಿಲ್ಲದಂತೆ ಮದಿಸಿದ ಆನೆ, ಕುದುರೆ ಮತ್ತು ರಥಗಳನ್ನು ಏರಿ ಸವಾರಿಮಾಡುವವರಿಗೆ ಪ್ರಭಾತಸಮಯದ ಮಂದಮಾರುತವು ಗಾತ್ರಕ್ಕೆ ಆಹ್ಲಾದವನ್ನು ಉಂಟುಮಾಡುತ್ತಲಿತ್ತು.

೧೭. ಕೃಷ್ಣಾಜಿನ ವಸ್ತ್ರಗಳನ್ನು ಧರಿಸಿರುವ ಅನೇಕ ವೇದಾಧ್ಯಯನದಕ್ಷರಾದ ಮುನಿಕುಮಾರರು ಅರಣ್ಯದಿಂದ ಪುಷ್ಪ-ಜಲಾದಿ ಸಾಮಗ್ರಿಯನ್ನು ತೆಗೆದುಕೊಂಡು ಆಶ್ರಮಕ್ಕೆ ತೆರಳುತ್ತಲಿದ್ದರು.

೧೮. ಮತ್ತು ಕರ್ಮಾಂಗವಾಗಿ ಋತ್ವಿಜರು ಉಚ್ಚಾವಚವಾದ ಮಂತ್ರಗಳನ್ನು ಸ್ಪಷ್ಟವಾಗಿ ಪಠಿಸುತ್ತಲೂ ಸ್ತ್ರೈಷಮಂತ್ರಗಳನ್ನು ಉಚ್ಚರಿಸುತ್ತಲೂ ಅಗ್ನಿಯಲ್ಲಿಹವಿಸ್ಸನ್ನು ಹೋಮಮಾಡುತ್ತಲೂ ಇದ್ದರು.

೧೯. ಮಂತ್ರ ತಂತ್ರ ಶಾಸ್ತ್ರಗಳಲ್ಲಿ ಹೇಳಿದಂತೆ ವಿಹಿತ ಕರ್ಮಗಳು ಯಥಾವಿಧಿಯಗಿ ವಿಸ್ತಾರವಾಗಿ ಜರುಗುತ್ತಲಿದ್ದುವು. ಮತ್ತು ಅಂಧಕಾರಕ್ಕೆ ಶತ್ರುವಾದ ಸೂರ್ಯನ ತೇಜಸ್ಸು ಉರಿಯುತ್ತಿದ್ದ ಅಗ್ನಿಶಿಖೆಯ ಆಕಾರದಂತಿತ್ತು

ಪ್ರತಿಹತ್ಯ ದಿಶಃ ಸರ್ವಾ ನಿವೃಣ್ವಾನೇ ಚ ಮೇದಿನೀಮ್ ।
ಸವಿತರ್ಯುದಯಂ ಯಾತಿ ನೈಶೇ ತಮಸಿ ನಶ್ಯತಿ ॥ ೨೦ ॥

ತಾರಕಾಸು ವಿಲೀನಾಸು ಕಾಷ್ಠಾಸು ವಿಮಲಾಸು ಚ ।
ಕೃತನೈತ್ಯಾದಿಕೋ ರಾಜಾ ಮೃಗಯಾಂ ಹೈಹಯೇಶ್ವರಃ ॥ ೨೧ ॥

ನಿರ್ಯಯೌ ನಗರಾತ್ತಸ್ಮಾತ್ ಪುರೋಹಿತಸಮನ್ವಿತಃ ।
ಬಲೈಃ ಸರ್ವೈಃ ಸಮುದಿತೈಃ ಸವಾಜಿರಥಕುಂಜರೈಃ ॥ ೨೨ ॥

ಸಚಿವೈಃ ಸಹಿತಃ ಶ್ರೀಮಾನ್ ಸವಯೋಭಿಶ್ಚ ರಾಜಭಿಃ ।
ಮಹತಾ ಬಲಭಾರೇಣ ನಮಯನ್ ವಸುಧಾತಲಮ್ ॥ ೨೩ ॥

ನಾದಯನ್ ರಥಘೋಷೇಣ ಕಕುಭಃ ಸರ್ವತೋ ನೃಪಃ ।
ಸ್ವಬಲೌಘಪದಕ್ಷೇಪಪ್ರಕ್ಷುಣ್ಣಾವನಿರೇಣುಭಿಃ ॥ ೨೪ ॥

---

೨೦. ಮತ್ತು ಸೂರ್ಯನು ಉದಯಿಸಿ ಬಂದು ರಾತ್ರಿಯ ಅಂಧಕಾರವನ್ನು ನಾಶಮಾಡಿ ಕತ್ತಲಿನಲ್ಲಿ ಮುಳುಗಿದ್ದ ದಿಗ್ದೇಶಗಳನ್ನೂ ಭೂಮಿಯನ್ನೂ ಮೇಲಕ್ಕೆ ಎತ್ತಿ ಪ್ರಕಾಶಪಡಿಸುತ್ತಲಿದ್ದನು.

೨೧. ತಾರಕೆಗಳೆಲ್ಲವೂ ಅಸ್ತಮಯುವನ್ನು ಹೊಂದಿದುವು. ದಿಗಂತಗಳು ನಿರ್ಮಲವಾಗಿ ಪ್ರಕಾಶಿಸಿದುವು. ಅಂತಹ ಸಮಯದಲ್ಲಿ ಹೈಹಯರಾಜನು ನ್ನ ಸೂರ್ಯೋಪಾಸನೆ ಮುಂತಾದ ನಿತ್ಯ ಕರ್ಮವನ್ನು ಮಾಡಿ ಮೃಗಯಾವಿಹಾರಕ್ಕೆ ಹೊರಟನು.

೨೨. ಆನೆ, ಕುದುರೆ ಮತ್ತು ರಥಗಳೆಂಬ ಸಂಘಸೇರಿದ ಸಮಸ್ತ ಬಲದ ಸಂಗಡಲೂ ತನ್ನ ಪುರೋಹಿತರನ್ನು ಪುರಸ್ಕರಿಸಿ ಅವರ ಸಂಗಡಲೂ ಕೂಡ ತನ್ನ ರಾಜಧಾನಿಯಿಂದ ಹೈಹಯ ರಾಜನು ಹೊರಟನು.

೨೩. ಕಾಂತಿಯುಕ್ತನಾದ ರಾಜನು ತನ್ನ ಸಚಿವರಿಂದಲೂ ಸಮಾನ ವಯಸ್ಕರಾದ ತನ್ನ ಸಾಮಂತರಾಜರಿಂದಲೂ ಕೂಡಿದ ತನ್ನ ಅಗಾಧವಾದ ಸೈನ್ಯದ ಭಾರದಿಂದ ಭೂಮಿಯನ್ನು ಬಗ್ಗಿಸುತ್ತ ಪ್ರಯಾಣಮಾಡಿದನು.

೨೪. ಆ ಹೈಹಯರಾಜನು ತನ್ನ ರಥಧ್ವನಿಯಿಂದ ಸಮಸ್ತ ದಿಗಂತಗಳನ್ನು ಪ್ರತಿಧ್ವನಿಯಿಂದ ಪೂರ್ಣವನ್ನಾಗಿ ಮಾಡುತ್ತ ಮತ್ತು ತನ್ನ ಸೈನ್ಯದ ಪಾದಘಾತದಿಂದ ಪುಡಿಪುಡಿಯಾಗಿರುವ ಧೂಳಿಯನ್ನು ಮೇಲಕ್ಕೆಬ್ಬಿಸುತ್ತ ಪ್ರಯಾಣಮಾಡಿದನು.

ಯಯೌ ಸಂಛಾದಯನ್ ವ್ಯೋಮ ವಿಮಾನಶತಸಂಕುಲಮ್ ।
ಸಂಪ್ರವಿಶ್ಯ ವನಂ ಘೋರಂ ವಿಂಧ್ಯಾದ್ರೇರ್ಬಲಸಂಚಯೈಃ ॥ ೨೫ ॥

ಭೃಶಂ ವಿಲೋಲಯಾಮಾಸ ಸಮಂತಾದ್ರಾಜಸತ್ತಮಃ ।
ಪರಿವಾರ್ಯ ವನಂ ತತ್ತು ಸ ರಾಜಾ ನಿಜಸೈನಿಕೈಃ ॥ ೨೬ ॥

ಮೃಗಾನ್ನಾನಾವಿಧಾನ್ ಹಿಂಸ್ರಾನ್ ನಿಜಘಾನ ಶಿತೈಃ ಶರೈಃ ।
ಆಕರ್ಣಕೃಷ್ಟಕೋದಂಡಯೋಧಮುಕ್ತೈಃ ಶಿತೇಷುಭಿಃ ॥ ೨೭ ॥

ನಿಕೃತ್ತಗಾತ್ರಾಃ ಶಾರ್ದೂಲಾ ನ್ಯಪತನ್ ಭುವಿ ಕೇಚನ ।
ಉದಗ್ರವೇಗಪಾದಾತಖಡ್ಗಖಂಡಿತವಿಗ್ರಹಾಃ ॥ ೨೮ ॥

ವರಾಹಯೂಥಪಾಃ ಕೇಚಿದ್ರುಧಿರಾದ್ರಾ ಧರಾಮಗುಃ ।
ಪ್ರಚಂಡಶಕ್ತಿಕೋನ್ಮುಕ್ತಶಕ್ತಿನಿರ್ಭಿನ್ನಮಸ್ತಕಾಃ ॥ ೨೯ ॥

---

೨೫. ಭೂಮಿಯಿಂದ ಮೇಲಕ್ಕೆ ಎದ್ದಿರುವ ಧೂಳಿಪುಂಜದಿಂದ ನೂರಾರು ವಿಮಾನಗಳಿಂದ ಪೂರ್ಣವಾದ ಗಗನವನ್ನು ಮುಚ್ಚುತ್ತ ತನ್ನ ಅಗಾಧವಾದ ಬಲದಿಂದ ವಿಂಧ್ಯಪರ್ವತದ ಘೋರವನವನ್ನು ಪ್ರವೇಶಿಸಿದನು.

೨೬. ರಾಜಶ್ರೇಷ್ಠನಾದ ಆ ಹೈಹಯೇಶ್ವರನು ಆ ವನವನ್ನು ಪ್ರವೇಶಿಸಿಸುತ್ತಲೂ ಅತಿಶಯವಾಗಿ ಕ್ಷೋಭವನ್ನುಂಟುಮಾಡಿದನು, ಮತ್ತು ಆ ರಾಜನು ತನ್ನ ಸೈನಿಕರಿಂದ ಆ ವನವನ್ನು ಸುತ್ತುವರಿದನು.

೨೭. ತರುವಾಯ ಕಿವಿಗಳವರೆಗೆ ಬಿಲ್ಲನ್ನು ಎಳೆದು ವೇಗವಾಗಿ ಹರಿತವಾದ ಬಾಣಗಳನ್ನು ಪ್ರಯೋಗಿಸುತ್ತಿದ್ದ ಯೋಧರಿಂದ ಅನೇಕ ಬಗೆಯ ಹಿಂಸಕ ಪ್ರಾಣಿಗಳನ್ನು ಕೊಲ್ಲಿಸಿದನು.

೨೮. ಅತಿಶಯವಾದ ಚಟುವಟಿಕೆಯನ್ನು ತೋರಿಸುವ ಪದಾತಿ ಸೈನ್ಯವು ಪ್ರಯೋಗಿಸಿದ ಖಡ್ಗದಿಂದ ಕತ್ತರಿಸಿ ಚೂರು ಚೂರಾದ ಶರೀರವುಳ್ಳ ಕೆಲವು ವ್ಯಾಘ್ರಗಳು ನೆಲದಲ್ಲಿ ಬಿದ್ದುವು.

೨೯. ಪ್ರಚಂಡರಾದ ಶಕ್ತ್ಯಾಯುಧಧಾರಿಗಳಿಂದ ಪ್ರಯೋಗಿಸಲ್ಪಟ್ಟ ಶಕ್ತ್ಯಾಯುಧದಿಂದ ಸೀಳಿದ ತಲೆಗಳುಳ್ಳ ವರಾಹಗಳ ಹಿಂಡಿನ ನಾಯಕಗಳಾದ ಕೆಲವು ದೊಡ್ಡ ವರಾಹಗಳು ರಕ್ತಪಾತದಿಂದ ನೆನೆದುವುಗಳಾಗಿ ನೆಲಕ್ಕೆ ಬಿದ್ದುವು.

ಮೃಗೌಘಾಃ ಪ್ರತ್ಯಪದ್ಯಂತ ಪರ್ವತಾ ಇವ ಮೇದಿನೀಮ್ ।
ನಾರಾಚಾವಿದ್ಧಸರ್ವಾಂಗಾಃ ಸಿಂಹರ್ಕ್ಷಶರಭಾದಯಃ ॥ ೩೦ ॥

ವಸುಧಾಮನ್ವಕೀರ್ಯಂತ ಶೋಣಿತಾರ್ದ್ರಾಃ ಸಮಂತತಃ ।
ಏವಂ ಸಪಾಗುರ್ವೈಃ ಕೈಶ್ಚಿತ್ ಪತದ್ಭಿಃ ಪತಿತೈರಪಿ ॥ ೩೧ ॥

ಶ್ವಭಿಶ್ಚಾನುದ್ರುತೈಃ ಕೈಶ್ಚಿದ್ಧಾವಮಾನೈಸ್ತಥಾ ಮೃಗೈಃ ।
ಆರ್ತೈರ್ನಿಕ್ರೋಶಮಾನೈಶ್ಚ ಭೀತೈಃ ಪ್ರಾಣಭಯಾತುರೈಃ ॥ ೩೨ ॥

ಯುಗಾಪಾಯೇ ಯಥಾತ್ಯರ್ಥಂ ವನಮಾಕುಲಮಾಬಭೌ ।
ವರಾಹಸಿಂಹಶಾರ್ದೂಲಶ್ವಾವಿಚ್ಛಶಕುಲಾನಿ ಚ ॥ ೩೩ ॥

ಚಮರೀರುರುಗೋಮಾಯುಗವಯರ್ಕ್ಷವೃಕಾನ್ ಬಹೂನ್ ।
ಕೃಷ್ಣಸಾರಾನ್ ದ್ವೀಪಿಮೃಗಾನ್ ರಕ್ತಖಡ್ಗಮೃಗಾನಪಿ ॥ ೩೪ ॥

---

೩೦. ಮತ್ತು ಸಿಹ್ಮ, ಕರಡಿ, ಶರಭ ಮುಂತಾದ ಮಹಾ ಮೃಗಗಳ ಹಿಂಡುಗಳು ಯೋಧರ ಬಾಣಗಳಿಂದ ಹೊಡೆಯಲ್ಪಟ್ಟ ಸಕಲ ದೇಹವುಳ್ಳವುಗಳಾಗಿ ಬೆಟ್ಟಗಳಂತೆ ಭೂಮಿಯಲ್ಲಿ ಬಿದ್ದುವು.

೩೧. ಈ ರೀತಿಯಲ್ಲಿ ರಕ್ತಪ್ರವಾಹದಿಂದ ನೆನೆದ ಆ ಪ್ರಾಣಿಗಳು ಸುತ್ತಲೂ ನೆಲದಲ್ಲಿ ಚೆಲ್ಲಿದಂತೆ ಸತ್ತು ಬಿದ್ದುವು. ಆಗ ಕೆಲವರು ಬಲೆಗಾರರಿಂದ ಪ್ರೇರಿಸಲ್ಪಟ್ಟ ಬೇಟೆನಾಯಿಗಳು ಪ್ರಾಣಿಗಳ ಮೇಲೆ ಬೀಳುತ್ತಲೂ ಇನ್ನು ಕೆಲವು ಬಿದ್ದುವುಗಳೂ ಆಗಿದ್ದುವು.

೩೨. ಬೇಟೆನಾಯಿಗಳಿಂದ ಹಿಂಬಾಲಿಸಿ ಓಡಿಸಲ್ಪಟ್ಟ ಕೆಲವು ಪ್ರಾಣಿಗಳು ಓಡಿ ಹೋಗಿ ಕಡೆಗೆ ನಾಯಿಗಳಿಗೆ ಸಿಕ್ಕಿಬಿದ್ದು ಪ್ರಾಣಾಪಾಯ ಭಯದಿಂದ ಬಲು ಭೀತಗಳಾಗಿ ಆರ್ತನಾದದಿಂದ ಕೂಗುತ್ತಿದ್ದುವು.

೩೩. ಕಡೆಯ ಪ್ರಳಯಕಾಲದಲ್ಲಿ ವನವು ಹೇಗೆ ವ್ಯಾಕುಲವಾಗಿರಬಹುದೋ ಹಾಗೆ ವನವೆಲ್ಲ ವ್ಯಾಕುಲತೆಯಿಂದ ಪ್ರಕಾಶಿಸಿತು. ಹೀಗೆ ವರಾಹ, ಸಿಹ್ಮ, ವ್ಯಾಘ್ರ, ಕಾಡುಹಂದಿ ಮತ್ತು ಮೊಲಗಳೆಂಬ ಪ್ರಾಣಿಗಳ ಗುಂಪನ್ನು ಬೇಟೆಯಾಡಿದನು.

೩೪. ಮತ್ತು ಚಮರಮೃಗ, ಜಿಂಕೆ, ನರಿ, ಗವಯ, ಕರಡಿ, ತೋಳ, ಕೃಷ್ಣಸಾರ, ದ್ವೀಪಿಮೃಗ, ಮತ್ತು ರಕ್ತ ಖಡ್ಗಮೃಗ ಮುಂತಾದ ಹಲವಾರು ಬಗೆಯ ಪ್ರಾಣಿಗಳನ್ನು ಬೇಟೆಯಾಡುತ್ತ ಬಂದನು.

ವಿಚಿತ್ರಾಂಗಾನ್ ಮೃಗಾನನ್ಯಾನ್ ನ್ಯಂಕೂನಪಿ ಚ ಸರ್ವಶಃ ।
ಬಾಲಾನ್ ಸ್ತನಂಧಯಾನ್ ಯೂನಃ ಸ್ಥವಿರಾನ್ ಮಿಥುನಾನ್ ಗಣಾನ್ ॥ ೩೫ ॥

ನಿಜಘ್ನುರ್ನಿಶಿತೈಃ ಶಸ್ತ್ರೈಃ ಶಸ್ತ್ರವಧ್ಯಾನ್ ಹಿ ಸೈನಿಕಾಃ ।
ಏವಂ ಹತ್ವಾ ಮೃಗಾನ್ ಘೋರಾನ್ ಹಿಂಸ್ರಪ್ರಾಯಾನಶೇಷತಃ ॥ ೩೬ ॥

ಶ್ರಮೇಣ ಮಹತಾ ಯುಕ್ತಾ ಬಭೂವುರ್ನೃಪಸೈನಿಕಾಃ ।
ಮಧ್ಯೇ ದಿನಕರೇ ಪ್ರಾಪ್ತೇ ಸಸೈನ್ಯಃ ಸ ತದಾ ನೃಪಃ ॥ ೩೭ ॥

ನರ್ಮದಾಂ ಘರ್ಮಸಂತಪ್ತಃ ಪಿಪಾಸುರಗಮಚ್ಛ್ರಮೈಃ ।
ಅವತೀರ್ಯ ತತಸ್ತಸ್ಯಾಸ್ತೋಯೇ ಸಬಲವಾಹನಃ ॥ ೩೮ ॥

ವಿಜಗಾಹ ಶುಭೇ ರಾಜಾ ಕ್ಷುತ್ತೃಷ್ಣಾಪರಿಪೀಡಿತಃ ।
ಸ್ನಾತ್ವಾ ಪೀತ್ವಾ ಚ ಸಲಿಲಂ ಸ ತಸ್ಯಾಃ ಸುಖಶೀತಲಮ್ ॥ ೩೯ ॥

---

೩೫. ವಿಚಿತ್ರವಾದ ದೇಹದಿಂದ ರಮಣೀಯವಾದ ಕೆಲವು ಮೃಗಗಳನ್ನೂ ನ್ಯಂಕು ಎಂಬ ಜಿಂಕೆಗಳನ್ನೂ ಮತ್ತು ಶಿಶು-ತರುಣ-ವೃದ್ಧವೆಂಬ ಸರ್ವಾವಸ್ಥೆಯ ಪ್ರಾಣಿಗಳನ್ನೂ ಜೊತೆಯಾಗಿ ಅಥವಾ ಗುಂಪಾಗಿರುವ ಪ್ರಾಣಿಗಳನ್ನೂ ಕೊಂದು ಹಾಕಿದನು.

೩೬. ಈ ರೀತಿಯಾಗಿ ಎಲ್ಲ ಸೈನಿಕರು ಶಸ್ತ್ರಗಳಿಂದ ವಧ್ಯವಾದ ಸಕಲ ಪ್ರಾಣಿಗಳನ್ನು ಹರಿತವಾದ ಶಸ್ತ್ರಗಳಿಂದ ಕೊಂದರು. ಹೀಗೆ ಕ್ರೂರವೂ ಹಿಂಸಕವೂ ಆದ ಪ್ರಾಣಿಗಳಿಂದಲೇ ಹೆಚ್ಚಾಗಿ ತುಂಬಿದ ಮೃಗ ಸಂಘವನ್ನು ಕೊಂದು ನಿರ್ಮೂಲ ಮಾಡಿದರು.

೩೭. ರಾಜನ ಸೈನಿಕರು ಈ ಮೃಗಯಾವಿಹಾರದಿಂದ ಹೆಚ್ಚಾದ ಶ್ರಮವುಳ್ಳವರಾದರು. ಆಗ ಸೈನ್ಯಸಮೇತನಾದ ರಾಜನು ಗಗನ ಮಧ್ಯದಲ್ಲಿ ಸೂರ್ಯನು ಬಂದಿರುವ ನಡುಮಧ್ಯಾಹ್ನ ಸಮಯದಲ್ಲಿ ಶ್ರಮಪರಿಹಾರೋಪಾಯವನ್ನು ಮಾಡಿದನು.

೩೮. ಬಿಸಿಲಿನ ತಾಪದಿಂದ ತಪ್ತನಾದ ರಾಜನು ನೀರನ್ನು ಕುಡಿಯಲು ಅಪೇಕ್ಷಿಸಿ ಮೆಲ್ಲಗೆ ನರ್ಮದಾನದಿಯ ನೀರಿಗೆ ಇಳಿದನು.

೩೯. ಹಸಿವು ನೀರಡಿಕೆಗಳ ಬಾಧೆಯಿಂದ ಪೀಡಿಸಲ್ಪಟ್ಟ ಸಪರಿವಾರನಾದ ರಾಜನು ನರ್ಮದಾನದಿಯ ಶುಭತೀರ್ಥದಲ್ಲಿ ಸುಖವೂ ಶೀತಲವೂ ಆದ ಜಲದ ಸ್ನಾನ-ಪಾನಗಳನ್ನು ಮಾಡಿದನು.

ಬಿಸಾಂಕುರಾಣಿ ಶುಭ್ರಾಣಿ ಸ್ವಾದೂನಿ ಪ್ರಜಘಾಸ ಚ ।
ವಿಕ್ರೀಡ್ಯ ತೋಯೇ ಸುಚಿರಮುತ್ತೀರ್ಯ ಸಬಲೋ ನೃಪಃ ॥ ೪೦ ॥

ವಿಶಶ್ರಾಮ ಚ ತತ್ತೀರೇ ತರುಖಂಡೋಪಮಂಡಿತೇ ।
ಆಲಂಬಮಾನೇ ತಿಗ್ಮಾಂಶೌ ಸಸೈನ್ಯಃ ಸಾನುಗೋ ನೃಪಃ ॥ ೪೧ ॥

ನಿಶ್ಚಕ್ರಾಮ ಪುರಂ ಗಂತುಂ ವಿಂಧ್ಯಾದ್ರಿವನಗಹ್ವರಾತ್ ।
ಸ ಗಚ್ಛನ್ನೇವ ದದೃಶೇ ನರ್ಮದಾತೀರಮಾಶ್ರಿತಮ್ ॥ ೪೨ ॥

ಆಶ್ರಮಂ ಪುಣ್ಯಶೀಲಸ್ಯ ಜಮದಗ್ನೇರ್ಮಹಾತ್ಮನಃ ।
ತತೋ ನಿವೃತ್ಯ ಸೈನ್ಯಾನಿ ದೂರೇಽವಸ್ಥಾಪ್ಯ ಪಾರ್ಥಿವಃ ॥ ೪೩ ॥

ಪರಿಚಾರೈಃ ಕತಿಪಯೈಃ ಸಹಿತೋಽಯಾತ್ತದಾಶ್ರಮಮ್ ।
ಗತ್ವಾ ತದಾಶ್ರಮಂ ರಮ್ಯಂ ಪುರೋಹಿತಸಮನ್ವಿತಃ ॥ ೪೪ ॥

---

೪೦. ಮತ್ತು ಅಲ್ಲಿರುವ ಶುಭ್ರವಾಗಿಯೂ ರುಚಿಕರವಾಗಿಯೂ ಇರುವ ತಾವರೆಯ ನಾರಿನ ಚಿಗುರುಗಳನ್ನು ಭಕ್ಷಿಸಿದನು. ಸಸೈನ್ಯನಾದ ರಾಜನು ಈ ರೀತಿಯಾಗಿ ಬಹಳ ಹೊತ್ತು ಜಲದಲ್ಲಿ ವಿಹರಿಸಿ ನೀರಿನಿಂದ ಮೇಲಕ್ಕೆ ಹತ್ತಿದನು.

೪೧. ಅಲ್ಲಿ ಸೈನ್ಯದಿಂದಲೂ ಅನುಚರರಿಂದಲೂ ಕೂಡಿದ ರಾಜನು ಮೆಲ್ಲಗೆ ಸೂರ್ಯನು ಪಶ್ಚಿಮ ದಿಕ್ಕಿನಕಡೆಗೆ ಇಳಿಯುತ್ತಿರಲು ಅನೇಕ ವೃಕ್ಷಖಂಡಗಳಿಂದ ರಾಜಿಸುತ್ತಿರುವ ನದೀತೀರದಲ್ಲಿ ವಿಶ್ರಮಿಸಿಕೊಂಡನು.

೪೨. ಅನಂತರದಲ್ಲಿ ವಿಂಧ್ಯಪರ್ವತದ ಆ ಗಹನವನದಿಂದ ತನ್ನ ಪಟ್ಟಣಕ್ಕೆ ಹೋಗಲು ಹೊರಟನು. ಅವನು ಹೋಗುತ್ತಿರಲು ಮಧ್ಯದಲ್ಲಿ ನರ್ಮದಾನದೀತೀರದಲ್ಲಿರುವ ಒಂದು ಪುಣ್ಯಾಶ್ರಮವನ್ನು ಕಂಡನು.

೪೩. ಪುಣ್ಯಾಚರಣಶೀಲವುಳ್ಳವನೂ ಮಹಾತ್ಮನೂ ಆದ ಜಮದಗ್ನಿ ಮುನಿಯ ಆ ಆಶ್ರಮವನ್ನು ಕಂಡು ರಾಜನು ಮತ್ತೆ ಹಿಂತಿರುಗಿ ಅಲ್ಲಿಗೆ ಹೋಗಲು ತನ್ನ ಸೈನ್ಯವನ್ನು ಆಶ್ರಮಕ್ಕೆ ಸ್ವಲ್ಪ ದೂರದಲ್ಲಿ ಇರಿಸಿದನು.

೪೪. ಆಗ ಸ್ವಲ್ಪ ಮಾತ್ರ ಪರಿಚಾರಕರಿಂದ ಕೂಡಿ ರಾಜನು ಆಶ್ರಮಕ್ಕೆ ಹೋದನು, ಮತ್ತು ತನ್ನ ಪುರೋಹಿತರೊಡಗೂಡಿ ರಮ್ಯವಾದ ಆ ಆಶ್ರಮವನ್ನು ಪ್ರವೇಶಿಸಿದನು.

**ಉಪೇತ್ಯ ಮುನಿಶಾರ್ದೂಲಂ ನನಾಮ ಶಿರಸಾ ನೃಪಃ ।**
**ಅಭಿನಂದ್ಯಾಶಿಷಾ ತಂ ವೈ ಜಮದಗ್ನಿರ್ನೃಪೋತ್ತಮಮ್ ॥ ೪೫ ॥**

**ಪೂಜಯಾಮಾಸ ವಿಧಿವದರ್ಘ್ಯಪಾದ್ಯಾಸನಾದಿಭಿಃ ।**
**ಸಂಭಾವಯಿತ್ವಾ ತಾಂ ಪೂಜಾಂ ವಿಹಿತಾಂ ಮುನಿನಾ ತದಾ ॥ ೪೬ ॥**

**ನಿಷಸಾದಾಸನೇ ಶುಭ್ರೇ ಪುರಸ್ತಸ್ಯ ಮಹಾಮುನೇಃ ।**
**ತಮಾಸೀನಂ ನೃಪವರಂ ಕುಶಾಸನಗತೋ ಮುನಿಃ ॥ ೪೭ ॥**

**ಪಪ್ರಚ್ಛ ಕುಶಲಪ್ರಶ್ನಂ ಪುತ್ರಮಿತ್ರಾದಿಬಂಧುಷು ।**
**ಸಹ ಸಂಕಥಯಂಸ್ತೇನ ರಾಜ್ಞಾ ಮುನಿವರೋತ್ತಮಃ ॥ ೪೮ ॥**

**ಸ್ಥಿತ್ವಾ ನಾತಿಚಿರಂ ಕಾಲಮಾತಿಥ್ಯಾರ್ಥಂ ನ್ಯಮಂತ್ರಯತ್ ।**
**ತತಃ ಸ ರಾಜಾ ಸುಪ್ರೀತೋ ಜಮದಗ್ನಿಮಭಾಷತ ॥ ೪೯ ॥**

---

೪೫. ರಾಜನು ಆಶ್ರಮವನ್ನು ಪ್ರವೇಶಿಸಿದ ಬಳಿಕ ಮುನಿಶ್ರೇಷ್ಠನಾದ ಮಹರ್ಷಿಯನ್ನು ತಲೆಬಾಗಿಸಿ ನಮಸ್ಕರಿಸಿದನು. ಜಮದಗ್ನಿ ಮುನಿಯು ರಾಜಶ್ರೇಷ್ಠನನ್ನು ಆಶೀರ್ವಚನಗಳಿಂದ ಅಭಿನಂದನ ಮಾಡಿದನು.

೪೬. ಮತ್ತು ಅರ್ಘ್ಯ-ಪಾದ್ಯ-ಆಸನಾದಿ ಉಪಚಾರಗಳನ್ನು ಯಥಾವಿಧಿಯಾಗಿ ಅರ್ಪಿಸಿ ರಾಜನನ್ನು ಪೂಜಿಸಿದನು, ಆಗ ಮುನಿಯಿಂದ ಮಾಡಲ್ಪಟ್ಟ ಆ ವಿಶಿಷ್ಟ ಪೂಜಾಸತ್ಕಾರವನ್ನು ರಾಜನು ಅಂಗೀಕರಿಸಿ ಗೌರವಿಸಿದನು.

೪೭. ಆ ಜಮದಗ್ನಿ ಮಹಾಮುನಿಯ ಮುಂದುಗಡೆಯಲ್ಲಿ ಶುಭ್ರವಾದ ಉತ್ತಮಾಸನದಲ್ಲಿ ರಾಜನು ಕುಳಿತುಕೊಂಡನು. ಆಗ ದರ್ಭಮಯವಾದ ಆಸನದಲ್ಲಿ ಕುಳಿತಿರುವ ತಪಸ್ವಿಯು ನೃಪತಿವರ್ಯನು ಕುಳಿತುಕೊಂಡನಂತರ ಸಂಭಾಷಿಸಿದನು.

೪೮. ತಪಸ್ವಿ ಶ್ರೇಷ್ಠನಾದ ಜಮದಗ್ನಿ ಮುನಿಯು ಆ ರಾಜನೊಡನೆ ಸಂಭಾಷಣ ಮಾಡುತ್ತ ಆ ನದಿಯಲ್ಲಿ ರಾಜನ ಪುತ್ರ ಮಿತ್ರ ಮತ್ತು ಬಂಧುವರ್ಗಗಳಲ್ಲಿ ಕ್ಷೇಮವನ್ನು ಪ್ರಶ್ನಮಾಡಿದನು.

೪೯. ಕುಶಲಪ್ರಶ್ನಪ್ರಸಂಗದಿಂದ ಮುನಿಯು ಸ್ವಲ್ಪ ಮಾತ್ರ ಕಾಲವನ್ನು ಕಳೆದು ರಾಜನನ್ನು ಆತಿಥ್ಯವನ್ನು ಸ್ವೀಕರಿಸಲು ಆಮಂತ್ರಣಕೊಟ್ಟನು. ಅಗ ಆ ರಾಜನು ಮುನಿಯ ಆದರದಿಂದ ಸುಪ್ರೀತನಾಗಿ ಜಮದಗ್ನಿ ಮುನಿಯನ್ನು ಕುರಿತು ಹೇಳಿದನು.

ಮಹರ್ಷೇ ದೇಹಿ ಮೇಽನುಜ್ಞಾಂ ಗಮಿಷ್ಯಾಮಿ ಸ್ವಕಂ ಪುರಮ್ ।
ಸಮಗ್ರವಾಹನಬಲೋ ಹ್ಯಹಂ ತಸ್ಮಾನ್ಮಹಾಮುನೇ ॥ ೫೦ ॥

ಕರ್ತುಂ ನ ಶಕ್ಯಮಾತಿಥ್ಯಂ ತ್ವಯಾ ವನ್ಯಾಶಿನಾ ವನೇ ।
ಅಥವಾ ತ್ವಂ ತಪಃಶಕ್ತ್ಯಾ ಕರ್ತುಮಾತಿಥ್ಯಮುದ್ಯ ಮೇ ॥ ೫೧ ॥

ಶಕ್ನೋಷ್ಯಪಿ ಪುರೀಂ ಗಂತುಂ ಮಾಮನುಜ್ಞಾತುಮರ್ಹಸಿ ।
ಅನ್ಯಥಾ ಚೇತ್ಪಲೈಃ ಸೈನ್ಯೈರತ್ಯರ್ಥಂ ಮುನಿಸತ್ತಮ ॥ ೫೨ ॥

ತಪಸ್ವಿನಾಂ ಭವೇತ್ಪೀಡಾ ನಿಯಮಕ್ಷಯಕಾರಿಕಾ ।
ವಸಿಷ್ಠ ಉವಾಚ :—
ಇತ್ಯೇವಮುಕ್ತಃ ಸ ಮುನಿಸ್ತಂ ಪ್ರಾಹ ಸ್ಥೀಯತಾಂ ಕ್ಷಣಮ್ ॥ ೫೩ ॥

ಸರ್ವಂ ಸಂಪಾದಯಿಷ್ಯೇಽಹಮಾತಿಥ್ಯಂ ಸಾನುಗಸ್ಯ ತೇ ।
ಇತ್ಯುಕ್ತ್ವಾಹೂಯ ತಾಂ ದೋಗ್ಧ್ರೀಮುವಾಚಾಯಂ ಮಮಾತಿಥಿಃ ॥ ೫೪ ॥

---

೫೦. ಮಹಾಮುನಿಯೆ! ನನ್ನ ಸಮಗ್ರ ಸೈನ್ಯ-ವಾಹನಾದಿ ಪರಿವಾರದಿಂದ ಕೂಡಿ ಇಲ್ಲಿಗೆ ಬಂದಿರುವೆನು. ನನ್ನದು ಅಲ್ಪಮಾತ್ರ ಪರಿವಾರವಲ್ಲ. ಆದುದರಿಂದ ಹೀಗೆಯೇ ನಾನು ನನ್ನ ನಗರಕ್ಕೆ ಹೋಗುವೆನು. ಮಹರ್ಷಿಯೇ ! ಅನುಜ್ಞೆಯನ್ನು ಕೊಡು.

೫೧. ವನದಲ್ಲಿರುವ ಕಂದಮೂಲಾದಿ ಆಹಾರವನ್ನು ಸೇವಿಸುತ್ತಿರುವ ನಿನ್ನಿಂದ ನನಗೆ ಈ ವನಪಲ್ಲಿ ಆತಿಥ್ಯವನ್ನು ಮಾಡಲಾಗುವುದಿಲ್ಲ. ಅಥವಾ ನೀನು ನಿನ್ನ ತಪಶ್ಶಕ್ತಿಯಿಂದ ನನಗೆ ಆತಿಥ್ಯವನ್ನು ಮಾಡಲು ಶಕ್ತನಾಗಿದ್ದರೂ ಇರಲಿ.

೫೨. ಆದರೂ ನಗರಕ್ಕೆ ಹೋಗಲು ದಯಮಾಡಿ ನನಗೆ ಅನುಜ್ಞೆಯನ್ನು ಕೊಡಲು ನೀನು ಅರ್ಹನಾಗಿದ್ದೀ, ಮುನಿಶ್ರೇಷ್ಠನೆ! ನನ್ನ ಅವಿವೇಕದಿಂದ ಕೂಡಿದ ಅತಿಯಾದ ಸೈನ್ಯದಿಂದ ನಿನಗೆ ಪೀಡೆಯು ಸಂಭವಿಸುವುದು.

೫೩. ತಪಸ್ವಿಗಳ ನಿಯಮಕ್ಕೆ ಭಂಗವನ್ನುಂಟುಮಾಡಿ ನನ್ನ ಸೈನ್ಯ ಪರಿವಾರ ದಿಂದ ನಿನಗೆ ಪೀಡೆಯಾಗುವುದು. ವಸಿಷ್ಠ ಮುನಿಯು ಈ ರೀತಿಯಾಗಿ ಮುಂದು ವರಿಸಿ ಮಾತನಾಡಿದನು :—ರಾಜನಿಂದ ಈ ರೀತಿಯಾಗಿ ಹೇಳಲ್ಪಟ್ಟ ಮುನಿಯು ರಾಜನಿಗೆ ಹೇಳಿದನು, ದೊರೆಯೆ ! ಸ್ವಲ್ಪ ಹೊತ್ತು ಇಲ್ಲಿಯೇ ಸುಮ್ಮನಿರು.

೫೪. ನಾನು ಸಪರಿವಾರನಾದ ನಿನಗೆ ಸರ್ವವಿಧದ ಆತಿಥ್ಯವನ್ನು ಸಜ್ಜುಗೊಳಿ ಸುವೆನು. ಹೀಗೆಂದು ರಾಜನನ್ನು ಕುರಿತು ಹೇಳಿ ಮುನಿಯು ಕಾಮಧೇನುವನ್ನು ಕರೆದು ಈತನು ನನಗೆ ಅತಿಥಿಯಾಗಿ ಬಂದಿರುವನೆಂದು ಹೇಳಿದನು.

ಉಪಾಗತಸ್ತ್ವಯಾ ತಸ್ಮಾತ್ಕ್ರಿಯತಾಮದ್ಯ ಸತ್ಕ್ರಿಯಾ ।
ಇತ್ಯುಕ್ತಾ ಮುನಿನಾ ದೋಗ್ಧ್ರೀ ಸಾತಿಥೇಯಮಶೇಷತಃ
ದುದೋಹ ನೃಪತೇರಾಶು ಯದ್ಯೋಗ್ಯಂ ಮುನಿಗೌರವಾತ್ ॥ ೫೫ ॥

ಅಥಾಶ್ರಮಂ ತತ್ ಸುರರಾಜಸದ್ಮ
ನೀಕಾಶಮಾಸೀದ್ಭೃಗುಪುಂಗವಸ್ಯ ।
ವಿಭೂತಿಭೇದೈರವಿಚಿಂತ್ಯರೂಪ-
ಮನನ್ಯಸಾಧ್ಯಂ ಸುರಭಿಪ್ರಭಾವಾತ್ ॥ ೫೬ ॥

ಅನೇಕರತ್ನೋಜ್ಜ್ವಲಚಿತ್ರಹೇಮ-
ಪ್ರಕಾಶಮಾಲಾಪರಿವೀತಮುಚ್ಚೈಃ ।
ಪೂರ್ಣೇಂದುಶುಭ್ರಾಭ್ರವಿಷಕ್ತಶೃಂಗೈಃ
ಪ್ರಾಸಾದಸಂಘೈಃ ಪರಿವೀತಮಂತಃ ॥ ೫೭ ॥

---

೫೫. ಆದುದರಿಂದ ನೀನು ಇವನಿಗೆ ಸತ್ಕಾರಯೋಗ್ಯವಾದ ಸಮಸ್ತ ಸಾಮಗ್ರಿಯನ್ನು ಈಗ ಸಿದ್ಧಗೊಳಿಸು, ಹೀಗೆಂದು ಮುನಿಯಿಂದ ಆಜ್ಞಾಪಿಸಲ್ಪಟ್ಟ ಕಾಮಧೇನುವು ಮುನಿಯ ಗೌರವವಶದಿಂದ ರಾಜನಿಗೆ ಆತಿಥ್ಯಕ್ಕೆ ಯೋಗ್ಯವಾದ ಸಮಸ್ತ ಉಪಕರಣಗಳನ್ನು ಬೇಗ ಸಿದ್ಧಪಡಿಸಿತು.

೫೬. ಬೇರೊಬ್ಬರಿಂದ ಆಷ್ಟೊಂದು ರಮ್ಯರೂಪದಿಂದ ಮಾರ್ಪಡಿಸಲು ಸಾಧ್ಯವಾಗದಿರುವ ಆ ಭೃಗುವಂಶ ತಿಲಕನಾದ ಜಮದಗ್ನಿಯ ಆಶ್ರಮವು ಕಾಮಧೇನುವಿನ ಪ್ರಭಾವದಿಂದ ಹುಟ್ಟಿದ ಅನೇಕ ವಿಭೂತಿವಿಸ್ತಾರಗಳಿಂದ ಅನಿರ್ವಚನೀಯ ಶೋಭೆಯಿಂದ ಶೋಭಿಸುತ್ತ ದೇವರಾಜನಾದ ಇಂದ್ರನು ವಾಸಮಾಡುವ ರಾಜಗೃಹದಂತೆ ಪ್ರಕಾಶಿಸಿತು.

೫೭. ಆ ಆಶ್ರಮಭೂಮಿಯು ಅನೇಕ ರತ್ನಗಳಿಂದ ಉಜ್ಜ್ವಲವಾದ ಸುವರ್ಣಮಯವಾದ ಉನ್ನತ ಪ್ರಾಕಾರಗಳ ಶ್ರೇಣಿಯಿಂದ ಸುತ್ತುವರಿಯಲ್ಪಟ್ಟಿರುವುದೂ, ಪೂರ್ಣಚಂದ್ರನಂತಿರುವ ಶುಭ್ರವಾದ ಮೇಘಮಂಡಲವನ್ನು ವ್ಯಾಪಿಸಿರುವ ಶಿಖರಗಳಿಂದ ರಮ್ಯವಾದ ಪ್ರಾಸಾದಗಳಿಂದ ಒಳಭಾಗದಲ್ಲಿ ವ್ಯಾಪಿಸಲ್ಪಟ್ಟಿರುವುದೂ ಆಯಿತು.

ಕಾಂಸ್ಯಾರಕೂಟಾರಸತಾಮ್ರಹೇಮ—
ದುರ್ವರ್ಣಸೌಧೋಪಲದಾರುಮೃದ್ಭಿಃ ।
ಪೃಥಗ್ವಿಮಿಶ್ರೈರ್ಭವನೈರನೇಕೈಃ ।
ಸದ್ಭಾಸಿತಂ ನೇತ್ರಮನೋಽಭಿರಾಮೈಃ ॥ ೫೮ ॥

ಮಹಾರ್ಹರತ್ನೋಜ್ಜ್ವಲಹೇಮವೇದಿಕಾ—
ನಿಷ್ಕೂಟಸೋಪಾನಕುಟೀವಿಟಂಕಕೈಃ ।
ತುಲಾಕಪಾಟಾರ್ಗಲಕುಡ್ಯದೇಹಲೀ
ನಿಶಾಂತಶಾಲಾಜಿರಶೋಭಿತೈರ್ಭೃಶಮ್ ॥ ೫೯ ॥

ವಲಭ್ಯಲಿಂದಾಂಗಣಚಾರುತೋರಣೈ—
ರದಭ್ರಪರ್ಯಂತಚತುಷ್ಕಿಕಾದಿಭಿಃ ।
ಸ್ತಂಭೇಷು ಕುಡ್ಯೇಷು ಚ ದಿವ್ಯರತ್ನ
ವಿಚಿತ್ರಚಿತ್ರೈಃ ಪರಿಶೋಭಮಾನೈಃ ॥ ೬೦ ॥

---

೫೮. ಮತ್ತು ಕಂಚು, ಹಿತ್ತಾಳೆ, ತಾಮ್ರ, ಸುವರ್ಣ, ರಜತ ಮುಂತಾದ ಉಚಿತ ಲೋಹವಿಕಾರಗಳಿಂದಲೂ ಮತ್ತು ಶಿಲೆ, ಮರ, ಮೃತ್ತಿಕೆಗಳಿಂದಲೂ ನಿರ್ಮಿತವಾದ, ನೇತ್ರಗಳಿಗೆ ಮನೋಹರವಾದ ಅನೇಕ ಪ್ರಾಸಾದ ಶ್ರೇಣಿಗಳಿಂದ ಶೋಭಿಸಲ್ಪಟ್ಟಿತ್ತು.

೫೯. ಮತ್ತು ಅಲ್ಲಿ ರಚಿಸಲ್ಪಟ್ಟ ಭವನಗಳು ಅಮೂಲ್ಯವಾದ ರತ್ನಗಳಿಂದ ಉಜ್ಜ್ವಲವೂ ಸುವರ್ಣಮಯವೂ ಆದ ವೇದಿಕೆ, ಮಂಟಪ, ಸೋಪಾನ, ಶಾಲೆ, ಮಹಡಿ, ದ್ವಾರ, ಅರ್ಗಲ, ಭಿತ್ತಿ, ದೇಹಲೀ, ಅಂಗಣ, ಚಂದ್ರಶಾಲಾ ಮುಂತಾದ ಪ್ರದೇಶಗಳಿಂದ ಶೋಭಿಸಲ್ಪಟ್ಟಿದ್ದುವು.

೬೦. ವಲಭಿ, ಅಲಿಂದ, ಅಂಗಣ, ತೋರಣ, ಚಂದ್ರಶಾಲೆ ಮುಂತಾದ ಗೃಹಾಭ್ಯಂತರ ಭಾಗಗಳು ಉನ್ನತವಾಗಿಯೂ ಮನೋಹರವಾಗಿಯೂ ಇದ್ದುವು, ಹಾಗು ಅಲ್ಲಲ್ಲಿರುವ ಕಂಬ ಗೋಡೆಗಳು ದಿವ್ಯವಾದ ರತ್ನಗಳಿಂದ ವಿಚಿತ್ರವಾಗಿ ಪ್ರಕಾಶಿಸುತ್ತಲಿದ್ದುವು.

ಉಚ್ಚಾವಚೈ ರತ್ನವರೈರ್ವಿಚಿತ್ರ
ಸುವರ್ಣಸಿಂಹಾಸನ ಪೀಠಿಕಾದ್ಯೈಃ ।
ಸಭಕ್ಷ್ಯಭೋಜ್ಯಾದಿಭಿರನ್ನಪಾನೈ
ರುಪೇತಭಾಂಡೋಪಗತೈಕದೇಶೈಃ || ೬೧ ||

ಗೃಹೈರಮರ್ತ್ಯೋಚಿತ ಸರ್ವಸಂಪತ್—
ಸಮನ್ವಿತೈರ್ನೇತ್ರಮನೋಽಭಿರಾಮ್ಯೈಃ ।
ತಸ್ಯಾಶ್ರಮಂ ಸನ್ನಗರೋಪಮಾನಂ
ಬಭೌ ವಧೂಭಿಶ್ಚ ಮನೋಹರಾಭಿಃ || ೬೨ ||

**ಇತಿ ಶ್ರೀ ಬ್ರಹ್ಮಾಂಡ ಪುರಾಣೇ ಉತ್ತರಾರ್ಧೇ**
**ಷಡ್ವಿಂಶತಿತಮೋಽಧ್ಯಾಯಃ.**

---

೬೧. ಉಚ್ಚಾವಚಭಾವದಿಂದ ಕೂಡಿದ ಶ್ರೇಷ್ಠರತ್ನ ಮಾಲೆಗಳಿಂದ ಕೂಡಿದ ವಿಚಿತ್ರ ಸ್ವರ್ಣಮಯವಾದ ಸಿಂಹಾಸನಾದಿ ಆಸನ ವಿಶೇಷಗಳಿಂದಲೂ ನಾನಾ ವಿಧ ಭಕ್ಷ್ಯಭೋಜ್ಯಾದಿಗಳಿಂದ ಪೂರ್ಣವಾದ ಪಾತ್ರಗಳಿಂದ ವ್ಯಾಪಿಸಲ್ಪಟ್ಟ ಭಾಗಗಳಿಂದಲೂ ಆ ಭವನಗಳು ಪ್ರಕಾಶಿಸುತ್ತಲಿದ್ದುವು.

೬೨. ಆ ಮುನಿಯ ಆಶ್ರಮವು ದೇವಭೋಗ್ಯವಾದ ಉಚಿತ ಸರ್ವ ಸಂಪತ್ತುಗಳಿಂದ ಕೂಡಿ ನೇತ್ರಗಳಿಗೂ ಮನಸ್ಸಿಗೂ ಆಕರ್ಷಕವಾದ ಮನೆಗಳಿಂದಲೂ ಮನೋಹರರಾದ ತರುಣಿಯರಿಂದಲೂ ಅತ್ಯುತ್ತಮವಾದ ನಗರದಂತೆ ಪ್ರಕಾಶಿಸಿತು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.



## ಸಪ್ತವಿಂಶತಿತಮೋಽಧ್ಯಾಯಃ

**ವಸಿಷ್ಠ ಉವಾಚ :—**

**ತಸ್ಮಿನ್ ಪುರೇ ಸಂತುಲಿತಾಮರೇಂದ್ರ**
**ಪುರೀಪ್ರಭಾವೇ ಮುನಿವರ್ಯಧೇನುಃ ।**
**ವಿನಿರ್ಮಮೇ ತೇಷು ಗೃಹೇಷು ಪಶ್ಚಾತ್**
**ತದ್ಯೋಗ್ಯನಾರೀನರವೃಂದಜಾತಮ್** ॥ ೧ ॥

**ವಿಚಿತ್ರವೇಷಾಭರಣಪ್ರಸೂನ**
**ಗಂಧಾಂಶುಕಾಲಂಕೃತವಿಗ್ರಹಾಭಿಃ ।**
**ಸಹಾವಭಾವಾಭಿರುದಾರಚೇಷ್ಟಾ**
**ಶ್ರೀಕಾಂತಿಸೌಂದರ್ಯಗುಣಾನ್ವಿತಾಭಿಃ** ॥ ೨ ॥

**ಮಂದಸ್ಫುರದ್ದಂತಮರೀಚಿಜಾಲ**
**ವಿದ್ಯೋತಿತಾನನಸರೋಜಜಿತೇಂದುಭಾಭಿಃ ।**
**ಪ್ರತ್ಯಗ್ರಯೌವನಭರಾಲಸವಲ್ಗುಗೀರ್ಭಿಃ**
**ಸಪ್ರೇಮಮಂಥರಕಟಾಕ್ಷನಿರೀಕ್ಷಣಾಭಿಃ** ॥ ೩ ॥

---

೧. ವಸಿಷ್ಠ ಮುನಿಯು ಈ ರೀತಿಯಾಗಿ ವಿವರಿಸಿದನು :—ದೇವರಾಜನಾದ ಇಂದ್ರನ ರಾಜಧಾನಿಯಾದ ಅಮರಾವತಿಯನ್ನು ಪ್ರಭಾವದಿಂದ ಹೋಲುತ್ತಿರುವ ಆ ನಗರದಲ್ಲಿ ಮುನಿವರ್ಯನ ಕಾಮಧೇನುವು ಆಯಾಯ ಗೃಹಗಳಲ್ಲಿ ಅದಕ್ಕೆ ತಕ್ಕ ನಾರೀ ಮತ್ತು ನರರ ವೃಂದವನ್ನು ಸೃಷ್ಟಿಸಿತು.

೨. ಕಾಮಧೇನುವಿನಿಂದ ನಿರ್ಮಿಸಲ್ಪಟ್ಟ ನಾರಿಯರು ವಿಚಿತ್ರವಾದ ವೇಷ-ಆಭರಣ-ಪುಷ್ಪ—ಗಂಧ-ವಸ್ತ್ರಗಳಿಂದ ಅಲಂಕರಿಸಲ್ಪಟ್ಟ ಶರೀರಗಳನ್ನು ಧರಿಸಿದವರೂ, ಹಾವ-ಭಾವ-ಉದಾರವಾದ ಚೇಷ್ಟೆ-ಸಂಪತ್ತು-ಕಾಂತಿ-ಮತ್ತು ಸೌಂದರ್ಯ ಗುಣ ಗಳಿಂದ ಶೋಭಿತರೂ ಆಗಿದ್ದರು.

೩. ಮತ್ತು ಮಂದಹಾಸಸಮಯದಲ್ಲಿ ಸ್ಫುರಿಸುತ್ತಿದ್ದ ದಂತಕಾಂತಿಪುಂಜದಿಂದ ಪ್ರಕಾಶಿಸುವ ಮುಖಕಮಲದ ಪ್ರಭೆಯಿಂದ ಚಂದ್ರಬಿಂಬವನ್ನು ತಿರಸ್ಕರಿಸಿರುವವರೂ ನೂತನವಾದ ತಾರುಣ್ಯಮದದಿಂದ ಅಲಸ ಮತ್ತು ಸುಂದರವಾದ ವಚನಭಂಗಿಯುಳ್ಳ ವರೂ ಮತ್ತು ಪ್ರೇಮಗರ್ಭವಾದ ಕಟಾಕ್ಷ ನಿರೀಕ್ಷಣವುಳ್ಳವರೂ ಆಗಿದ್ದರು.

ಪ್ರೀತಿಪ್ರಸನ್ನಹೃದಯಾಭಿರತಿಪ್ರಭಾಭಿಃ
ಶೃಂಗಾರಕಲ್ಪತರುಪುಷ್ಪವಿಭೂಷಿತಾಭಿಃ ।
ದೇವಾಂಗನಾತುಲಿತಸೌಭಗಸೌಕುಮಾರ್ಯ
ರೂಪಾಭಿಲಾಷಮಧುರಾಕೃತಿರಂಜಿತಾಭಿಃ　　|| ೪ ||

ಉತ್ತಪ್ತಹೇಮಕಲಶೋಪಮಚಾರುಪೀನ
ವಕ್ಷೋರುಹದ್ವಯಭರಾನತಮಧ್ಯಮಾಭಿಃ ।
ಶ್ರೋಣೀಭರಾಕ್ರಮಣಖೇದಪರಿಶ್ರಿತಾಸೃ—
ಗಾರಕ್ತಯಾವಕರಸಾರುಣಿತಾಂಘ್ರಿಭೂಮಿಃ　　|| ೫ ||

ಕೇಯೂರಹಾರಮಣಿಕಂಕಣಹೇಮಕಂಠ—
ಸೂತ್ರಾಮಲಶ್ರವಣಮಂಡಲಮಂಡಿತಾಭಿಃ ।
ಸ್ರಗ್ದಾಮಚುಂಬಿತಸಕುಂತಲಕೇಶಪಾಶ
ಕಾಂಚೀಕಲಾಪಪರಿಶಿಂಜಿತನೂಪುರಾಭಿಃ　　|| ೬ ||

---

೪. ಪ್ರೇಮದಿಂದ ಪ್ರಸನ್ನವಾದ ಹೃದಯವುಳ್ಳವರೂ, ಅತ್ಯಂತ ಉಜ್ಜ್ವಲ ಕಾಂತಿಯುಳ್ಳವರೂ, ಶೃಂಗಾರಕ್ಕೋಸ್ಕರ ಕಲ್ಪವೃಕ್ಷದ ಪುಷ್ಪಗಳಿಂದ ಭೂಷಿತರಾದವರೂ, ದೇವಾಂಗನೆಯರಿಗೊಪ್ಪುವ ಸೌಂದರ್ಯ-ಸೌಕುಮಾರ್ಯ–ಸೌಭಾಗ್ಯ ಗುಣಗಳುಳ್ಳವರೂ ಮತ್ತು ರಸಿಕ ಜನಾಭಿಲಾಷವನ್ನು ಹುಟ್ಟಿಸುವ ಮಧುರವಾದ ಆಕಾರದಿಂದ ರಂಜಿಸಲ್ಪಟ್ಟವರೂ ಆಗಿದ್ದರು.

೫. ಹಾಗು ಪುಟಕ್ಕೆ ಹಾಕಿದ ಸುವರ್ಣದ ಕುಂಭಗಳಂತೆ ಇರುವ ಸುಂದರ ಮತ್ತು ಸ್ಥೂಲವಾದ ಸ್ತನಯುಗ್ಮದ ಭಾರದಿಂದ ನಮ್ರವಾದ ಶರೀರ ಮಧ್ಯವುಳ್ಳವರೂ, ಕಟಿಯ ಹಿಂಭಾಗದ ಭಾರದ ಕ್ರಾಂತಿಯಿಂದ ಉಂಟಾದ ಖೇದದಿಂದ ರಕ್ತಪೂರ್ಣವೋ ಎಂಬಂತೆ ಲಾಕ್ಷಾರಸದಿಂದ ರಂಜಿಸಲ್ಪಟ್ಟ ಕೆಂಪಾದ ಪಾದನಖಗಳುಳ್ಳವರೂ ಆಗಿದ್ದರು.

೬. ಭುಜಕೀರ್ತಿ-ಹಾರ-ರತ್ನಮಯ ಕಂಕಣ—ಸ್ವರ್ಣಮಯ ಕಂಠಸೂತ್ರ ಮತ್ತು ನಿರ್ಮಲ ಕರ್ಣಾಭರಣಗಳಿಂದ ಅಲಂಕರಿಸಲ್ಪಟ್ಟವರೂ, ಪುಷ್ಪಮಾಲಿಕೆಗಳಿಂದ ಶಿಂಗರಿಸಲ್ಪಟ್ಟ ಮುಂಗುರುಳುಗಳಿಂದ ರಮ್ಯವಾದ ಕೇಶಪಾಶಗಳುಳ್ಳವರೂ, ಕಾಂಚೀ ಭೂಷಣದ ಧ್ವನಿಮಾಡುತ್ತಿರುವ ಗೆಜ್ಜೆಗಳುಳ್ಳವರೂ ಆಗಿದ್ದರು.

ಅಸ್ಸೃಷ್ಟರೋಷಪರಿಸಾಂತ್ವನನರ್ಮಹಾಸ—
ಕೇಲೀಪ್ರಿಯಾಲಪನಭರ್ತ್ಸನರೋಷಣೇಷು ।
ಭಾವೇಷು ಪಾರ್ಥಿವನಿಜಪ್ರಿಯಧೈರ್ಯಬಂಧ
ಸರ್ವಾಪಹಾರಚತುರೇಷು ಕೃತಾಂತರಾಭಿಃ ॥ ೭ ॥

ತಂತ್ರೀಸ್ವನೋಪಮಿತಮಂಜುಲಸೌಮ್ಯಗೇಯ
ಗಂಧರ್ವತಾರಮಧುರಾರವಭಾಷಿಣೀಭಿಃ ।
ವೀಣಾಪ್ರವೀಣತರಪಾಣಿತಲಾಂಗುಲೀಭಿ
ರ್ಗಂಭೀರಚಕ್ರಚಟುವಾದರತೋತ್ಸುಕಾಭಿಃ ॥ ೮ ॥

ಸ್ತ್ರೀಭಿರ್ಮದಾಲಸತರಾಭಿರತಿಪ್ರಗಲ್ಭ
ಭಾವಾಭಿರಾಕುಲಿತಕಾಮುಕಮಾನಸಾಭಿಃ ।
ಕಾಮಪ್ರಯೋಗನಿಪುಣಾಭಿರಹೀನಸಂಪ —
ದೌದಾರ್ಯರೂಪಗುಣಶೀಲಸಮನ್ವಿತಾಭಿಃ ॥ ೯ ॥

---

೭. ಮತ್ತು ಅನೇಕ ಭಾವಗಳನ್ನು ಆವಿಷ್ಕಾರಮಾಡುವ ಸಮಯಗಳಲ್ಲಿ ರೋಷ, ಸಮಾಧಾನ, ನರ್ಮಹಾಸ, ಕ್ರೀಡಾಪ್ರಿಯಾಲಾಪ, ಭರ್ತ್ಸನ, ರೋಷಣಾದಿ ವೈವಿಧ್ಯವನ್ನು ಪ್ರಕಟಿಸುವವರೂ ತಮ್ಮ ಪ್ರಿಯರಾದ ಪಾರ್ಥಿವರ ಅಗಾಧ ಧೈರ್ಯ ಬಂಧದ ಸರ್ವಸ್ವವನ್ನು ಅಪಹಾರಮಾಡುವ ಭಾವಗಳಲ್ಲಿ ಅತ್ಯಾದರವುಳ್ಳವರೂ ಆಗಿದ್ದರು.

೮. ವೀಣೆಯ ತಂತ್ರೀನಾದಕ್ಕೆ ಹೋಲುವ ಮನೋಹರವಾದ ಸೌಮ್ಯಸ್ವರದಿಂದ ಕೂಡಿದ ಮಧುರವಾದ ಉಚ್ಚಗೀತಾಲಾಪವನ್ನು ಹಾಡುತ್ತಿರುವವರೂ, ವೀಣೆಯನ್ನು ನುಡಿಸುವುದರಲ್ಲಿ ಅತಿನಿಪುಣವಾದ ಕೈಬೆರಳುಳ್ಳವರೂ, ಗಂಭೀರವಾದ ಚಾಟೂಕ್ತಿ ಚಕ್ರದಲ್ಲಿಯೂ ರತಿಕ್ರೀಡೆಯಲ್ಲಿಯೂ ಕುತೂಹಲ ಆಸಕ್ತಿಯುಳ್ಳವರೂ ಆಗಿದ್ದರು.

೯. ಮದದಿಂದ ಅಲಸಶೀಲವುಳ್ಳವರೂ, ಅತಿಪ್ರೌಢವಾದ ಭಾವಪೂರ್ಣರೂ, ಕಾಮುಕರ ಮನಸ್ಸನ್ನು ವಶೀಕರಿಸಿರುವವರೂ, ಕಾಮಪ್ರಯೋಗ ವಿಶೇಷಗಳಲ್ಲಿ ನಿಪುಣರೂ ಮತ್ತು ಅತ್ಯಧಿಕವಾದ ರೂಪ, ಸಂಪತ್ತು, ಔದಾರ್ಯ, ಶೀಲ ಮುಂತಾದ ಗುಣಗಳಿಂದ ತುಂಬಿದವರೂ ಆಗಿದ್ದರು.

ಸಂಖ್ಯಾತಿಗಾಭಿರನಿಶಂ ಗೃಹಕೃತ್ಯಕರ್ಮ —
ವ್ಯಗ್ರಾತ್ತಿಕಾಭಿರಪಿ ತತ್ಪರಿಚಾರಿಕಾಭಿಃ ।
ಪುಂಭಿಶ್ಚ ತದ್ಗುಣಗಣೋಚಿತರೂಪಶೋಭೈ
ರುದ್ಭಾಸಿತೈರ್ಗೃಹಚರೈಃ ಪರಿತಃ ಪರೀತಮ್ ॥ ೧೦ ॥

ಸರಾಜಮಾರ್ಗಾಪಣಸೌಧಸದ್ಮ
ಸೋಪಾನದೇವಾಲಯಚತ್ವರೇಷು ।
ಪೌರೈರಶೇಷಾರ್ಥಗುಣೈಃ ಸಮಂತಾ —
ದಧ್ಯಾಸ್ಯಮಾನಂ ಪರಿಪೂರ್ಣಕಾಮೈಃ ॥ ೧೧ ॥

ಅನೇಕರತ್ನೋಜ್ಜ್ವಲಿತೈರ್ವಿಚಿತ್ರೈಃ
ಪ್ರಾಸಾದಸಂಘೈರತುಲೈರಸಂಖ್ಯೈಃ ।
ರಥಾಶ್ವಮಾತಂಗಖರೋಷ್ಟ್ರಗೋಜಾ
ಯೋಗ್ಯೈರನೇಕೈರಪಿ ಮಂದಿರೈಶ್ಚ ॥ ೧೨ ॥

---

೧೦. ಗಣನಾತೀತರೂ ಹಗಲು-ರಾತ್ರಿಗಳಲ್ಲಿ ಗೃಹಕರ್ಮದಲ್ಲಿ ವ್ಯಗ್ರವಾದ ಅಂತಃಕರಣವುಳ್ಳವರೂ, ಪತಿಪರಿಚರ್ಯೆಯಲ್ಲಿ ಆಸಕ್ತರೂ ಆದ ನಾರಿಯರಿಂದಲೂ ಅಂತಹ ನಾರಿಯರ ಗುಣಗಣಕ್ಕೆ ತಕ್ಕಂತೆ ಇರುವ ಸೌಂದರ್ಯ-ಆಕಾರಗಳಿಂದ ಶೋಭಿಸುವ ಗೃಹಚರರಾದ ನರರಿಂದಲೂ ಆ ಆಶ್ರಮವು ವ್ಯಾಪ್ತವಾಗಿತ್ತು.

೧೧. ಸಂಪೂರ್ಣವಾದ ಸಂಪತ್ತು ಮತ್ತು ಗುಣಗಣಗಳಿಂದ ಕೂಡಿದವರೂ ಮತ್ತು ಪರಿಪೂರ್ಣವಾದ ಕಾಮವುಳ್ಳವರೂ ಆದ ಪುರಜನರಿಂದ ರಾಜಮಾರ್ಗ, ಆಪಣ, ಸೌಧಗೃಹ, ಸೋಪಾನಪಂಕ್ತಿ, ದೇವಾಲಯ ಮತ್ತು ಚತ್ವರ ಮುಂತಾದ ಪ್ರದೇಶಗಳು ಸುತ್ತಲೂ ವ್ಯಾಪಿಸಲ್ಪಟ್ಟಿದ್ದುವು.

೧೨. ನಾನಾವಿಧವಾದ ರತ್ನಗಳಿಂದ ಉಜ್ಜ್ವಲವೂ ವಿಚಿತ್ರವೂ ನಿರುಪಮವೂ ಸಂಖ್ಯಾತೀತವೂ ಆದ ಪ್ರಾಸಾದ ಗೃಹಗಳ ಶ್ರೇಣಿಯಿಂದಲೂ ಮತ್ತು ರಥ, ಅಶ್ವ, ಗಜ, ಗರ್ದಭ, ಉಷ್ಟ್ರ, ಗೋವು, ಅಜ ಮುಂತಾದ ಪ್ರಾಣಿಗಳನ್ನು ಬಂಧಿಸಲು ಯೋಗ್ಯವಾದ ಶಾಲೆಗಳಿಂದಲೂ ಆಶ್ರಮವು ಪರಿಪೂರ್ಣವಾಗಿತ್ತು.

ನರೇಂದ್ರಸಾಮಂತನಿಷಾದಿಸಾದಿ
ಪದಾತಿಸೇನಾಪತಿನಾಯಕಾನಾಮ್ ।
ವಿಪ್ರಾದಿಕಾನಾಂ ರಥಿಸಾರಥೀನಾಂ
ಗೃಹೈಸ್ತಥಾ ಮಾಗಧವಂದಿನಾಂ ಚ ॥ ೧೩ ॥

ವಿವಿಕ್ತರಥ್ಯಾಪಣಚಿತ್ರಚತ್ವರೈ —
ರನೇಕವಸ್ತುಕ್ರಯವಿಕ್ರಯೈಶ್ಚ ।
ಮಹಾಧನೋಪಸ್ಕರಸಾಧುನಿರ್ಮಿತೈ —
ರ್ಗೃಹೈಶ್ಚ ಶುಭ್ರೈರ್ಗಣಿಕಾಜನಾನಾಮ್ ॥ ೧೪ ॥

ಮಹಾರ್ಹರತ್ನೋಜ್ಜ್ವಲತುಂಗಗೋಪುರೈಃ
ಸಹ ಶ್ವಗೃಧ್ರಪ್ರಜನರ್ತಸಾಲಯೈಃ ।
ಚಿತ್ರೈರ್ಧ್ವಜೈಶ್ಚಾಪಿ ಪತಾಕಿಕಾಭಿಃ
ಶುಭ್ರೈಃ ಕುಟೈರ್ಮಂಡಪಿಕಾಭಿರುನ್ನತೈಃ ॥ ೧೫ ॥

---

೧೩. ಮತ್ತು ರಾಜರು, ಸಾಮಂತರಾಜರು, ಆನೆ–ಕುದುರೆಗಳ ಸವಾರರು, ಕಾಲಾಳು, ಸೇನಾಪತಿಗಳು, ನಾಯಕರು, ಬ್ರಾಹ್ಮಣಾದಿವರ್ಣಗಳು, ರಥಿಕರು, ಸಾರಥಿಗಳು, ವಂದಿಮಾಗಧರು ವಾಸಮಾಡುವ ವಿವಿಕ್ತ ಗೃಹಗಳಿಂದ ರಮ್ಯವಾಗಿತ್ತು.

೧೪. ವಿಂಗಡಿಸಲ್ಪಟ್ಟಂತಿರುವ ಮಾರ್ಗ, ಅಂಗಡಿ, ವಿಚಿತ್ರವಾದ ಚೌಕಗಳಿಂದಲೂ, ನಾನಾವಿಧವಾದ ವಸ್ತುಗಳ ಕ್ರಯವಿಕ್ರಯವ್ಯವಹಾರಗಳಿಂದಲೂ ಅಧಿಕ ಸಂಪತ್ತಿನ ವಿನಿಯೋಗದಿಂದ ರಮ್ಯವಾಗಿ ನಿರ್ಮಿಸಲ್ಪಟ್ಟ ಶುಭ್ರವಾದ ವಾರಾಂಗನೆಯರ ಗೃಹ ವಿಶೇಷಗಳಿಂದಲೂ ಪೂರ್ಣವಾಗಿದ್ದಿತು.

೧೫, ಅಮೂಲ್ಯವಾದ ರತ್ನಗಳಿಂದ ಶೋಭಿಸುವ ಉನ್ನತ ಗೋಪುರಗಳಿಂದಲೂ, ಶುನಕ–ಗೃಧ್ರ ಮುಂತಾದುವುಗಳ ಕ್ರೀಡಾ ಗೃಹಗಳಿಂದಲೂ, ವಿಚಿತ್ರವಾದ ಧ್ವಜಸ್ತಂಭ, ಪತಾಕಾ, ಶುಭ್ರವಾದ ಪಟ, ಉನ್ನತವಾದ ಮಂಟಪಗಳಿಂದಲೂ ಶೋಭಿತವಾಗಿತ್ತು.

ಕಲ್ಹಾರಕುಂಜಕುಮುದೋತ್ಪಲರೇಣುವಾಸಿತೈ —
ಶ್ಚಕ್ರಾಹ್ವಹಂಸಕುರರೀಬಕಸಾರಸಾನಾಮ್ ।
ನಾನಾರವಾಢ್ಯರಮಣೀಯತಟಾಕವಾಪೀ
ಸರೋವರೈಶ್ಚಾಪಿ ಜಲೋಪಪನ್ನೈಃ ॥ ೧೬ ॥

ಚೂತಪ್ರಿಯಾಲಪನಸಾಮ್ರಮಧೂಕಜಂಬೂ —
ಪ್ಲಕ್ಷೈರ್ನವೈಶ್ಚ ತರುಭಿಶ್ಚ ಕೃತಾಲವಾಲೈಃ ।
ಪರ್ಯಂತರೋಪಿತಮನೋರಮನಾಗಕೇತಕೀ —
ಪುನ್ನಾಗಚಂಪಕವನೈಶ್ಚ ಪತತ್ರಿಜುಷ್ಟೈಃ ॥ ೧೭ ॥

ಮಂದಾರಕುಂದಕರವೀರಮನೋಜ್ಞಯೂಥಿಕಾ —
ಜಾತ್ಯಾದಿಕೈರ್ವಿವಿಧಪುಷ್ಪಫಲೈಶ್ಚ ವೃಕ್ಷೈಃ ।
ಸಂಲಕ್ಷ್ಯಮಾಣಪರಿತೋಪವನಾಲಿಭಿಶ್ಚ
ಸಂಶೋಭಿತಂ ಜಗತಿ ವಿಸ್ಮಯನೀಯರೂಪೈಃ ॥ ೧೮ ॥

---

೧೬. ಸೌಗಂಧಿಕ, ಕಮಲ, ನೈದಿಲೆ, ಕನ್ನೈದಿಲೆ, ಮುಂತಾದ ಪುಷ್ಪಗಳ ರೇಣುಗಳ ಸುಗಂಧವುಳ್ಳ, ಚಕ್ರವಾಕ-ಹಂಸ-ಕುರರಪಕ್ಷಿ-ಬಕ-ಸಾರಸವೆಂಬ ಜಲಚರ ಪಕ್ಷಿಗಳ ಬಗೆಬಗೆಯ ಧ್ವನಿಯಿಂದ ರಮಣೀಯವಾದ ಕೆರೆ-ಕೊಳ-ಭಾವಿ ಮುಂತಾದ ಜಲಾಶಯಗಳಿಂದಲೂ ಕೂಡಿಕೊಂಡಿತ್ತು.

೧೭. ಆ ನಗರದ ಉಪವನಗಳಲ್ಲಿ ಚೂತ-ಪ್ರಿಯಾಲ-ಪನಸ-ಆಮ್ರ-ಮಧೂಕ-ಜಂಬೂ- ಪ್ಲಕ್ಷ ಮುಂತಾದ ಕಟ್ಟೆಯನ್ನು ಕಟ್ಟಿ ಬೆಳೆಸಿದ ಹೊಸಗಿಡಗಳಿಂದಲೂ ಅವುಗಳ ಸಮೀಪದಲ್ಲಿ ಬೆಳೆಸಿರುವ ನಾಗವಲ್ಲೀ-ಕೇತಕೀ-ಪುನ್ನಾಗ-ಚಂಪಕ ಮುಂತಾದ ಪಕ್ಷಿಗಳ ವಾಸಕ್ಕೆ ಯೋಗ್ಯವಾದ ವೃಕ್ಷಗಳಿಂದಲೂ ದರ್ಶನೀಯವಾಗಿತ್ತು.

೧೮. ಮಂದಾರ-ಕುಂದ-ಕರವೀರ-ಯೂಥಿಕಾ-ಜಾತೀ ಮುಂತಾದ ಅನೇಕ ವಿಧವಾದ ಫಲ–ಪುಷ್ಪಮಯ ವೃಕ್ಷಗಳಿಂದ ತುಂಬಿ ಸುತ್ತಲೂ ಪ್ರಕಾಶಿಸುತ್ತಿರುವ ಜಗತ್ತಿನಲ್ಲಿ ಅತಿ ವಿಸ್ಮಯವನ್ನುಂಟುಮಾಡುವ ಉಪವನಗಳ ಶ್ರೇಣಿಯಿಂದ ರಾಜಿಸುತ್ತಿತ್ತು.

ಸರ್ವರ್ತುಕಪ್ರವರಸೌರಭವಾಯುಮಂದ
ಮಂದಪ್ರಚಾರಪರಿಭರ್ತ್ಸಿತಧರ್ಮಕಾಲಮ್ ।
ಇತ್ಥಂ ಸುರಾಸುರಮನೋರಮಭೋಗಸಂಪದ್ —
ವಿಸ್ಪಷ್ಟಮಾನವಿಭವಂ ನಗರಂ ನರೇಂದ್ರ ॥ ೧೯ ॥

ಸೌಭಾಗ್ಯಭೋಗಮಮಿತಂ ಮುನಿಹೋಮಧೇನುಃ
ಸದ್ಯೋ ವಿಧಾಯ ವಿನಿವೇದಯದಾಶು ತಸ್ಮೈ ।
ಜ್ಞಾತ್ವಾ ತತೋ ಮುನಿವರೋ ದ್ವಿಜಹೋಮಧೇನ್ವಾ
ಸಂಪಾದಿತಂ ನರಪತೇ ರುಚಿರಾತಿಥೇಯಮ್ ॥ ೨೦ ॥

ಆಹೂಯ ಕಂಚನ ತದಂತಿಕಮಾತ್ಮಶಿಷ್ಯಂ
ಪ್ರಾಸ್ಥಾಪಯತ್ ಸ ಗುಣಶಾಲಿನಮಾಶು ರಾಜನ್ ।
ಗತ್ವಾ ವಿಶಾಮಧಿಪತೇಸ್ತ್ವರಸಾ ಸಮೀಪಂ
ಸಪ್ರಶ್ರಯಂ ಮುನಿಸುತಸ್ತಮಿದಂ ಬಭಾಷೇ ॥ ೨೧ ॥

---

೧೯. ನರೇಂದ್ರನೆ ! ಸಮಸ್ತ ಋತುಗಳಲ್ಲಿ ಸಂಭವಿಸುವ ಸುಗಂಧ ಪರಂಪರೆಯಿಂದ ತುಂಬಿ ಮಂದವಾಗಿ ಬೀಸುವ ಗಾಳಿಯ ಪ್ರಚಾರದಿಂದ ಮಾಸ–ಋತು ಮುಂತಾದ ಪರ್ಯಾಯವ್ಯವಸ್ಥಾಧರ್ಮವನ್ನು ಬೆದರಿಸುತ್ತಿರುವುದೂ, ದೇವ–ದಾನವರ ರಮಣೀಯಭೋಗಕ್ಕೆ ಉಚಿತವಾದ ಸಂಪತ್ತಿನಿಂದ ಸ್ಪಷ್ಟವಾದ ಸಮೃದ್ಧಿಯುಳ್ಳದ್ದೂ ಆಗಿತ್ತು.

೨೦. ನೃಪತಿಯೆ ! ಈ ರೀತಿಯಾಗಿ ಮುನಿಯ ಹೋಮಧೇನುವು ಅಪರಿಮಿತವಾದ ಸೌಭಾಗ್ಯದಿಂದ ಕೂಡಿದ ಭೋಗವನ್ನು ಶೀಘ್ರವಾಗಿ ಸೃಷ್ಟಿಮಾಡಿ ಕೂಡಲೇ ಅದನ್ನು ಮುನಿಗೆ ಅರ್ಪಿಸಿತು. ಆಗ ಮುನಿವರನು ರಮ್ಯವಾದ ಅತಿಥಿಸತ್ಕಾರೋಪಕರಣಗಳು ಕಾಮಧೇನುವಿನಿಂದ ಸಿದ್ಧಗೊಳಿಸಲ್ಪಟ್ಟಿರುವುದನ್ನು ತಿಳಿದನು.

೨೧. ರಾಜನೆ ! ತರುವಾಯ ಮುನಿಯು ಸದ್ಗುಣಶಾಲಿಯಾದ ತನ್ನ ಒಬ್ಬ ಶಿಷ್ಯನನ್ನು ಆ ರಾಜನ ಸಮೀಪಕ್ಕೆ ಕಳುಹಿಸಿದನು. ಆ ಶಿಷ್ಯನು ರಾಜನ ಸಮೀಪಕ್ಕೆ ವೇಗವಾಗಿ ಹೋಗಿ ವಿನಯಪೂರ್ವಕವಾಗಿ ಮುಂದೆ ಹೇಳುವಂತೆ ಮಾತನಾಡಿದನು.

ಆತಿಥ್ಯಮಸ್ಮದುಪಪಾದಿತಮಾಶು ರಾಜ್ಞಾ
ಸಂಭಾವನೀಯಮಿತಿ ನಃ ಕುಲದೇಶಿಕಾಜ್ಞಾ ।
ರಾಜಾ ತತೋ ಮುನಿವರೇಣ ಕೃತಾಭ್ಯನುಜ್ಞಃ
ಸಂಪ್ರಾವಿಶತ್ ಪುರವರಂ ಸ್ವಕೃತೇ ಕೃತಂ ತತ್ ॥ ೨೨ ॥

ಸರ್ವೋಪಭೋಗ್ಯನಿಲಯಂ ಮುನಿಹೋಮಧೇನು —
ಸಾಮರ್ಥ್ಯಸೂಚಕಮಶೇಷಬಲೈಃ ಸಮೇತಃ ।
ಅಂತಃ ಪ್ರವಿಶ್ಯ ನಗರರ್ಧಿಮಶೇಷಲೋಕ —
ಸಮ್ಮೋಹನೀಮಭಿಸಮೀಕ್ಷ್ಯ ಸ ರಾಜವರ್ಯಃ ॥ ೨೩ ॥

ಪ್ರೀತಿಪ್ರಸನ್ನವದನಃ ಸಬಲಸ್ತು ದಾನೀ
ಧೀರೋಽಪಿ ವಿಸ್ಮಯಮವಾಪ ಭೃಶಂ ತದಾನೀಮ್ ।
ಗಚ್ಛನ್ ಸುರಸ್ತ್ರೀನಯನಾಲಿಯೂಥ —
ಪಾನೈಕಪಾತ್ರೋಚಿತಚಾರುಮೂರ್ತಿಃ ॥ ೨೪ ॥

---

೨೨. ರಾಜನೆ ! ನಮ್ಮಿಂದ ಸಿದ್ಧವಾದ ಆತಿಥ್ಯವನ್ನು ರಾಜನಾದ ನೀನು ಸ್ವೀಕರಿಸಬೇಕೆಂದು ನಮ್ಮ ಕುಲಪತಿಯಾದ ಗುರುವು ಆಜ್ಞೆಯಿತ್ತಿರುವನು. ಎಂದು ಶಿಷ್ಯನು ಹೇಳಲಾಗಿ ರಾಜನು ಮುನಿವರನ ಸಮ್ಮತಿಯನ್ನು ಪಡೆದು ತನಗೋಸ್ಕರ ನಿರ್ಮಿಸಲ್ಪಟ್ಟಿರುವ ಆ ಉತ್ತಮವಾದ ನಗರವನ್ನು ಪ್ರವೇಶಿಸಿದನು.

೨೩. ಆಗ ಆ ರಾಜವರ್ಯನು ನಗರದೊಳಗೆ ಸೈನ್ಯಸಹಿತನಾಗಿ ಪ್ರವೇಶಿಸಿ ಕಾಮಧೇನುವಿನ ಅಸಾಧಾರಣ ಮಹಿಮೆಯನ್ನು ಸೂಚಿಸುವ, ಸಮಸ್ತ ಭೋಗ್ಯ ವಸ್ತುಗಳಿಂದ ಪೂರ್ಣವಾದ, ಸಮಸ್ತ ಜನರ ಮನಸ್ಸಿಗೆ ಮೋಹವನ್ನುಂಟುಮಾಡುವ ಆ ಸಮೃದ್ಧಿಯನ್ನು ನೋಡಿದನು.

೨೪. ಪ್ರೀತಿಯಿಂದ ಪ್ರಸನ್ನವಾದ ಮುಖವುಳ್ಳವನೂ ಸೈನ್ಯಸಹಿತನೂ ಮತ್ತು ದಾನಿಯೂ ಆದ ರಾಜನು ಬಹು ಧೀರನಾಗಿದ್ದರೂ ಆಗ ಹೆಚ್ಚಾಗಿ ವಿಸ್ಮಯವನ್ನು ಹೊಂದಿದನು. ಪುರದೊಳಗೆ ಹೋಗುತ್ತಿರುವ ಸಮಯದಲ್ಲಿ ದೇವಾಂಗನೆಯರ ನೇತ್ರಗಳೆಂಬ ದುಂಬಿಗಳ ಗುಂಪಿನ ಏಕಪಾನ ಪಾತ್ರದಂತಿರುವ ಸುಂದರವಾದ ಮೂರ್ತಿಯುಳ್ಳವನಾದನು.

ರೇಮೇ ಸ ಹೈಹಯಪತಿಃ ಪುರರಾಜಮಾರ್ಗೇ
ಶಕ್ರಃ ಕುಬೇರವಸತಾವಿವ ಸಾಮರೌಘಃ ।
ತಂ ಪ್ರಸ್ಥಿತಂ ರಾಜಪಥಾತ್ ಸಮಂತಾತ್
ಪೌರಾಂಗನಾಶ್ಚಂದನಸಾರಸಿಕ್ತೈಃ ॥ ೨೫ ॥

ಪ್ರಸೂನಲಾಜಾಪ್ರಕರೈರಜಸ್ರ —
ಮವೀವೃಷನ್ ಸೌಧಗತಾಃ ಸುಹೃದ್ಯೈಃ ।
ಅಭ್ಯಾಗತಾರ್ಹಣಸಮುತ್ಸುಕಪೌರಕಾಂತಾ —
ಹಸ್ತಾರವಿಂದಗಲಿತಾಮಲಲಾಜವರ್ಷೈಃ ॥ ೨೬ ॥

ಕಾಲೇಯಪಂಕಸುರಭೀಕೃತನಂದನೋತ್ಥ —
ಶುಭ್ರಪ್ರಸೂನನಿಕರೈರಲಿವೃಂದಗೀತೈಃ ।
ತತ್ರತ್ಯಪೌರವನಿತಾಜನರತ್ನಸಾರ
ಮುಕ್ತಾಭಿರಪ್ಯನುಪದಂ ಪ್ರವಿಕೀರ್ಯಮಾಣಃ ॥ ೨೭ ॥

---

೨೫. ನಗರದ ರಾಜಮಾರ್ಗದ ಮಧ್ಯದಲ್ಲಿ ಆ ಹೈಹಯರಾಜನು ಕುಬೇರ ನಗರದಲ್ಲಿ ದೇವ ವೃಂದದಿಂದ ಸಹಿತನಾದ ಇಂದ್ರನಂತೆ ವಿನೋದಪಟ್ಟನು. ರಾಜ ಮಾರ್ಗದಿಂದ ಹೋಗುತ್ತಲಿರುವ ಆ ರಾಜನಿಗೆ ಪೌರಾಂಗನೆಯರು ಚಂದನೋದಕದ ಬಿಂದುಗಳನ್ನು ಸೇಚನಮಾಡಿದರು.

೨೬. ಮತ್ತು ಮಹಡಿಯ ಮೇಲೆ ನಿಂತುಕೊಂಡು ಅತಿ ಮನೋಹರವಾದ ಪುಷ್ಪ ಮತ್ತು ಅರಳಿನ ರಾಶಿಯಿಂದ ನಿರಂತರವಾಗಿ ಮಳೆಗರೆದರು. ಆಗ ಅಭ್ಯಾಗತರನ್ನು ಗೌರವಿಸುವುದರಲ್ಲಿ ಉತ್ಸುಕರಾದ ಪೌರಾಂಗನೆಯರ ಹಸ್ತಕಮಲಗಳಿಂದ ನಿರ್ಮಲವಾದ ಅರಳಿನ ವೃಷ್ಟಿಯು ಸುರಿಯಿತು.

೨೭. ಮತ್ತು ಚಂದನ ಪಂಕ ಸೇಚನದಿಂದ ಸುಗಂಧವಾಗಿ ಮಾಡಿದ ನಂದನವನದ ಶುಭ್ರವಾದ ಮತ್ತು ದುಂಬಿಗಳ ಸಮೂಹದ ಝೇಂಕಾರದ ಗಾನದಿಂದ ಕೂಡಿದ ಪುಷ್ಪರಾಶಿಯಿಂದಲೂ ಅಲ್ಲಿರುವ ಪೌರವನಿತೆಯರು ಸುರಿಸುವ ರತ್ನಪ್ರಧಾನವಾದ ಮುತ್ತಿನ ರಾಶಿಯಿಂದಲೂ ಹೆಜ್ಜೆ ಹೆಜ್ಜೆಗೂ ಎರಚುವ ವೈಭವದಿಂದ ಸೇವಿಸಲ್ಪಡುತ್ತ ರಾಜನು ಪ್ರವೇಶಮಾಡಿದನು.

ವ್ಯಭ್ರಾಜತಾವನಿಪತಿರ್ವಿಶದೈಃ ಸಮಂತಾ —
ಚ್ಛೀತಾಂಶುರಶ್ಮಿನಿಕರೈರಿವ ಮಂದರಾದ್ರಿಃ ।
ಬ್ರಾಹ್ಮೀಂ ತಪಃಶ್ರಿಯಮುದಾರಗುಣಾಮಚಿಂತ್ಯಾಂ
ಲೋಕೇಷು ದುರ್ಲಭತರಾಂ ಸ್ಪೃಹಣೀಯಶೋಭಾಮ್ ॥ ೨೮ ॥

ಪಶ್ಯನ್ ವಿಶಾಮಧಿಪತಿಃ ಪುರಸಂಪದಂ ತಾ —
ಮುಚ್ಚೈಃ ಶಶಂಸ ಮನಸಾ ವಚಸೇವ ರಾಜನ್ ।
ಮೇನೇ ಚ ಹೈಹಯಪತಿರ್ಭುವಿ ದುರ್ಲಭೇಯಂ
ಕ್ಷಾತ್ರೀ ಮನೋಹರತರಾ ಸಹಿತಾ ಹಿ ಸಂಪತ್ ॥ ೨೯ ॥

ಅಸ್ಯಾಃ ಶತಾಂಶತುಲನಾಮಪಿ ನೋಪಗಂತುಂ
ವಿಪ್ರಶ್ರಿಯಃ ಪ್ರಭವತೀತಿ ಸುರಾರ್ಚಿತಾಯಾಃ ।
ಮಧ್ಯೇಪುರಂ ಪುರಜನೋಪಚಿತಾಂ ವಿಭೂತಿ —
ಮಾಲೋಕಯನ್ ಸಹ ಪುರೋಹಿತಮಂತ್ರಿಸಾರ್ಥಃ ॥ ೩೦ ॥

---

೨೮. ಅಂತಹ ಶುಭ್ರವಾದ ಪುಷ್ಪ-ಮುಕ್ತಾಫಲವೃಷ್ಟಿಯ ಮಧ್ಯದಲ್ಲಿರುವ ರಾಜನು ಚಂದ್ರನ ಸ್ವಚ್ಛ ಕಿರಣಗಳಿಂದ ವ್ಯಾಪಿಸಲ್ಪಟ್ಟ ಮಂದರ ಪರ್ವತದಂತೆ ಪ್ರಕಾಶಿಸಿದನು. ಹಾಗು ಸ್ಪೃಹಣೀಯವಾದ ಶೋಭೆಯುಳ್ಳ ಮತ್ತು ಉದಾರಗುಣಗಳಿಂದ ಕೂಡಿಕೊಂಡಿರುವ ಆ ಬ್ರಾಹ್ಮ ತಪಸ್ಸಂಪತ್ತನ್ನು ಅಚಿಂತ್ಯವೂ ದುರ್ಲಭವೂ ಆದುದೆಂದು ಚಿಂತಿಸಿದನು.

೨೯. ರಾಜನೆ! ಪ್ರಜಾನಾಥನಾದ ಧೊರೆಯು ಆ ನಗರ ಸಂಪತ್ತನ್ನು ನೋಡುತ್ತ ಅತಿಯಾಗಿ ಮನಸ್ಸಿನಿಂದಲೂ ಹಾಗೆಯೇ ವಚನದಿಂದಲೂ ಪ್ರಶಂಸಿಸಿದನು. ಕ್ಷತ್ರಿಯ ಭೋಗ್ಯವಾದ ಅತಿ ಮನೋಹರವಾದ, ಮತ್ತು ಅನ್ಯೂನವಾದ ನಮ್ಮ ಸಂಪತ್ತು ಭೂಮಿಯಲ್ಲಿ ಅತ್ಯಂತ ದುರ್ಲಭವಾದುದೆಂದು ಹೈಹಯೇಶ್ವರನು ಭಾವಿಸಿದನು.

೩೦. ಆದರೆ ಅಂತಹ ಕ್ಷತ್ರಿಯರ ಸಮೃದ್ಧಿಯು ದೇವತೆಗಳಿಂದಲೂ ಮಾನಿಸಲ್ಪಟ್ಟ ಈ ಬ್ರಾಹ್ಮಸಂಪತ್ತಿನ ಶತಾಂಶಕ್ಕೆ ಕೂಡ ಸರಿಯಾಗುವುದಿಲ್ಲ. ಎಂಬುದಾಗಿ ಪುರೋಹಿತ-ಮಂತ್ರಿವೃಂದದಿಂದ ಕೂಡಿ ನಗರ ಮಧ್ಯದಲ್ಲಿ ಪ್ರವೇಶಿಸುತ್ತ ಆ ವಿಭೂತಿಯನ್ನು ನೋಡಿ ರಾಜನು ಚಿಂತಿಸಿದನು.

ಗಚ್ಛನ್ ಸ್ವಪಾರ್ಶ್ವಚರದರ್ಶಿತವರ್ಣಸೌಧೋ
ಲೇಭೇ ಮುದಂ ಪುರಜನೈಃ ಪರಿಪೂಜ್ಯಮಾನಃ ।
ರಾಜಾ ತತೋ ಮುನಿವರೋಪಚಿತಾಂ ಸಪರ್ಯಾ
ಮಾತ್ಮಾನುರೂಪಮಿಹ ಸಾನುಚರೋ ಲಭಸ್ವ ॥ ೩೧ ॥

ಇತ್ಯಕ್ರಮೇಣ ನೃಪತಿರ್ವಿನಿವರ್ತಯಿತ್ವಾ
ಸ್ವಾರ್ಥಂ ಪ್ರಕಲ್ಪಿತಗೃಹಾಭಿಮುಖೋ ಜಗಾಮ ।
ಪೌರೈಃ ಸಮೇತ್ಯ ವಿವಿಧಾರ್ಹಣಪಾಣಿಭಿಶ್ಚ
ಮಾರ್ಗೇ ಮುದಾ ವಿರಚಿತಾಂಜಲಿಭಿಃ ಸಮಂತಾತ್ ॥ ೩೨ ॥

ಸಂಭಾವಿತೋಽಭ್ಯನುಪದಂ ಜಯಶಬ್ದಘೋಷೈ—
ಸ್ತೂರ್ಯಾರವೈಶ್ಚ ಬಧಿರೀಕೃತದಿಗ್ವಿಭಾಗೈಃ ।
ಕಕ್ಷಾಂತರಾಣಿ ನೃಪತಿಃ ಶನಕೈರತೀತ್ಯ
ತ್ರೀಣಿ ಕ್ರಮೇಣ ಚ ಸಸಂಭ್ರಮಕಂಚುಕೀನಿ ॥ ೩೩ ॥

---

೩೧. ಹೀಗೆ ಪುರಜನರಿಂದ ಸೇವಿಸಲ್ಪಡುತ್ತ ತನ್ನ ಪಾರ್ಶ್ವದಲ್ಲಿ ಬರುತ್ತಿದ್ದ ಸೇವಕರಿಂದ ತೋರಿಸಲ್ಪಟ್ಟ ವರ್ಣರಂಜಿತವಾದ ಸೌಧವನ್ನು ನೋಡಿ ಅತಿ ಆನಂದವನ್ನು ಹೊಂದಿದನು. ಅನಂತರದಲ್ಲಿ ಜೊತೆಯಲ್ಲಿದ್ದ ಸಾರ್ಥವನ್ನು ಕುರಿತು ಮುನಿವರ್ಯನಿಂದ ಕಲ್ಪಿಸಲ್ಪಟ್ಟ ಅವರವರಿಗೆ ಯೋಗ್ಯವಾದ ಸತ್ಕಾರವನ್ನು ಸಪರಿವಾರರಾಗಿ ಅನುಭವಿಸಿ ಎಂದು ಹೇಳಿದನು.

೩೨. ಹೀಗೆ ಹೇಳಿ ಸೇವಕರನ್ನು ಅನಾಯಾಸವಾಗಿ ಹಿಂದಕ್ಕೆ ಕಳುಹಿಸಿ ಅಭಿಮುಖನಾಗಿ ವಿವಿಧ ಪೂಜೋಪಕರಣಗಳನ್ನು ಹಸ್ತಗಳಲ್ಲಿ ಧರಿಸಿ ಮತ್ತು ಅಂಜಲಿಬಂಧವನ್ನು ಮಾಡಿಕೊಂಡಿರುವ ಪುರಜನರಿಂದ ಸುತ್ತಲೂ ಸೇರಿ ಸೇವಿಸಲ್ಪಡುತ್ತ ತನಗೋಸ್ಕರ ಕಲ್ಪಿಸಲ್ಪಟ್ಟ ಗೃಹಕ್ಕೆ ಅಭಿಮುಖನಾಗಿ ಹೋದನು.

೩೩. ಆ ಸೌಧಗೃಹದಲ್ಲಿ ಪ್ರತಿ ಹೆಜ್ಜೆಗೂ ಜಯಕಾರಧ್ವನಿಯಿಂದಲೂ ದಿಗಂತಗಳನ್ನು ಕಿವುಡಾಗಿ ಮಾಡುವ ಉಚ್ಚವಾದ ವಾದ್ಯಧ್ವನಿಗಳಿಂದಲೂ ಗೌರವಿಸಲ್ಪಟ್ಟವನಾಗಿ ರಾಜನು ಕ್ರಮವಾಗಿ ಗಾಬರಿಯಿಂದ ಕೂಡಿದ ಕಂಚುಕಿಗಳುಳ್ಳ ಮೂರು ವಿಭಾಗ (ಅಂತಸ್ತು) ಗಳನ್ನು ಮೆಲ್ಲಗೆ ದಾಟಿದನು.

ದೂರಪ್ರಸಾರಿತಪೃಥಗ್ಜನಸಂಕುಲಾನಿ
ಸದ್ಮಾವಿವೇಶ ಸಚಿವಾದರದತ್ತಹಸ್ತಃ ।
ತತ್ರ ಪ್ರದೀಪದಧಿದರ್ಪಣಗಂಧಪುಷ್ಪ
ದೂರ್ವಾಕ್ಷತಾದಿಭಿರಲಂ ಪುರಕಾಮಿನೀಭಿಃ　　　　॥ ೩೪ ॥

ನಿರ್ಯಾಯ ರಾಜಭವನಾಂತರತಃ ಸಲೀಲ
ಮಾನಂದಿತೋ ನರಪತಿರ್ಬಹುಮಾನಪೂರ್ವಮ್ ।
ತಾಭಿಃ ಸಮಾಭಿವಿನಿವೇಶಿತಮಾಶು ನಾನಾ —
ರತ್ನಪ್ರವೇಕರುಚಿಜಾಲವಿರಾಜಮಾನಮ್　　　　॥ ೩೫ ॥

ಸೂಕ್ಷ್ಮೋತ್ತರಚ್ಛದಮುದಾರಯಶಾ ಮನೋಜ್ಞ
ಮಧ್ಯಾರುರೋಹ ಕನಕೋತ್ತರವಿಷ್ಟರಂ ತಮ್ ।
ತಸ್ಮಿನ್ ಗೃಹೇ ನೃಪ ತದೀಯಪುರಂಧ್ರಿವರ್ಗಃ
ಸ್ವಾಸೀನಮಾಶು ನೃಪತಿರ್ವಿವಿಧಾರ್ಹಣಾಭಿಃ　　　　॥ ೩೬ ॥

---

೩೪. ಅಲ್ಲಿ ಪಾಮರಜನರ ಗುಂಪನ್ನು ದೂರ ಓಡಿಸಿರುವ ಮನೆಗೆ ಮಂತ್ರಿಗಳಿಂದ ಆದರ ಪೂರ್ವಕವಾಗಿ ಹಸ್ತಲಾಘವ ಮರ್ಯಾದೆಯನ್ನು ಸ್ವೀಕರಿಸಿ ಪ್ರವೇಶಿಸಿದನು. ಅಲ್ಲಿ ಮಂಗಲಾರ್ಥವಾಗಿ ದೀಪ, ದಧಿ, ದರ್ಪಣ, ಗಂಧ, ಪುಷ್ಪ, ದೂರ್ವಾ ಮತ್ತು ಅಕ್ಷತ ದ್ರವ್ಯಗಳನ್ನು ಪುರಕಾಮಿನಿಯರು ಇರಿಸಿದ್ದರು.

೩೫. ಅಂತಹ ರಾಜಭವನದ ಅಭ್ಯಂತರ ಪ್ರದೇಶಕ್ಕೆ ವಿಲಾಸಪೂರ್ವಕವಾಗಿ ಆನಂದದಿಂದ ಬಂದು ರಾಜನು ನಗರದ ಕಾಮಿನಿಯರಿಂದ ಬಹುಮಾನ ಪೂರ್ವಕವಾಗಿ ಯೋಗ್ಯವಾಗಿ ಸಿದ್ಧಗೊಳಿಸಿಟ್ಟಿರುವ ಮತ್ತು ನಾನಾಜಾತಿಯ ರತ್ನ ಪುಂಜಗಳ ಕಾಂತಿ ಶ್ರೇಣಿಯಿಂದ ರಾಜಿಸುವ ಆಸನವನ್ನು ಸೇವಿಸಿದನು.

೩೬. ರಾಜನೇ ! ಆ ಪೀಠವು ಸುವರ್ಣಮಯವೂ ಸೂಕ್ಷ್ಮವಾದ ವಸ್ತ್ರದಿಂದ ಮೇಲೆ ಆಸ್ತರಿಸಲ್ಪಟ್ಟಿರುವುದೂ ಮತ್ತು ದರ್ಭಾಸನದಿಂದ ಕೂಡಿರುವುದೂ ಆಗಿತ್ತು ಅಂತಹ ರಮಣೀಯವಾದ ಪೀಠವನ್ನು ಉದಾರವಾದ ಕೀರ್ತಿಯುಳ್ಳ ರಾಜನು ಹತ್ತಿದನು. ಆಗ ಆ ಗೃಹದಲ್ಲಿದ್ದ ಸುವಾಸಿನಿಯರ ಸಮೂಹವು ಸುಖಾಸೀನನಾದ ನೃಪತಿಯನ್ನು ಬೇಗ ನಾನಾವಿಧವಾದ ಸತ್ಕಾರಗಳಿಂದ ಪೂಜಿಸಿತು.

ವಾದ್ಯಾದಿಭಿಸ್ತದನುಭೂಷಣಗಂಧಪುಷ್ಪ —
ವಸ್ತ್ರಾದ್ಯಲಂಕೃತಿಭಿರಗ್ರ್ಯಮುದಂ ತತಾನ ।
ತಸ್ಮಿನ್ನಶೇಷದಿವಸೋಚಿತಕರ್ಮ ಸರ್ವಂ
ನಿರ್ವರ್ತ್ಯ ಹೈಹಯಪತಿಃ ಸ್ವಮತಾನುಸಾರಮ್ ॥ ೩೭ ॥

ನಾನಾವಿಧಾಲಪನನರ್ಮವಿಚಿತ್ರಕೇಲೀ —
ಸಂಪ್ರೇಕ್ಷಿತೈರ್ದಿನಮಶೇಷಮಲಂ ನಿನಾಯ ।
ಕೃತ್ವಾ ದಿನಾಂತಸಮಯೋಚಿತಕರ್ಮ ಚೈಷ
ರಾಜಾ ಸ್ವಮಂತ್ರಿಸಚಿವಾನುಗತಃ ಸಮಂತಾತ್ ॥ ೩೮ ॥

ಆಸನ್ನಭೃತ್ಯಕರಸಂಸ್ಥಿತದೀಪಕೌಘ
ಸಂಶಾಂತಸಂತಮಸಮಾಶು ಸದಃ ಪ್ರಪೇದೇ ।
ತತ್ರಾಸನೇ ಸಮುಪವಿಶ್ಯ ಪುರೋಧಮಂತ್ರಿ —
ಸಾಮಂತನಾಯಕಶತೈಃ ಸಮುಪಾಸ್ಯಮಾನಃ ॥ ೩೯ ॥

---

೩೭. ವಾದ್ಯ ಮುಂತಾದುವುಗಳಿಂದಲೂ, ಭೂಷಣ–ಗಂಧ–ಪುಷ್ಪ–ವಸ್ತ್ರಾದಿ ಅಲಂಕಾರಗಳಿಂದಲೂ ರಾಜನಿಗೆ ಅತ್ಯಾನಂದವನ್ನು ಉಂಟುಮಾಡಿದರು. ಆ ಗೃಹದಲ್ಲಿ ಹೈಹಯರಾಜನು ತನ್ನ ಇಷ್ಟದಂತೆ ಸಂಪೂರ್ಣವಾದ ಹಗಲಿನಲ್ಲಿ ಮಾಡಬೇಕಾದ ಎಲ್ಲ ಕೃತ್ಯವನ್ನೂ ನೆರವೇರಿಸಿದನು.

೩೮. ರಾಜನು ಸುತ್ತಲೂ ಮಂತ್ರಿ-ಪರಿವಾರದಿಂದ ಕೂಡಿದವನಾಗಿ ನಾನಾ ವಿಧವಾದ ಗಾನಾಲಾಪ, ವಿಚಿತ್ರವಾದ ಕ್ರೀಡಾವಿನೋದದರ್ಶನದಿಂದ ಸಂಪೂರ್ಣವಾದ ದಿನವನ್ನು ಕಳೆದನು. ತರುವಾಯ ಸಾಯಂಕಾಲಕ್ಕೆ ಉಚಿತವಾದ ವಿಧಿವಿಹಿತ ಕರ್ಮವನ್ನು ಆಚರಿಸಿದನು.

೩೯. ಅನಂತರದಲ್ಲಿ ಸಮೀಪದಲ್ಲಿದ್ದ ಭೃತ್ಯರು ಕೈಗಳಲ್ಲಿ ಹಿಡಿದಿರುವ ದೀಪ ಮಾಲೆಗಳಿಂದ ನಾಶಹೊಂದಿದ ಅಂಧಕಾರವುಳ್ಳ ಸಭಾಮಂಟಪಕ್ಕೆ ಹೋದನು. ಅಲ್ಲಿ ಹಾಕಿದ್ದ ಆಸನದಲ್ಲಿ ಕುಳಿತುಕೊಂಡು ಮಂತ್ರಿ ಪುರೋಹಿತ ಸಾಮಂತರಾಜ ಸೇನಾ ನಾಯಕ ಮುಂತಾದವರ ವರ್ಗದಿಂದ ಸೇವಿಸಲ್ಪಡುತ್ತಿದ್ದನು.

ಅನ್ಯಾಸ್ತ್ರ ರಾಜಸಮಿತೌ ವಿವಿಧೈರ್ವಿನೋದೈ
ಹೃಷ್ಟಃ ಸುರೇಂದ್ರ ಇವ ದೇವಗಣೈರುಪೇತಃ ।
ತಸ್ಮಿಂಶ್ಚಿರಂ ವಿವಿಧವಾದ್ಯವಿನೋದನೃತ್ತ
ಪ್ರೇಕ್ಷಾಪ್ರವೃತ್ತಹಸನಾದಿಕಥಾಪ್ರಸಂಗಃ ॥ ೪೦ ॥

ಆಸಾಂಚಕಾರ ಗಣಿಕಾಜನ ನರ್ಮಹಾಸ—
ಕ್ರೀಡಾವಿಲಾಸಪರಿತೋಷಿತಚಿತ್ತವೃತ್ತಿಃ ।
ಇತ್ಥಂ ವಿಶಾಮಧಿಪತಿರ್ಭೃಶಮಾನಿಶಾರ್ಧಂ
ನಾನಾವಿಹಾರವಿಭವಾನುಭವೈರನೇಕೈಃ ॥ ೪೧ ॥

ಸ್ಥಿತ್ವಾನುಗಾನ್ನರಪತೀನಪಿ ತನ್ನಿವಾಸಂ
ಪ್ರಸ್ಥಾಪ್ಯ ವಾಸಭವನಂ ಸ್ವಯಮುಪ್ಯಯಾಸೀತ್ ।
ತದ್ರಾಜಸೈನ್ಯಮಖಿಲಂ ನಿಜವೀರ್ಯಶೌರ್ಯ—
ಸಂಪತ್ಪ್ರಭಾವಮಹಿಮಾನುಗುಣಂ ಗೃಹೇಷು ॥ ೪೨ ॥

---

೪೦. ಅಂತಹ ರಾಜ ಸಭೆಯಲ್ಲಿ ದೇವೇಂದ್ರನು ದೇವಗಣದಿಂದ ಪರಿಚರಿಸಲ್ಪಟ್ಟಂತೆ ವಿವಿಧ ವಿನೋದಗಳಿಂದ ಸೇವಿಸಲ್ಪಟ್ಟು ಆನಂದವನ್ನು ಹೊಂದಿದನು. ಮತ್ತು ಅನೇಕವಾದ್ಯವಿನೋದ, ನೃತ್ಯ ದರ್ಶನ ಮುಂತಾದುವುಗಳಿಂದ ಕೂಡಿ ಹಾಸ್ಯಕರವಾದ ಕಥಾ ಪ್ರಸಂಗವನ್ನು ಅನುಭವಿಸಿದನು.

೪೧. ಮತ್ತು ವೇಶ್ಯಾ ಜನರ ನರ್ಮಹಾಸ, ನರ್ಮಕ್ರೀಡಾ, ವಿಲಾಸಗಳಿಂದ ಸಂತೋಷಗೊಂಡ ಚಿತ್ತ ವೃತ್ತಿಯುಳ್ಳವನಾದನು. ಹೀಗೆ ರಾಜನು ಆ ರಾಜಾಸ್ಥಾನದಲ್ಲಿ ಪುನಃ ಪುನಃ ನಾನಾ ವಿನೋದ ವಿಹಾರಗಳ ಪರಂಪರೆಯಿಂದ ಅರ್ಧ ರಾತ್ರಿಯವರೆಗೆ ಕಾಲವನ್ನು ಕಳೆದನು.

೪೨. ಅಷ್ಟು ಹೊತ್ತು ಸಭೆಯಲ್ಲಿದ್ದು ತನ್ನ ಅನುಚರ ರಾಜರನ್ನು ಅವರವರ ಗೃಹಗಳಿಗೆ ಕಳುಹಿಸಿಕೊಟ್ಟು ತಾನು ತನ್ನ ವಿಶ್ರಾಂತಿ ವಾಸಗೃಹಕ್ಕೆ ತೆರಳಿದನು. ಆ ಎಲ್ಲ ರಾಜಸೈನ್ಯವು ಆಯಾಯ ಮನೆಗಳಲ್ಲಿ ತಮ್ಮ ವೀರ್ಯ-ಶೌರ್ಯ-ಸಂಪತ್ತು-ಪ್ರಭುತ್ವ-ಮಹಿಮೆಗಳಿಗೆ ತಕ್ಕಂತೆ ಉತ್ತಮವಾದ ಭೋಗವನ್ನು ಅನುಭವಿಸಿತು.

ಆತ್ಮಾನುರೂಪವಿಭವೇಷು ಮಹಾರ್ಹವಸ್ತ್ರ—
ಸ್ರಗ್ಭೂಷಣಾಭಿರಲಂ ಮುದಿತಂ ಬಭೂವ ।
ಸೈನ್ಯಾನಿ ತಾನಿ ನೃಪತೇರ್ವಿವಿಧಾನ್ನಪಾನ—
ಸದ್ಭಕ್ಷ್ಯಭೋಜ್ಯಮಧುಮಾಂಸಪಯೋಘೃತಾದ್ಯೈಃ ॥ ೪೩ ॥

ತೃಪ್ತಾನ್ಯವಾತ್ಸುರಖಿಲಾನಿ ಸುಖೋಪಭೋಗೈ—
ಸ್ತಸ್ಯಾಂ ನರೇಂದ್ರಪುರಿ ದೇವಗಣಾ ದಿವೀವ ।
ಏವಂ ತದಾ ನರಪತೇರನುಯಾಯಿನಸ್ತೇ
ನಾನಾವಿಧೋಚಿತಸುಖಾನುಭವಪ್ರತೀತಾಃ ॥ ೪೪ ॥

ಅನ್ಯೋನ್ಯಮೂಚುರಿತಿ ಗೇಹಧನಾದಿಭಿರ್ನಾ
ಕಿಂ ಸಾಧ್ಯತೇ ವಯಮಿಹೈವ ವಸಾಮ ಸರ್ವೇ ।

---

೪೩. ಮತ್ತು ತಮಗೆ ಅನುರೂಪವಾದ ಸಮೃದ್ಧಿಯಿಂದ ಕೂಡಿದ ಗೃಹಗಳಲ್ಲಿ ಅಮೂಲ್ಯವಾದ ವಸ್ತ್ರ ಮಾಲ್ಯ-ಭೂಷಣಾದಿಗಳಿಂದ ಸಂಪೂರ್ಣ ಆನಂದವನ್ನು ಹೊಂದಿತು. ಮತ್ತು ಆ ರಾಜನ ಸೈನ್ಯವು ವಿವಿಧವಾದ ಅನ್ನ, ಪಾನ-ಭಕ್ಷ್ಯ-ಭೋಜ್ಯ ಮಧು-ಮಾಂಸ-ಕ್ಷೀರ-ಘೃತ ಮುಂತಾದ ಉತ್ತಮಾಹಾರದಿಂದ ತೃಪ್ತಿಯನ್ನು ಹೊಂದಿತು.

೪೪. ಎಲ್ಲ ಪರಿವಾರವೂ ನಾನಾ ಸುಖೋಪಭೋಗಗಳಿಂದ ತೃಪ್ತಿಯನ್ನು ಹೊಂದಿ ಸ್ವರ್ಗದಲ್ಲಿ ದೇವತೆಗಳಂತೆ ಆ ನಗರದಲ್ಲಿ ಸುಖಪರಂಪರೆಯಲ್ಲಿ ಮುಳುಗಿದರು. ಹೀಗೆ ಆ ನರಪತಿಯ ಅನುಚರರೆಲ್ಲರೂ ಆಗ ನಾನಾ ವಿಧವಾದ ಉಚಿತ ಸುಖಾನುಭವಗಳಿಂದ ಕೃತಕೃತ್ಯರಾದರು.

೪೫. ಆದ್ದರಿಂದ ಪರಸ್ಪರವಾಗಿ ಈ ರೀತಿಯಾಗಿ ಮಾತನಾಡಿಕೊಂಡರು :— ನಮಗೆ ನಮ್ಮ ಗೃಹ-ಧನಾದಿ ವಸ್ತುಗಳಿಂದ ಏನಾಗಬೇಕು? ನಾವೆಲ್ಲರೂ ಎಲ್ಲವನ್ನೂ ಬಿಟ್ಟು ಇಲ್ಲಿಯೇ ವಾಸಿಸೋಣ; ಎಂಬುದಾಗಿ ಹೇಳಿಕೊಂಡರು. ರಾಜನೆ, ಹೈಹಯೇಶ್ವರನು ತನ್ನ ರಾತ್ರಿ ಕಾಲ ಕರ್ತವ್ಯವಾದ ಅನುಷ್ಠಾನವನ್ನು ಮುಗಿಸಿ

ರಾಜಾಪಿ ಶಾರ್ವರವಿಧಾನಮಥೋ ವಿಧಾಯ
ನಿರ್ವರ್ತ್ಯ ವಾಸಭವನೇ ಶಯನೀಯಮಗ್ರ್ಯಮ್ ।
ಅಧ್ಯಾಸ್ಯ ರತ್ನನಿಕರೈರತಿಶೋಭಿ ಭದ್ರಂ
ನಿದ್ರಾಮಸೇವತ ನರೇಂದ್ರ ಚಿರಂ ಪ್ರತೀತಃ ॥ ೪೫ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ
ಸಪ್ತವಿಂಶತಿತಮೋಽಧ್ಯಾಯಃ

---

ವಾಸಗೃಹದಲ್ಲಿ ಉತ್ತಮವಾದ ಮತ್ತು ರತ್ನ ರಾಶಿಯಿಂದ ಅಲಂಕರಿಸಲ್ಪಟ್ಟಿರುವ ಮಂಗಳಕರವಾದ ಶಯನೀಯವನ್ನು ಹೊಂದಿ ಪ್ರಸನ್ನನಾಗಿ ಬಹಳ ಹೊತ್ತು ನಿದ್ರಾ ಸುಖವನ್ನು ಅನುಭವಿಸಿದನು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಇಪ್ಪತ್ತೇಳನೆಯ
ಅಧ್ಯಾಯವು ಮುಗಿದುದು.

# ಅಷ್ಟಾವಿಂಶತಿತಮೋಽಧ್ಯಾಯಃ

ವಸಿಷ್ಠ ಉವಾಚ :—

ಸ್ವಪಂತಮೇತ್ಯ ರಾಜಾನಂ ಸೂತಮಾಗಧವಂದಿನಃ ।
ಪ್ರಬೋಧಯಿತುಮವ್ಯಗ್ರಾ ಜಗುರುಚ್ಚೈರ್ನಿಶಾತ್ಯಯೇ ॥ ೧ ॥

ವೀಣಾವೇಣುರವೋನ್ಮಿಶ್ರಕಲತಾಲತತಾನುಗಮ್ ।
ಸಮಸ್ತಶ್ರುತಿಸುಶ್ರಾವ್ಯಪ್ರಶಸ್ತಮಧುರಸ್ವರಮ್ ॥ ೨ ॥

ಸ್ನಿಗ್ಧಕಂಠಾಃ ಸುವಿಸ್ಪಷ್ಟಮೂರ್ಛನಾಗ್ರಾಮಸೂಚಿತಮ್ ।
ಜಗುರ್ಗೇಯಂ ಮನೋಹಾರಿ ತಾರಮಂದ್ರಲಯಾನ್ವಿತಮ್ ॥ ೩ ॥

ಊಚುಶ್ಚ ತಂ ಮಹಾತ್ಮಾನಂ ರಾಜಾನಂ ಸೂತಮಾಗಧಾಃ ।
ಸ್ವಪಂತಂ ವಿವಿಧಾ ವಾಚಃ ವಿಬೋಧಯಿಷವಃ ಶನೈಃ ॥ ೪ ॥

---

೧. ವಸಿಷ್ಠಮುನಿಯು ಈ ರೀತಿಯಾಗಿ ಹೇಳಿದನು :—ರಾತ್ರಿಯ ಅವಸಾನದಲ್ಲಿ ಸೂತ-ಮಾಗಧ ಮತ್ತು ವಂದಿಗಳು ನಿದ್ರಿಸುತ್ತಿದ್ದ ರಾಜನ ಸಮೀಪಕ್ಕೆ ಬಂದು ವ್ಯಾಕುಲತೆಯಿಲ್ಲದಂತೆ ಗಟ್ಟಿಯಾಗಿ ಗಾನಪದ್ಯಗಳನ್ನು ಪಠಿಸಿದರು.

೨. ವೀಣಾ, ವೇಣುಗಳ ಧ್ವನಿಯಿಂದ ಮಿಶ್ರವಾಗಿಯೂ ಮಧುರವಾಗಿಯೂ ತಾಲ-ವಾದ್ಯಗಳಿಗೆ ಸರಿಹೋಗುವುದಾಗಿಯೂ ಮತ್ತು ಎಲ್ಲ ಶ್ರುತಿಗಳಿಂದ ಸುಶ್ರಾವ್ಯವಾಗಿಯೂ ಇರುವಂತೆ ಮಧುರಸ್ವರದಿಂದ ಕೂಡಿ ವಂದಿ-ಮಾಗಧರು ಗಾನಮಾಡಿದರು.

೩. ಶ್ರಾವ್ಯವಾದ ಕಂಠವುಳ್ಳ ಗಾಯಕರು ವಿಸ್ಪಷ್ಟವಾದ ಆರೋಹಣಾವರೋಹಣಕ್ರಮ-ಗ್ರಾಮಗಳಿಂದ ಕೂಡಿದ ಮನೋಹರವಾದ ಗೇಯವನ್ನು ತಾರ ಮಂದ್ರಗಳೆಂಬ ಸ್ವರಗಳಿಂದಲೂ ಲಯಕ್ರಮದಿಂದಲೂ ಗಾನಮಾಡಿದರು.

೪. ಮತ್ತು ಸೂತ-ಮಾಗಧರು ನಿದ್ರೆಮಾಡುತ್ತಲಿದ್ದ ಆ ಮಹಾತ್ಮನಾದ ಹೈಹಯೇಶ್ವರನನ್ನು ಎಬ್ಬಿಸುವುದಕ್ಕೋಸ್ಕರ ಅನೇಕ ವಿಧವಾದ ಅರ್ಥಗರ್ಭಿತವಾದ ವಾಕ್ಯಗಳನ್ನು ಮೆಲ್ಲಗೆ ನುಡಿದರು.

ಪಶ್ಯಾಯಮಸ್ತಮಭ್ಯೇತಿ ರಾಜೇಂದ್ರೇಂದುಃ ಪರಾಜಿತಃ ।
ವಿವರ್ಧಮಾನಯಾ ಸೂನಂ ತವ ವಕ್ತ್ರಾಂಬುಜಶ್ರಿಯಾ ॥ ೫ ॥

ದ್ರಷ್ಟುಂ ತ್ವದಾನನಾಂಭೋಜಂ ಸಮುತ್ಸುಕ ಇವಾಧುನಾ ।
ತಮಾಂಸಿ ಭಿಂದನ್ನಾದಿತ್ಯಃ ಸಂಪ್ರಾಪ್ತೋ ಹ್ಯುದಯಂ ವಿಭೋ ॥ ೬ ॥

ರಾಜನ್ನಖಿಲಶೀತಾಂಶುವಂಶಮೌಲಿಶಿಖಾಮಣೇ ।
ನಿದ್ರಯಾಲಂ ಮಹಾಬುದ್ಧೇ ಪ್ರತಿಬುಧ್ಯಸ್ವ ಸಾಂಪ್ರತಮ್ ॥ ೭ ॥

ಇತಿ ತೇಷಾಂ ವಚಃ ಶೃಣ್ವನ್ನಬುಧ್ಯತ ಮಹೀಪತಿಃ ।
ಕ್ಷೀರಾಬ್ಧೌ ಶೇಷಶಯನಾದ್ಯಥಾ ಪಂಕಜಲೋಚನಃ ॥ ೮ ॥

ವಿನಿದ್ರಾಕ್ಷಃ ಸಮುತ್ಥಾಯ ಕರ್ಮ ನೈತ್ಯಕಮಾದರಾತ್ ।
ಚಕಾರಾವಹಿತಃ ಸಮ್ಯಗ್ಗಮನಾದಿಕಮಶೇಷತಃ ॥ ೯ ॥

---

೫. ರಾಜೇಂದ್ರನೆ! ಪ್ರತಿದಿನವೂ ವೃದ್ಧಿಯನ್ನು ಹೊಂದುತ್ತಲಿರುವ ನಿನ್ನ ಮುಖವೆಂಬ ಕಮಲದ ಶೋಭೆಯಿಂದ ಪರಾಜಿತನಾಗಿ ಈ ಚಂದ್ರನು ನಿಜವಾಗಿ ಲಜ್ಜೆಯಿಂದ ಅಸ್ತವನ್ನು ಹೊಂದುತ್ತಿರುವನು, ನೋಡು.

೬. ಪ್ರಭುವೆ ! ಈ ಆದಿತ್ಯನು ಈಗ ನಿನ್ನ ಮುಖ ಕಮಲವನ್ನು ನೋಡಲು ಸಮುತ್ಸುಕನಾಗಿರುವನೋ ಎಂಬಂತೆ ಅಂಧಕಾರವನ್ನು ಭೇದಿಸುತ್ತ ಉದಯವನ್ನು ಹೊಂದುತ್ತಲಿರುವನು, ನೋಡು

೭. ಚಂದ್ರವಂಶದಲ್ಲಿ ಹುಟ್ಟಿರುವ ಸಮಸ್ತ ರಾಜೇಂದ್ರರಿಗೆ ಕಿರೀಟದ ಚೂಡಾಮಣಿಪ್ರಾಯನಾಗಿರುವ, ಮತ್ತು ಮಹಾಬುದ್ಧಿಶಾಲಿಯಾದ ರಾಜೇಂದ್ರನೆ! ನಿದ್ರಾಸುಖವನ್ನು ಅನುಭವಿಸಿದುದು ಸಾಕು. ಈಗ ಪ್ರಬೋಧವನ್ನು ಹೊಂದು.

೮. ಈ ರೀತಿಯಾದ ವಂದಿಮಾಗಧರ ಸ್ತುತಿ ವಚನಗಳನ್ನು ಕೇಳಿ ಹೈಹಯೇಶ್ವರನು ಶೇಷಶಯನವನ್ನು ಬಿಟ್ಟು ಪುಂಡರೀಕಾಕ್ಷನಾದ ವಿಷ್ಣುವು ಪ್ರಬೋಧವನ್ನು ಹೊಂದುವಂತೆ ಎಚ್ಚರವನ್ನು ಹೊಂದಿದನು.

೯. ಅನಂತರ ರಾಜನು ನಿದ್ದೆಯನ್ನು ತ್ಯಜಿಸಿದ ನೇತ್ರವುಳ್ಳವನಾಗಿ ಮೇಲಕ್ಕೆ ಎದ್ದು ಸರಿಯಾದ ಗಮನವನ್ನಿಟ್ಟು ಜಯಾದಿಸಾಧನವಾದ ತನ್ನ ನಿತ್ಯಕರ್ಮವನ್ನು ಸಂಪೂರ್ಣವಾಗಿ ಆದರದಿಂದ ಆಚರಿಸಿದನು.

ದೇವತಾಮಭಿವಂದ್ಯೇಷ್ಟಾಂ ಗಾಂ ದಿವ್ಯಸ್ರಗ್ಗಂಧಭೂಷಣಃ ।
ಕೃತ್ವಾ ದೂರ್ವಾಂಜನಾದರ್ಶಮಂಗಲ್ಯಾಲಂಬನಾನಿ ಚ ॥ ೧೦ ॥

ದತ್ವಾ ದಾನಾನಿ ಚಾರ್ಥಿಭ್ಯೋ ನತ್ವಾ ಗೋಬ್ರಾಹ್ಮಣಾನಪಿ ।
ನಿಷ್ಕ್ರಮ್ಯ ಚ ಪುರಾತ್ತಸ್ಮಾದುಪತಸ್ಥೇ ಚ ಭಾಸ್ಕರಮ್ ॥ ೧೧ ॥

ತಾವದಭ್ಯಾಯಯುಃ ಸರ್ವೇ ಮಂತ್ರಿಸಾಮಂತನಾಯಕಾಃ ।
ರಚಿತಾಂಜಲಯೋ ರಾಜನ್ನೇಮುಶ್ಚ ನೃಪಸತ್ತಮಮ್ ॥ ೧೨ ॥

ತತಃ ಸ ತೈಃ ಪರಿವೃತಃ ಸಮುಪೇತ್ಯ ತಪೋನಿಧಿಮ್ ।
ನನಾಮ ಪಾದಯೋಸ್ತಸ್ಯ ಕಿರೀಟೇನಾರ್ಕವರ್ಚಸಾ ॥ ೧೩ ॥

ಆಶೀರ್ಭಿರಭಿನಂದ್ಯಾಥ ರಾಜಾನಂ ಮುನಿಪುಂಗವಃ ।
ಪ್ರಶ್ರಯಾವನತಂ ಸಾಮ್ನಾ ತಮುವಾಚಾಸ್ಯತಾಮಿತಿ ॥ ೧೪ ॥

---

೧೦. ತರುವಾಯ ತನ್ನ ಇಷ್ಟ ದೇವತೆಯನ್ನೂ ಗೋಮಾತೆಯನ್ನೂ ನಮಸ್ಕರಿಸಿ ದಿವ್ಯವಾದ ಪುಷ್ಪಮಾಲೆ-ಗಂಧ-ಆಭರಣಗಳನ್ನು ಧರಿಸಿಕೊಂಡು ದೂರ್ವಾ, ಅಂಜನ, ಆದರ್ಶ ಮುಂತಾದ ಮಂಗಲದ್ರವ್ಯಗಳ ದರ್ಶನ ಸ್ಪರ್ಶನಾದಿಗಳನ್ನು ಮಂಗಲಾರ್ಥವಾಗಿ ಆಚರಿಸಿದನು.

೧೧. ಮತ್ತು ಯಾಚಕರಿಗೆ ವಿವಿಧವಾದ ದಾನಗಳನ್ನು ಕೊಟ್ಟು ಗೋವು ಮತ್ತು ಬ್ರಾಹ್ಮಣರನ್ನು ನಮಸ್ಕರಿಸಿ ಆ ಪಟ್ಟಣದಿಂದ ಹೊರಕ್ಕೆ ಹೊರಟು ಸೂರ್ಯ ದೇವನನ್ನು ಸ್ತುತಿಮಾಡಿದನು.

೧೨. ರಾಜನೆ! ಅಷ್ಟರಲ್ಲಿ ಸಮಸ್ತ ಮಂತ್ರಿ-ಸಾಮಂತ-ನಾಯಕ ಮುಂತಾದವರೆಲ್ಲರೂ ರಾಜನ ಸನ್ನಿಧಿಗೆ ಬಂದು ಅಂಜಲಿ ಬದ್ಧರಾಗಿ ರಾಜಶ್ರೇಷ್ಠನಾದ ಸ್ವಾಮಿಯನ್ನು ನಮಸ್ಕಾರಮಾಡಿದರು.

೧೩. ಅನಂತರದಲ್ಲಿ ಆ ರಾಜನು ಮಂತ್ರಿ-ಸಾಮಂತ ಮೊದಲಾದವರ ಸಂಗಡ ತಪಸ್ವಿಯ ಸಮೀಪಕ್ಕೆ ಬಂದು ಸೂರ್ಯನಂತೆ ತೇಜಸ್ಸಿನಿಂದ ಥಳಥಳಿಸುವ ಕಿರೀಟ ಸಹಿತವಾಗಿ ಶಿರವನ್ನು ಮುನಿಯ ಪಾದಗಳಲ್ಲಿಟ್ಟು ನಮಸ್ಕರಿಸಿದನು.

೧೪. ಆಗ ಮುನಿಶ್ರೇಷ್ಠನಾದ ಆ ತಪಸ್ವಿಯು ಆಶೀರ್ವಾದಗಳಿಂದ ಅಭಿನಂದಿಸಿ ವಿನಯದಿಂದ ನಮ್ರನಾಗಿರುವ ಆ ರಾಜನನ್ನು ಕುರಿತು ಶಾಂತವಾದ ವಚನದಿಂದ ಕುಳಿತುಕೊಳ್ಳುವಂತೆ ಹೇಳಿದನು.

ತಮಾಸೀನಂ ನರಪತಿಂ ಮಹರ್ಷಿಃ ಪ್ರೀತಮಾನಸಃ ।
ಉವಾಚ ರಜನೀ ವ್ಯುಷ್ಟಾ ಸುಖೇನ ತವ ಕಿಂ ನೃಪ || ೧೫ ||

ಅಸ್ಮಾಕಮೇವ ರಾಜೇಂದ್ರ ವನೇ ವನ್ಯೇನ ಜೀವತಾಮ್ ।
ಶಕ್ಯಂ ಮೃಗಸಧರ್ಮಾಣಾಂ ಯೇನ ಕೇನಾಪಿ ವರ್ತಿತುಮ್ || ೧೬ ||

ಅರಣ್ಯೇ ನಾಗರಾಣಾಂ ತು ಸ್ಥಿತಿರತ್ಯಂತದುಸ್ಸಹಾ ।
ಅನಭ್ಯಸ್ತಂ ಹಿ ರಾಜೇಂದ್ರ ನನು ಸರ್ವಂ ಹಿ ದುಷ್ಕರಮ್ || ೧೭ ||

ವನವಾಸಪರಿಕ್ಲೇಶಂ ಭವಾನ್ ಯತ್ಸಾನುಗೋಽಸಕೃತ್ ।
ಅಪ್ತಸ್ತು ಭವತೋ ನೂನಂ ಸಾ ಗೌರವಸಮುನ್ನತಿಃ || ೧೮ ||

ಇತ್ಯುಕ್ತಸ್ತೇನ ಮುನಿನಾ ಸ ರಾಜಾ ಪ್ರೀತಿಪೂರ್ವಕಮ್ ।
ಪ್ರಹಸನ್ನಿವ ತಂ ಭೂಯೋ ವಚನಂ ಪ್ರತ್ಯಭಾಷತ || ೧೯ ||

---

೧೫. ಆ ರಾಜನು ಕುಳಿತುಕೊಂಡನಂತರ ಮಹರ್ಷಿಯು ತೃಪ್ತಿಗೊಂಡಿರುವ ಮಾನಸವುಳ್ಳವನಾಗಿ ರಾಜನೆ, ರಾತ್ರಿಯು ನಿನಗೆ ಸುಖಕರವಾಗಿ ಕಳೆದು ಸುಪ್ರಭಾತ ವಾಯಿತೆ? ಎಂದು ಪ್ರಶ್ನಿಸಿದನು.

೧೬. ರಾಜೇಂದ್ರನೆ! ಅರಣ್ಯದಲ್ಲಿ ವನ್ಯಮೂಲಫಲಾದಿಗಳಿಂದ ಜೀವಿಸುತ್ತಿರುವ, ವನ್ಯ ಪ್ರಾಣಿಗಳಿಗೆ ಸಮಾನರಾದ ನಮಗೆ ಮಾತ್ರ ಯಾವುದರಿಂದಲಾದರೂ ಜೀವಿಸಿಕೊಂಡಿರಲು ಶಕ್ಯವಾಗುವುದು.

೧೭. ನಗರದಲ್ಲಿ ವಾಸಿಸುವ ಜನರು ಅರಣ್ಯದಲ್ಲಿ ಬಂದಿರುವುದು ಸಹಿಸಲಾಗದಷ್ಟು ದುಃಖಕರವಾಗುವುದು. ರಾಜೇಂದ್ರನೆ! ಅಭ್ಯಾಸವಿಲ್ಲದಿರುವ ಸರ್ವದಶೆಯೂ ಕೂಡ ಬಹಳ ಕಷ್ಟಸಾಧ್ಯವಾದುದೇ ಸರಿ.

೧೮. ನೀನು ಪರಿವಾರ ಸಮೇತನಾಗಿ ಅನೇಕಾವರ್ತಿ ವನವಾಸದ ಪರಿಕ್ಲೇಶವನ್ನು ಅನುಭವಿಸಿರುವುದು ಅಸಾಧ್ಯವಾದ ಕಾರ್ಯವನ್ನು ಸಾಧಿಸಿದಂತೆ ನಿನಗೆ ನಿಜವಾಗಿ ಅದೊಂದು ಗೌರವದ ಮಹತ್ವವೆಂದೆನಿಸುವುದು.

೧೯. ಈ ರೀತಿಯಾಗಿ ಮಹರ್ಷಿಯಿಂದ ಪ್ರೀತಿ ಪೂರ್ವಕವಾಗಿ ಹೇಳಲ್ಪಟ್ಟ ಆ ರಾಜನು ನಸುನಗುತ್ತ ಮುನಿಯನ್ನು ಕುರಿತು ಮತ್ತೆ ಪ್ರತಿವಚನವನ್ನು ಆಡಿದನು.

ಬ್ರಹ್ಮನ್ ಕಿಮನಯಾ ಹ್ಯುಕ್ತ್ಯಾ ದೃಷ್ಟಸ್ತೇ ಯಾದೃಶೋ ಮಹಾನ್ ।
ಅಸ್ಮಾಭಿರ್ಮಹಿಮಾ ಯೇನ ವಿಸ್ಮಿತಂ ಸಕಲಂ ಜಗತ್ ॥ ೨೦ ॥

ಭವತ್ಪ್ರಭಾವಸಂಜಾತವಿಭವಾಹತಚೇತಸಃ ।
ಇತೋ ನ ಗಂತುಮಿಚ್ಛಂತಿ ಸೈನಿಕಾ ಮೇ ಮಹಾಮುನೇ ॥ ೨೧ ॥

ತ್ವಾದೃಶಾನಾಂ ಜಗಂತೀಹ ಪ್ರಭಾವೈಸ್ತಪಸಾಂ ವಿಭೋ ।
ಧ್ರಿಯಂತೇ ಸರ್ವದಾ ನೂನಮಚಿಂತ್ಯಂ ಬ್ರಹ್ಮವರ್ಚಸಮ್ ॥ ೨೨ ॥

ನೈವ ಚಿತ್ರಂ ತವ ವಿಭೋ ಶಕ್ನೋತಿ ತಪಸಾ ಭವಾನ್ ।
ಧ್ರುವಂ ಕರ್ತುಂ ಹಿ ಲೋಕಾನಾಮವಸ್ಥಾತ್ರಿತಯಂ ಕ್ರಮಾತ್ ॥ ೨೩ ॥

ಸುಹೃಷ್ಟಾ ತೇ ತಪಸ್ಸಿದ್ಧಿರ್ಮಹತೀ ಲೋಕಪೂಜಿತಾ ।
ಗಮಿಷ್ಯಾಮಿ ಪುರೀಂ ಬ್ರಹ್ಮನ್ನನುಜಾನಾತು ಮಾಂ ಭವಾನ್ ॥ ೨೪ ॥

---

೨೦. ಬ್ರಹ್ಮರ್ಷಿಯೆ! ಇಂತಹ ವಚನವನ್ನು ಏಕೆ ಆಡುತ್ತೀ, ನಮ್ಮೆಲ್ಲರಿಂದ ಇಲ್ಲಿ ಯಾವ ವಿಧವಾದ ನಿನ್ನ ಮಹಿಮೆಯು ನೋಡಲ್ಪಟ್ಟಿತೋ, ಅದನ್ನು ಕಂಡರೆ ಸಕಲ ಜಗತ್ತೇ ವಿಸ್ಮಯ ಗೊಳ್ಳುವುದು.

೨೧. ಮಹಾಮುನಿಯೆ! ನಿನ್ನ ಮಹಿಮೆಯಿಂದ ಲಭಿಸುತ್ತಿರುವ ಸಂಪತ್ಸಮೃದ್ಧಿಯಿಂದ ಮೋಹಗೊಂಡ ಬುದ್ಧಿಯುಳ್ಳ ನನ್ನ ಸೈನಿಕರು ಇದನ್ನೆಲ್ಲ ಬಿಟ್ಟು ಇಲ್ಲಿಂದ ನಗರಕ್ಕೆ ಹೋಗಲು ಇಷ್ಟವೇ ಇಲ್ಲದೇ ಇರುವರು.

೨೨. ವಿಭುವೇ! ನಿನ್ನಂತಹ ತಪಸ್ವಿಗಳ ತಪಸ್ಸುಗಳ ಮಹಿಮೆಯಿಂದ ಸಕಲ ಜಗತ್ತು ನಿಜವಾಗಿ ಯಾವಾಗಲೂ ಸ್ಥಿತಿಯನ್ನು ಹೊಂದಿದೆ. ಬ್ರಹ್ಮರ್ಷಿಗಳ ವರ್ಚಸ್ಸಿನ ವೈಭವವನ್ನು ಯೋಚಿಸಿ ತಿಳಿಯಲು ಸಾಧ್ಯವಿಲ್ಲ.

೨೩. ವಿಭುವಾದ ಮುನಿಯೆ! ಇದೇನೂ ನಿನಗೆ ಆಶ್ಚರ್ಯಕರವಲ್ಲ. ನೀನು ತಪಃಶಕ್ತಿಯಿಂದ ಸಮಸ್ತ ಲೋಕಗಳ ಸೃಷ್ಟಿ-ಸ್ಥಿತಿ-ಲಯಗಳೆಂಬ ಅವಸ್ಥಾತ್ರಯವನ್ನು ಕ್ರಮವಾಗಿ ನಿರ್ವಹಿಸಲು ಶಕ್ತನಾಗಿದ್ದೀ, ಇದು ನಿಜ.

೨೪. ಲೋಕಗಳಿಗೆಲ್ಲ ವಂದ್ಯವಾದ ನಿನ್ನ ತಪಸ್ಸಿದ್ಧಿಯು ನಮ್ಮಿಂದ ಚನ್ನಾಗಿ ನೋಡಲ್ಪಟ್ಟಿತು. ದ್ವಿಜನೆ! ಇನ್ನು ನಾನು ನಗರಕ್ಕೆ ಹೋಗುತ್ತೇನೆ. ಅದಕ್ಕೆ ನನಗೆ ಅನುಜ್ಞೆಯನ್ನು ಕೊಡು.

**ವಸಿಷ್ಠ ಉವಾಚ :—**

**ಇತ್ಯುಕ್ತಸ್ತೇನ ಸ ಮುನಿಃ ಕಾರ್ತವೀರ್ಯೇಣ ಸಾದರಮ್ ।**
**ಸಂಭಾವಯಿತ್ವಾ ನಿತರಾಂ ತಥೇತಿ ಪ್ರತ್ಯಭಾಷತ ॥ ೨೫ ॥**

**ಮುನಿನಾ ಸಮನುಜ್ಞಾತೋ ವಿನಿಷ್ಕ್ರಮ್ಯ ತದಾಶ್ರಮಾತ್ ।**
**ಸೈನ್ಯೈಃ ಪರಿವೃತಃ ಸರ್ವೈಃ ಸಂಪ್ರತಸ್ಥೇ ಪುರೀಂ ಪ್ರತಿ ॥ ೨೬ ॥**

**ಸ ಗಚ್ಛಂಶ್ಚಿಂತಯಾಮಾಸ ಮನಸಾ ಪಥಿ ಪಾರ್ಥಿವಃ ।**
**ಅಹೋಽಸ್ಯ ತಪಸಃ ಸಿದ್ಧಿರ್ಲೋಕವಿಸ್ಮಯದಾಯಿನೀ ॥ ೨೭ ॥**

**ಯಯಾ ಲಬ್ಧೇದೃಶೀ ಧೇನುಃ ಸರ್ವಕಾಮದುಹಾಂ ವರಾ ।**
**ಕಿಂ ಮೇ ಸಕಲರಾಜ್ಯೇನ ಯೋಗರ್ಧ್ಯಾ ವಾಪ್ಯನಲ್ಪಯಾ ॥ ೨೮ ॥**

**ಗೋರತ್ನಭೂತಾ ಯದಿಯಂ ಧೇನುರ್ಮುನಿವರೇ ಸ್ಥಿತಾ ।**
**ಅನಯೋತ್ಪಾದಿತಾ ನೂನಂ ಸಂಪತ್ ಸ್ವರ್ಗಸದಾಮಪಿ ॥ ೨೯ ॥**

---

೨೫. ವಸಿಷ್ಠಮುನಿಯು ಹೇಳಿದನು :—ಆ ಕಾರ್ತವೀರ್ಯರಾಜನಿಂದ ಈ ರೀತಿಯಾಗಿ ವಿಜ್ಞಾಪಿಸಲ್ಪಟ್ಟಮುನಿಯು ಆದರದಿಂದ ರಾಜನನ್ನು ಗೌರವಿಸಿ ಹಾಗೇ ಆಗಲೆಂದು ಹೇಳಿ ಅವನ ಇಷ್ಟಾನುಸಾರವಾಗಿ ನಗರಗಮನಕ್ಕೆ ಅನುಜ್ಞೆಯನ್ನು ಇತ್ತನು.

೨೬. ಹೀಗೆ ಮಹರ್ಷಿಯಿಂದ ಸಮ್ಮತಿಸಲ್ಪಟ್ಟವನಾಗಿ ರಾಜನು ಆ ಮುನಿಯ ಆಶ್ರಮದಿಂದ ಹೊರಟು ಸಕಲ ಸೈನ್ಯಗಳಿಂದ ಸುತ್ತುವರಿಯಲ್ಪಟ್ಟವನಾಗಿ ತನ್ನ ನಗರವನ್ನು ಕುರಿತು ಹೊರಟನು.

೨೭. ಆ ರಾಜನು ಮಾರ್ಗದಲ್ಲಿ ಪ್ರಯಾಣ ಮಾಡುತ್ತಿರುವ ಸಮಯದಲ್ಲಿ ಮನಸ್ಸಿನಲ್ಲಿ ಈ ರೀತಿಯಾಗಿ ಚಿಂತಿಸಿದನು :—ಪರಮಾಶ್ಚರ್ಯವು ! ಈ ಮುನಿಯ ತಪಸ್ಸಿದ್ಧಿಯು ಪ್ರಪಂಚಕ್ಕೆ ವಿಸ್ಮಯವನ್ನು ಉಂಟುಮಾಡುವುದಾಗಿದೆ.

೨೮. ಯಾವ ತಪಸ್ಸಿದ್ಧಿಯು ಸರ್ವ ಇಷ್ಟಗಳನ್ನು ಕೊಡುವುವುಗಳಲ್ಲಿ ಉತ್ತಮವಾದ ಕಾಮಧೇನುವನ್ನು ಮುನಿಗೆ ಒದಗಿಸಿಕೊಟ್ಟಿರುವುದೋ ಅಂತಹ ತಪಸ್ಸಿದ್ಧಿಯು ಮಹತ್ತ್ವವುಳ್ಳದ್ದಾಗಿದೆ. ಇದರ ಮುಂದೆ ನನ್ನ ಅತಿಶಯವಾದ ಯೋಗಾಭ್ಯಾಸ ಸಮೃದ್ಧಿಯಿಂದಲೂ ಮಹತ್ತರವಾದ ರಾಜ್ಯದಿಂದಲೂ ನನಗೆ ಏನು ಆದೀತು ?

೨೯. ಮಹರ್ಷಿಶ್ರೇಷ್ಠನಾದ ಈ ತಪಸ್ವಿಯ ಅಧೀನದಲ್ಲಿರುವ ಧೇನುವು ನಿಜವಾಗಿ ಗೋವುಗಳಲ್ಲೆಲ್ಲಾ ರತ್ನಪ್ರಾಯವಾಗಿರುವುದು. ದೇವತೆಗಳ ಭೋಗ್ಯವಾದ ಸ್ವರ್ಗಸಂಪತ್ತು ಈ ಧೇನುವಿನಿಂದಲೇ ನಿಜವಾಗಿ ಸೃಷ್ಟಿಸಲ್ಪಟ್ಟಿರುವುದು.

ಋದ್ಧಮೈಂದ್ರಮಪಿ ವ್ಯಕ್ತಂ ಪದಂ ತ್ರೈಲೋಕ್ಯಪೂಜಿತಮ್ ।
ಅಸ್ಯಾ ಧೇನೋರಹಂ ಮನ್ಯೇ ಕಲಾಂ ನಾರ್ಹತಿ ಷೋಡಶೀಮ್॥ ೩೦ ॥

ಇತ್ಯೇವಂ ಚಿಂತಯಾನಂ ತಂ ಪಶ್ಚಾದಭ್ಯೇತ್ಯ ಪಾರ್ಥಿವಮ್ ।
ಚಂದ್ರಗುಪ್ತೋಽಬ್ರವೀನ್ಮಂತ್ರೀ ಕೃತಾಂಜಲಿಪುಟಸ್ತದಾ ॥ ೩೧ ॥

ಕಿಮರ್ಥಂ ರಾಜಶಾರ್ದೂಲ ಪುರೀಂ ಪ್ರತಿಗಮಿಷ್ಯಸಿ ।
ರಕ್ಷಿತೇನ ಚ ರಾಜ್ಯೇನ ಪುರ್ಯಾ ವಾ ಕಿಂ ಫಲಂ ತವ ॥ ೩೨ ॥

ಗೋರತ್ನಭೂತಾ ನೃಪತೇರ್ಯಾವದ್ಧೇನುರ್ನ ಚಾಲಯೇ ।
ವರ್ತತೇ ನಾರ್ಥಮಪಿ ತೇ ರಾಜ್ಯಂ ಶೂನ್ಯಂ ತವ ಪ್ರಭೋ ॥ ೩೩ ॥

ಅನ್ಯಚ್ಚ ದೃಷ್ಟಮಾಶ್ಚರ್ಯಂ ಮಯಾ ರಾಜನ್ ಶೃಣುಷ್ವ ತತ್ ।
ಭವನಾನಿ ಮನೋಜ್ಞಾನಿ ಮನೋಜ್ಞಾಶ್ಚ ತಥಾ ಸ್ತ್ರಿಯಃ ॥ ೩೪ ॥

---

೩೦. ಸರ್ವ ಲೋಕಗಳಲ್ಲಿ ಸತ್ಕರಿಸಲ್ಪಟ್ಟ, ಸಮೃದ್ಧವಾದ ಇಂದ್ರನ ಭೋಗ ಸ್ಥಾನವು ಕೂಡ ಸ್ಪಷ್ಟವಾಗಿ ಈ ರತ್ನಪ್ರಾಯವಾದ ಧೇನುವಿನ ಮಹಿಮೆಯ ಷೋಡಶಾಂಶಕ್ಕೆ ಕೂಡ ಸಮಾನವಾಗುವುದಿಲ್ಲ.

೩೧. ಈ ರೀತಿಯಾಗಿ ಚಿಂತಿಸುತ್ತಿದ್ದ ಆ ರಾಜನ ಹಿಂಭಾಗದಿಂದ ಚಂದ್ರಗುಪ್ತನೆಂಬ ಮಂತ್ರಿಯು ಸಮೀಪಕ್ಕೆ ಬಂದು ಆಗ ವಿನಯದಿಂದ ಅಂಜಲಿಯನ್ನು ಕಟ್ಟಿಕೊಂಡವನಾಗಿ ರಾಜನನ್ನು ಕುರಿತು ಈ ವಚನವನ್ನು ಆಡಿದನು.

೩೨. ರಾಜಸಿಹ್ಮನೇ ! ಇಲ್ಲಿಂದ ಈಗ ನಗರಕ್ಕೆ ಏಕೆ ಪ್ರಯಾಣ ಮಾಡುತ್ತಲಿದ್ದೀ ? ನೀನು ನಿನ್ನ ರಾಜ್ಯವನ್ನೂ ನಗರವನ್ನೂ ರಕ್ಷಣಮಾಡಿದುದರಿಂದ ಯಾವ ಫಲವು ತಾನೆ ಲಭಿಸುವುದು ?

೩೩. ಪ್ರಭುವೆ ! ಗೋವುಗಳಲ್ಲೆಲ್ಲ ರತ್ನಪ್ರಾಯವಾದ ಈ ಕಾಮಧೇನುವು ಎದುವರೆಗೆ ನಿನ್ನ ಗೃಹದಲ್ಲಿ ಬಂದಿರುವುದಿಲ್ಲವೊ ಅದುವರೆಗೆ ಸರ್ವಸಮೃದ್ಧಿಯಿಂದ ಕೂಡಿದ್ದರೂ ನಿನ್ನ ರಾಜ್ಯವೆಲ್ಲವೂ ಶೂನ್ಯಪ್ರಾಯವಾದುದು.

೩೪. ರಾಜನೇ ! ಮತ್ತೊಂದು ಆಶ್ಚರ್ಯಕರವಾದ ವಿಷಯವು ನನ್ನಿಂದ ನೋಡಲ್ಪಟ್ಟಿತು. ಅದನ್ನು ಹೇಳುವೆನು, ಕೇಳು, ನಾವು ಅಲ್ಲಿ ಸುಂದರವಾದ ಅನೇಕ ಭವನಗಳನ್ನೂ ಸುಂದರಿಯರಾದ ಅನೇಕ ಸ್ತ್ರೀಯರನ್ನೂ ನೋಡಿದೆವಲ್ಲವೆ !

ಪ್ರಾಸಾದಾ ವಿವಿಧಾಕಾರಾ ಧನಂ ಚಾದೃಷ್ಟಸಂಕ್ಷಯಮ್ ।
ಧೇನೌ ತಸ್ಯಾಂ ಕ್ಷಣೇನೈವ ವಿಲೀನಂ ಪಶ್ಯತೋ ಮಮ ॥ ೩೫ ॥

ತತ್ತಪೋವನಮೇವಾಸೀದಿದಾನೀಂ ರಾಜಸತ್ತಮ ।
ಏವಂಪ್ರಭಾವಾ ಸಾ ಯಸ್ಯ ತಸ್ಯ ಕಿಂ ದುರ್ಲಭಂ ಭವೇತ್ ॥ ೩೬ ॥

ತಸ್ಮಾದ್ರತ್ನಾಹರಸತ್ತ್ವೇನ ಸ್ವೀಕರ್ತವ್ಯಾ ಹಿ ಗೌಸ್ತ್ವಯಾ ।
ಯದಿ ತೇಽನುಮತಂ ಕೃತ್ಯಮಾಖ್ಯೇಯಮನುಜೀವಿಭಿಃ ॥ ೩೭ ॥

ರಾಜೋವಾಚ :—

ಏವಮೇವಾಹಮಪ್ಯೇನಾಂ ನ ಜಾನಾಮಿ ಮಾಹಾತ್ಮ್ಯಸಾಂಪ್ರತಮ್ ।
ಬ್ರಹ್ಮಸ್ವಂ ನಾಪಹರ್ತವ್ಯಮಿತಿ ಮೇ ಶಂಕತೇ ಮನಃ ॥ ೩೮ ॥

ಏವಂ ಬ್ರುವಂತಂ ರಾಜಾನಮಿದಮಾಹ ಪುರೋಹಿತಃ ।
ಗರ್ಗೋ ಮತಿಮತಾಂ ಶ್ರೇಷ್ಠೋ ಗರ್ಹಯನ್ನಿವ ಭೂಪತೇ ॥ ೩೯ ॥

---

೩೫. ಹಾಗು ನಾನಾ ವಿಧವಾದ ಆಕಾರವುಳ್ಳ ಪ್ರಾಸಾದಗಳನ್ನೂ ವ್ಯಯವೇ ಇಲ್ಲದ ಧನರಾಶಿಯನ್ನೂ ಕಂಡಿರುವೆವು. ಅದೆಲ್ಲವೂ ನಾನು ನೋಡುತ್ತಿರುವ ಹಾಗೆಯೇ ಕ್ಷಣಮಾತ್ರದಲ್ಲಿ ಆ ಧೇನುವಿನಲ್ಲಿ ಲಯ ಹೊಂದಿತು.

೩೬. ರಾಜಶ್ರೇಷ್ಠನೆ! ಆ ಸ್ಥಳವೆಲ್ಲವೂ ಈಗ ಕೇವಲ ತಪೋವನವೇ ಆಗಿರುವುದು. ಇಂತಹ ಪ್ರಭಾವವುಳ್ಳ ಧೇನುವನ್ನು ಯಾರು ವಶಪಡಿಸಿಕೊಂಡಿರುವರೋ ಅವರಿಗೆ ಯಾವುದು ತಾನೇ ದುರ್ಲಭವಾಗುವುದು?

೩೭. ಆದುದರಿಂದ ಸೇವಕರು ಹೇಳಿದ ಹಿತವನ್ನು ಬೋಧಿಸುವ ವಚನವು ಸ್ವಾಮಿಗೆ ಅನುಮತವಾದರೆ ರತ್ನಗಳನ್ನು ಕೂಡಿಹಾಕುವ ಸತ್ತ್ವವುಳ್ಳ ನಿನ್ನಿಂದ ಆ ಗೋರತ್ನವು ಸ್ವೀಕರಿಸಲ್ಪಡಬೇಕು.

೩೮. ಈ ವಚನವನ್ನು ಕೇಳಿ ರಾಜನು ಇಂತೆಂದನು :—ನೀನು ಹೇಳಿರುವಂತೆ ಈ ಗೋವಿನ ಮಹಿಮೆಯನ್ನು ನಾನು ತಿಳಿದಿಲ್ಲವೆಂಬುದು ಯುಕ್ತವಲ್ಲ, ನನಗೂ ತಿಳಿದಿರುವುದು. ಆದರೆ ಬ್ರಹ್ಮಸ್ವವನ್ನು ಅಪಹರಿಸಬಾರದೆಂದು ನನ್ನ ಮನಸ್ಸು ಇದರ ಸಂಗ್ರಹದಲ್ಲಿ ಶಂಕೆ ಪಡುತ್ತಿರುವುದು.

೩೯. ಭೂಪತಿಯೆ! ರಾಜನು ಈ ವಚನವನ್ನು ಆಡುತ್ತಿರುವ ಸಂದರ್ಭದಲ್ಲಿ ಬುದ್ಧಿಶಾಲಿಗಳಲ್ಲಿ ಅಗ್ರಗಣ್ಯನಾದ ಗರ್ಗನೆಂಬ ನಾಮಾಂಕಿತನಾದ ಪುರೋಹಿತನು ರಾಜನನ್ನು ಕುರಿತು ಆಕ್ಷೇಪಿಸುತ್ತಿರುವನಂತೆ ಮಾತನಾಡಿದನು.

ಬ್ರಹ್ಮಸ್ವಂ ನಾಪಹರ್ತವ್ಯಮಾಪದ್ಯಪಿ ಕಥಂ ಚನ ।
ಬ್ರಹ್ಮಸ್ವಸದೃಶಂ ಲೋಕೇ ದುರ್ಜರಂ ನೇಹ ವಿದ್ಯತೇ ॥ ೪೦ ॥

ವಿಷಂ ಹಂತ್ಯುಪಯೋಕ್ತಾರಂ ಲಕ್ಷ್ಯಭೂತಂ ತು ಹೈಹಯ ।
ಕುಲಂ ಸಮೂಲಂ ದಹತಿ ಬ್ರಹ್ಮಸ್ವಾರಣಿಪಾವಕಃ ॥ ೪೧ ॥

ಅನಿವಾರ್ಯಮಿದಂ ಲೋಕೇ ಬ್ರಹ್ಮಸ್ವಂ ದುರ್ಜರಂ ವಿಷಮ್ ।
ಪುತ್ರಪೌತ್ರಾಂತಫಲದಂ ವಿಪಾಕಕಟು ಪಾರ್ಥಿವ ॥ ೪೨ ॥

ಐಶ್ವರ್ಯಮೂಢಂ ಹಿ ಮನಃ ಪ್ರಭೂಣಾಮುಸದಾತ್ಮನಾಮ್ ।
ಕಿಂ ನಾಮಾಸನ್ನ ಕುರುತೇ ನೇತ್ರಾಸದ್ವಿಪ್ರಲೋಭಿತಮ್ ॥ ೪೩ ॥

ವೇದಾನ್ಯಸ್ತ್ವಾಮೃತೇ ಕೋಽನ್ಯಃ ವಿನಾ ದಾನಾನ್ನೃಪೋತ್ತಮ ।
ಆದಾನಂ ಚಿಂತಯಾನೋ ಹಿ ಬ್ರಾಹ್ಮಣೇಷ್ವಭಿವಾಂಛತಿ ॥ ೪೪ ॥

---

೪೦. ರಾಜನೆ! ಎಂತಹ ತೀವ್ರವಾದ ಕಷ್ಟಗಳಲ್ಲಿ ಕೂಡ ಬ್ರಹ್ಮಸ್ವವನ್ನು ಅಪಹರಿಸಬಾರದು. ಈ ಲೋಕದಲ್ಲಿ ಬ್ರಹ್ಮಸ್ವಕ್ಕೆ ಸಮಾನವಾದ ಜೀರ್ಣಿಸಿಕೊಳ್ಳಲು ಅಸಾಧ್ಯವಾದ ವಸ್ತುವು ಬೇರೊಂದು ಇಲ್ಲ.

೪೧. ಹೈಹಯೇಶ್ವರನೇ! ವಿಷವು ಪಾನಮಾಡಿರುವ ಪ್ರಾಣಿಯನ್ನು ಮಾತ್ರ ಗುರಿಯಿಟ್ಟು ಸಂಹರಿಸುವುದು, ಬ್ರಹ್ಮಸ್ವವೆಂಬ ಅರಣಿಯಲ್ಲಿ ಹುಟ್ಟಿದ ಅಪಹಾರಾಗ್ನಿಯು ಸಮೂಲವಾಗಿ ಅಪಹಾರಿಯ ವಂಶವನ್ನು ದಹಿಸುವುದು.

೪೨. ಪಾರ್ಥಿವನೇ! ಬ್ರಹ್ಮಸ್ವವೆಂಬ ಎಂದಿಗೂ ಜೀರ್ಣವಾಗದಿರುವ ವಿಷವು ಲೋಕದಲ್ಲಿ ಪರಿಹರಿಸಲು ಅಶಕ್ಯವಾದುದು. ಆದ್ದರಿಂದ ಆ ವಿಷವು ಪುತ್ರಪೌತ್ರ ಪರ್ಯಂತವಾಗಿ ಕಟುಪರಿಣಾಮವುಳ್ಳ ಫಲವನ್ನು ಕೊಡುವುದು.

೪೩. ದುಷ್ಟವಾದ ಅಂತಃಕರಣವುಳ್ಳ ಪ್ರಭುಗಳ ಮನಸ್ಸು ಐಶ್ವರ್ಯಮದದಿಂದ ವಿವೇಕಶೂನ್ಯವಾಗುವುದು. ತರುವಾಯ ಮಂತ್ರಿಯಿಂದ ಅಸನ್ಮಾರ್ಗದಲ್ಲಿ ರುಚಿಯಿಂದ ಸೆಳೆಯಲ್ಪಟ್ಟದ್ದಾಗಿ ಯಾವ ಅಸತ್ಕಾರ್ಯದಿಂದಲೂ ಹಿಂಜರಿಯುವುದಿಲ್ಲ.

೪೪. ನೃಪೋತ್ತಮನೆ! ನಿನ್ನ ಹೊರತು ಮತ್ತಾವ ಕ್ಷತ್ರಿಯನು ಸ್ವಕರ್ತವ್ಯವಾದ ದಾನವನ್ನು ಹೊರತು ಪ್ರತಿ ಗ್ರಹವನ್ನು ಚಿಂತಿಸಿರುವನು. ಪ್ರತಿ ಗ್ರಹವನ್ನು ಕರ್ತವ್ಯವೆಂದು ಚಿಂತಿಸುವವನು ಬ್ರಾಹ್ಮಣನಾಗಿ ಜನಿಸಿ ಅದನ್ನು ಆಶಿಸುವನು.

ಈದೃಶಸ್ತ್ವಂ ಮಹಾಬಾಹೋ ಕರ್ಮ ಸಜ್ಜನನಿಂದಿತಮ್ ।
ಮಾ ಕೃಥಾಸ್ತದ್ಧಿ ಲೋಕೇಷು ಯಶೋಹಾನಿಕರಂ ತವ ॥ ೪೫ ॥

ವಂಶೇ ಮಹತಿ ಜಾತಸ್ತ್ವಂ ವದಾನ್ಯಾನಾಂ ಮಹೀಭುಜಾಮ್ ।
ಯಶಾಂಸಿ ಕರ್ಮಣಾನೇನ ಸಾಂಪ್ರತಂ ಮಾ ವ್ಯನೀನಶಃ ॥ ೪೬ ॥

ಅಹೋಽನುಜೀವಿನಃ ಕಿಂಚಿದ್ಭರ್ತಾರಂ ವ್ಯಸನಾರ್ಣವೇ ।
ತತ್ಪ್ರಸಾದಸಮುತ್ಪನ್ನಾ ಮಜ್ಜಯಂತ್ಯನಯೋನ್ಮುಖಾಃ ॥ ೪೭ ॥

ಶ್ರಿಯಾ ವಿಕುರ್ವನ್ ಪುರುಷಕೃತ್ಯಚಿಂತ್ಯೇ ವಿಚೇತನಃ ।
ತನ್ಮತಾನುಪ್ರವೃತ್ತಿಶ್ಚ ರಾಜಾ ಸದ್ಯೋ ವಿಷೀದತಿ ॥ ೪೮ ॥

ಅಜ್ಞಾತಸುನಯೋ ಮಂತ್ರೀ ರಾಜಾನಮನಯಾಂಬುಧೌ ।
ಆತ್ಮನಾ ಸಹ ದುರ್ಬುದ್ಧಿರ್ಲೋಹನೌರಿವ ಮಜ್ಜಯೇತ್ ॥ ೪೯ ॥

---

೪೫. ಮಹಾಬಾಹುಬಲಸಂಪನ್ನನಾದ ರಾಜನೆ! ಇಂತಹ ಕೀರ್ತಿವಂತನಾದ ನೀನು ಸಾಧುಗಳಿಂದ ನಿಂದಿಸಲ್ಪಟ್ಟ ಕರ್ಮವನ್ನು ಆಚರಿಸಬೇಡ ಅದು ನಿನಗೆ ಲೋಕಗಳಲ್ಲಿ ಯಶಸ್ಸನ್ನು ಅಳಿಸಿ ಅಪಕೀರ್ತಿಯನ್ನು ತರುವುದು.

೪೬. ಉದಾರವಾದ ಚಿತ್ತವುಳ್ಳ ಮಹಾರಾಜರ ದೊಡ್ಡ ವಂಶದಲ್ಲಿ ನೀನು ಜನಿಸಿರುತ್ತೀ, ಈಗ ಈ ಕೆಟ್ಟ ಕೆಲಸವನ್ನು ಆಚರಿಸಿ ಯಶಸ್ಸನ್ನು ಕಳೆದುಕೊಳ್ಳಬೇಡ.

೪೭. ಅನುಜೀವಿಗಳು ಸ್ವಾಮಿ ಪ್ರಸಾದದಿಂದ ಮದಿಸಿದ ಚಿತ್ತವುಳ್ಳವರಾಗಿ ಕುನೀತಿ ಮಾರ್ಗದಲ್ಲಿ ಉನ್ಮುಖರಾಗಿ ಹೋಗಿ ಸ್ವಾಮಿಯನ್ನು ವ್ಯಸನ ಸಮುದ್ರದಲ್ಲಿ ಎಳೆದು ಮುಳುಗಿಸುತ್ತಾರೆ.

೪೮. ಸಂಪತ್ತಿನಿಂದ ವಿಕಾರ ಹೊಂದಿದ ಮನುಷ್ಯನು ಪುರುಷನ ಕರ್ತವ್ಯ ವಿಷಯದ ಚಿಂತೆಯಲ್ಲಿ ವಿವೇಕಶೂನ್ಯನಾಗುವನು! ಅಂತಹವನ ಮತವನ್ನು ನಂಬಿ ಪ್ರವರ್ತಿಸಿದ ರಾಜನು ಕೂಡಲೆ ವಿಷಾದಕ್ಕೆ ಭಾಗಿಯಾಗುವನು.

೪೯. ಸಾಧುನ್ಯಾಯಗಳನ್ನು ತಿಳಿಯದಿರುವ ದುರ್ಬುದ್ಧಿಯುಳ್ಳ ದುಷ್ಟ ಮಂತ್ರಿಯು ಲೋಹಮಯವಾದ ದೋಣಿಯಂತೆ ತನ್ನೊಡನೆ ರಾಜನನ್ನು ಅನೀತಿ ಎಂಬ ಸಮುದ್ರದಲ್ಲಿ ಮುಳುಗಿಸಿ ಅನರ್ಥವನ್ನು ಕೊಡುವನು.

ತಸ್ಮಾತ್ತ್ವಂ ರಾಜಶಾರ್ದೂಲ ಮೂಢಸ್ಯ ನಯವರ್ತ್ಮನಿ ।
ಮತಮಸ್ಯ ಸುದುರ್ಬುದ್ಧೇರ್ನಾನುವರ್ತಿತುಮರ್ಹಸಿ ॥ ೫೦ ॥

ಏವಂ ಹಿ ವದತಸ್ತಸ್ಯ ಸ್ವಾಮಿಶ್ರೇಯಸ್ಕರಂ ವಚಃ ।
ಆಕ್ಷಿಪ್ಯ ಮಂತ್ರೀ ರಾಜಾನಮಿದಂ ಭೂಯೋ ಹ್ಯಭಾಷತ ॥ ೫೧ ॥

ಬ್ರಾಹ್ಮಣೋಽಯಂ ಸ್ವಜಾತೀಯಹಿತಮೇವ ಸಮೀಕ್ಷತೇ ।
ಮಹಾಂತಿ ರಾಜಕಾರ್ಯಾಣಿ ದ್ವಿಜೈರ್ವೇತ್ತುಂ ನ ಶಕ್ಯತೇ ॥ ೫೨ ॥

ರಾಜ್ಞೈವ ರಾಜಕಾರ್ಯಾಣಿ ವೇದ್ಯಾನಿ ಸ್ವಮನೀಷಯಾ ।
ವಿನಾ ವೈ ಭೋಜನಾದಾನೇ ಕಾರ್ಯಂ ವಿಪ್ರೋ ನ ವಿಂದತಿ ॥ ೫೩ ॥

ಬ್ರಾಹ್ಮಣೋ ನಾವಮಂತ್ಯವ್ಯೋ ವಂದನೀಯಶ್ಚ ನಿತ್ಯಶಃ ।
ಪ್ರತಿಸಂಗ್ರಾಹಣೀಯಶ್ಚ ನಾಧಿಕಂ ಸಾಧಿತಂ ಕ್ವಚಿತ್ ॥ ೫೪ ॥

---

೫೦. ರಾಜಸಿಹ್ಮನೇ! ಆದುದರಿಂದ ನೀನು ನಯಮಾರ್ಗದಲ್ಲಿ ಅವಿವೇಕಿಯಾದ ಮತ್ತು ದುರ್ಬುದ್ಧಿಯಾದ ಈ ಮಂತ್ರಿಯ ಮತವನ್ನು ಅಂಗೀಕರಿಸುವುದು ನ್ಯಾಯವಲ್ಲ.

೫೧. ಈ ರೀತಿಯಾಗಿ ಸ್ವಾಮಿಗೆ ಶ್ರೇಯಸ್ಕರವಾದ ವಚನವನ್ನು ಪುರೋಹಿತನು ಹೇಳುತ್ತಿರಲು ಮಂತ್ರಿಯು ಅದನ್ನು ಆಕ್ಷೇಪಿಸಿ ರಾಜನನ್ನು ಕುರಿತು ಮತ್ತೆ ಈ ಮಾತುಗಳನ್ನು ಆಡಿದನು.

೫೨. ರಾಜನೇ! ಬ್ರಾಹ್ಮಣಜಾತಿಯಲ್ಲಿ ಹುಟ್ಟಿದ ಪುರೋಹಿತನು ತನ್ನ ಜಾತಿಯವನ ಹಿತವನ್ನೇ ನೋಡುತ್ತಿರುವನು. ಮಹತ್ತ್ವವಾದ ರಾಜಕಾರ್ಯಗಳನ್ನು ಅರಿಯಲು ಬ್ರಾಹ್ಮಣರು ಶಕ್ತರಲ್ಲ.

೫೩. ಮಹತ್ತಾದ ರಾಜಕಾರ್ಯಗಳನ್ನು ರಾಜನೇ ತನ್ನ ಬುದ್ಧಿಯಿಂದ ಪರ್ಯಾಲೋಚಿಸಬೇಕು. ಭೋಜನ ಮತ್ತು ಪ್ರತಿಗ್ರಹಗಳನ್ನು ಬಿಟ್ಟು ಬ್ರಾಹ್ಮಣನು ಮತ್ತಾವುದನ್ನೂ ಅರಿಯಲಾರನು.

೫೪. ಯಾವಾಗಲೂ ಬ್ರಾಹ್ಮಣನನ್ನು ಅವಮಾನಪಡಿಸಬಾರದು, ಮತ್ತು ಯಾವಾಗಲೂ ಬ್ರಾಹ್ಮಣನನ್ನು ವಂದಿಸಬೇಕು, ಯಥೇಚ್ಛದಾನಗಳನ್ನು ಕೊಟ್ಟು ಪ್ರತಿಗ್ರಹವನ್ನು ಮಾಡಿಸಬೇಕು, ಇಷ್ಟು ಹೊರತು ಬ್ರಾಹ್ಮಣನಿಂದ ಇದಕ್ಕಿಂತಲೂ ಹೆಚ್ಚಾಗಿ ಸಾಧನೀಯವಾವುದೂ ಇಲ್ಲ.

ತಸ್ಮಾತ್ ಸ್ವೀಕೃತ್ಯ ತಾಂ ಧೇನುಂ ಪ್ರಯಾಹಿ ಸ್ವಪುರಂ ನೃಪ ।
ನೋಚೇದ್ರಾಜ್ಯಂ ಪರಿತ್ಯಜ್ಯ ಗಚ್ಛಸ್ವ ತಪಸೇ ವನಮ್ ॥ ೫೫ ॥

ಕ್ಷಮಾವತ್ತ್ವಂ ಬ್ರಾಹ್ಮಣಾನಾಂ ದಂಡಃ ಕ್ಷತ್ರಸ್ಯ ಪಾರ್ಥಿವ ।
ಪ್ರಸಹ್ಯ ಹರಣೇ ವಾಪಿ ನಾಧರ್ಮಸ್ತೇ ಭವಿಷ್ಯತಿ ॥ ೫೬ ॥

ಪ್ರಸಹ್ಯ ಹರಣೇ ದೋಷಂ ಯದಿ ಸಂಪಶ್ಯಸೇ ನೃಪ ।
ದತ್ತ್ವಾ ಮೂಲ್ಯಂ ಗವಾಶ್ವಾದ್ಯಮೃಷೇರ್ಧೇನುಃ ಪ್ರಗೃಹ್ಯತಾಮ್ ॥ ೫೭ ॥

ಸ್ವೀಕರ್ತವ್ಯಾ ಹಿ ಸಾ ಧೇನುಸ್ತ್ವಯಾ ತ್ವಂ ರತ್ನಭಾಗ್ಯತಃ ।
ತಪೋಧನಾನಾಂ ಹಿ ಕುತೋ ರತ್ನಸಂಗ್ರಹಣಾದರಃ ॥ ೫೮ ॥

ತಪೋಧನಬಲಃ ಶಾಂತಃ ಪ್ರೀತಿಮಾನ್ ಸ ನೃಪ ತ್ವಯಿ ।
ತಸ್ಮಾತ್ತೇ ಸರ್ವಥಾ ಧೇನುಂ ಯಾಚಿತಃ ಸಂಪ್ರದಾಸ್ಯತಿ ॥ ೫೯ ॥

---

೫೫. ರಾಜನೆ! ಆದ್ದರಿಂದ ಆ ಧೇನುವನ್ನು ತೆಗೆದುಕೊಂಡು ನೀನು ನಿನ್ನ ನಗರಕ್ಕೆ ಪ್ರಯಾಣಮಾಡು. ಅದಿಲ್ಲದಿದ್ದರೆ ವ್ಯರ್ಥವಾದ ರಾಜ್ಯವನ್ನೆಲ್ಲ ಬಿಟ್ಟು ತಪಶ್ಚರ್ಯೆಗೆ ವನವನ್ನು ಪ್ರವೇಶಿಸು.

೫೬. ಪಾರ್ಥಿವನೆ! ಬ್ರಾಹ್ಮಣರಿಗೆ ಕ್ಷಮೆಯು ಮುಖ್ಯ ಧರ್ಮವು ಹೇಗೋ ಹಾಗೆ ಕ್ಷತ್ರಿಯನಿಗೆ ದಂಡವು ಮುಖ್ಯ ಧರ್ಮವು. ಆದ್ದರಿಂದ ಬಲಾತ್ಕಾರದಿಂದ ಗೋಧನವನ್ನು ಅಪಹರಿಸಿದರೂ ನಿನಗೆ ಅದರಿಂದ ಅಧರ್ಮವಾಗಲಾರದು.

೫೭. ರಾಜನೆ! ಬಲಾತ್ಕಾರದಿಂದ ಅಪಹರಿಸುವುದನ್ನು ನೀನು ದೋಷವನ್ನಾಗಿ ಎಣಿಸುವುದಾದರೆ ಗೋ-ಅಶ್ವ ಮುಂತಾದ ಮೂಲ್ಯವನ್ನು ಋಷಿಗೆ ಸಮರ್ಪಿಸಿ ಅವನಿಂದ ಧೇನುವನ್ನು ತೆಗೆದುಕೊ.

೫೮. ಹೇಗಾದರೂ ಆ ಧೇನುವನ್ನು ನೀನು ಸ್ವೀಕರಿಸಲೇಬೇಕು ನೀನು ರತ್ನ ವಸ್ತುಗಳನ್ನು ಭುಂಜಿಸುವ ರಾಜನಾಗಿದ್ದೀ. ತಪೋಧನರಿಗೆ ರತ್ನವಸ್ತುಗಳ ಸಂಗ್ರಹ ದಲ್ಲಿ ಆದರವು ಹೇಗೆ ಸಮುಚಿತವಾಗುವುದು ?

೫೯. ಆ ತಪಸ್ವಿಯು ತಪಸ್ಸನ್ನೇ ಧನ-ಮತ್ತು ಬಲರೂಪವನ್ನಾಗಿ ಹೊಂದಿ ರುವನಾದ್ದರಿಂದ ಶಾಂತವಾದ ಶೀಲವುಳ್ಳವನೂ ನಿನ್ನಲ್ಲಿ ಪ್ರೀತಿಯುಳ್ಳವನೂ ಆಗಿರು ವನು. ಆದ್ದರಿಂದ ಅವನಲ್ಲಿ ಧೇನುವನ್ನು ಪ್ರಾರ್ಥಿಸಿದರೆ ತಪ್ಪದೇ ನಿನಗೆ ಕೊಡುವನು.

ಅಥವಾ ಗೋಹಿರಣ್ಯಾದ್ಯಂ ಯದನ್ಯದಭಿವಾಂಛಿತಮ್ ।
ಸಂಗೃಹ್ಯ ವಿತ್ತಂ ವಿಪುಲಂ ಧೇನುಂ ತಾಂ ಪ್ರತಿದಾಸ್ಯತಿ ॥ ೬೦ ॥

ಅನುಪೇಕ್ಷ್ಯಂ ಮಹದ್ರತ್ನಂ ರಾಜ್ಞಾ ವೈ ಭೂತಿಮಿಚ್ಛತಾ ।
ಇತಿ ಮೇ ವರ್ತತೇ ಬುದ್ಧಿಃ ಕಥಂ ವಾ ಮನ್ಯತೇ ಭವಾನ್ ॥ ೬೧ ॥

ರಾಜೋವಾಚ :—
ಗತ್ವಾ ತ್ವಮೇವ ತಂ ವಿಪ್ರಂ ಪ್ರಸಾದ್ಯ ಚ ವಿಶೇಷತಃ ।
ದತ್ತ್ವಾ ಚಾಭೀಪ್ಸಿತಂ ತಸ್ಮೈ ತಾಂ ಗಾಮಾನಯ ಮಂತ್ರಿಕ ॥ ೬೨ ॥

ವಸಿಷ್ಠ ಉವಾಚ :—
ಏವಮುಕ್ತಸ್ತತೋ ರಾಜ್ಞಾ ಸ ಮಂತ್ರೀ ವಿಧಿಚೋದಿತಃ ।
ನಿವೃತ್ಯ ಪ್ರಯಯೌ ಶೀಘ್ರಂ ಜಮದಗ್ನೇರಥಾಶ್ರಮಮ್ ॥ ೬೩ ॥

ಗತೇ ತು ನೃಪತೌ ತಸ್ಮಿನ್ನಕೃತವ್ರಣಸಂಯುತಃ ।
ಸಮಿದಾನಯನಾರ್ಥಾಯ ರಾಮೋಽಪಿ ಪ್ರಯಯೌ ವನಮ್ ॥ ೬೪ ॥

---

೬೦. ಅಥವಾ ಗೋವು-ಹಿರಣ್ಯ ಮುಂತಾದ ಅವನ ಇಷ್ಟವಾದ ಬೇರೆ ಹೆಚ್ಚಾದ ಧನವನ್ನು ಮೂಲ್ಯವನ್ನಾಗಿ ತೆಗೆದುಕೊಂಡು ಆ ಹಸುವನ್ನು ನಿನಗೆ ಕೊಡುವನು.

೬೧. ಅಭ್ಯುದಯವನ್ನು ಕೋರುವ ರಾಜನು ಒದಗಿರುವ ಉತ್ತಮವಾದ ರತ್ನವನ್ನು ಉಪೇಕ್ಷೆ ಮಾಡಬಾರದು. ನನಗೇನೋ ಈ ರೀತಿಯಾಗಿ ಬುದ್ಧಿಯು ಹುಟ್ಟುತ್ತಿದೆ. ಈ ವಿಷಯದಲ್ಲಿ ನೀನು ಹೇಗೆ ತಿಳಿದಿರುವಿ ?

೬೨. ರಾಜನು ಇಂತೆಂದನು :—ಮಂತ್ರಿಯೆ ! ನೀನು ಆ ವಿಪ್ರನ ಸನ್ನಿಧಿಗೆ ಹೋಗಿ ಅವನಿಗೆ ಇಷ್ಟವಾದುದನ್ನೆಲ್ಲ ವಿಶೇಷವಾಗಿ ಕೊಟ್ಟು ಅವನನ್ನು ತೃಪ್ತಿಪಡಿಸಿ ಅವನಿಂದ ಧೇನುವನ್ನು ತೆಗೆದುಕೊಂಡು ಬಾ.

೬೩. ವಸಿಷ್ಠಮುನಿಯು ಈ ರೀತಿಯಾಗಿ ಹೇಳಿದನು :—ಈ ರೀತಿಯಾಗಿ ರಾಜನಿಂದ ಆಜ್ಞಾಪಿಸಲ್ಪಟ್ಟ ಮಂತ್ರಿಯು ವಿಧಿಯಿಂದ ಪ್ರೇರೇಪಿಸಲ್ಪಟ್ಟವನಾಗಿ ಶೀಘ್ರವಾಗಿ ಹಿಂದಿರುಗಿ ಜಮದಗ್ನಿಮುನಿಯ ಆಶ್ರಮಕ್ಕೆ ಹೋದನು.

೬೪. ಇಷ್ಟರಲ್ಲಿ ರಾಜನ ಆ ಆಶ್ರಮದಿಂದ ಹೊರಕ್ಕೆ ಹೋದ ತತ್‌ಕ್ಷಣದಲ್ಲಿ ಅಲ್ಲಿದ್ದ ಅಕೃತವ್ರಣನಿಂದ ಕೂಡಿ ಭಾರ್ಗವರಾಮನು ಸಮಿತ್ತುಗಳನ್ನು ತರುವುದಕ್ಕೋಸ್ಕರ ವನಕ್ಕೆ ಹೊರಟು ಹೋಗಿದ್ದನು.

ತತಃ ಸ ಮಂತ್ರೀ ಸಬಲಃ ಸಮಾಸಾದ್ಯ ತದಾಶ್ರಮಮ್ ।
ಪ್ರಣಮ್ಯ ಮುನಿಶಾರ್ದೂಲಮಿದಂ ವಚನಮಬ್ರವೀತ್ ॥ ೬೫ ॥

ಚಂದ್ರಗುಪ್ತ ಉವಾಚ :—
ಬ್ರಹ್ಮನ್ನೃಪತಿನಾಜ್ಞಪ್ತಂ ರಾಜಾ ತು ಭುವಿ ರತ್ನಭಾಕ್ ।
ರತ್ನಭೂತಾ ಚ ಧೇನುಃ ಸಾ ಭುವಿ ದೋಗ್ಧ್ರೀಷ್ವನುತ್ತಮಾ ॥ ೬೬ ||

ತಸ್ಮಾದ್ರತ್ನಂ ಸುವರ್ಣಂ ವಾ ಮೂಲ್ಯಮುಕ್ತ್ವಾ ಯಥೋಚಿತಮ್ ।
ಆದಾಯ ಗೋರತ್ನಭೂತಾಂ ಧೇನುಂ ಮೇ ದಾತುಮರ್ಹಸಿ ॥ ೬೭ ||

ಜಮದಗ್ನಿರುವಾಚ :—
ಹೋಮಧೇನುರಿಯಂ ಮಹ್ಯಂ ನ ದಾತವ್ಯಾ ಹಿ ಕಸ್ಯಚಿತ್ ।
ರಾಜಾ ವದಾನ್ಯಃ ಸ ಕಥಂ ಬ್ರಹ್ಮಸ್ವಮಭಿವಾಂಛತಿ ॥ ೬೮ ॥

---

೬೫. ತರುವಾಯ ಆ ಮಂತ್ರಿಯು ಸೈನ್ಯಸಮೇತನಾಗಿ ಮುನಿಯ ಆಶ್ರಮಕ್ಕೆ ಬಂದು ಮುನಿಶ್ರೇಷ್ಠನಾದ ಆ ತಪಸ್ವಿಯನ್ನು ನಮಸ್ಕರಿಸಿ ಅವನೆದುರಿಗೆ ಈ ಮಾತನ್ನು ಆಡಿದನು.

೬೬. ಚಂದ್ರಗುಪ್ತ ಮಂತ್ರಿಯು ಈ ರೀತಿಯಾಗಿ ಹೇಳಿದನು :—ಬ್ರಹ್ಮರ್ಷಿಯೆ ! ರಾಜನಿಂದ ಈ ರೀತಿಯಾಗಿ ಆಜ್ಞಾಪಿಸಲ್ಪಟ್ಟಿರುವುದು, ಭೂಮಿಯಲ್ಲಿ ರಾಜನು ರತ್ನ ಭೋಜಿಯಾಗಿರುವನು. ನಿನ್ನ ಧೇನುವು ಭೂಮಿಯಲ್ಲೆಲ್ಲ ನಿರುಪಮವಾಗಿ ರತ್ನಪ್ರಾಯ ವಾಗಿರುವುದು.

೬೭. ಆದುದರಿಂದ ರತ್ನವನ್ನೂ ಸುವರ್ಣವನ್ನೂ ಯಥೋಚಿತವಾದ ಮೂಲ್ಯ ವನ್ನು ಹೇಳಿ ಅದನ್ನು ತೆಗೆದುಕೊಂಡು ಗೋರತ್ನಪ್ರಾಯವಾದ ಕಾಮಧೇನುವನ್ನು ನನಗೆ ಕೊಡಲು ಅರ್ಹನಾಗಿದ್ದೀ.

೬೮. ಆಗ ಜಮದಗ್ನಿಮುನಿಯು ಹೀಗೆ ಹೇಳಿದನು :—ಕಾಮಧೇನುವು ನನ್ನಲ್ಲಿ ಹೋಮಾರ್ಥವಾದ ಧೇನುವಾಗಿರುವುದು, ನಾನು ಅದನ್ನು ಯಾರಿಗೂ ಕೊಡಲಾಗುವುದಿಲ್ಲ. ರಾಜನು ತಾನು ಅತ್ಯುದಾರಶೀಲನಾಗಿದ್ದು ಬ್ರಹ್ಮಸ್ವವನ್ನು ಈಗ ಆಶಿಸುವನೆ?

ಮಂತ್ರ್ಯುವಾಚ :—

ರತ್ನಭಾಕ್ತ್ವೇನ ನೃಪತಿರ್ಧೇನುಂ ತೇ ಪ್ರತಿಕಾಂಕ್ಷತಿ ।
ಗವಾಯುತೇನ ತಸ್ಮಾತ್ತ್ವಂ ತಸ್ಮೈ ತಾಂ ದಾತುಮರ್ಹಸಿ ॥ ೬೯ ॥

ಜಮದಗ್ನಿರುವಾಚ :—

ಕ್ರಯವಿಕ್ರಯಯೋರ್ನಾಹಂ ಕರ್ತಾ ಜಾತು ಕಥಂ ಚನ ।
ಹವಿರ್ಧಾನೀಂ ಚ ವೈ ತಸ್ಮಾನ್ನೋತ್ಸಹೇ ದಾತುಮಂಜಸಾ ॥ ೭೦ ॥

ಮಂತ್ರ್ಯುವಾಚ :—

ರಾಜ್ಯಾರ್ಧೇನಾಥವಾ ಬ್ರಹ್ಮನ್ ಸಕಲೇನಾಪಿ ಭೂಭೃತಃ ।
ದೇಹಿ ಧೇನುಮಿಮಾಮೇಕಾಂ ತತ್ತೇ ಶ್ರೇಯೋ ಭವಿಷ್ಯತಿ ॥ ೭೧ ॥

ಜಮದಗ್ನಿರುವಾಚ :—

ಜೀವನ್ನಾಹಂ ತು ದಾಸ್ಯಾಮಿ ವಾಸವಸ್ಯಾಪಿ ದುರ್ಮತೇ ।
ಗುರುಣಾ ಯಾಚಿತಂ ಕಿಂ ತೇ ವಚಸಾ ನೃಪತೇಃ ಪುನಃ ॥ ೭೨ ॥

---

೬೯. ಮಂತ್ರಿಯು ಈ ರೀತಿಯಾಗಿ ಹೇಳಿದನು :—ರಾಜನು ರತ್ನಭೋಜಿಯಾದುದರಿಂದ ಆ ಅರ್ಹತೆಯನ್ನು ಪುರಸ್ಕರಿಸಿ ನಿನ್ನ ಧೇನುವನ್ನು ಇಚ್ಛಿಸುತ್ತಿರುವನು. ಆದುದರಿಂದ ಅಯುತ ಗೋವುಗಳನ್ನು ಮೂಲ್ಯತೆಗೆದುಕೊಂಡು ಇದನ್ನು ಅವನಿಗೆ ಕೊಡಲು ಅರ್ಹನಾಗಿದ್ದೀ.

೭೦. ಜಮದಗ್ನಿಮುನಿಯು ಹೀಗೆ ಪ್ರತಿಯಾಗಿ ಹೇಳಿದನು :—ನಾನು ಎಂದಿಗೂ ಈ ಧೇನುವಿನ ವಿಷಯದಲ್ಲಿ ಕ್ರಯ ವಿಕ್ರಯಗಳನ್ನು ಏನಾದರೂ ಮಾಡುವವನಲ್ಲ. ಅದ್ದರಿಂದ ನನ್ನ ಹೋಮದ ಹವಿಸ್ಸಾಧನವಾದ ಈ ಧೇನುವನ್ನು ಎಂದಿಗೂ ತತ್ಕ್ಷಣ ಕೊಡಲು ಮನಸ್ಸುಳ್ಳವನಾಗುವುದಿಲ್ಲ.

೭೧. ಆಗ ಮಂತ್ರಿಯು ಇದನ್ನು ಹೇಳಿದನು :—ಬ್ರಾಹ್ಮಣನೇ ! ನೀನುಅರ್ಧ ರಾಜ್ಯವನ್ನು ಅಥವಾ ಕಡೆಗೆ ಸಂಪೂರ್ಣ ರಾಜ್ಯವನ್ನು ತೆಗೆದುಕೊಂಡು ನಮ್ಮ ರಾಜನಿಗೆ ಈ ಒಂದು ಧೇನುವನ್ನು ಕೊಟ್ಟುಬಿಡು. ಆದರೆ ನಿನಗೆ ಶ್ರೇಯಸ್ಸು ಲಭಿಸುವುದು.

೭೨. ಜಮದಗ್ನಿಮುನಿಯು ಹೀಗೆ ಹೇಳಿದನು :—ದುರ್ಬುದ್ಧಿಯೆ ! ಇಂದ್ರನ ಕಡೆಯಿಂದ ದೇವಗುರುವು ಬಂದು ಇಂದ್ರನಿಗಾಗಿ ಇದನ್ನು ಯಾಚಿಸಿದಾಗಲ್ರೂ ನಾನು ಬದುಕಿದ್ದರೆ ಇದನ್ನು ಕೊಡುವುದಿಲ್ಲ, ಸಾಮಾನ್ಯ ರಾಜನ ಕಡೆಯ ಮಂತ್ರಿಯಾದ ನಿನ್ನ ಮಾತುಗಳು ಏಕೆ ?

ಮಂತ್ರ್ಯುವಾಚ :—

ತ್ವಮೇವ ಸ್ವೇಚ್ಛಯಾ ರಾಜ್ಞೇ ದೇಹಿ ಧೇನುಂ ಸುಹೃತ್ತಯಾ ।
ಯಥಾ ಬಲೇನ ನೀತಾಯಾಂ ತಸ್ಯಾಂ ತ್ವಂ ಕಿಂ ಕರಿಷ್ಯಸಿ ॥ ೭೩ ॥

ಜಮದಗ್ನಿರುವಾಚ :—

ದಾತಾ ದ್ವಿಜಾನಾಂ ನೃಪತಿಃ ಸ ಯದ್ಯಸ್ಯಾಹರಿಷ್ಯತಿ ।
ವಿಪ್ರೋಽಹಂ ಕಿಂ ಕರಿಷ್ಯಾಮಿ ಸ್ವೇಚ್ಛಾವಿತರಣಂ ವಿನಾ ॥ ೭೪ ॥

ವಸಿಷ್ಠ ಉವಾಚ :—

ಇತ್ಯೇವಮುಕ್ತಃ ಸಂಕ್ರುದ್ಧಃ ಸ ಮಂತ್ರೀ ಪಾಪಚೇತನಃ ।
ಪ್ರಸಹ್ಯ ನೇತುಮಾರೇಭೇ ಮುನೇಸ್ತಸ್ಯ ತಪಸ್ವಿನೀಮ್ ॥ ೭೫ ॥

ಇತಿ ಶ್ರೀ ಬ್ರಹ್ಮಾಂಡ ಪುರಾಣೇ ಉತ್ತರಾರ್ಧೇ
ಅಷ್ಟಾವಿಂಶತಿತಮೋಽಧ್ಯಾಯಃ.

---

೭೩. ಮಂತ್ರಿಯು ಹೀಗೆ ಹೇಳಿದನು :—ಮುನಿಯೆ ! ನೀನು ನಿನ್ನ ಸ್ವೇಚ್ಛೆಯಿಂದಲೇ ಸೌಹಾರ್ದದಿಂದ ಧೇನುವನ್ನು ರಾಜನಿಗೆ ಕೊಡು, ಹಾಗಿಲ್ಲದಿದ್ದರೆ ಬಲವನ್ನು ಉಪಯೋಗಿಸಿ ಇದನ್ನು ಸೆಳೆದುಕೊಂಡು ಹೋದರೆ ಆಗ ನೀನು ಏನು ಮಾಡುತ್ತೀ.

೭೪. ಜಮದಗ್ನಿ ಮುನಿಯು ಇಂತೆಂದನು :—ದ್ವಿಜರಿಗೆ ಇಷ್ಟವನ್ನು ದಾನ ಮಾಡುವವನು ರಾಜನು. ಅವನೇ ಬಲಾತ್ಕರಿಸಿ ಧೇನುವನ್ನು ಒಯ್ಯುವನು, ಆ ಸಂದರ್ಭದಲ್ಲಿ ಸ್ವೇಚ್ಛೆಯಿಂದ ಅದನ್ನು ಬಿಟ್ಟು ಕೊಡುವುದಲ್ಲದೆ ವಿಪ್ರನಾದ ನಾನು ಏನು ಮಾಡಲಿ ?

೭೫. ವಸಿಷ್ಠಮುನಿಯು ಇಂತೆಂದನು :—ಈ ರೀತಿಯಾಗಿ ಮುನಿಯಿಂದ ಹೇಳಲ್ಪಟ್ಟ ಪಾಪಿಯಾದ ಅಂತಃಕರಣವುಳ್ಳ ಆ ದುರ್ಮಂತ್ರಿಯು ಕೋಪಗೊಂಡವನಾಗಿ ಆ ಮುನಿಯ ಹಸುವನ್ನು ಬಲಾತ್ಕಾರದಿಂದ ಒಯ್ಯಲು ಉಪಕ್ರಮಿಸಿದನು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯವು
ಮುಗಿದುದು.

## ಏಕೋನತ್ರಿಂಶತ್ತಮೋಽಧ್ಯಾಯಃ

ವಸಿಷ್ಠ ಉವಾಚ :—

ಜಮದಗ್ನಿಸ್ತತೋ ಭೂಯಸ್ತಮುವಾಚ ರುಷಾನ್ವಿತಃ ।
ಬಹ್ಮಸ್ವಂ ನಾಪಹರ್ತವ್ಯಂ ಪುರುಷೇಣ ವಿಜಾನತಾ ॥ ೧ ॥

ಪ್ರಸಹ್ಯ ಗಾಂ ಮೇ ಹರತೋ ಪಾಪಮಾಪ್ಸ್ಯಸಿ ದುರ್ಮತೇ ।
ಆಯುರ್ಜಾನೇ ಪರಿಕ್ಷೀಣಂ ನ ಚೇದೇತತ್ಕರಿಷ್ಯತಿ ॥ ೨ ॥

ಬಲಾದಿಚ್ಛಸಿ ಯನ್ನೇತುಂ ತನ್ನ ಶಕ್ಯಂ ಕಥಂ ಚನ ।
ಸ್ವಯಂ ವಾ ಯದಿ ಸಾ ಯುಜ್ಯೇದ್ವಿನಶಿಷ್ಯತಿ ಪಾರ್ಥಿವಃ ॥ ೩ ॥

ದಾನಂ ವಿನಾಪಹರಣಂ ಬ್ರಾಹ್ಮಣಾನಾಂ ತಪಸ್ವಿನಾಮ್ ।
ಶತಾಯುಷೋಽರ್ಜುನಾದನ್ಯಃ ಕೋಽನ್ವಿಚ್ಛತಿ ಜಿಜೀವಿಷುಃ ॥ ೪ ॥

---

೧. ವಸಿಷ್ಠಮುನಿಯು ಈ ರೀತಿಯಾಗಿ ಹೇಳಿದನು :- ಅನಂತರದಲ್ಲಿ ಜಮದಗ್ನಿ ಮುನಿಯು ಬಹಳ ಕೋಪಗೊಂಡವನಾಗಿ ಮಂತ್ರಿಯನ್ನು ಕುರಿತು ಮತ್ತೆ ಹೇಳಿದನು, ಜ್ಞಾನವಂತನಾದ ಪುರುಷನು ಬ್ರಹ್ಮಸ್ವವನ್ನು ಖಂಡಿತ ಅಪಹರಿಸಬಾರದು.

೨. ದುರ್ಬುದ್ಧಿಯೆ! ಬಲಾತ್ಕಾರದಿಂದ ನನ್ನ ಗೋವನ್ನು ಅಪಹರಿಸಿದುದರಿಂದ ಪಾಪವನ್ನು ಹೊಂದುತ್ತೀ, ನೀನು ಈ ಬ್ರಹ್ಮಸ್ವಾಪಹಾರವನ್ನು ಮಾಡುವುದಾದರೆ ನಿನ್ನ ಆಯುಷ್ಯವು ಕ್ಷಯಿಸುವುದೆಂಬುದನ್ನು ನಾನು ತಿಳಿದಿದ್ದೇನೆ.

೩. ನೀನು ಧೇನುವನ್ನು ಬಲಾತ್ಕರಿಸಿ ಕೊಂಡೊಯ್ಯಲು ಅಪೇಕ್ಷಿಸುತ್ತೀ, ಅದಂತೂ ಹೇಗೂ ನಿನಗೆ ಸಾಧ್ಯವಲ್ಲ, ಒಂದುವೇಳೆ ಆ ಧೇನುವು ಯತ್ನಿಸುವುದಾದರೆ ನಿಜವಾಗಿ ಆ ಪಾರ್ಥಿವನು ನಾಶಹೊಂದುವನು.

೪. ತಪಸ್ವಿ ಬ್ರಾಹ್ಮಣರಿಗೆ ಸಾಧ್ಯವಾದಷ್ಟು ದಾನಮಾಡುವುದನ್ನು ಬಿಟ್ಟು ಅವರ ಸ್ವತ್ತಿನ ಅಪಹಾರವನ್ನು ಶತವತ್ಸರಜೀವಿಯಾದ ಅರ್ಜುನನಂತಹ ಬದುಕಿನ ಆಶೆಯುಳ್ಳವನು ಯಾರು ತಾನೆ ಇಚ್ಛಿಸುವನು?

ಇತ್ಯುಕ್ತಸ್ತೇನ ಸಂಕ್ರುದ್ಧಃ ಸ ಮಂತ್ರೀ ಕಾಲಚೋದಿತಃ ।
ಬದ್ಧ್ವಾ ತಾಂ ಗಾಂ ದೃಢೈಃ ಪಾಶೈರ್ವಿಚಕರ್ಷ ಬಲಾನ್ವಿತಃ ॥ ೫ ॥

ಜಮದಗ್ನಿರಥ ಕ್ರೋಧಾದ್ಭಾವಿಕರ್ಮಪ್ರಚೋದಿತಃ ।
ರುರೋಧ ತಂ ಯಥಾಶಕ್ತಿ ವಿಕರ್ಷಂತಂ ಪಯಸ್ವಿನೀಮ್ ॥ ೬ ॥

ಜೀವನ್ನ ಪ್ರತಿಮೋಕ್ಷ್ಯಾಮಿ ಗಾಮೇನಾಮಿತ್ಯಮರ್ಷಿತಃ ।
ಜಗ್ರಾಹ ಸುದೃಢಂ ಕಂಠೇ ಬಾಹುಭ್ಯಾಂ ತಾಂ ಮಹಾಮುನಿಃ ॥ ೭ ॥

ತತಃ ಕ್ರೋಧಪರೀತಾತ್ಮಾ ಚಂದ್ರಗುಪ್ತೋಽತಿನಿರ್ಘೃಣಃ ।
ಉತ್ಸಾರಯಧ್ವಮಿತ್ಯೇನಮಾದಿದೇಶ ಸ್ವಸೈನಿಕಾನ್ ॥ ೮ ॥

ಅಪ್ರಧೃಷ್ಯತಮಂ ಲೋಕೇ ತಮೃಷಿಂ ರಾಜಕಿಂಕರಾಃ ।
ಭರ್ತ್ರಾಜ್ಞಯಾ ಪ್ರಸಹ್ಯೈನಂ ಪರಿವವ್ರುಃ ಸಮಂತತಃ ॥ ೯ ॥

---

೫. ಈ ರೀತಿಯಾಗಿ ವಿಪ್ರನಿಂದ ಹೇಳಲ್ಪಟ್ಟ ಮಂತ್ರಿಯು ಕಾಲಕ್ಕೆ ವಶನಾಗಿ ಕೋಪಗೊಂಡವನಾಗಿ ದೃಢವಾದ ಪಾಶಗಳಿಂದ ಧೇನುವನ್ನು ಕಟ್ಟಿ ಬಲಸಮೇತನಾಗಿ ಅದನ್ನು ಎಳೆದನು.

೬. ಅನಂತರದಲ್ಲಿ ಜಮದಗ್ನಿಮುನಿಯು ಅವಶ್ಯಭಾವಿಯಾದ ಕರ್ಮದಿಂದ ಪ್ರೇರೇಪಿಸಲ್ಪಟ್ಟವನಾಗಿ ಕೋಪದಿಂದ ಧೇನುವನ್ನು ಸೆಳೆಯುತ್ತಿದ್ದ ಆ ಮಂತ್ರಿಯನ್ನು ತನ್ನ ಶಕ್ತ್ಯನುಸಾರವಾಗಿ ತಡೆಗಟ್ಟಿದನು.

೭. ನಾನು ಜೀವಿಸುವವರೆಗೆ ಈ ಧೇನುವನ್ನು ಬಿಟ್ಟುಕೊಡುವುದಿಲ್ಲವೆಂದು ಮಹಾತಪಸ್ವಿಯಾದ ಮುನಿಯು ಕೋಪಗೊಂಡವನಾಗಿ ಧೇನುವಿನ ಕಂಠದಲ್ಲಿ ಬಾಹುಗಳಿಂದ ದೃಢವಾಗಿ ಹಿಡಿದುಕೊಂಡನು.

೮. ಅನಂತರ ಕೋಪದಿಂದ ಮುಚ್ಚಿಹೋದ ಅಂತಃಕರಣವುಳ್ಳ ಅತ್ಯಂತ ನಿರ್ಘೃಣನಾದ ಚಂದ್ರಗುಪ್ತ ಮಂತ್ರಿಯು ತನ್ನ ಸೈನಿಕರನ್ನು ಕುರಿತು ಈ ದ್ವಿಜನನ್ನು ಓಡಿಸಿರೆಂದು ಆಜ್ಞೆಯಿತ್ತನು.

೯. ಆಗ ರಾಜಸೇವಕರು ಲೋಕದಲ್ಲೆಲ್ಲ ತಿರಸ್ಕಾರಕ್ಕೆ ಅನರ್ಹನೂ ಮಾನ್ಯನೂ ಆದ ಆ ಮಹರ್ಷಿಯನ್ನು ಸ್ವಾಮಿಯ ಆದೇಶದಿಂದ ಬಲಾತ್ಕರಿಸಿ ಇವನನ್ನು ಸುತ್ತುವರಿದು ನಿಂತರು.

ದಂಡೈಃ ಕಶಾಭಿರ್ಲಗುಡೈರ್ವಿನಿಘ್ನಂತಶ್ಚ ಮುಷ್ಟಿಭಿಃ ।
ತೇ ಸಮುತ್ಸಾರಯನ್ ಧೇನೋಃ ಸುದೂರತರಮಂತಿಕಾತ್ ॥ ೧೦ ॥

ಸ ತಥಾ ಹನ್ಯಮಾನೋಽಪಿ ವ್ಯಥಿತಃ ಕ್ಷಮಯಾನ್ವಿತಃ ।
ನ ಚುಕ್ರೋಧಾಕ್ರೋಧನತ್ವಂ ಸತೋ ಹಿ ಪರಮಂ ಧನಮ್ ॥ ೧೧ ॥

ಸ ಚ ಶಕ್ತಃ ಸ್ವತಪಸಾ ಸಂಹರ್ತುಮಪಿ ರಕ್ಷಿತುಮ್ ।
ಜಗತ್ಸರ್ವಂ ಕ್ಷಯಂ ತಸ್ಯ ಚಿಂತಯನ್ನ ಪ್ರಚುಕ್ರುಧೇ ॥ ೧೨ ॥

ಸ ಪೂರ್ವಂ ಕ್ರೋಧನೋಽತ್ಯರ್ಥಂ ಮಾತುರರ್ಥೇ ಪ್ರಸಾದಿತಃ ।
ರಾಮೇಣಾಭೂತ್ತತೋ ನಿತ್ಯಂ ಶಾಂತ ಏವ ಮಹಾತಪಾಃ ॥ ೧೩ ॥

ಸ ಹನ್ಯಮಾನಃ ಸುಭೃಶಂ ಚೂರ್ಣಿತಾಂಗಾಸ್ಥಿಬಂಧನಃ ।
ನಿಪಪಾತ ಮಹಾತೇಜಾ ಧರಣ್ಯಾಂ ಗತಚೇತನಃ ॥ ೧೪ ॥

---

೧೦. ದಂಡ, ಚಾಟಿ, ದೊಣ್ಣೆಗಳಿಂದಲೂ ಮತ್ತು ಮುಷ್ಟಿಗಳಿಂದಲೂ ಸಿಕ್ಕಿದ ಹಾಗೆಲ್ಲ ಹೊಡೆಯುತ್ತ ಆ ರಾಜಕಿಂಕರರು ಮುನಿಯನ್ನು ಧೇನುವಿದ್ದ ಸ್ಥಳದಿಂದ ದೂರ ಓಡಿಸಿದರು.

೧೧. ಮುನಿಯು ಆ ರೀತಿಯಲ್ಲಿ ಹೊಡೆಯಲ್ಪಟ್ಟು ನೊಂದವನಾದರೂ ಕೂಡ ತಾಳ್ಮೆಯಿಂದ ಕೂಡಿದವನಾಗಿ ಸ್ವಲ್ಪವೂ ಕೋಪಗೊಂಡಿಲ್ಲ, ಸಾಧುಗಳಿಗೆ ಕೋಪ ಹೊಂದದಿರುವುದು ಪರಮ ಧನರೂಪವಾದುದಲ್ಲವೆ!

೧೨. ಮುನಿಯಾದರೊ ತನ್ನ ತಪಃಶಕ್ತಿಯಿಂದ ಸಕಲ ಜಗತ್ತನ್ನು ರಕ್ಷಿಸಲು ಮತ್ತು ಸಂಹರಿಸಲು ಶಕ್ತನಾಗಿದ್ದರೂ ಕೂಡ ಸಕಲ ಜಗತ್ತಿನ ಅಸ್ಥಿರತ್ವವನ್ನು ಚಿಂತಿಸುತ್ತ ಇದರಿಂದ ಸ್ವಲ್ಪವೂ ಕೋಪಗೊಂಡಿಲ್ಲ.

೧೩. ಮುನಿಯು ಪೂರ್ವದಲ್ಲಿ ಅತ್ಯಂತ ಕೋಪಶೀಲನಾಗಿದ್ದು ಜನನಿಗೋಸ್ಕರ ರಾಮನಿಂದ ಸಮಾಧಾನಗೊಳಿಸಲ್ಪಟ್ಟವನಾದನು. ಆದ್ದರಿಂದ ಆ ಮೊದಲುಗೊಂಡು ಮಹಾತಪಸ್ವಿಯು ಶಾಂತನಾಗಿಯೇ ಇದ್ದನು.

೧೪. ಮಹಾತೇಜಸ್ವಿಯಾದ ಮುನಿಯು ಈ ರೀತಿಯಾಗಿ ಮತ್ತೆ ಮತ್ತೆ ಹಿಂಸಿಸಲ್ಪಟ್ಟವನಾಗಿ ಮಿತಿಮಾರಿ ಚೂರು ಚೂರಾದ ಅವಯವ ಮತ್ತು ಸಂಧಿಬಂಧಗಳುಳ್ಳವನಾಗಿ ಕಡೆಗೆ ಪ್ರಜ್ಞೆತಪ್ಪಿ ಭೂಮಿಯ ಮೇಲೆ ಬಿದ್ದನು.

ತಸ್ಮಿನ್ ಮುನೌ ನಿಪತಿತೇ ಸ ದುರಾತ್ಮಾ ವಿಶಂಕಿತಃ ।
ಕಿಂಕರಾನಾದಿಶಚ್ಛೀಘ್ರಂ ಧೇನೋರಾನಯನೇ ಬಲಾತ್ ॥ ೧೫ ॥

ತತಃ ಸವತ್ಸಾಂ ತಾಂ ಧೇನುಂ ಬದ್ಧ್ವಾ ಪಾಶೈರ್ದೃಢೈರ್ನೃಪ ।
ಕಶಾಭಿರಭಿಹನ್ಯಂತಶ್ಚಕೃಷುಶ್ಚ ನಿನೀಷಯಾ ॥ ೧೬ ॥

ಆಕೃಷ್ಯಮಾಣಾ ಬಹುಭಿಃ ಕಶಾಭಿರ್ಲಗುಡೈರಪಿ ।
ಹನ್ಯಮಾನಾ ಭೃಶಂ ತೈಶ್ಚ ಚುಕ್ರುಧೇ ಚ ಪಯಸ್ವಿನೀ ॥ ೧೭ ॥

ವ್ಯಥಿತಾತಿಕಶಾಪಾತೈಃ ಕ್ರೋಧೇನ ಮಹತಾನ್ವಿತಾ ।
ಆಕೃಷ್ಯ ಪಾಶಾನ್ ಸುದೃಢಾನ್ ಕೃತ್ವಾತ್ಮಾನಮಮೋಚಯತ್॥ ೧೮ ॥

ವಿಮುಕ್ತಪಾಶಬಂಧಾ ಸಾ ಸರ್ವತೋಽಭಿವೃತಾ ಬಲೈಃ ।
ಹುಂಹಾರವಂ ಪ್ರಕುರ್ವಾಣಾ ಸರ್ವತೋ ಹ್ಯಪತದ್ರುಷಾ ॥ ೧೯ ॥

---

೧೫. ಹೀಗೆ ಆ ಮುನಿಯು ಮೂರ್ಛೆಹೊಂದಿ ಕೆಳಗೆ ಬೀಳಲು ಆ ದುರಾತ್ಮನಾದ ಮಂತ್ರಿಯು ನಿರ್ಭೀತನಾಗಿ ಬಲಾತ್ಕಾರದಿಂದ ಶೀಘ್ರವಾಗಿ ಧೇನುವನ್ನು ಕರೆದೊಯ್ಯುವಂತೆ ಆಜ್ಞೆಯನ್ನಿತ್ತನು.

೧೬. ರಾಜನೆ! ಅನಂತರದಲ್ಲಿ ಕರುವಿನಿಂದ ಸಹಿತವಾಗಿ ಆ ಧೇನುವನ್ನು ದೃಢವಾದ ಪಾಶಗಳಿಂದ ಕಟ್ಟಿ ಚಾಟಿಗಳಿಂದ ಹೊಡೆದರು, ಮತ್ತು ಮುಂದಕ್ಕೆ ಕರೆದುಕೊಂಡು ಹೋಗಲು ಸೆಳೆದರು.

೧೭. ಹೀಗೆ ಪುನಃ ಪುನಃ ಸೆಳೆಯಲ್ಪಡುತ್ತಲೂ ಅನೇಕ ಜನರಿಂದ ಚಾಟಿ ಮತ್ತು ದೊಣ್ಣೆಗಳಿಂದ ಹೊಡೆಯಲ್ಪಡುತ್ತಲೂ ಇರುವ ಆ ಕಾಮಧೇನುವು ಅತಿಯಾಗಿ ಕೋಪಗೊಂಡಿತು.

೧೮. ಮಿತಿಮೀರಿದ ಚಾಟಿಯ ಏಟುಗಳಿಂದ ವ್ಯಥೆಗೊಂಡಿರುವುದೂ ಮಹಾಕೋಪದಿಂದ ಜಾಜ್ವಲ್ಯಮಾನವೂ ಆದ ಆ ಧೇನುವು ಬಲವಾದ ಪಾಶಗಳನ್ನು ಎಳೆದು ಸಡಿಲಪಡಿಸಿ ತನ್ನನ್ನು ಬಿಡಿಸಿಕೊಂಡಿತು.

೧೯. ಹೀಗೆ ಪಾಶಗಳ ಬಂಧನದಿಂದ ಬಿಡುಗಡೆ ಹೊಂದಿದ ಆ ಕಾಮಧೇನುವು ಸುತ್ತಲೂ ಸೈನ್ಯದಿಂದ ಸುತ್ತುವರಿಯಲ್ಪಟ್ಟದ್ದಾಗಿ ಹುಂಹಾಧ್ವನಿಯನ್ನು ಮಾಡುತ್ತ ಕೋಪದಿಂದ ಸುತ್ತಲೂ ಎಲ್ಲರ ಮೇಲೆ ಬಿದ್ದಿತು.

ವಿಷಾಣಖುರಪುಚ್ಛಾಗ್ರೈರಭಿಹತ್ಯ ಸಮಂತತಃ ।
ರಾಜಮಂತ್ರಿಬಲಂ ಸರ್ವಂ ವ್ಯದ್ರಾವಯದಮರ್ಷಿತಾ ॥ ೨೦ ॥

ವಿದ್ರಾವ್ಯ ಕಿಂಕರಾನ್ ಸರ್ವಾನ್ ತರಸೈವ ಪಯಸ್ವಿನೀ ।
ಪಶ್ಯತಾಂ ಸರ್ವಭೂತಾನಾಂ ಗಗನಂ ಪ್ರತ್ಯಪದ್ಯತ ॥ ೨೧ ॥

ತತಸ್ತೇ ಭಗ್ನಸಂಕಲ್ಪಾಃ ಸಂಭಗ್ನಕ್ಷತವಿಗ್ರಹಾಃ ।
ಪ್ರಸಹ್ಯ ಬದ್ಧ್ವಾ ತದ್ವತ್ಸಂ ಜಗ್ಮುರೇವಾತಿನಿರ್ಘೃಣಾಃ ॥ ೨೨ ॥

ಪಯಸ್ವಿನೀಂ ವಿನಾ ವತ್ಸಂ ಗೃಹೀತ್ವಾ ಕಿಂಕರೈಃ ಸಹ ।
ಸ ಪಾಪಸ್ತ್ವರಸಾ ರಾಜ್ಞಃ ಸನ್ನಿಧಿಂ ಸಮುಪಾಗಮತ್ ॥ ೨೩ ॥

ಗತ್ವಾ ಸಮೀಪಂ ನೃಪತೇಃ ಪ್ರಣಮ್ಯಾಸ್ಮೈ ಪ್ರಶಂಸಕೃತ್ ।
ತದ್ವೃತ್ತಾಂತಮಶೇಷೇಣ ವ್ಯಾಚಚಕ್ಷೇ ಸಸಾಧ್ವಸಃ ॥ ೨೪ ॥

ಇತಿ ಶ್ರೀ ಬ್ರಹಾಂಡಪುರಾಣೇ ಉತ್ತರಾರ್ಧೇ
ಏಕೋನತ್ರಿಂಶತ್ತಮೋಽಧ್ಯಾಯಃ

---

೨೦. ಮತ್ತು ಅತಿಯಾಗಿ ರೇಗಿಕೊಂಡಿರುವುದಾಗಿ ತನ್ನ ಕೊಂಬು-ಗೊರಸುಗಳಿಂದ ಸುತ್ತಲೂ ಬೀಸಿ ಹೊಡೆಯುತ್ತ ಎಲ್ಲ ರಾಜನ ಮಂತ್ರಿಯ ಸೈನ್ಯವನ್ನು ಶೀಘ್ರವಾಗಿ ದೂರ ಓಡಿಸಿ ಬಿಟ್ಟಿತು.

೨೧. ಹೀಗೆ ಕಾಮಧೇನುವು ಶೀಘ್ರವಾಗಿ ಆ ಎಲ್ಲ ರಾಜಕಿಂಕರರನ್ನು ದೂರ ಓಡಿಸಿ ಆ ಎಲ್ಲ ಪ್ರಾಣಿಗಳು ನೋಡುತ್ತಿರುವ ಹಾಗೆಯೇ ಗಗನಕ್ಕೆ ಹಾರಿಹೋಯಿತು.

೨೨. ತರುವಾಯ ಆ ರಾಜಭಟರು ಭಂಗಹೊಂದಿದ ಸಂಕಲ್ಪವುಳ್ಳವರೂ ಏಟುಗಳಿಂದ ಗಾಯವಾದ ವಿಗ್ರಹವುಳ್ಳವರೂ ಆಗಿ ಅತ್ಯಂತ ನಿರ್ಘೃಣತೆಯಿಂದ ಆ ಧೇನುವಿನ ಕರುವನ್ನು ಬಲಾತ್ಕಾರದಿಂದ ಕಟ್ಟಿಕೊಂಡು ಹೋದರು.

೨೩. ಆ ಪಾಪಿಯಾದ ರಾಜನ ದುರ್ಮಂತ್ರಿಯು ಆ ಧೇನುವನ್ನು ಬಿಟ್ಟು ಅದರ ಕರುವನ್ನು ಮಾತ್ರ ತೆಗೆದುಕೊಂಡು ಭಟರ ಸಂಗಡ ವೇಗವಾಗಿ ಸ್ವಾಮಿಯಾದ ರಾಜನ ಸಮೀಪಕ್ಕೆ ಬಂದನು.

೨೪. ಮತ್ತು ರಾಜನ ಸನ್ನಿಧಿಯನ್ನು ಹೊಂದಿ ಪಾಪಕೃತ್ಯದಿಂದ ಭಯಗೊಂಡಿರುವವನಾಗಿ ರಾಜನೆದುರಿಗೆ ಪ್ರಶಂಸೆ ಮಾಡುತ್ತ ಅವನಿಗೆ ನಮಸ್ಕಾರ ಮಾಡಿ ಆ ಸಮಸ್ತ ಸಮಾಚಾರವನ್ನು ಅವನಿಗೆ ತಿಳಿಸಿದನು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಇಪ್ಪತ್ತೊಂಭತ್ತನೆಯ
ಅಧ್ಯಾಯವು ಮುಗಿದುದು.

# ತ್ರಿಂಶತ್ತಮೋಽಧ್ಯಾಯಃ

---

**ವಸಿಷ್ಠ ಉವಾಚ :—**

**ಶ್ರುತ್ವಾ ತತ್ಸಕಲಂ ರಾಜಾ ಜಮದಗ್ನಿವಧಾಧಿಕಮ್ ।**
**ಉದ್ವಿಗ್ನಚೇತಾಃ ಸುಭೃಶಂ ಚಿಂತಯಾಮಾಸ ನೈಕಧಾ ॥ ೧ ॥**

**ಅಹೋ ಮೇ ಸುನೃಶಂಸಸ್ಯ ಲೋಕಯೋರುಭಯೋರಪಿ ।**
**ಬ್ರಹ್ಮಸ್ವಹರಣೇ ವಾಂಛಾ ತದ್ಧತ್ಯಾ ಚಾತಿಗರ್ಹಿತಾ ॥ ೨ ॥**

**ಅಹೋ ನಾಶ್ರೌಷಮುಸ್ಯಾಹಂ ಬ್ರಾಹ್ಮಣಸ್ಯ ವಿಜಾನತಃ ।**
**ವಚನಂ ತರ್ಹಿ ತಾಂ ಜಹ್ಯಾಂ ವಿಮೂಢಾತ್ಮಾ ಗತತ್ರಪಃ ॥ ೩ ॥**

**ಇತಿ ಸಂಚಿತಯನ್ನೇವ ಹೃದಯೇನ ವಿದೂಯತಾ ।**
**ಸ್ವಪುರಂ ಪ್ರತಿಚಕ್ರಾಮ ಸಬಲಃ ಸಾನುಗಸ್ತತಃ ॥ ೪ ॥**

---

೧. ವಸಿಷ್ಠ ಮುನಿಯು ಇಂತೆಂದನು :—ಜಮದಗ್ನಿ ಮುನಿಯ ವಧವೇ ಮೊದಲಾದ ಆ ಸಮಸ್ತ ವೃತ್ತಾಂತವನ್ನು ಕೇಳಿ ರಾಜನು ಭಯದಿಂದ ಕಳವಳಗೊಂಡ ಮಾನಸವುಳ್ಳವನಾಗಿ ಅನೇಕ ವಿಧವಾಗಿ ಮತ್ತೆ ಮತ್ತೆ ಚಿಂತಿಸಿದನು.

೨. ಇಹ-ಪರ ವೆಂಬ ಎರಡು ಲೋಕಗಳಿಂದಲೂ ಭ್ರಷ್ಟನಾದ ಅತಿ ಕ್ರೂರ ಸ್ವಭಾವನಾದ ನನಗೆ ಬ್ರಹ್ಮಸ್ವವನ್ನು ಅಪಹರಿಸುವುದರಲ್ಲಿ ಆಶೆಯೂ ಬ್ರಹ್ಮಹತ್ಯೆಯೂ ಪ್ರಾಪ್ತವಾಗಿರುವುದು, ಅತ್ಯಂತ ಶೋಚನೀಯವು.

೩. ಅಯ್ಯೋ, ನಾನು ಈ ಜ್ಞಾನಿಯಾದ ಬ್ರಾಹ್ಮಣನ ವಚನವನ್ನು ಕೇಳದೇ ಹೋದೆನು. ಒಂದುವೇಳೆ ಆ ವಚನವನ್ನು ಕೇಳಿದ್ದರೆ ಲಜ್ಜಾಶೂನ್ಯನೂ ಮೂಢವಾದ ಅಂತಃಕರಣವುಳ್ಳವನೂ ಆದ ನಾನು ಧೇನುವನ್ನು ಬಿಡುತ್ತಲಿದ್ದೆನು.

೪. ಈ ರೀತಿಯಾಗಿ ರಾಜನು ವ್ಯಥೆಪಡುತ್ತಲಿದ್ದ ಹೃದಯದಿಂದ ಚಿಂತಿಸುತ್ತ ತನ್ನ ಸೈನ್ಯ ಪರಿವಾರದಿಂದೊಡಗೂಡಿ ತನ್ನ ರಾಜಧಾನಿಗೆ ಹೊರಟನು.

ಪುರೀಂ ಪ್ರತಿಗತೇ ರಾಜ್ಞಿ ತಸ್ಮಿನ್ ಸಪರಿವಾರಕೇ ।
ಆಶ್ರಮಾತ್ ಸಹಸಾ ರಾಜನ್ ವಿನಿಶ್ಚಕ್ರಾಮ ರೇಣುಕಾ ॥ ೫ ॥

ಅಥ ಸಕ್ಷತಸರ್ವಾಂಗಂ ರುಧಿರೇಣ ಪರಿಪ್ಲುತಮ್ ।
ನಿಶ್ಚೇಷ್ಟಂ ಪತಿತಂ ಭೂಮೌ ದದರ್ಶ ಪತಿಮಾತ್ಮನಃ ॥ ೬ ॥

ತತಃ ಸಾ ನಿಹತಂ ಮತ್ವಾ ಭರ್ತಾರಂ ಗತಚೇತನಮ್ ।
ಅನ್ವಾಹತೇವಾಶನಿನಾ ಮೂರ್ಛಿತಾ ನ್ಯಪತದ್ಭುವಿ ॥ ೭ ॥

ಚಿರಾದಿವ ಪುನರ್ಭೂಮೇರುತ್ಥಾಯಾತೀವ ದುಃಖಿತಾ ।
ಪತಿತ್ವೋತ್ಥಾಯ ಸಾ ಭೂಯಃ ಸುಸ್ವರಂ ಪ್ರರುರೋದ ಹ ॥ ೮ ॥

ವಿಲಲಾಪ ಚ ಸಾತ್ಯರ್ಥಂ ಧರಣೀ ಧೂಲಿಧೂಸರಾ ।
ಅಶ್ರುಪೂರ್ಣಮುಖೀ ದೀನಾ ಪತಿತಾ ಶೋಕಸಾಗರೇ ॥ ೯ ॥

---

೫. ರಾಜನೆ! ಹೀಗೆ ಪರಿವಾರಸಹಿತನಾಗಿ ರಾಜನು ತನ್ನ ನಗರಿಯನ್ನು ಸೇರುವಹೊತ್ತಿಗೆ ಇತ್ತಕಡೆ ರೇಣುಕಾಂಬೆಯು ಆಶ್ರಮದಿಂದ ವೇಗವಾಗಿ ಹೊರಕ್ಕೆ ಹೊರಟುಬಂದಳು.

೬. ಅನಂತರದಲ್ಲಿ ಗಾಯದಿಂದ ಕೂಡಿದ ಸಕಲಾವಯವಗಳುಳ್ಳ, ರಕ್ತದಿಂದ ನೆನೆದಿರುವ ಸಂಪೂರ್ಣ ಚೇಷ್ಟಾಶೂನ್ಯವಾಗಿ ನೆಲದಲ್ಲಿ ಬಿದ್ದಿರುವ ತನ್ನ ಪತಿಯನ್ನು ನೋಡಿದಳು.

೭. ತರುವಾಯ ಆ ರೇಣುಕಾಂಬೆಯು ತನ್ನ ಪತಿಯನ್ನು ಹೊಡೆಯಲ್ಪಟ್ಟು ಪ್ರಾಣವಿಲ್ಲದೇ ಬಿದ್ದಿರುವುದನ್ನು ತಿಳಿದು ಸಿಡಿಲು ಬಡಿದವಳಂತೆ ಆಗಿ ಮೂರ್ಛೆಯನ್ನು ಹೊಂದಿ ಭೂಮಿಯ ಮೇಲೆ ಬಿದ್ದಳು.

೮. ಬಹಳ ಹೊತ್ತಿನ ಮೇಲೆ ಮತ್ತೆ ಭೂಮಿಯಿಂದ ಮೇಲಕ್ಕೆ ಎದ್ದು ಅತಿಯಾಗಿ ದುಃಖಗೊಂಡವಳಾಗಿ ಮತ್ತೆ ಮತ್ತೆ ನೆಲಕ್ಕೆ ಬಿದ್ದು ಅಲ್ಲಿಂದ ಮೇಲಕ್ಕೆ ಎದ್ದು ಅತಿಯಾಗಿ ಉಚ್ಚವಾದ ಸ್ವರದಿಂದ ರೋದನಮಾಡಿದಳು.

೯. ಮತ್ತು ಭೂಮಿಯ ಧೂಳಿಯು ವ್ಯಾಪಿಸಿ ಮಲಿನಳಾದವಳೂ, ಕಣ್ಣೀರಿನಿಂದ ಪೂರ್ಣವಾದ ಮುಖವುಳ್ಳವಳೂ, ದೀನಳೂ ಮತ್ತು ಅಪಾರವಾದ ಶೋಕಸಮುದ್ರದಲ್ಲಿ ಮುಳುಗಿದವಳೂ ಆಗಿ ಅತಿಯಾಗಿ ವಿಲಾಪಿಸಿದಳು.

ಹಾ ನಾಥ ಪ್ರಿಯಧರ್ಮಜ್ಞ ದಾಕ್ಷಿಣ್ಯಾಮೃತಸಾಗರ ।
ಹಾ ಧಿಗತ್ಯಂತಶಾಂತ ತ್ವಂ ನೈವ ಕಾಂಕ್ಷೇತ ಚೇದೃಶಮ್ ॥ ೧೦ ॥

ಆಶ್ರಮಾದಭಿನಿಷ್ಕ್ರಾಂತಃ ಸಹಸಾ ವ್ಯಸನಾರ್ಣವೇ ।
ಕ್ಷಿಪ್ತ್ವಾನಾಥಾಮಗಾಧೇ ಮಾಂ ಕ್ವ ಚ ಯಾತೋಽಸಿ ಮಾನದ॥ ೧೧ ॥

ಸತಾಂ ಸಾಪ್ತಪದೇ ಮೈತ್ರೇ ಮುಷಿತಾಹಂ ತ್ವಯಾ ಸಹ ।
ಯಾಸಿ ಯತ್ರ ತ್ವಮೇಕಾಕೀ ತತ್ರ ಮಾಂ ನೇತುಮರ್ಹಸಿ ॥ ೧೨ ॥

ದೃಷ್ಟ್ವಾ ತ್ವಾಮೀದೃಶಾವಸ್ಥಮಚಿರಾದ್ಧೃದಯಂ ಮಮ ।
ನ ದೀರ್ಯತೇ ಮಹಾಭಾಗ ಕಠಿನಾಃ ಖಲು ಯೋಷಿತಃ ॥ ೧೩ ॥

ಇತ್ಯೇವಂ ವಿಲಪಂತೀ ಸಾ ರುದಂತೀ ಚ ಮುಹುರ್ಮುಹುಃ ।
ಚುಕ್ರೋಶ ರಾಮ ರಾಮೇತಿ ಭೃಶಂ ದುಃಖಪರಿಪ್ಲುತಾ ॥ ೧೪ ॥

---

೧೦. ಹಾ ನಾಥನೆ! ಪ್ರಿಯನೆ! ಧರ್ಮಮಾರ್ಗವನ್ನು ಅರಿತವನೆ! ದಾಕ್ಷಿಣ್ಯ ವೆಂಬ ಅಮೃತಕ್ಕೆ ಸಾಗರಸ್ವರೂಪನೆ! ಬಲು ಶಾಂತನೆ! ಅಯ್ಯೋ, ಕಷ್ಟವು, ಧಿಕ್ಕಾರವು, ಇಂತಹುದನ್ನು ಯಾರಾದರೂ ಚಿಂತಿಸುವುದಿಲ್ಲ.

೧೧. ಮಾನಿಯೆ! ಆಶ್ರಮದಿಂದ ಹೊರಕ್ಕೆ ಹೊರಟು ಬಂದ ನೀನು ಅಕಸ್ಮಾತ್ತಾಗಿ ಅಪಾರವಾದ ವ್ಯಸನಸಾಗರದಲ್ಲಿ ಅನಾಥಳಾದ ನನ್ನನ್ನು ಎಸೆದು ನೀನು ಕೂಡ ಎಲ್ಲಿಗೆ ಹೋಗಿರುತ್ತೀ.

೧೨. ಸಪ್ತಪದಗಳಿಂದ ಸಂಭವಿಸುವುದಾಗಿರುವ ಸಾಧು ಮೈತ್ರಿಯಲ್ಲಿ ನಾನು ಮಾತ್ರ ನಿನ್ನೊಡನೆ ಮೋಸ ಹೋಗಿರುವೆನು, ನೀನು ಏಕಾಕಿಯಾಗಿ ಈಗ ಎಲ್ಲಿಗೆ ಹೋಗುತ್ತಿರುವೆಯೋ ನನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗು.

೧೩. ಈ ಕಷ್ಟದಶೆಯಲ್ಲಿರುವ ನಿನ್ನನ್ನು ನೋಡಿ ಇಂತಹ ದುರ್ದಶೆಯ ದರ್ಶನ ಮಾತ್ರದಿಂದ ಬೇಗ ನನ್ನ ಹೃದಯವು ಸೀಳದೆ ಇದೆಯಲ್ಲ. ಮಹಾತ್ಮನೆ, ಸ್ತ್ರೀಯರು ಬಹು ಕಠಿನ ಶೀಲವುಳ್ಳವರು.

೧೪. ಈ ರೀತಿಯಾಗಿ ವಿಲಾಪಮಾಡುತ್ತ ಮತ್ತೆ ಮತ್ತೆ ಗಟ್ಟಿಯಾಗಿ ರೋದನ ಮಾಡುತ್ತ ಅತಿಯಾದ ದುಃಖದಿಂದ ಪೀಡಿತಳಾಗಿ ರಾಮ ರಾಮ ಎಂದು ತನ್ನ ಪುತ್ರನನ್ನು ಕೂಗಿಕೊಂಡಳು.

ತಾವದ್ರಾಮೋಽಪಿ ಸ ವನಾತ್ ಸಮಿದ್ಭಾರಸಮನ್ವಿತಃ ।
ಅಕೃತವ್ರಣಸಂಯುಕ್ತಃ ಸ್ವಾಶ್ರಮಾಯ ನ್ಯವರ್ತತ ॥ ೧೫ ॥

ಅಪಶ್ಯದ್ಭಯಶಂಸೀನಿ ನಿಮಿತ್ತಾನಿ ಬಹೂನಿ ಸಃ ।
ಪಶ್ಯನ್ನುದ್ವಿಗ್ನಹೃದಯಸ್ತೂರ್ಣಂ ಪ್ರಾಪಾಶ್ರಮಂ ವಿಭುಃ ॥ ೧೬ ॥

ತಮಾಯಾಂತಮಭಿಪ್ರೇಕ್ಷ್ಯ ರುದತೀ ಸಾ ಭೃಶಾತುರಾ ।
ನವೀಭೂತೇವ ಶೋಕೇನ ಪ್ರಾರುದದ್ರೇಣುಕಾ ಪುನಃ ॥ ೧೭ ॥

ರಾಮಸ್ಯ ಪುರತೋ ರಾಜನ್ ಭರ್ತೃವ್ಯಸನಪೀಡಿತಾ ।
ಉಭಾಭ್ಯಾಮಪಿ ಹಸ್ತಾಭ್ಯಾಮುದರಂ ಸಮತಾಡಯತ್ ॥ ೧೮ ॥

ಮಾರ್ಗೇ ವಿದಿತವೃತ್ತಾಂತಃ ಸಮ್ಯಗ್ರಾಮೋಽಪಿ ಮಾತರಮ್ ।
ಕುರರೀಮಿವ ಶೋಕಾರ್ತಾಂ ದೃಷ್ಟ್ವಾ ದುಃಖಮುಪೇಯಿವಾನ್ ॥ ೧೯ ॥

---

೧೫. ಅಷ್ಟರಲ್ಲಿ ರಾಮನು ಕೂಡ ಯಥೇಚ್ಛವಾಗಿ ಸಮಿತ್ತುಗಳ ಮೂಟೆಯನ್ನು ಕಟ್ಟಿಕೊಂಡವನಾಗಿ ಅಕೃತವ್ರಣಮಿತ್ರನೊಂದಿಗೆ ಆಶ್ರಮಕ್ಕೆ ಬರಲು ಹಿಂತಿರುಗಿದನು.

೧೬. ಸಮರ್ಥನಾದ ರಾಮನು ಭಯಸೂಚಕಗಳಾದ ಅನೇಕ ಅಶುಭನಿಮಿತ್ತಗಳನ್ನು ನೋಡಿ ಗಾಬರಿಗೊಂಡ ಹೃದಯವುಳ್ಳವನಾಗಿ ಬೇಗ ಆಶ್ರಮವನ್ನು ಹೊಂದಿದನು.

೧೭. ಆಶ್ರಮಕ್ಕೆ ಬರುತ್ತಲಿದ್ದ ರಾಮನನ್ನು ನೋಡಿ ಅಳುತ್ತಲಿದ್ದ ರೇಣುಕೆಯು ಅತಿ ದುಃಖಿತಳಾಗಿ ಆಗತಾನೆ ಶೋಕವು ಹೊಸದಾಗಿ ಪ್ರಾಪ್ತವಾದಂತೆ ಮತ್ತೆ ರಾಮನ ಸಮೀಪಕ್ಕೆ ಧಾವಿಸಿದಳು.

೧೮. ರಾಜನೇ! ರಾಮನ ಮುಂದುಗಡೆಯಲ್ಲಿ ಪತಿ ವ್ಯಸನದಿಂದ ಪೀಡಿತಳಾದ ರೇಣುಕೆಯು ದುಃಖವನ್ನು ಸಹಿಸಲಾರದೆ ತನ್ನ ಎರಡು ಕೈಗಳಿಂದಲೂ ಉದರವನ್ನು ಹೊಡೆದುಕೊಂಡಳು.

೧೯. ಆಶ್ರಮಕ್ಕೆ ಬರುತ್ತಿದ್ದಾಗ ಮಾರ್ಗದಲ್ಲಿ ಚನ್ನಾಗಿ ತಿಳಿದಿರುವ ಈ ಎಲ್ಲ ವೃತ್ತಾಂತವುಳ್ಳ ರಾಮನು ಕುರರ ಪಕ್ಷಿಯಂತೆ ದುಃಖಪಾತ್ರಳಾಗಿ ನೊಂದಿರುವ ತನ್ನ ತಾಯಿಯನ್ನು ನೋಡಿ ತಾನು ದುಃಖವನ್ನು ಹೊಂದಿದನು.

ಧೈರ್ಯಮಾರೋಪ್ಯ ಮೇಧಾವೀ ದುಃಖಶೋಕಪರಿಪ್ಲುತಃ ।
ನೇತ್ರಾಭ್ಯಾಮಶ್ರುಪೂರ್ಣಾಭ್ಯಾಂ ತಸ್ಥೌ ಭೂಮಾವಧೋಮುಖಃ ॥ ೨೦ ॥

ತಂ ತಥಾಗತಮಾಲೋಕ್ಯ ರಾಮಂ ಪ್ರಾಹಾಕೃತವ್ರಣಃ ।
ಕಿಮಿದಂ ಭೃಗುಶಾರ್ದೂಲ ನೈತತ್ತ್ವಯ್ಯುಪಪದ್ಯತೇ ॥ ೨೧ ॥

ನ ತ್ವಾದೃಶಾ ಮಹಾಭಾಗ ಭೃಶಂ ಶೋಚಂತಿ ಕುತ್ರಚಿತ್ ।
ಧೃತಿಮಂತೋ ಮಹಾಂತಸ್ತು ದುಃಖಂ ಕುರ್ವಂತಿ ನ ವ್ಯಯೇ ॥ ೨೨ ॥

ಶೋಕಃ ಸರ್ವೇಂದ್ರಿಯಾಣಾಂ ಹಿ ಪರಿಶೋಷಪ್ರದಾಯಕಃ ।
ತ್ಯಜ ಶೋಕಂ ಮಹಾಬಾಹೋ ನ ತತ್ಪಾತ್ರಂ ಭವಾದೃಶಾಃ ॥ ೨೩ ॥

ಐಹಿಕಾಮುಷ್ಮಿಕಾರ್ಥಾನಾಂ ನೂನಮೇಕಾಂತರೋಧಕಃ ।
ಶೋಕಸ್ತಸ್ಯಾವಕಾಶಂ ತ್ವಂ ಕಥಂ ಹೃದಿ ನಿಯಚ್ಛಸಿ ॥ ೨೪ ॥

---

೨೦. ಆಗಲೇ ಮೇಧಾವಿಯಾದ ರಾಮನು ಧೈರ್ಯವನ್ನು ವಶಪಡಿಸಿಕೊಂಡು ದುಖಃ-ಶೋಕಗಳಿಂದ ತುಂಬಿದವನಾಗಿ ಕಣ್ಣೀರಿನಿಂದ ತುಂಬಿದ ನೇತ್ರಗಳುಳ್ಳವನಾಗಿ ನೆಲದ ಮೇಲೆ ಬಾಗಿದ ತಲೆಯುಳ್ಳವನಾಗಿ ನಿಂತನು.

೨೧. ಆ ರಾಮನು ಹಾಗೆ ದುಃಖಿತನಾಗಿರುವುದನ್ನು ನೋಡಿ ಅಕೃತವ್ರಣನು ಅವನಿಗೆ ಹೀಗೆ ಬೋಧಿಸಿದನು :—ಭೃಗುವಂಶವರ್ಯನೆ! ಇದೇನು? ಈ ದೈನ್ಯವು ನಿನ್ನಂತಹ ವೀರರಲ್ಲಿರುವುದು ಸರಿಯಲ್ಲ.

೨೨. ಮಹಾಭಾಗನೆ! ನಿನ್ನಂತಹ ಧೀರರು ಅತಿಯಾಗಿ ಯಾವ ಪ್ರಸಂಗದಲ್ಲಿಯೂ ಶೋಕಪಡಲಾರರು. ಧೈರ್ಯಶಾಲಿಗಳಾದ ಮಹಾತ್ಮರು ವ್ಯಯನಿಮಿತ್ತವಾಗಿ ದುಃಖವನ್ನು ಹೊಂದುವುದಿಲ್ಲ.

೨೩. ಶೋಕವೆಂಬುದು ಸಮಸ್ತೇಂದ್ರಿಯಗಳನ್ನು ಒಣಗಿಸಿ ನಿರ್ವೀರ್ಯಮಾಡುವುದು; ಮಹಾಬಾಹುವೆ, ಅಂತಹ ಶೋಕವನ್ನು ಪರಿತ್ಯಜಿಸು. ನಿನ್ನಂತಹವರು ಶೋಕಕ್ಕೆ ಪಾತ್ರರಾಗುವುದಿಲ್ಲ.

೨೪. ಶೋಕವು ಪ್ರಾಣಿಗೆ ಐಹಿಕ ಮತ್ತು ಆಮುಷ್ಮಿಕ ಶ್ರೇಯಸ್ಸುಗಳನ್ನು ತಪ್ಪದೇ ತಡೆ ಮಾಡತಕ್ಕದ್ದು. ಅಂತಹ ಅನರ್ಥಕರವಾದ ಶೋಕಕ್ಕೆ ನೀನು ಹೃದಯದಲ್ಲಿ ಹೇಗೆ ಅವಕಾಶವನ್ನು ಕೊಡುತ್ತೀ?

ತತ್ತ್ವಂ ಧೈರ್ಯಘನೋ ಭೂತ್ವಾ ಪರಿಸಾಂತ್ವಯ ಮಾತರಮ್ ।
ರುದತೀಂ ಬತ ವೈಧವ್ಯಶಂಕಾಪಹತಚೇತನಾಮ್ ॥ ೨೫ ॥

ನೈವಾಗಮನಮಸ್ತೀಹ ವ್ಯತಿಕ್ರಾಂತಸ್ಯ ವಸ್ತುನಃ ।
ತಸ್ಮಾದತೀತಮಖಿಲಂ ತ್ಯಕ್ತ್ವಾ ಕೃತ್ಯಂ ವಿಚಿಂತಯ ॥ ೨೬ ॥

ಇತ್ಯೇವಂ ಸಾಂತ್ವಮಾನಶ್ಚ ತೇನ ದುಃಖಸಮನ್ವಿತಃ ।
ರಾಮಃ ಸಂಸ್ತಂಭಯಾಮಾಸ ಶನೈರಾತ್ಮಾನಮಾತ್ಮನಾ ॥ ೨೭ ॥

ದುಃಖಶೋಕಪರೀತಾ ಹಿ ರೇಣುಕಾ ತ್ವರುದನ್ಮುಹುಃ ।
ತ್ರಿಃಸಪ್ತಕೃತ್ವೋ ಹಸ್ತಾಭ್ಯಾಮುದರಂ ಸಮತಾಡಯತ್ ॥ ೨೮ ॥

ತಾವತ್ತದಂತಿಕಂ ರಾಮಃ ಸಮಭ್ಯೇತ್ಯಾಶ್ರುಲೋಚನಃ ।
ರುದತೀಮಲಮಂಬೇತಿ ಸಾಂತ್ವಯಾಮಾಸ ಮಾತರಮ್ ॥ ೨೯ ॥

---

೨೫. ಆದುದರಿಂದ ನೀನು ಈಗ ಪರಮ ಧೈರ್ಯವನ್ನು ಅವಲಂಬಿಸಿದವನಾಗಿ ವೈಧವ್ಯಶಂಕೆಯಿಂದ ಪ್ರಜ್ಞಾ-ವಿವೇಕಗಳು ದೂರವಾಗಿ ರೋದನ ಮಾಡುತ್ತಲಿದ್ದ ತಾಯಿಯನ್ನು ಸಮಾಧಾನಮಾಡು.

೨೬. ಕಳೆದುಹೋದ ವಸ್ತುವು ಏನೇ ಮಾಡಿದರೂ ಹಿಂತಿರುಗಿ ಬರುವುದು ಎಲ್ಲಿಯೂ ಇಲ್ಲ. ಆದುದರಿಂದ ಕಳೆದುಹೋದ ವಿಷಯದಲ್ಲಿ ಚಿಂತೆಯನ್ನು ಬಿಟ್ಟು ಮುಂದಿನ ಕರ್ತವ್ಯವನ್ನು ಈಗ ಚಿಂತಿಸು.

೨೭. ದುಃಖದಿಂದ ಕೂಡಿರುವ ರಾಮನು ಈ ರೀತಿಯಾಗಿ ಅಕೃತವ್ರಣನಿಂದ ಸಮಾಧಾನಗೊಳಿಸಲ್ಪಟ್ಟವನಾಗಿ ಮೆಲ್ಲಗೆ ತಾನಾಗಿ ತನ್ನ ಅಂತಃಕರಣವನ್ನು ಧೈರ್ಯದಲ್ಲಿ ಸ್ಥಿರಗೊಳಿಸಿದನು.

೨೮. ದುಃಖ ಮತ್ತು ಶೋಕಗಳಿಂದ ವ್ಯಾಪ್ತಳಾಗಿರುವ ರೇಣುಕೆಯು ಮತ್ತೆ ಮತ್ತೆ ರೋದಿಸಿದಳು. ಮತ್ತು ಕೈಗಳಿಂದ ತನ್ನ ಉದರವನ್ನು ಶೋಕದಿಂದ ಇಪ್ಪತ್ತೊಂದುಸಲ ಬಡೆದುಕೊಂಡಳು.

೨೯. ಅಷ್ಟರಲ್ಲಿ ಕಣ್ಣೀರಿನಿಂದ ಪೂರ್ಣವಾದ ನೇತ್ರವುಳ್ಳ ರಾಮನು ಜನನಿಯ ಸಮೀಪಕ್ಕೆ ಬಂದು ತಾಯಿಯೆ! ರೋದಿಸಬೇಡ, ಸಾಕು ಎಂದು ಹೇಳುತ್ತ ತಾಯಿಯನ್ನು ಸಮಾಧಾನಪಡಿಸಿದನು.

ಉಪಾಹಾಪನೆರ್ಯಾ ದುಃಖಾದ್ಭರ್ತೃಶೋಕಪರಾಯಣಾಮ್ ।
ತ್ರಿಃಸಪ್ತಕೃತ್ವೋ ಯದಿದಂ ತ್ವಯಾ ವಕ್ಷಃ ಸಮಾಹತಮ್ ॥ ೩೦ ॥

ತಾವತ್ಸಂಖ್ಯಮಹಂ ತಸ್ಮಾತ್ ಕ್ಷತ್ರಜಾತಮಶೇಷತಃ ।
ಹನಿಷ್ಯೇ ಭುವಿ ಸರ್ವತ್ರ ಸತ್ಯಮೇತದ್ಬ್ರವೀಮಿ ತೇ ॥ ೩೧ ॥

ತಸ್ಮಾತ್ ತ್ವಂ ಶೋಕಮುತ್ಸೃಜ್ಯ ಧೈರ್ಯಮಾತಿಷ್ಠ ಸಾಂಪ್ರತಮ್ ।
ನಾಸ್ತ್ಯೇವ ನೂನಮಾಯಾತಮತಿಕ್ರಾಂತಸ್ಯ ವಸ್ತುನಃ ॥ ೩೨ ॥

ಇತ್ಯುಕ್ತಾ ರೇಣುಕಾ ತೇನ ಭೃಶಂ ದುಃಖಾನ್ವಿತಾಪಿ ಸಾ ।
ಕೃಚ್ಛ್ರಾದ್ಧೈರ್ಯಂ ಸಮಾಲಂಬ್ಯ ತಥೇತಿ ಪ್ರತ್ಯಭಾಷತ ॥ ೩೩ ॥

ತತೋ ರಾಮೋ ಮಹಾಬಾಹುಃ ಪಿತುಃ ಸಹ ಸಹೋದರೈಃ ।
ಅಗ್ನೌ ಸತ್ಕರ್ತುಮಾರೇಭೇ ದೇಹಂ ರಾಜನ್ ಯಥಾವಿಧಿ ॥ ೩೪ ॥

---

೩೦. ಭರ್ತೃ ಶೋಕದಲ್ಲಿ ಮುಳುಗಿ ಹೋದ ತಾಯಿಯನ್ನು ದುಃಖಭರದಿಂದ ದೂರಮಾಡುತ್ತ ಇಂತೆಂವನು, ಜನನಿಯೆ, ಶೋಕವನ್ನು ತಡೆಯಲಾರದೆ ವಕ್ಷಃಸ್ಥಳ ವನ್ನು ಇಪ್ಪತ್ತೊಂದಸಲ ಹೊಡೆದುಕೊಂಡೆಯಲ್ಲವೆ.

೩೧. ಆದುದರಿಂದ ಅದರಂತೆ ಇಪ್ಪತ್ತೊಂದುಸಲ ನಾನು ಭೂಮಿಯಲ್ಲಿದ ಸಂಪೂರ್ಣ ಕ್ಷತ್ರಿಯ ಜಾತಿಯನ್ನು ಕೊಂದು ನಿರ್ಮೂಲ ಮಾಡುವೆನು. ನಿನ್ನೆದುರಿಗೆ ಸತ್ಯವಾದ ಪ್ರತಿಜ್ಞೆ ಮಾಡುವೆನು.

೩೨. ಆದ್ದರಿಂದ ನೀನು ಈಗ ಶೋಕವನ್ನು ಪರಿತ್ಯಜಿಸಿ ಧೈರ್ಯವನ್ನು ಅವ ಲಂಬಿಸು. ಕಳೆದು ಹೋದ ವಸ್ತು ಹಿಂತಿರುಗಿ ಬರುವುದೆಂಬುದು ಎಂದಿಗೂ ಇಲ್ಲ. ಆದ್ದರಿಂದ ಶೋಕಮಾಡಿ ಫಲವಿಲ್ಲ.

೩೩. ಹೀಗೆಂದು ರಾಮನಿಂದ ಹೇಳಲ್ಪಟ್ಟವಳಾಗಿ ರೇಣುಕಾದೇವಿಯು ಅತಿಶ ಯವಾದ ದುಃಖದಿಂದ ಪೀಡಿತಳಾಗಿದ್ದರೂ ಕೂಡ ಕಷ್ಟದಿಂದ ಧೈರ್ಯವನ್ನು ಅಲಂಬಿಸಿ ಹಾಗೇ ಆಗಲೆಂದು ಪ್ರತಿವಚನವನ್ನು ಆಡಿದಳು.

೩೪. ರಾಜನೆ! ತರುವಾಯ ಮಹಾಬಾಹು ಬಲಶಾಲಿಯಾದ ರಾಮನು ತನ್ನ ಸಹೋದರರ ಸಂಗಡ ಪಿತೃದೇಹವನ್ನು ಯಥಾವಿಧಿಯಾಗಿ ಅಗ್ನಿಯಲ್ಲಿ ದಹನಮಾಡಿ ಸಂಸ್ಕರಿಸಲು ಆರಂಭಿಸಿದನು.

ಭರ್ತೃಶೋಕಪರೀತಾಂಗೀ ರೇಣುಕಾಪಿ ದೃಢವ್ರತಾ।
ಪುತ್ರಾನ್ ಸರ್ವಾನ್ ಸಮಾಹೂಯ ತ್ವಿದಂ ವಚನಮಬ್ರವೀತ್ ॥ ೩೫ ॥

ರೇಣುಕೋವಾಚ :—

ಅಹಂ ವಃ ಪಿತರಂ ಪುತ್ರಾಃ ಸ್ವರ್ಗತಂ ಪುಣ್ಯಶೀಲಿನಮ್।
ಅನುಗಂತುಮಿಹೇಚ್ಛಾಮಿ ತನ್ಮೇಽನುಜ್ಞಾತುಮರ್ಹಥ ॥ ೩೬ ॥

ಅಸಹ್ಯದುಃಖಂ ವೈಧವ್ಯಂ ಸಹಮಾನಾ ಕಥಂ ಪುನಃ।
ಭರ್ತ್ರಾ ವಿರಹಿತಾ ತೇನ ಪ್ರವರ್ತಿಷ್ಯೇ ವಿನಿಂದಿತಾ ॥ ೩೭ ॥

ತಸ್ಮಾದನುಗಮಿಷ್ಯಾಮಿ ಭರ್ತಾರಂ ದಯಿತಂ ಮಮ।
ಯಥಾ ತೇನ ಪ್ರವರ್ತಿಷ್ಯೇ ಪರತ್ರಾಪಿ ಸಹಾನಿಶಮ್ ॥ ೩೮ ॥

ಜ್ವಲಂತಮಿಮಮೇವಾಗ್ನಿಂ ಸಂಪ್ರವಿಶ್ಯ ಚಿರಾದಿವ।
ಭರ್ತುರ್ಮಮ ಭವಿಷ್ಯಾಮಿ ಪಿತೃಲೋಕಪ್ರಿಯಾತಿಥಿಃ ॥ ೩೯ ॥

---

೩೫. ಪತಿ ಶೋಕದಿಂದ ಕಷ್ಟದಶೆಗೆ ಸಿಕ್ಕಿದ ಅಂಗವುಳ್ಳ ರೇಣುಕೆಯು ದೃಢವಾದ ನಿಯಮವುಳ್ಳವಳಾಗಿ ತನ್ನ ಸಮಸ್ತ ಪುತ್ರರನ್ನು ಕರೆದು ಮುಂದೆ ಹೇಳುವ ವಚನವನ್ನು ಆಡಿದಳು.

೩೬. ರೇಣುಕಾಂಬೆಯು ಈ ರೀತಿಯಾಗಿ ಹೇಳಿದಳು :—ಪುತ್ರರೆ! ನಾನು ಪುಣ್ಯಾತ್ಮನಾಗಿದ್ದು ಈಗ ಸ್ವರ್ಗಲೋಕಕ್ಕೆ ಹೋಗಿರುವ ನಿಮ್ಮ ತಂದೆಯ ಸಹಗಮನವನ್ನು ಮಾಡಲು ಇಷ್ಟವುಳ್ಳವಳಾಗಿದ್ದೇನೆ. ಇದನ್ನು ನೀವೆಲ್ಲರೂ ಸಮ್ಮತಿಸಲು ಅರ್ಹರಾಗಿದ್ದೀರಿ.

೩೭. ವೈಧವ್ಯವು ಸಹಿಸಲಾಗದ ದುಃಖವನ್ನುಂಟುಮಾಡುವುದು, ಪತಿಯಿಂದ ವಿಯುಕ್ತಳಾಗಿ ನಿಂದಾಪಾತ್ರಳಾಗಿರುವ ನಾನು ಅಂತಹ ವೈಧವ್ಯ ದುಃಖವನ್ನು ಅನುಭವಿಸುತ್ತ ಹೇಗೆ ಜೀವಿಸಿರಲು ಪ್ರವರ್ತಿಸಲಿ?

೩೮. ಆದ್ದರಿಂದ ನನ್ನ ಪ್ರಿಯನಾದ ಪತಿಯನ್ನು ಸಹಗಮನದಿಂದ ಹಿಂಬಾಲಿಸಿ ಹೋಗುತ್ತೇನೆ. ಆದರಿಂದ ಪರಲೋಕದಲ್ಲಿಯೂ ಪತಿಯೊಡನೆ ಹಗಲು ಮತ್ತು ರಾತ್ರಿಯಲ್ಲಿ ಕರ್ತವ್ಯದಲ್ಲಿ ಪ್ರವರ್ತಿಸುತ್ತೇನೆ.

೩೯. ಜ್ವಲಿಸುತ್ತಿರುವ ಈ ಪತಿಯ ಚಿತಾಗ್ನಿಯನ್ನು ಪ್ರವೇಶಮಾಡಿ ಸಹಗಮನಮಾಡಿ ಪಿತೃಲೋಕದಲ್ಲಿರುವ ನನ್ನ ಪತಿಗೆ ಪ್ರಿಯಳಾದ ಅತಿಥಿಯಂತೆ ಹೋಗುವೆನು.

ಅನುವಾದಮೃತೇ ಪುತ್ರಾ ಭವದ್ಭಿಸ್ತತ್ರ ಕರ್ಮಣಿ ।
ಪ್ರತಿಭೂಯ ನ ವಕ್ತವ್ಯಂ ಯದಿ ಮತ್ಪ್ರಿಯಮಿಚ್ಛಥ ॥ ೪೦ ॥

ಇತ್ಯೇವಮುಕ್ತ್ವಾ ವಚನಂ ರೇಣುಕಾ ದೃಢನಿಶ್ಚಯಾ ।
ಅಗ್ನಿಂ ಪ್ರವಿಶ್ಯ ಭರ್ತಾರಮನುಗಂತುಂ ಮನೋ ದಧೇ ॥ ೪೧ ॥

ಏತಸ್ಮಿನ್ನೇವ ಕಾಲೇ ತು ರೇಣುಕಾಂ ತನಯೈಃ ಸಹ ।
ಸಮಾಭಾಷ್ಯಾತಿಗಂಭೀರಾ ವಾಗುವಾಚಾಶರೀರಿಣೀ ॥ ೪೨ ॥

ಹೇ ರೇಣುಕೇ ಸ್ವತನಯೈರ್ಗಿರಂ ಮೇಽವಹಿತಾ ಶೃಣು ।
ಮಾ ಕಾರ್ಷೀಃ ಸಾಹಸಂ ಭದ್ರೇ ಪ್ರವಕ್ಷ್ಯಾಮಿ ಪ್ರಿಯಂ ತವ ॥ ೪೩ ॥

ಸಾಹಸೋ ನೈವ ಕರ್ತವ್ಯಃ ಕೇನಾಪ್ಯಾತ್ಮಹಿತೈಷಿಣಾ ।
ನ ಮರ್ತವ್ಯಂ ತ್ವಯಾ ಸರ್ವೇ ಜೀವನ್ ಭದ್ರಾಣಿ ಪಶ್ಯತಿ ॥ ೪೪ ॥

---

೪೦. ಪುತ್ರರೇ ! ನೀವು ನನ್ನ ಪ್ರಿಯವನ್ನು ಇಚ್ಛಿಸುವುದಾದರೆ ನನ್ನ ಸಹ ಗಮನ ವಿಧಿಯ ಇಷ್ಟದಲ್ಲಿ ಸಮ್ಮತಿ ವಚನವನ್ನು ಹೊರತು ಮತ್ತಾವ ಪ್ರತಿಯಾದ ಮಾತನ್ನು ಖಂಡಿತವಾಗಿ ಹೇಳಬಾರದು.

೪೧. ಈ ರೀತಿಯಾದ ವಚನಗಳನ್ನು ಹೇಳಿ ದೃಢವಾದ ನಿಶ್ಚಯದಿಂದ ಕೂಡಿದ ರೇಣುಕೆಯು ಅಗ್ನಿಪ್ರವೇಶವನ್ನು ಮಾಡಿ ಪತಿಯ ಸಹಗಮನವನ್ನು ಮಾಡಲು ಮನಸ್ಸನ್ನು ಸ್ಥಿರಮಾಡಿಕೊಂಡಳು.

೪೨. ಈ ಸಮಯಕ್ಕೆ ಸರಿಯಾಗಿ ಎಲ್ಲ ಪುತ್ರರೊಡನೆ ಇದ್ದ ರೇಣುಕಾಂಬೆಯನ್ನು ಸಮಾಧಾನಪಡಿಸುತ್ತ ಅತಿ ಗಂಭೀರವಾದ ಮೂರ್ತಿಯಿಲ್ಲದ ಆಕಾಶವಾಣಿಯು ಈ ರೀತಿಯಾಗಿ ನುಡಿಯಿತು.

೪೩. ರೇಣುಕಾದೇವಿಯೇ, ನಿನ್ನ ಪುತ್ರರಿಂದ ಕೂಡಿ ಈ ನನ್ನ ವಚನವನ್ನು ಅವಧಾನವಿಟ್ಟುಕೊಂಡು ಕೇಳು. ಮಂಗಳ ಶೀಲಳೇ, ಸಾಹಸವನ್ನು ಮಾಡಬೇಡ, ನಿನಗೆ ಪ್ರಿಯವಾದುದನ್ನು ಹೇಳುವೆನು.

೪೪. ತನ್ನ ಹಿತವನ್ನು ಬಯಸುವವರಾರೊಬ್ಬರೂ ಕೂಡ ಯಾವ ಸಾಹಸ ಕಾರ್ಯವನ್ನೂ ಆಚರಿಸಬಾರದು. ಆದ್ದರಿಂದ ಈಗ ಸಾಹಸದಿಂದ ಪ್ರಾಣತ್ಯಾಗವನ್ನು ಮಾಡಬೇಡ, ಎಲ್ಲರೂ ಬದುಕಿದ್ದರೆ ಮಂಗಳವನ್ನು ಕಂಡೇ ಕಾಣುವರು.

ತಸ್ಮಾದ್ಧೈರ್ಯಘನಾ ಭೂತ್ವಾ ಭವ ತ್ವಂ ಕಾಲಕಾಂಕ್ಷಿಣೀ।
ನಿಮಿತ್ತಮಂತರೀಕೃತ್ಯ ಕಿಂಚಿದೇವ ಶುಚಿಸ್ಮಿತೇ ॥ ೪೫ ॥

ಅಚಿರೇಣೈವ ಭರ್ತಾ ತೇ ಭವಿಷ್ಯತಿ ಸಚೇತನಃ।
ಉತ್ಪನ್ನ ಜೀವಿತೇನ ತ್ವಂ ಕಾಮಂ ಪ್ರಾಪ್ಸ್ಯಸಿ ಶೋಭನೇ।
ಭವಿತ್ರೀ ಚಿರರಾತ್ರಾಯ ಬಹುಕಲ್ಯಾಣಭಾಜನಮ್ ॥ ೪೬ ॥

ವಸಿಷ್ಠ ಉವಾಚ :—

ಇತಿ ತದ್ವಚನಂ ಶ್ರುತ್ವಾ ಧೃತಿಮಾಲಂಬ್ಯ ರೇಣುಕಾ।
ತದ್ವಾಕ್ಯಗೌರವಾದ್ಧರ್ಷಮವಾಪುಸ್ತನಯಾಶ್ಚ ತೇ ॥ ೪೭ ॥

ತತೋ ನೀತ್ವಾ ಪಿತುರ್ದೇಹಮಾಶ್ರಮಾಭ್ಯಂತರಂ ಮುನೇಃ।
ಶಾಯಯಿತ್ವಾ ನಿವಾತೇ ತು ಪರಿತಃ ಸಮುಪಾವಿಶನ್ ॥ ೪೮ ॥

---

೪೫. ಶುದ್ಧವಾದ ಮಂದಹಾಸವುಳ್ಳವಳೆ! ಈಗ ಒದಗಿರುವ ಯಾವುದೋ ದುರ್ವಿಪಾಕನಿಮಿತ್ತವನ್ನು ಸ್ವಲ್ಪ ಕಳೆಯುವವರೆಗೆ ಧೈರ್ಯವೆಂಬ ಧನವನ್ನು ಅವಲಂಬಿಸಿ ಉತ್ತಮವಾದ ಕಾಲವನ್ನು ನಿರೀಕ್ಷಿಸುವವಳಾಗಿರು.

೪೬. ಒಂದು ನಿಮಿತ್ತ ವಿಶೇಷದಿಂದ ಶೀಘ್ರವಾಗಿ ನಿನ್ನ ಪತಿಯು ಜೀವಂತನಾಗುವನು. ತರುವಾಯ ಪ್ರಾಣಸಹಿತನಾಗಿ ಬಂದ ನಿನ್ನ ಪತಿಯೊಡನೆ ನಿನ್ನ ಇಷ್ಟಾನುಸಾರವಾಗಿ ಕಾಮಭೋಗವನ್ನು ಹೊಂದುತ್ತೀ, ಮತ್ತು ಹೀಗೆಯೇ ದೀರ್ಘಕಾಲದವರೆಗೆ ಅನೇಕ ಕಲ್ಯಾಣಪರಂಪರೆಗೆ ಪಾತ್ರಳಾಗುತ್ತೀ.

೪೭. ವಸಿಷ್ಠಮುನಿಯು ಇಂತೆಂದನು :—ರೇಣುಕೆಯು ಈ ಆಕಾಶವಾಣಿಯನ್ನು ಕೇಳಿ ಸ್ವಲ್ಪ ಧೈರ್ಯವನ್ನು ತೆಗೆದುಕೊಂಡು ಅವಳೂ ಮತ್ತು ಆ ಎಲ್ಲ ಪುತ್ರರೂ ಆ ವಾಣಿಯಲ್ಲಿರುವ ವಿಶ್ವಾಸ-ಗೌರವಗಳಿಂದ ಹರ್ಷವನ್ನು ಹೊಂದಿದರು.

೪೮ ಅನಂತರದಲ್ಲಿ ತಪಸ್ವಿಯಾದ ಪಿತೃವಿನ ದೇಹವನ್ನು ಆಶ್ರಮದ ಒಳಭಾಗಕ್ಕೆ ತೆಗೆದುಕೊಂಡು ಹೋಗಿ ಗಾಳಿಯಿಲ್ಲದ ಸ್ಥಳದಲ್ಲಿ ಅದನ್ನು ಸುರಕ್ಷಿತವಾಗಿ ಇಟ್ಟು ಅದರ ಸುತ್ತಲು ಪುತ್ರರೆಲ್ಲರೂ ಕುಳಿತುಕೊಂಡರು.

ತೇಷಾಂ ತತ್ರೋಪವಿಷ್ಟಾನಾಮುಪ್ರಹೃಷ್ಟಾತ್ಮಚೇತಸಾಮ್ ।
ನಿಮಿತ್ತಾನಿ ಶುಭಾನ್ಯಾಸರ್ ಅನೇಕಾನಿ ಮಹಾಂತಿ ಚ ॥ ೪೯ ॥

ತೇನ ತೇ ಕಿಂಚಿದಾಶ್ವಸ್ತಚೇತಸೋ ಮುನಿಪುಂಗವಾಃ ।
ನಿಷೇದುಃ ಸಹಿತಾ ಮಾತ್ರಾ ಕಾಂಕ್ಷಂತೋ ಜೀವಿತಂ ಪಿತುಃ ॥ ೫೦ ॥

ಏತಸ್ಮಿನ್ನಂತರೇ ರಾಜನ್ ಭೃಗುವಂಶಧರೋ ಮುನಿಃ ।
ವಿಧೇರ್ಬಲೇನ ಮತಿಮಾಂಸ್ತತ್ರಾಗಚ್ಛದ್ಯದೃಚ್ಛಯಾ ॥ ೫೧ ॥

ಅಥರ್ವಣಾಂ ನಿಧಿಃ ಸಾಕ್ಷಾದ್ವೇದವೇದಾಂಗಪಾರಗಃ ।
ಸರ್ವಶಾಸ್ತ್ರಾರ್ಥವಿತ್ ಪ್ರಾಜ್ಞಃ ಸಕಲಾಸುರವಂದಿತಃ ॥ ೫೨ ॥

ಮೃತಸಂಜೀವಿನೀಂ ವಿದ್ಯಾಂ ಯೋ ವೇದ ಮುನಿದುರ್ಲಭಾಮ್ ।
ಯಥಾಹತಾನ್ ಮೃತಾನ್ ದೇವೈರುತ್ಥಾಪಯತಿ ದಾನವಾನ್ ॥ ೫೩ ॥

---

೪೯. ವ್ಯಸನದಿಂದ ಕುಂದಿಹೊದ ಮನಸ್ಸುಳ್ಳವರಾಗಿ ಅವರೆಲ್ಲರೂ ಅಲ್ಲಿ ಕುಳಿತಿರುವಹಾಗೆಯೆ ಮಂಗಳವನ್ನು ಸೂಚಿಸುವ ಮಹತ್ತರವಾದ ಶುಭ ಶಕುನಗಳು ಅನೇಕವಾಗಿ ತೋರಿದುವು.

೫೦. ಆ ಶಕುನದರ್ಶನದಿಂದ ಸ್ವಲ್ಪಮಟ್ಟಿಗೆ ಶಾಂತಿಗೊಂಡ ಮನಸ್ಸುಳ್ಳ ಆ ಮುನಿಶ್ರೇಷ್ಠರು ಜನನಿಯಿಂದ ಕೂಡಿ ಮತ್ತೆ ಪಿತೃವು ಬದುಕಿ ಬರುವುದನ್ನು ನಿರೀಕ್ಷಿಸುತ್ತ ಕುಳಿತುಕೊಂಡರು.

೫೧. ರಾಜನೇ! ಈ ಸಮಯದಲ್ಲಿ ವಂಶವನ್ನು ಶಾಶ್ವತವಾಗಿ ಪ್ರತಿಷ್ಠೆಗೊಳಿಸಿರುವ ಪ್ರಾಜ್ಞನಾದ ಭೃಗುಮುನಿಯು ವಿಧಿಬಲದಿಂದ ಆಕಸ್ಮಿಕವಾಗಿ ಆ ಸ್ಥಳಕ್ಕೆ ಬಂದನು.

೫೨. ಆ ಭೃಗುಮುನಿಯು ಅಥರ್ವವೇದಕ್ಕೆ ನಿಧಿಪ್ರಾಯನಾಗಿಯೂ ವೇದ ವೇದಾಂಗಗಳ ಪಾರವನ್ನು ಅರಿತಿರುವವನೂ, ಸಕಲ ಶಾಸ್ತ್ರಾರ್ಥ ಜ್ಞಾನವುಳ್ಳವನೂ, ಎಲ್ಲ ಅಸುರರಿಂದ ಪೂಜಿಸಲ್ಪಟ್ಟವನೂ ಮತ್ತು ಮೇಧಾವಿಯೂ ಆಗಿದ್ದನು.

೫೩. ಮತ್ತು ಭೃಗುಮುನಿಯು ಮೃತರನ್ನು ಮತ್ತೆ ಬದುಕಿಸುವ ಮೃತಸಂಜೀವಿನೀ ಎಂಬ ಮುನಿಗಳಿಗೆಲ್ಲ ದುರ್ಲಭವಾದ ವಿದ್ಯೆಯನ್ನು ಅರಿತಿದ್ದನು. ಆದ ರಿಂದ ದೇವತೆಗಳಿಂದ ಕೊಲ್ಲಲ್ಪಟ್ಟು ಸತ್ತು ಹೋದ ದಾನವರನ್ನು ಮತ್ತೆ ಬದುಕಿಸುತ್ತಿದ್ದನು.

6

ಶಾಸ್ತ್ರಮೌಶನಸಂ ಯೇನ ರಾಜ್ಞಾಂ ರಾಜ್ಯಫಲಪ್ರದಮ್ ।
ಪ್ರಣೀತಮನುಜೀವಂತಿ ಸರ್ವೇಽದ್ಯಾಪೀಹ ಪಾರ್ಥಿವಾಃ ॥ ೫೪ ॥

ಸ ತದಾಶ್ರಮಮಾಸಾದ್ಯ ಪ್ರವಿಷ್ಟೋಽಂತರ್ಮಹಾಮುನಿಃ ।
ದದರ್ಶ ತದವಸ್ಥಾಂಸ್ತಾನ್ ಸರ್ವಾನ್ ದುಃಖಪರಿಪ್ಲುತಾನ್ ॥ ೫೫ ॥

ಅಥ ತೇ ತು ಭೃಗುಂ ದೃಷ್ಟ್ವಾ ವಂಶಸ್ಯ ಪಿತರಂ ಮುದಾ ।
ಉತ್ಥಾಯಾಸ್ಮೈ ದದುಶ್ಚಾಪಿ ಸತ್ಕೃತ್ಯ ಪರಮಾಸನಮ್ ॥ ೫೬ ॥

ಸ ಚಾಶೀರ್ಭಿಸ್ತು ತಾನ್ ಸರ್ವಾನಭಿನಂದ್ಯ ಮಹಾಮುನಿಃ ।
ಪಪ್ರಚ್ಛ ಕಿಮಿದಂ ವೃತ್ತಂ ತತ್ ಸರ್ವಂ ತೇ ನ್ಯವೇದಯನ್ ॥ ೫೭ ॥

ತಚ್ಛ್ರುತ್ವಾ ಸ ಭೃಗುಃ ಶೀಘ್ರಂ ಜಲಮಾದಾಯ ಮಂತ್ರವಿತ್ ।
ಸಂಜೀವನ್ಯಾ ವಿದ್ಯಯಾ ತಂ ಸಿಷೇಚ ಪ್ರೋಚ್ಚರನ್ನಿದಮ್ ॥ ೫೮ ॥

---

೫೪. ಈ ಭೃಗುಮುನಿಯಿಂದ ರಾಜರಿಗೆ ರಾಜ್ಯಪ್ರಾಪ್ತಿಗೆ ಸಾಧನವಾದ ಔಶನಸ ವೆಂಬ ನೀತಿ ಶಾಸ್ತ್ರವು ರಚಿಸಲ್ಪಟ್ಟಿದೆ. ಸಕಲ ಪಾರ್ಥಿವರು ಈಗಲೂ ಆ ಮುನಿ ಪ್ರಣೀತವಾದ ಶಾಸ್ತ್ರವನ್ನು ಉಪಜೀವಿಸಿಕೊಂಡಿರುವರು.

೫೫. ಅಂತಹ ಮಹಾ ಮುನಿಯು ಆ ಜಮದಗ್ನಿ ಮುನಿಯ ಆಶ್ರಮಕ್ಕೆ ಬಂದು ಆಶ್ರಮದೊಳಗೆ ಪ್ರವೇಶಮಾಡಿ ದುಃಖದಿಂದ ವ್ಯಾಪಿಸಲ್ಪಟ್ಟು ಕೇವಲ ದುರ್ದಶೆ ಯಲ್ಲಿದ್ದ ಅವರೆಲ್ಲರನ್ನು ನೋಡಿದನು.

೫೬. ಅನಂತರದಲ್ಲಿ ಅವರು ವಂಶಕ್ಕೆ ಪಿತೃಸ್ವರೂಪನಾದ ಆ ಭೃಗುಮುನಿ ಯನ್ನು ನೋಡಿ ಸಂತೋಷದಿಂದ ಮೇಲಕ್ಕೆ ಎದ್ದು ಮುನಿಯನ್ನು ಸತ್ಕರಿಸಿ ಅವನಿಗೆ ಅತ್ಯುತ್ತಮವಾದ ಆಸನವನ್ನು ಕೊಟ್ಟರು.

೫೭. ಆ ಮಹಾ ಮುನಿಯು ಆಶೀರ್ವಚನಗಳಿಂದ ಅವರೆಲ್ಲರನ್ನೂ ಅಭಿನಂದನ ಮಾಡಿ ಇದೇನು? ಎಂದು ಪ್ರಶ್ನಿಸಿದನು. ಆಗ ಅವರೆಲ್ಲರೂ ನಡೆದ ಸಕಲ ವೃತ್ತಾಂತ ವನ್ನು ಮುನಿಗೆ ತಿಳಿಸಿದರು

೫೮. ಅದನ್ನು ಕೇಳಿ ವಿವಿಧ ಮಂತ್ರಜ್ಞನಾದ ಆ ಭೃಗುಮುನಿಯು ಶೀಘ್ರ ವಾಗಿ ಕೈಯಲ್ಲಿ ನೀರನ್ನು ತೆಗೆದುಕೊಂಡು ಸಂಜೀವನ ವಿದ್ಯೆಯಿಂದ ಮಂತ್ರಿಸಿ ಈ ರೀತಿಯಾಗಿ ಹೇಳುತ್ತ ಜಮದಗ್ನಿಯ ದೇಹದ ಮೇಲೆ ಪ್ರೋಕ್ಷಿಸಿದನು.

ಯಜ್ಞಸ್ಯ ತಪಸೋ ವೀರ್ಯಂ ಮಮಾಪಿ ಶುಭಮಸ್ತಿ ಚೇತ್ ।
ತೇನಾಸೌ ಜೀವತಾಚ್ಛೀಘ್ರಂ ಪ್ರಸುಪ್ತ ಇವ ಚೋತ್ಥಿತಃ ॥ ೫೯ ॥

ಏವಮುಕ್ತೇ ಶುಭೇ ವಾಕ್ಯೇ ಭೃಗುಣಾ ಸಾಧುಕಾರಿಣಾ ।
ಸಮುತ್ತಸ್ಥಾವಥಾರ್ಚೀಕಿಃ ಸಾಕ್ಷಾದ್ಭೃಗುರಿವಾಪರಃ ॥ ೬೦ ॥

ದೃಷ್ಟ್ವಾ ತತ್ರ ಸ್ಥಿತಂ ವಂದ್ಯಂ ಭೃಗುಂ ಸ್ವಸ್ಯ ಪಿತಾಮಹಮ್ ।
ನನಾಮ ಭಕ್ತ್ಯಾ ನೃಪತೇ ಕೃತಾಂಜಲಿರುವಾಚ ಹ ॥ ೬೧ ॥

ಜಮದಗ್ನಿರುವಾಚ :—
ಧನ್ಯೋಽಹಂ ಕೃತಕೃತ್ಯೋಽಹಂ ಸಫಲಂ ಜೀವಿತಂ ಚ ಮೇ ॥ ೬೨ ॥

ಯತ್ಪಶ್ಯೇ ಚರಣೌ ತೇಽದ್ಯ ಸುರಾಸುರನಮಸ್ಕೃತೌ ।
ಭಗವನ್ ಕಿಂ ಕರೋಮ್ಯದ್ಯ ಶುಶ್ರೂಷಾಂ ತವ ಮಾನದ ॥ ೬೩ ॥

---

೫೯. ನನ್ನಲ್ಲಿ ಕೂಡ ಯಜ್ಞ-ತಪಸ್ಸು ಮುಂತಾದ ಧರ್ಮ ಕಾರ್ಯಗಳ ವೀರ್ಯವು ಕಲ್ಯಾಣಕಾರಿಯಾಗಿ ಇರುವುದಾದರೆ ಅದರಿಂದ ಈ ಮುನಿಯು ಶೀಘ್ರವಾಗಿ ಬದುಕಿ ನಿದ್ದೆಯಿಂದ ಎಚ್ಚೆತ್ತವನಂತೆ ಮೇಲಕ್ಕೆ ಏಳಲಿ.

೬೦. ಧರ್ಮ ಕಾರ್ಯ ತತ್ಪರನಾದ ಭೃಗುಮುನಿಯು ಶುಭಕರವಾದ ಈ ವಚನವನ್ನು ಆಡಲಾಗಿ ಋಚೀಕಪುತ್ರನಾದ ಜಮದಗ್ನಿಯು ತತ್‌ಕ್ಷಣದಲ್ಲಿ ಮತ್ತೊಬ್ಬ ಭೃಗುಮುನಿಯಂತೆ ಮೇಲಕ್ಕೆ ಎದ್ದನು.

೬೧. ರಾಜನೆ! ಮತ್ತು ಅಲ್ಲಿ ನಿಂತಿದ್ದ ವಂದನಾರ್ಹನಾದ ತನ್ನ ಪಿತಾಮಹನಾದ ಭೃಗುಮುನಿಯನ್ನು ನೋಡಿ ಭಕ್ತಿಯಿಂದ ನಮಸ್ಕರಿಸಿ ಅಂಜಲಿಯನ್ನು ಕಟ್ಟಿಕೊಂಡು ಮಾತನಾಡಿದನು.

೬೨. ಜಮದಗ್ನಿ ಮುನಿಯು ಇಂತೆಂದನು :—ಇಂದಿಗೆ ನಾನು ಧನ್ಯನಾದೆನು. ನಾನು ಕೃತಕೃತ್ಯನಾದೆನು. ನನ್ನ ಜೀವಿತವು ಇಂದಿಗೆ ಸಫಲವಾಯಿತು.

೬೩. ದೇವದಾನವರಿಗೆಲ್ಲ ವಂದನಾರ್ಹಗಳಾದ ನಿನ್ನ ಪಾದಕಮಲಗಳನ್ನು ಇಂದು ನಾನು ನೋಡಿರುವೆನು. ಮಾನವನ್ನು ಪ್ರದಾನಮಾಡುವ ಪೂಜ್ಯನೆ! ಯಾವ ನಿನ್ನ ಆದಿಷ್ಟಕಾರ್ಯವನ್ನು ಮಾಡಿ ನಿನ್ನ ಶುಶ್ರೂಷೆಯನ್ನು ಮಾಡಲಿ?

ಪುನೀಹ್ಯಾತ್ಮಕುಲಂ ಸ್ವಸ್ಯ ಚರಣಾಂಬುಕಣೈರ್ವಿಭೋ ।
ಇತ್ಯುಕ್ತ್ವಾ ಸಹಸಾನೀತಂ ರಾಮೇಣಾರ್ಘ್ಯಂ ಮುದಾನ್ವಿತಃ ॥ ೬೪ ॥

ಪ್ರದದೌ ಪಾದಯೋಸ್ತಸ್ಯ ಭಕ್ತ್ಯಾ ನಮಿತಕಂಧರಃ ।
ತಜ್ಜಲಂ ಶಿರಸಾಧತ್ತ ಸಕುಟುಂಬೋ ಮಹಾಮನಾಃ ॥ ೬೫ ॥

ಅಥ ಸತ್ಕೃತ್ಯ ಸ ಭೃಗುಂ ಪಪ್ರಚ್ಛ ವಿನಯಾನ್ವಿತಃ ।
ಭಗವನ್ ಕಿಂ ಕೃತಂ ತೇನ ರಾಜ್ಞಾ ದುಷ್ಟೇನ ಪಾತಕಮ್ ॥ ೬೬ ॥

ಯಸ್ಯಾತಿಥ್ಯಂ ಹಿ ಕೃತವಾನ್ ಅಹಂ ಸಮ್ಯಗ್ವಿಧಾನತಃ ।
ಸಾಧುಬುದ್ಧ್ಯಾ ಸ ದುಷ್ಟಾತ್ಮಾ ಕಿಂ ಚಕಾರ ಮಹಾಮತೇ ॥ ೬೭ ॥

ವಸಿಷ್ಠ ಉವಾಚ :—

ಏವಂ ಸ ಪೃಷ್ಟೋ ಮತಿಮಾನ್ ಭೃಗುಂ ಸರ್ವವಿದೀಶ್ವರಃ ।
ಚಿರಂ ಧ್ಯಾತ್ವಾ ಸಮಾಲೋಚ್ಯ ಕಾರಣಂ ಪ್ರಾಹ ಭೂಪತೇ ॥ ೬೮ ॥

---

೬೪. ವಿಭುವೆ! ನಿನ್ನ ಚರಣೋದಕ ಬಿಂದುಗಳಿಂದ ನಿನ್ನ ವಂಶವನ್ನು ಪಾವನವನ್ನಾಗಿ ಮಾಡು. ಹೀಗೆಂದು ಹೇಳಿ ರಾಮನಿಂದ ಶೀಘ್ರವಾಗಿ ತರಲ್ಪಟ್ಟ ಪೂಜಾರ್ಥವಾದ ಜಲವನ್ನು ಸಂತೋಷದಿಂದ ಕೈಯಲ್ಲಿ ತೆಗೆದುಕೊಂಡನು.

೬೫. ಮತ್ತು ಭೃಗುಮುನಿಯ ಪಾದಗಳಲ್ಲಿ ಆ ಉದಕವನ್ನು ಸುರಿಸಿ ಉದಾರವಾದ ಚಿತ್ತವುಳ್ಳವನಾಗಿ ಸಕುಟುಂಬನಾಗಿ ಭಕ್ತಿಯಿಂದ ಕತ್ತನ್ನು ಬಾಗಿಸಿ ತೀರ್ಥವನ್ನು ಶಿರಸ್ಸಿನಲ್ಲಿ ಧರಿಸಿದನು.

೬೬. ಅನಂತರದಲ್ಲಿ ಆ ಜಮದಗ್ನಿ ಮುನಿಯು ವಿನಯದಿಂದ ಕೂಡಿ ಭೃಗುಮುನಿಯನ್ನು ಸತ್ಕರಿಸಿ ಈ ರೀತಿಯಾಗಿ ಪ್ರಶ್ನಿಸಿದನು. ಭಗವಂತನೆ! ಆ ದುಷ್ಟನಾದ ರಾಜನಿಂದ ಇಂತಹ ಪಾತಕವು ಏಕೆ ಮಾಡಲ್ಪಟ್ಟಿತು ?

೬೭. ಮಹಾಜ್ಞಾನಿಯೆ! ಸಾಧುಪುರುಷನೆಂಬ ಭಾವನೆಯಿಂದ ಆ ರಾಜನಿಗೆ ನಾನು ಯಥಾವಿಧಿಯಾಗಿ ಮತ್ತು ಚನ್ನಾಗಿ ಆತಿಥ್ಯವನ್ನು ಮಾಡಿದೆನು. ಆ ದುಷ್ಟಾತ್ಮನು ಹೀಗೆ ಏಕೆ ಮಾಡಿದನು ?

೬೮. ಭೂಪತಿಯೆ! ವಸಿಷ್ಠ ಮುನಿಯು ಹೀಗೆ ಹೇಳಿದನು :—ಈ ರೀತಿಯಾಗಿ ಪ್ರಶ್ನಿಸಲ್ಪಟ್ಟಿರುವ ಮೇಧಾವಿಯೂ ಸರ್ವಜ್ಞನೂ ಮತ್ತು ಸರ್ವ ನಿಯಾಮಕನೂ ಆದ ಭೃಗುಮುನಿಯು ಬಹುಕಾಲ ಧ್ಯಾನದೃಷ್ಟಿಯಿಂದ ಎಲ್ಲವನ್ನೂ ಸಮಾಲೋಚಿಸಿ ಇದರ ಕಾರಣವನ್ನು ಹೇಳಿದನು.

ಭೃಗುರುವಾಚ :—

ಶೃಣು ತಾತ ಮಹಾಭಾಗ ಬೀಜಮಸ್ಯ ಹಿ ಕರ್ಮಣಃ ।
ಯಚ್ಚ ವೈ ಕೃತವಾನ್ ಪಾಪಂ ಸರ್ವಜ್ಞಸ್ಯ ತವಾನಘ ॥ ೬೯ ॥

ಶಪ್ತಃ ಪುರಾ ವಸಿಷ್ಠೇನ ನಾಶಾರ್ಥಂ ಸ ಮಹೀಪತಿಃ ।
ದ್ವಿಜಾಪರಾಧತೋ ಮೂಢ ವೀರ್ಯಂ ತೇ ವಿನಶಿಷ್ಯತೇ ॥ ೭೦ ॥

ತತ್ಕಥಂ ವಚನಂ ತಸ್ಯ ಭವಿಷ್ಯತ್ಯನ್ಯಥಾ ಮುನೇಃ
ಅಯಂ ರಾಮೋ ಮಹಾವೀರ್ಯಂ ಪ್ರಸಹ್ಯ ನೃಪಪುಂಗವಮ್ ॥ ೭೧ ॥

ಹನಿಷ್ಯತಿ ಮಹಾಬಾಹೋ ಪ್ರತಿಜ್ಞಾಂ ಕೃತವಾನ್ ಪುರಾ ।
ಯಸ್ಮಾದುರಃ ಪ್ರತಿಹತಂ ತ್ವಯಾ ಮಾತರ್ಮಮಾಗ್ರತಃ ॥ ೭೨ ॥

ಏಕವಿಂಶತಿವಾರಂ ಹಿ ಭೃಶಂ ದುಃಖಪರೀತಯಾ ।
ತ್ರಿಃಸಪ್ತಕೃತ್ವೋ ನಿಃಕ್ಷತ್ರಾಂ ಕರಿಷ್ಯೇ ಪೃಥಿವೀಮಿಮಾಮ್ ॥ ೭೩ ॥

---

೬೯. ಭೃಗುಮುನಿಯು ಇಂತೆಂದನು :—ಮಹಾ ಭಾಗ್ಯಶಾಲಿಯಾದ ವತ್ಸನೆ! ಹೀಗೆ ನಡೆದುದರ ಪರಿಣಾಮಕ್ಕೆ ಬೀಜವನ್ನು ಹೇಳುವೆನು, ಕೇಳು. ನಿಷ್ಕಲಂಕನೆ! ಸರ್ವಜ್ಞನಾದ ನಿನಗೆ ರಾಜನು ಆ ಕಾರಣದಿಂದ ಪಾತಕವನ್ನು ಆಚರಿಸಿದನು

೭೦. ಪೂರ್ವಕಾಲದಲ್ಲಿ ವಸಿಷ್ಠ ಮುನಿಯಿಂದ ಆ ರಾಜನು "ಮೂಢನೆ! ನೀನು ಬ್ರಾಹ್ಮಣನಿಗೆ ಮಾಡಿದ ಅಪರಾಧ ಪಾತಕದಿಂದ ನಿನ್ನ ವೀರ್ಯವು ನಾಶ ಹೊಂದುವುದು" ಎಂದು ಶಪಿಸಲ್ಪಟ್ಟಿರುವನು.

೭೧. ಆ ಮುನಿಯ ಶಾಪವಚನವು ಹೇಗೆ ತಾನೆ ಬದಲಾವಣೆಯನ್ನು ಹೊಂದೀತು? ನಿನ್ನ ಪುತ್ರನಾದ ಈ ರಾಮನು ಮಹಾ ವೀರ್ಯಶಾಲಿಯಾದ ಆ ರಾಜಶ್ರೇಷ್ಠನನ್ನು ಬಲಾತ್ಕಾರದಿಂದ ಬಂಧಿಸುವನು.

೭೨. ಮತ್ತು ಅವನನ್ನು ವಧಮಾಡುವನು. ಮಹಾ ಬಾಹುಬಲಶಾಲಿಯೆ! ರಾಮನು ಮೊದಲು ಈ ರೀತಿಯಾಗಿ ಪ್ರತಿಜ್ಞೆಯನ್ನು ಮಾಡಿರುವನು. ತಾಯಿಯೆ! ನೀನು ನನ್ನೆದುರಿಗೆ ಎದೆಯನ್ನು ಹೊಡೆದುಕೊಂಡಿರುವೆ.

೭೩. ಆಗ ಅತಿಶಯವಾದ ದುಃಖದಿಂದ ಪೀಡಿತಳಾಗಿ ಮತ್ತೆ ಮತ್ತೆ ಇಪ್ಪತ್ತೊಂದುಸಲ ಹೃದಯವನ್ನು ಹೊಡೆದುಕೊಂಡಿದ್ದನ್ನು ಅನುಸರಿಸಿ ಈ ಭೂಮಿಯಲ್ಲಿ ಇಪ್ಪತ್ತೊಂದುಸಲ ಕ್ಷತ್ರಿಯ ಜಾತಿಯನ್ನು ನಿರ್ಮೂಲಮಾಡುವೆನು.

ಅತೋಽಯಂ ನಾರ್ಯಮಾಣೋಽಪಿ ತ್ವಯಾ ಪಿತ್ರಾ ನಿರಂತರಮ್ ।
ಭಾವಿನೋಽರ್ಥಸ್ಯ ಚ ಬಲಾತ್ ಕರಿಷ್ಯತ್ಯೇವ ಮಾನದ ॥ ೭೪ ॥

ಸ ತು ರಾಜಾ ಮಹಾಭಾಗೋ ವೃದ್ಧಾನಾಂ ಪರ್ಯುಪಾಸಿತಾ ।
ದತ್ತಾತ್ರೇಯಾದ್ಧರೇರಂಶಾಲ್ಲಬ್ಧಬೋಧೋ ಮಹಾಮತಿಃ ॥ ೭೫ ॥

ಸಾಕ್ಷಾದ್ಧರೇರ್ಭಕ್ತೋ ಮಹಾತ್ಮಾ ಚ ತದ್ವಧೇ ಪಾತಕಂ ಭವೇತ್ ।
ಏವಮುಕ್ತ್ವಾ ಮಹಾರಾಜಾ ಸ ಭೃಗುರ್ಬ್ರಹ್ಮಣಃ ಸುತಃ
ಯಥಾಗತಂ ಯಯೌ ವಿದ್ವಾನ್ ಭವಿಷ್ಯತ್ಕಾಲಪರ್ಯಯಾತ್ ॥ ೭೬ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ತ್ರಿಂಶತ್ತಮೋಽಧ್ಯಾಯಃ.

---

೭೪. ಮಾನವನ್ನು ತೋರಿಸುವ ಶೀಲವುಳ್ಳವನೆ! ಆದ್ದರಿಂದ ಪಿತೃವಾದ ನಿನ್ನಿಂದ ಅತಿಯಾಗಿ ತಡೆಯಲ್ಪಡುವನಾದರೂ ಅವನು ಅವಶ್ಯಭಾವಿಯಾದ್ದ ಕಾರ್ಯದ ಬಲದಿಂದ ಆ ರಾಜನ ವಧವನ್ನು ಮಾಡುವನು.

೭೫. ಆ ರಾಜನು ಮಹಾತ್ಮನೂ, ವೃದ್ಧರನ್ನು ಸೇವಿಸುವವನೂ, ವಿಷ್ಣುವಿನ ಅಂಶದಿಂದ ಜನಿಸಿದ ದತ್ತಾತ್ರೇಯ ಮುನಿಯಿಂದ ಹೊಂದಿದ ಜ್ಞಾನವುಳ್ಳವನೂ ಮತ್ತು ಮಹಾ ವಿವೇಕಿಯೂ ಆಗಿರುವನು.

೭೬. ಮತ್ತು ಸಕ್ಷಾತ್ತಾಗಿ ವಿಷ್ಣುಭಕ್ತನೂ ಮಹಾತ್ಮನೂ ಆಗಿರುವನು. ಅಂತಹವನ ವಧದಿಂದ ಪಾತಕವು ಉಂಟಾಗುವುದು, ಮಹಾರಾಜನೆ, ಈ ರೀತಿಯಾಗಿ ಬ್ರಹ್ಮದೇವನ ಪುತ್ರನೂ ಜ್ಞಾನಿಯೂ ಆದ ಆ ಭೃಗುಮುನಿಯು ಹೇಳಿ ಭವಿತವ್ಯಕಾಲದ ವಿಪರ್ಯಯಕ್ಕೆ ವಶನಾಗಿ ಬಂದಿರುವ ಮಾರ್ಗವನ್ನು ಅನುಸರಿಸಿ ಹೊರಟುಹೋದನು

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಮೂವತ್ತನೆಯ ಅಧ್ಯಾಯವು ಮುಗಿದುದು.



# ಏಕತ್ರಿಂಶತ್ತಮೋಽಧ್ಯಾಯಃ

**ಸಗರ ಉವಾಚ :—**

**ಬ್ರಹ್ಮಪುತ್ರ ಮಹಾಭಾಗ ವದ ಭಾರ್ಗವಚೇಷ್ಟಿತಮ್ ।**
**ಯಚ್ಚಕಾರ ಮಹಾವೀರ್ಯೋ ರಾಜ್ಞಃ ಕ್ರುದ್ಧೋ ಹಿ ಕರ್ಮಣಾ ॥ ೧ ॥**

**ವಸಿಷ್ಠ ಉವಾಚ :—**

**ಗತೇ ತಸ್ಮಿನ್ ಮಹಾಭಾಗೇ ಭೃಗೌ ಪಿತೃಪರಾಯಣಃ ।**
**ರಾಮಃ ಪ್ರೋವಾಚ ಸಂಕ್ರುದ್ಧೋ ಮುಂಚನ್ ಶ್ವಾಸಾನ್ಮುಹುರ್ಮುಹುಃ ॥ ೨ ॥**

**ಪರಶುರಾಮ ಉವಾಚ :—**

**ಅಹೋ ಪಶ್ಯತ ಮೂಢತ್ವಂ ರಾಜ್ಞೋ ಹ್ಯುತ್ಪಥಗಾಮಿನಃ ।**
**ಕಾರ್ತವೀರ್ಯಸ್ಯ ಯೋ ವಿದ್ವಾಂಶ್ಚಕ್ರೇ ಬ್ರಹ್ಮವಧೋದ್ಯಮಮ್ ॥ ೩ ॥**

**ದೈವಂ ಹಿ ಬಲವನ್ಮನ್ಯೇ ಯತ್ಪ್ರಭಾವಾಚ್ಛರೀರಿಣಃ ।**
**ಶುಭಂ ವಾಪ್ಯಶುಭಂ ಸರ್ವೇ ಪ್ರಕುರ್ವಂತಿ ವಿಮೋಹಿತಾಃ ॥ ೪ ॥**

---

೧. ಸಗರರಾಜನು ಪ್ರಶ್ನಿಸಿದನು :—ಬ್ರಹ್ಮಪುತ್ರನೂ ಮಹಾತ್ಮನೂ ಆದ ವಸಿಷ್ಠಮುನಿಯೆ ! ಪರಶುರಾಮನ ಮುಂದಿನ ಸಕಲ ವೃತ್ತಾಂತವನ್ನು ಹೇಳು. ಮಹಾ ವೀರ್ಯಶಾಲಿಯಾದ ರಾಮನು ರಾಜನ ದುಷ್ಕರ್ಮದಿಂದ ಕ್ರುದ್ಧನಾಗಿ ಏನು ಮಾಡಿದನು ?

೨. ವಸಿಷ್ಠಮುನಿಯು ಈ ರೀತಿಯಾಗಿ ಪ್ರತ್ಯುತ್ತರವಿತ್ತನು :—ಮಹಾ ಭಾಗ್ಯ ಶಾಲಿಯಾದ ಆ ಭೃಗುಮಹಾಮುನಿಯು ಹೊರಟುಹೋದ ಬಳಿಕ ಪಿತೃಭಕ್ತಿಯಲ್ಲಿ ಅತ್ಯಂತಾಸಕ್ತಿಯುಳ್ಳ ರಾಮನು ಬಹು ಕೋಪದಿಂದ ಮತ್ತೆ ಮತ್ತೆ ಶ್ವಾಸವನ್ನು ಬಿಡುತ್ತ ಹೇಳಿದನು.

೩. ಪರಶುರಾಮನು ಈ ರೀತಿಯಾಗಿ ಹೇಳಿದನು :—ತಾನು ಜ್ಞಾನಿಯಾಗಿದ್ದರೂ ಬ್ರಹ್ಮಹತ್ಯೆಯ ಉದ್ಯಮವನ್ನು ನಡೆಸಿದ ಉನ್ಮಾರ್ಗಗಾಮಿಯಾದ ಕಾರ್ತವೀರ್ಯರಾಜನ ಮೂಢತನವನ್ನು ನೋಡಿರಿ. ಬಹು ಖೇದವಾಗುವುದು.

೪. ದೈವವೆಂಬುದು ಎಲ್ಲದಕ್ಕಿಂತಲೂ ಪ್ರಬಲವಾದುದೆಂದು ಅರಿಯುತ್ತೇನೆ. ಅಂತಹ ದೈವಪ್ರಭಾವದಿಂದ ಸಮಸ್ತ ಜಂತುಗಳು ವ್ಯಾಮೋಹಗೊಂಡವುಗಳಾಗಿ ಶುಭ ಅಥವಾ ಅಶುಭಕರ್ಮಗಳನ್ನು ಮಾಡುತ್ತವೆ.

ಶೃಣ್ವಂತು ಋಷಯಃ ಸರ್ವೇ ಪ್ರತಿಜ್ಞಾ ಕ್ರಿಯತೇ ಮಯಾ ।
ಕಾರ್ತವೀರ್ಯಂ ನಿಹತ್ಯಾಜೌ ಪಿತುರ್ವೈರಂ ಪ್ರಸಾಧಯೇ ॥ ೫ ॥

ಯದಿ ರಾಜಾ ಸುರೈಃ ಸರ್ವೈರಿಂದ್ರಾದ್ಯೈರ್ದಾನವೈಸ್ತಥಾ ।
ರಕ್ಷಿಷ್ಯತೇ ತಥಾಪ್ಯೇನಂ ಸಂಹರಿಷ್ಯಾಮಿ ನಾನ್ಯಥಾ ॥ ೬ ॥

ಏವಮುಕ್ತಂ ಸಮಾಕರ್ಣ್ಯ ರಾಮೇಣ ಸುಮಹಾತ್ಮನಾ ।
ಜಮದಗ್ನಿರುವಾಚೇದಂ ಪುತ್ರಂ ಸಾಹಸಭಾಷಿಣಮ್ ॥ ೭ ॥

ಜಮದಗ್ನಿರುವಾಚ :—

ಶೃಣು ರಾಮ ಪ್ರವಕ್ಷ್ಯಾಮಿ ಸತಾಂ ಧರ್ಮಂ ಸನಾತನಮ್ ।
ಯಚ್ಛ್ರುತ್ವಾ ಮಾನವಾಃ ಸರ್ವೇ ಜಾಯಂತೇ ಧರ್ಮಕಾರಿಣಃ ॥ ೮ ॥

ಸಾಧವೋ ಯೇ ಮಹಾಭಾಗಾಃ ಸಂಸಾರಾನ್ಮೋಕ್ಷಕಾಂಕ್ಷಿಣಃ ।
ನ ಕಸ್ಮೈಚಿತ್ ಪ್ರಕುಪ್ಯಂತಿ ನಿಂದಿತಾಸ್ತಾಡಿತಾ ಅಪಿ ॥ ೯ ॥

---

೫. ಸಮಸ್ತ ಮಹರ್ಷಿಗಳೆ! ಕೇಳಿರಿ. ನಾನು ಒಂದು ಪ್ರತಿಜ್ಞೆಯನ್ನು ಕೈಗೊಳ್ಳುವೆನು. ರಣರಂಗದಲ್ಲಿ ಕಾರ್ತವೀರ್ಯಾರ್ಜುನರಾಜನನ್ನು ಸಂಹರಿಸಿ ಪಿತೃವಿನಲ್ಲಿ ಅವನು ಮಾಡಿದ ವೈರಕ್ಕೆ ಪ್ರತೀಕಾರವನ್ನು ಸಾಧಿಸುವೆನು.

೬. ಒಂದುವೇಳೆ ಇಂದ್ರನೇ ಮೊದಲಾದ ನಿಖಿಲ ದೇವತೆಗಳು, ದಾನವರು ಬಂದು ಆ ರಾಜನನ್ನು ರಕ್ಷಿಸಿದರೂ ಕೂಡ ಏನೇ ಆದರೂ ನಾನು ಅವನನ್ನು ಸಂಹರಿಸುವೆನು. ಈ ಪ್ರತಿಜ್ಞೆಯನ್ನು ಅನ್ಯಥಾಮಾಡಲಾರೆ.

೭. ಮಹಾತ್ಮನಾದ ರಾಮನಿಂದ ಹೇಳಲ್ಪಟ್ಟ ವಚನವನ್ನು ಕೇಳಿ ಜಮದಗ್ನಿ ಮುನಿಯು ಸಾಹಸದ ಪ್ರತಿಜ್ಞೆಯನ್ನು ಮಾಡುತ್ತಲಿದ್ದ ಪುತ್ರನನ್ನು ಕುರಿತು ಈ ವಚನವನ್ನು ಹೇಳಿದನು.

೮. ಜಮದಗ್ನಿ ಮುನಿಯು ಹೇಳಿದನು :—ರಾಮನೆ! ನನ್ನ ವಚನವನ್ನು ಕೇಳು. ಸನಾತನ ಧರ್ಮಮಯವಾದ ಸಾಧುಗಳ ಮತವನ್ನು ಹೇಳುತ್ತೇನೆ. ಅದನ್ನು ಕೇಳಿದ ಸಕಲ ಮಾನವರು ಧರ್ಮದ ಆಚರಣದ ಶೀಲವುಳ್ಳವರಾಗುವರು.

೯. ಸಂಸಾರ ದುಃಖದಿಂದ ಮುಕ್ತಿಯನ್ನು ಪ್ರಾರ್ಥಿಸುವ ಮಹಾ ಭಾಗ್ಯಶಾಲಿಗಳಾದ ಸಾಧುಜನರು ಮತ್ತೊಬ್ಬರಿಂದ ನಿಂದಿಸಲ್ಪಟ್ಟರೂ ಅಥವಾ ಹೊಡೆಯಲ್ಪಟ್ಟರೂ ಕೂಡ ಯಾರೊಬ್ಬರಮೇಲೆ ಕೂಡ ಕೋಪಗೊಳ್ಳುವುದಿಲ್ಲ.

ಕ್ಷಮಾಧನಾ ಮಹಾಭಾಗಾ ಯೇ ಚ ದಾಂತಾಸ್ತಪಸ್ವಿನಃ ।
ತೇಷಾಂ ಚೈವಾಕ್ಷಯಾ ಲೋಕಾಃ ಸತತಂ ಸಾಧುಕಾರಿಣಾಮ್ ॥ ೧೦ ॥

ಯಸ್ತು ದುಷ್ಟೈಸ್ತು ದಂಡಾದ್ಯೈರ್ವಚಸಾಪಿ ಚ ತಾಡಿತಃ ।
ನ ಚ ಕ್ಷೋಭಮವಾಪ್ನೋತಿ ಸ ಸಾಧುಃ ಪರಿಕೀರ್ತ್ಯತೇ ॥ ೧೧ ॥

ತಾಡಯೇತ್ತಾಡಯಂತಂ ಯೋ ನ ಚ ಸಾಧುಃ ಸ ಪಾಪಭಾಕ್ ।
ಕ್ಷಮಯಾರ್ಹಣತಾಂ ಪ್ರಾಪ್ತಾಃ ಸಾಧವೋ ಬ್ರಾಹ್ಮಣಾ ವಯಮ್ ॥ ೧೨ ॥

ನರನಾಥವಧೇ ತಾತ ಪಾತಕಂ ಸುಮಹದ್ಭವೇತ್ ।
ತಸ್ಮಾನ್ನಿವಾರಯೇ ತ್ವಾದ್ಯ ಕ್ಷಮಾಂ ಕುರು ತಪಶ್ಚರ ॥ ೧೩ ॥

ವಸಿಷ್ಠ ಉವಾಚ :—

ಏವಂ ಪಿತ್ರಾ ಸಮಾದಿಷ್ಟಂ ವಿಜ್ಞಾಯ ನೃಪನಂದನ ।
ರಾಮಃ ಪ್ರೋವಾಚ ಪಿತರಂ ಕ್ಷಮಾಶೀಲಮರಿಂದಮಮ್ ॥ ೧೪ ॥

---

೧೦. ಸಾಧುಕರ್ಮಾಚರಣ ಶೀಲವುಳ್ಳವರೂ ತಾಳ್ಮೆಯೇ ಧನವಾಗಿ ಉಳ್ಳವರೂ, ಮಹಾತ್ಮರೂ, ಜಿತೇಂದ್ರಿಯರೂ, ಮತ್ತು ಮಹಾ ತಪಸ್ವಿಗಳೂ ಆಗಿರುವ ಸಾಧುಜನರಿಗೆ ಶಾಶ್ವತವಾದ ಪುಣ್ಯಲೋಕಗಳು ಸರ್ವಕಾಲದಲ್ಲಿಯೂ ದೊರೆಯುವುವು.

೧೧. ಯಾವ ಮಹಾತ್ಮನು ದುರುಳರಿಂದ ದಂಡವುಂತಾದುವುಗಳಿಂದಲಾಗಲಿ ಕೆಟ್ಟ ವಚನಗಳಿಂದಲಾಗಲಿ ಹೊಡೆಯಲ್ಪಟ್ಟರೂ ಸ್ವಲ್ಪವಾದರೂ ಮನಸ್ಸಿನಲ್ಲಿ ಕ್ಷೋಭವನ್ನು ಹೊಂದುವುದಿಲ್ಲವೊ ಅವನು ಸಾಧುವೆಂದು ಗಣಿಸಲ್ಪಡುತ್ತಾನೆ.

೧೨. ತನ್ನನ್ನು ಹೊಡೆಯುತ್ತಲಿದ್ದವನನ್ನು ಕೋಪದಿಂದ ಯಾರು ಪ್ರತಿಯಾಗಿ ಹೊಡೆಯುವುದಿಲ್ಲವೋ ಅಂತಹ ಸಾಧುವು ಪಾಪಭಾಗಿಯಾಗುವುದಿಲ್ಲ. ತಾಳ್ಮೆಯೆಂಬ ಮಹಾ ಗುಣದಿಂದ ಪೂಜ್ಯತೆಯನ್ನು ಹೊಂದಿರುವ ಸಾಧುಗಳಾದ ಬ್ರಾಹ್ಮಣರು ನಾವು.

೧೩. ವತ್ಸನೆ! ಮಹಾರಾಜನನ್ನು ವಧಿಸುವುದರಿಂದ ಮಹಾಪಾತಕವು ಪ್ರಾಪ್ತವಾಗುವುದು. ಆದುದರಿಂದ ಪಾತಕದದಿಂದ ನಿನ್ನನ್ನು ನಿವಾರಣಮಾಡುತ್ತಲಿರುವೆನು. ರಾಮನೆ! ಈಗ ಅವನಲ್ಲಿ ಕ್ಷಮೆಯನ್ನು ತೋರಿಸಿ ನೀನು ತಪಸ್ಸನ್ನು ಆಚರಿಸು.

೧೪. ವಸಿಷ್ಠ ಮುನಿಯು ಮುಂದುವರಿಸಿ ಹೇಳಿದನು:—ರಾಜಪುತ್ರನೆ! ಈ ರೀತಿಯಾಗಿ ಜನಕನಿಂದ ಆಜ್ಞಾಪಿಸಲ್ಪಟ್ಟಿರುವುದನ್ನು ತಿಳಿದು ರಾಮನು ಕ್ಷಮಾಶೀಲನೂ ಮತ್ತು ಶತ್ರುಗಳನ್ನು ನಿಗ್ರಹಿಸಿದವನೂ ಆದ ತಂದೆಯನ್ನು ಕುರಿತು ಹೀಗೆ ಹೇಳಿದದು.

**ಪರಶುರಾಮ ಉವಾಚ :—**

ಶೃಣು ತಾತ ಮಹಾಪ್ರಾಜ್ಞ ವಿಜ್ಞಪ್ತಿಂ ಮಮ ಸಾಂಪ್ರತಮ್ ।
ಭವತಾ ಶಮ ಉದ್ದಿಷ್ಟಃ ಸಾಧೂನಾಂ ಸುಮಹಾತ್ಮನಾಮ್ ॥ ೧೫ ॥

ಸ ಶಮಃ ಸಾಧುದೀನೇಷು ಗುರುಷ್ವೀಶ್ವರಭಾವನೈಃ ।
ಕರ್ತವ್ಯೋ ದುಷ್ಟಚೇಷ್ಟೇಷು ನ ಶಮಃ ಸುಖದೋ ಭವೇತ್ ॥ ೧೬ ॥

ತಸ್ಮಾದಸ್ಯ ವಧಃ ಕಾರ್ಯಃ ಕಾರ್ತವೀರ್ಯಸ್ಯ ವೈ ಮಯಾ ।
ದೇಹ್ಯಾಜ್ಞಾಂ ಮಾನನೀಯಾದ್ಯ ಸಾಧಯೇ ವೈರಮಾತ್ಮನಃ ॥ ೧೭ ॥

**ಜಮದಗ್ನಿರುವಾಚ :—**

ಶೃಣು ರಾಮ ಮಹಾಭಾಗ ವಚೋ ಮಮ ಸಮಾಹಿತಃ ।
ಕರಿಷ್ಯಸಿ ಯಥಾ ಭಾವಿ ತಥಾ ನೈವಾನ್ಯಥಾ ಭವೇತ್ ॥ ೧೮ ॥

---

೧೫. ಪರಶುರಾಮನು ಇಂತೆಂದನು:—ಮಹಾ ಪ್ರಜ್ಞಾಶಾಲಿಯಾದ ತಂದೆಯೆ! ಈಗ ನನ್ನದೊಂದು ವಿಜ್ಞಾಪನೆಯನ್ನು ಕೇಳು. ಮಹಾತ್ಮರೆನಿಸಿರುವ ಸಾಧು ಜನರಿಗೆ ಶಮವು ಪ್ರಧಾನವಾಗಿ ಕರ್ತವ್ಯವೆಂದು ನಿನ್ನಿಂದ ಉಪದೇಶಿಸಲ್ಪಟ್ಟಿದೆ.

೧೬. ಆದರೆ ಸಾಧುಗಳು, ದೀನರು, ಮತ್ತು ಗುರುಗಳು ಮುಂತಾದ ಸತ್ಪಾತ್ರದಲ್ಲಿ ಈಶ್ವರ ಭಾವನೆಯಿಂದ ಇದ್ದು ಅಂತಹ ಶಮವನ್ನು ಆಚರಿಸಬೇಕು. ದುಷ್ಟವಾದ ಕಾರ್ಯನಿರತರಾದವರಲ್ಲಿ ಶಾಂತಿಯಿಂದ ವರ್ತನವು ಸುಖಸಾಧನವಾಗಲಾರದು.

೧೭. ಮಾನ್ಯನಾದ ತಂದೆಯೇ ! ಆದ್ದರಿಂದ ಖಲನಾದ ಆ ಕಾರ್ತವೀರ್ಯಾರ್ಜುನನನ್ನು ನಾನು ವಧಮಾಡುವೆನು. ಅದಕ್ಕೆ ಈಗ ಆಜ್ಞೆಯನ್ನು ಕೊಡು. ನನ್ನಲ್ಲಿ ಆಚರಿಸಿದ ವೈರಕ್ಕೆ ಪ್ರತೀಕಾರವನ್ನು ಸಾಧಿಸುವೆನು.

೧೮. ಜಮದಗ್ನಿಮುನಿಯು ಇಂತೆಂದನು :—ಮಹಾ ಭಾಗ್ಯವಂತನಾದ ರಾಮನೆ! ಸಮಾಧಾನದಿಂದ ಕೂಡಿದವನಾಗಿ ನನ್ನ ವಚನವನ್ನು ಕೇಳು. ಭವಿತವ್ಯವಿರುವಂತೆ ನೀನು ನಿನ್ನ ಕಾರ್ಯವನ್ನು ಮಾಡುತ್ತಿ. ಅದು ಎಂದಿಗೂ ಬದಲಾಯಿಸುವುದಿಲ್ಲ.

ಇತೋ ವ್ರಜ ತ್ವಂ ಬ್ರಹ್ಮಾಣಂ ಪೃಚ್ಛ ತಾತ ಹಿತಾಹಿತಮ್ ।
ಸ ಯದ್ವದಿಷ್ಯತಿ ವಿಭುಸ್ತತ್ಕರ್ತಾ ನಾತ್ರ ಸಂಶಯಃ ॥ ೧೯ ॥

ವಸಿಷ್ಠ ಉವಾಚ :—
ಏವಮುಕ್ತಃ ಸ ಪಿತರಂ ನಮಸ್ಕೃತ್ಯ ಮಹಾಮತಿಃ ।
ಜಗಾಮ ಬ್ರಹ್ಮಣೋ ಲೋಕಮಗಮ್ಯಂ ಪ್ರಾಕೃತೈರ್ಜನೈಃ ॥ ೨೦ ॥

ದದರ್ಶ ಬ್ರಹ್ಮಣೋ ಲೋಕಂ ಶಾತಕೌಂಭವಿನಿರ್ಮಿತಮ್ ।
ಸ್ವರ್ಣಪ್ರಾಕಾರಸಂಯುಕ್ತಂ ಮಣಿಸ್ತಂಭೈರ್ವಿಭೂಷಿತಮ್ ॥ ೨೧ ॥

ತತ್ರಾಪಶ್ಯತ್ ಸಮಾಸೀನಂ ಬ್ರಹ್ಮಾಣಮಮಿತೌಜಸಮ್ ।
ರತ್ನಸಿಹ್ಮಾಸನೇ ರಮ್ಯೇ ರತ್ನಭೂಷಣಭೂಷಿತಮ್ ॥ ೨೨ ॥

ಸಿದ್ಧೇಂದ್ರೈಶ್ಚ ಮುನೀಂದ್ರೈಶ್ಚ ವೇಷ್ಟಿತಂ ಧ್ಯಾನತತ್ಪರೈಃ ।
ವಿದ್ಯಾಧರೀಣಾಂ ನೃತ್ಯಂ ಚ ಪಶ್ಯಂತಂ ಸಸ್ಮಿತಂ ಮುದಾ ॥ ೨೩ ॥

---

೧೯. ವತ್ಸನೆ! ಆದರೆ ನೀನು ಈಗ ಇಲ್ಲಿಂದ ಬ್ರಹ್ಮದೇವನ ಸಮೀಪಕ್ಕೆ ಹೋಗಿ ಅವನಲ್ಲಿ ಹಿತ-ಅಹಿತಗಳನ್ನು ಪ್ರಶ್ನಮಾಡು. ಪ್ರಭುವಾದ ಬ್ರಹ್ಮದೇವನು ಹೇಗೆ ಆಜ್ಞಾಪಿಸುವನೋ ಅದರಂತೆ ಮುಂದೆ ಆಚರಿಸು. ಅದರಲ್ಲಿ ಸಂಶಯವಿಲ್ಲ.

೨೦. ವಸಿಷ್ಠ ಮುನಿಯು ಇಂತೆಂದನು :—ತಂದೆಯಿಂದ ಈ ರೀತಿಯಾಗಿ ಹೇಳಲ್ಪಟ್ಟಿರುವ ಮಹಾ ಮೇಧಾವಿಯಾದ ರಾಮನು ತಂದೆಯನ್ನು ನಮಸ್ಕರಿಸಿ ಪ್ರಾಕೃತ ಜನರಿಗೆ ಅಗಮ್ಯವಾದ ಬ್ರಹ್ಮಲೋಕವನ್ನು ಕುರಿತು ಪ್ರಯಾಣಮಾಡಿದನು.

೨೧. ಅಲ್ಲಿ ಸುವರ್ಣದಿಂದ ನಿರ್ಮಿಸಲ್ಪಟ್ಟ, ಸುವರ್ಣ ಪ್ರಾಕಾರಗಳಿಂದ ಸುತ್ತಲ್ಪಟ್ಟಿರುವ ಮತ್ತು ರತ್ನಮಯವಾದ ಸ್ತಂಭಗಳಿಂದ ಅಲಂಕರಿಸಲ್ಪಟ್ಟ ಬ್ರಹ್ಮನ ಲೋಕವನ್ನು ನೋಡಿದನು.

೨೨. ಅಲ್ಲಿ ರತ್ನಮಯವಾದ ಆಭರಣಗಳಿಂದ ಅಲಂಕರಿಸಲ್ಪಟ್ಟವನಾಗಿ ರಮ್ಯವಾದ ರತ್ನಮಯ ಸಿಹ್ಮಾಸನದಲ್ಲಿ ಕುಳಿತುಕೊಂಡಿರುವ, ಅಪರಿಮಿತವಾದ ಪ್ರಭಾವವುಳ್ಳ ಬ್ರಹ್ಮದೇವನನ್ನು ನೋಡಿದನು.

೨೩. ತನ್ನ ಸುತ್ತಲೂ ಇರುವ ಧ್ಯಾನದಲ್ಲಿ ಆಸಕ್ತರಾಗಿರುವ ಶ್ರೇಷ್ಠರಾದ ಸಾಧು-ಸಿದ್ಧರಿಂದಲೂ, ಮಹರ್ಷಿಗಳಿಂದಲೂ ಸುತ್ತುವರಿಯಲ್ಪಟ್ಟವನಾಗಿ ವಿದ್ಯಾಧರಾಂಗನೆಯರ ನೃತ್ಯವನ್ನು ಸಂತೋಷದಿಂದ ನೋಡುತ್ತ ಮಂದಹಾಸದಿಂದ ಕೂಡಿದ ಬ್ರಹ್ಮದೇವನನ್ನು ನೋಡಿದನು.

ತಪಸಾಂ ಫಲದಾತಾರಂ ಕರ್ತಾರಂ ಜಗತಾಂ ವಿಭುಮ್ ।
ಪರಿಪೂರ್ಣತಮಂ ಬ್ರಹ್ಮ ಧ್ಯಾಯಂತಂ ಯತಮಾನಸಮ್ ॥ ೨೪ ॥

ಗುಹ್ಯಯೋಗಂ ಪ್ರವೋಚಂತಂ ಭಕ್ತವೃಂದೇಷು ಸಂತತಮ್ ।
ದೃಷ್ಟ್ವಾ ತಮವ್ಯಯಂ ಭಕ್ತ್ಯಾ ಪ್ರಣನಾಮ ಭೃಗೂದ್ವಹಃ ॥ ೨೫ ॥

ಸ ದೃಷ್ಟ್ವಾ ವಿನತಂ ರಾಮಮಾಶೀರ್ಭಿರಭಿನಂದ್ಯ ಚ ।
ಪಪ್ರಚ್ಛ ಕುಶಲಂ ವತ್ಸ ಕಥಮಾಗಮನಂ ಕೃಥಾಃ ॥ ೨೬ ॥

ಸಂಪೃಷ್ಟೋ ವಿಧಿನಾ ರಾಮಃ ಪ್ರೋವಾಚಾಖಿಲಮಾದಿತಃ ।
ವೃತ್ತಾಂತಂ ಕಾರ್ತವೀರ್ಯಸ್ಯ ಪಿತುಃ ಸ್ವಸ್ಯ ಮಹಾತ್ಮನಃ ॥ ೨೭ ॥

ತಚ್ಛ್ರುತ್ವಾ ಸಕಲಂ ಬ್ರಹ್ಮಾ ವಿಜ್ಞಾತಾರ್ಥೋಽಪಿ ಮಾನದ ।
ಉವಾಚ ರಾಮಂ ಧರ್ಮಿಷ್ಠಂ ಪರಿಣಾಮಸುಖಾವಹಮ್ ॥ ೨೮ ॥

---

೨೪. ಮತ್ತು ತಪಸ್ವಿಗಳು ಆಚರಿಸಿದ ತಪಸ್ಸಿಗೆ ಫಲವನ್ನು ಕೊಡುವವನೂ, ಪ್ರಪಂಚವನ್ನು ನಿರ್ಮಾಣಮಾಡುವವನೂ, ಪ್ರಭುವೂ, ಪರಿಪೂರ್ಣವಾದ ಬ್ರಹ್ಮ ವಸ್ತುವನ್ನು ಧ್ಯಾನಮಾಡುವವನೂ ಮತ್ತು ನಿಗ್ರಹಿಸಲ್ಪಟ್ಟ ಮನಸ್ಸುಳ್ಳವನೂ ಆದ ಬ್ರಹ್ಮನನ್ನು ನೋಡಿದನು.

೨೫. ಭಕ್ತರ ಸಂಘಗಳಲ್ಲಿ ಸಂತತವಾಗಿ ರಹಸ್ಯವಾದ ಯೋಗಮಾರ್ಗವನ್ನು ಉಪದೇಶಮಾಡುತ್ತಲಿರುವ, ಶಾಶ್ವತನಾದ ಆ ಬ್ರಹ್ಮದೇವನನ್ನು ಭೃಗುವಂಶವರ್ಯ ನಾದ ರಾಮನು ಭಕ್ತಿಯಿಂದ ಪ್ರಣಾಮಮಾಡಿದನು.

೨೬. ಆಗ ಬ್ರಹ್ಮದೇವನು ತನ್ನನ್ನು ನಮಸ್ಕರಿಸಿದ ವಿನೀತನಾದ ರಾಮನನ್ನು ನೋಡಿ ಆಶೀರ್ವಾದಗಳಿಂದ ಅಭಿನಂದನಮಾಡಿ ವತ್ಸನೆ, ಕ್ಷೇಮವೆ? ನೀನು ಏಕೆ ಇಲ್ಲಿಗೆ ಬಂದಿರುವೆ? ಎಂದು ಪ್ರಶ್ನಿಸಿದನು.

೨೭. ಹೀಗೆ ಬ್ರಹ್ಮನಿಂದ ಪ್ರಶ್ನಿಸಲ್ಪಟ್ಟ ರಾಮನು ಕಾರ್ತವೀರ್ಯರಾಜನ, ಮತ್ತು ಮಹಾತ್ಮನಾದ ತನ್ನ ತಂದೆಯ ಸಮಸ್ತ ವೃತ್ತಾಂತವನ್ನೂ ಆದಿಯಿಂದ ಕಡೆಯವರೆಗೂ ನಿವೇದನಮಾಡಿದನು.

೨೮. ಮಾನಶಾಲಿಯೆ! ಸಕಲವನ್ನು ತಿಳಿದವನಾದರೂ ಬ್ರಹ್ಮನು ಆ ಎಲ್ಲ ಸಮಾಚಾರವನ್ನು ಕೇಳಿ ಧರ್ಮಿಷ್ಠನಾದ ರಾಮನನ್ನು ಕುರಿತು ಪರಿಣಾಮದಲ್ಲಿ ಸುಖ ಕರವಾದ ವಚನವನ್ನು ಆಡಿದನು.

ಪ್ರತಿಜ್ಞಾ ದುರ್ಲಭಾ ವತ್ಸ ಯಾಂ ಭವಾನ್ ಕೃತವಾನ್ ರುಷಾ ।
ಸೃಷ್ಟಿರೇಷಾ ಭಗವತಃ ಸಂಭವೇತ್ ಕೃಪಯಾ ವಟೋ ॥ ೨೯ ॥

ಜಗತ್ ಸೃಷ್ಟಂ ಮಯಾ ತಾತ ಸಂಕ್ಲೇಶೇನ ತದಾಜ್ಞಯಾ ।
ತನ್ನಾಶಕಾರಿಣೀ ಚೈವ ಪ್ರತಿಜ್ಞಾ ಭವತಾ ಕೃತಾ ॥ ೩೦ ॥

ತ್ರಿಃಸಪ್ತಕೃತ್ವೋ ನಿರ್ಭೂಪಾಂ ಕರ್ತುಮಿಚ್ಛಸಿ ಮೇದಿನೀಮ್ ।
ಏಕಸ್ಯ ರಾಜ್ಞೋ ದೋಷೇಣ ಪಿತುಃ ಪರಿಭವೇನ ಚ ॥ ೩೧ ॥

ಬ್ರಹ್ಮಕ್ಷತ್ರಿಯವಿಟ್‌ಶೂದ್ರೈಃ ಸೃಷ್ಟಿರೇಷಾ ಸನಾತನೀ ।
ಆವಿರ್ಭೂತಾ ತಿರೋಭೂತಾ ಹರೇರೇವ ಪುನಃ ಪುನಃ ॥ ೩೨ ॥

ಅವ್ಯರ್ಥಾ ತ್ವತ್ಪ್ರತಿಜ್ಞಾ ತು ಭವಿತ್ರೀ ಪ್ರಾಕ್ತನೇನ ಚ ।
ಯದ್ವಾಯಾಸೇನ ತೇ ಕಾರ್ಯಸಿದ್ಧಿರ್ಭವಿತುಮರ್ಹತಿ ॥ ೩೩ ॥

---

೨೯. ವತ್ಸನೆ! ಪೂರ್ವದಲ್ಲಿ ನೀನು ಕೋಪದಿಂದ ಯಾವ ಪ್ರತಿಜ್ಞೆಯನ್ನು ಮಾಡಿರುವೆಯೊ ಆ ಪ್ರತಿಜ್ಞೆಯು ನೆರವೇರುವುದು ಅತಿ ಕಷ್ಟಸಾಧ್ಯವು, ವಟುವೆ! ಈ ಜಗತ್ತಿನ ಸೃಷ್ಟಿಯೆಲ್ಲವೂ ಭಗವಂತನ ಕೃಪೆಯಿಂದ ಸಂಭವಿಸತಕ್ಕುದಾಗಿದೆ.

೩೦. ವತ್ಸನೆ! ಈ ಜಗತ್ತು ಭಗವಂತನ ಆಜ್ಞೆಯನ್ನು ಅನುಸರಿಸಿ ಅತಿ ಕ್ಲೇಶದಿಂದ ನನ್ನಿಂದ ನಿರ್ಮಿಸಲ್ಪಟ್ಟಿದೆ. ಅಂತಹ ಜಗತ್ತನ್ನು ನಾಶಮಾಡುವಂತಹ ಪ್ರತಿಜ್ಞೆಯು ನಿನ್ನಿಂದ ಮಾಡಲ್ಪಟ್ಟಿರುವುದು.

೩೧. ಒಬ್ಬ ರಾಜನಲ್ಲಿರುವ ದೋಷದಿಂದ ನಿನ್ನ ತಂದೆಗೆ ತಿರಸ್ಕಾರವುಂಟಾ ದುದರಿಂದ ನಿಖಿಲ ಭೂಮಿಯನ್ನು ಇಪ್ಪತ್ತೊಂದುಸಲ ಕ್ಷತ್ರಿಯರ ಬೀಜವೇ ಇಲ್ಲ ದಂತೆ ಮಾಡಲು ಪ್ರತಿಜ್ಞೆಯನ್ನು ಮಾಡಿರುತ್ತೀ.

೩೨. ಬ್ರಾಹ್ಮಣ-ಕ್ಷತ್ರಿಯ-ವೈಶ್ಯ ಮತ್ತು ಶೂದ್ರಮಯವಾದ ಈ ಜಗತ್ತಿನ ಸೃಷ್ಟಿಯು ಅನಾದಿಯಾಗಿ ಭಗವಂತನಾದ ವಿಷ್ಣುವಿನಿಂದ ಮತ್ತೆ ಮತ್ತೆ ಆವಿರ್ಭಾವ-ತಿರೋಭಾವಗಳನ್ನು ಹೊಂದಿರುವುದು.

೩೩. ಆದರೆ ನೀನು ಮಾಡಿರುವ ಪ್ರತಿಜ್ಞೆಯೂ ಕೂಡ ಪೂರ್ವಕರ್ಮವಶ ದಿಂದ ನೆರವೇರಿ ಅಮೋಘವಾಗುವುದು. ಒಂದುವೇಳೆ ಆಯಾಸದಿಂದ ನಿನ್ನ ಇಷ್ಟ ವಾದ ಕಾರ್ಯಸಿದ್ಧಿಯು ಆಗಬಹುದು.

ಶಿವಲೋಕಂ ಪ್ರಯಾಹಿ ತ್ವಂ ಶಿವಸ್ಯಾಜ್ಞಾಮವಾಪ್ನುಹಿ ।
ಪೃಥಿವ್ಯಾಂ ಬಹವೋ ಭೂಪಾಃ ಸಂತಿ ಶಂಕರಕಿಂಕರಾಃ ॥ ೩೪ ॥

ವಿನೈವಾಜ್ಞಾಂ ಮಹೇಶಸ್ಯ ಕೋ ವಾ ತಾನ್ ಹಂತುಮೀಶ್ವರಃ ।
ಬಿಭ್ರತಃ ಕವಚಾನ್ಯಂಗೇ ಶಕ್ತೀಶ್ಚಾಪಿ ದುರಾಸದಾಃ ॥ ೩೫ ॥

ಉಪಾಯಂ ಕುರು ಯತ್ನೇನ ಜಯಬೀಜಂ ಶುಭಾವಹಮ್ ।
ಉಪಾಯೇ ತು ಸಮಾರಬ್ಧೇ ಸರ್ವೇ ಸಿದ್ಧ್ಯಂತ್ಯುಪಕ್ರಮಾಃ ॥ ೩೬ ॥

ಶ್ರೀ ಕೃಷ್ಣಮಂತ್ರಂ ಕವಚಂ ಗೃಹ್ಣ ವತ್ಸ ಗುರೋರ್ಹರಾತ್ ।
ದುರ್ಲಂಘ್ಯಂ ವೈಷ್ಣವಂ ತೇಜಃ ಶಿವಭಕ್ತಿರ್ವಿಜೇಷ್ಯತಿ ॥ ೩೭ ॥

ತ್ರೈಲೋಕ್ಯವಿಜಯಂ ನಾಮ ಕವಚಂ ಪರಮಾದ್ಭುತಮ್ ।
ಯಥಾ ಕಥಂ ಚ ವಿಜ್ಞಾಪ್ಯ ಶಂಕರಂ ಲಭ ದುರ್ಲಭಮ್ ॥ ೩೮ ॥

---

೩೪. ಆದ್ದರಿಂದ ನೀನು ಈಗ ಶಿವನ ಲೋಕಕ್ಕೆ ಹೋಗಿ ಶಿವನ ಆಜ್ಞೆಯನ್ನು ಸ್ವೀಕರಿಸು. ಪೃಥಿವಿಯಲ್ಲಿ ಅನೇಕಮಂದಿ ರಾಜರು ಶಿವನಿಗೆ ಭಕ್ತರಾದ ಕಿಂಕರರಾಗಿರುವರು.

೩೫. ಅಂತಹ ಶಿವಭಕ್ತರಾದ ರಾಜರು ಶರೀರದಲ್ಲಿ ಕವಚಗಳನ್ನು ಧರಿಸಿದವರೂ, ಅಲಭ್ಯವಾದ ಅಪೂರ್ವಶಕ್ತಿಯಿಂದ ಕೂಡಿದವರೂ ಆಗಿರುವರು. ಅವರನ್ನು ಶಿವನ ಆಜ್ಞೆಯಿಲ್ಲದೆ ಯಾರುತಾನೆ ಸಂಹರಿಸಲು ಶಕ್ತನಾಗುವನು ?

೩೬. ಆದ್ದರಿಂದ ನೀನು ಪ್ರಯತ್ನದಿಂದ ಮಂಗಳಕರವೂ ಜಯಸಿದ್ಧಿಗೆ ಬೀಜವೂ ಆದ ಒಂದು ಉಪಾಯವನ್ನು ಆಚರಿಸು. ಉಪಾಯದಿಂದ ಪ್ರಾರಂಭ ಮಾಡಿದರೆ ಸರ್ವ ಉದ್ಯಮಗಳೂ ಕಾರ್ಯಸಿದ್ಧಿಯನ್ನು ಉಂಟುಮಾಡುವುವು.

೩೭. ವತ್ಸನೆ ! ಗುರುವಾದ ಶಂಕರನಿಂದ ಕವಚರೂಪವಾದ ಶ್ರೀಕೃಷ್ಣದೇವತೆಯ ಮಂತ್ರವನ್ನು ಉಪದೇಶವನ್ನು ತೆಗೆದುಕೊ. ಅತಿಕ್ರಮಿಸಲು ಆಗದಿರುವ ವೈಷ್ಣವ ತೇಜಸ್ಸನ್ನು ಶಂಕರನ ಶಕ್ತಿಯು ಗೆಲ್ಲಬಲ್ಲುದು.

೩೮. ತ್ರೈಲೋಕ್ಯವನ್ನು ಜಯಿಸುವ ಶಕ್ತಿಯುಳ್ಳದ್ದರಿಂದ ತ್ರೈಲೋಕ್ಯ ವಿಜಯವೆಂಬ ಅನ್ವರ್ಥನಾಮಾಂಕಿತವಾದ ಆ ಕವಚವು ಅತ್ಯಂತ ಅದ್ಭುತವಾದುದು. ಹೇಗಾದರೂ ಶಂಕರನನ್ನು ವಿಜ್ಞಾಪಿಸಿಕೊಂಡು ದುರ್ಲಭವಾದ ಆ ಕವಚವನ್ನು ಅವನಿಂದ ಹೊಂದು.

**ಪ್ರಸನ್ನಃ ಸ ಗುಣೈಸ್ತುಭ್ಯಂ ಕೃಪಾಲುರ್ದೀನವತ್ಸಲಃ ।**
**ದಿವ್ಯಪಾಶುಪತಂ ಚಾಪಿ ದಾಸ್ಯತ್ಯೇವ ನ ಸಂಶಯಃ　　　　॥ ೩೯ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ**
**ಏಕತ್ರಿಂಶತ್ತಮೋಽಧ್ಯಾಯಃ**

---

೩೯. ನಿನ್ನ ಗುಣಗಳಿಂದ ಪ್ರಸನ್ನನಾದ ಆ ಶಂಕರನು ಸ್ವಭಾವವಾಗಿ ದೀನರಲ್ಲಿ ವಾತ್ಸಲ್ಯವುಳ್ಳವನೂ ನಿನ್ನಲ್ಲಿ ದಯಾಳುವೂ ಆಗಿ ಕವಚವನ್ನೂ ದಿವ್ಯವಾದ ಪಾಶುಪತಾಸ್ತ್ರವನ್ನೂ ನಿನಗೆ ಕೊಟ್ಟೇಕೊಡುವನು. ಇದರಲ್ಲಿ ಸಂಶಯವಿಲ್ಲ.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಮೂವತ್ತೊಂದನೆಯ ಅಧ್ಯಾಯವು ಮುಗಿದುದು.



# ದ್ವಾತ್ರಿಂಶತ್ತಮೋಽಧ್ಯಾಯಃ

ವಸಿಷ್ಠ ಉವಾಚ :—

ಬ್ರಹ್ಮಣೋ ವಚನಂ ಶ್ರುತ್ವಾ ಸ ಪ್ರಣಮ್ಯ ಜಗದ್ಗುರುಮ್ ।
ಪ್ರಸನ್ನಚೇತಾಃ ಸುಭೃಶಂ ಶಿವಲೋಕಂ ಜಗಾಮ ಹ ॥ ೧ ॥

ಲಕ್ಷಯೋಜನಮೂರ್ಧ್ವಂ ಚ ಬ್ರಹ್ಮಲೋಕಾದ್ವಿಲಕ್ಷಣಮ್ ।
ಅಥ ನಿರ್ವಚನೀಯಂ ಚ ಯೋಗಿಗಮ್ಯಂ ಪರಾತ್ಪರಮ್ ॥ ೨ ॥

ವೈಕುಂಠೋ ದಕ್ಷಿಣೇ ಯಸ್ಮಾದ್ಗೌರೀಲೋಕಶ್ಚ ವಾಮತಃ ।
ಯದಧೋ ಧ್ರುವಲೋಕಶ್ಚ ಸರ್ವಲೋಕಪರಸ್ತು ಸಃ ॥ ೩ ॥

ತಪೋವೀರ್ಯಗತೀ ರಾಮಃ ಶಿವಲೋಕಂ ದದರ್ಶ ಚ ।
ಉಪಮಾನೇನ ರಹಿತಂ ನಾನಾಕೌತುಕಸಂಯುತಮ್ ॥ ೪ ॥

---

೧. ವಸಿಷ್ಠ ಮುನಿಯು ಇಂತೆಂದನು :–ಬ್ರಹ್ಮನ ಈ ವಚನವನ್ನು ಕೇಳಿ ಆ ರಾಮನು ಜಗದ್ಗುರುವಾದ ಬ್ರಹ್ಮದೇವನನ್ನು ನಮಸ್ಕರಿಸಿ ಪ್ರಸನ್ನವಾದ ಚಿತ್ತವುಳ್ಳವನಾಗಿ ಶೀಘ್ರವಾಗಿ ಅಲ್ಲಿಂದ ಶಿವಲೋಕಕ್ಕೆ ಪ್ರಯಾಣಮಾಡಿದನು.

೨. ಆ ಶಿವಲೋಕವು ಬ್ರಹ್ಮಲೋಕದಿಂದ ಒಂದು ಲಕ್ಷಯೋಜನ ಊರ್ಧ್ವಭಾಗದಲ್ಲಿರುವುದೂ, ವಿಲಕ್ಷಣವಾದುದೂ, ಅತ್ಯಂತ ಸ್ತೋತ್ರಾರ್ಹವಾದುದೂ, ಯೋಗಿಗಳಿಗೆ ಮಾತ್ರ ಗಮ್ಯವೂ ಮತ್ತು ಉತ್ಕೃಷ್ಟ ವಸ್ತುಗಳಿಗಿಂತ ಪರಮೋತ್ಕೃಷ್ಟವೂ ಆಗಿದೆ.

೩. ಆ ಶಿವಲೋಕಕ್ಕೆ ದಕ್ಷಿಣ ಭಾಗದಲ್ಲಿ ವೈಕುಂಠವೂ ವಾಮಭಾಗದಲ್ಲಿ ಗೌರೀಲೋಕವೂ ಇರುವುವು. ಮತ್ತು ಧ್ರುವಲೋಕವು ಆ ಶಿವಲೋಕದ ಕೆಳಭಾಗದಲ್ಲಿರುವುದು. ಅಂತಹ ಶಿವಲೋಕವು ಸರ್ವಲೋಕಗಳಲ್ಲಿ ಉತ್ತಮವಾದುದು.

೪. ತಪೋಬಲಸಾಧ್ಯವಾದ ಗಮನವುಳ್ಳ ರಾಮನು ಉಪಮಾನದಿಂದ ಶೂನ್ಯವಾಗಿ ಅಸದೃಶವಾಗಿಯೂ ಅನೇಕ ಕೌತುಕ ಸನ್ನಿವೇಶಗಳಿಂದ ಕೂಡಿಯೂ ಇರುವ ಶಿವಲೋಕವನ್ನು ನೋಡಿದನು.

ವಸಂತಿ ಯತ್ರ ಯೋಗೀಂದ್ರಾಃ ಸಿದ್ಧಾಃ ಪಾಶುಪತಾಃ ಶುಭಾಃ ।
ಕೋಟಿಕಲ್ಪತಪಃಪುಣ್ಯಾಃ ಶಾಂತಾ ನಿರ್ಮತ್ಸರಾ ಜನಾಃ ॥ ೫ ॥

ಪಾರಿಜಾತಮುಖ್ಯೈರ್ವೃಕ್ಷೈಃ ಶೋಭಿತಂ ಕಾಮಧೇನುಭಿಃ ।
ಯೋಗೇನ ಯೋಗಿನಾ ಸೃಷ್ಟಂ ಸ್ವೇಚ್ಛಯಾ ಶಂಕರೇಣ ಹಿ ॥ ೬ ॥

ಶಿಲ್ಪಿನಾಂ ಗುರುಣಾ ಸ್ವಪ್ನೇ ನ ದೃಷ್ಟಂ ವಿಶ್ವಕರ್ಮಣಾ ।
ಸರೋವರಶತೈರ್ದಿವ್ಯೈಃ ಪದ್ಮರಾಗವಿರಾಜಿತೈಃ ॥ ೭ ॥

ಶೋಭಿತಂ ಚಾತಿರಮ್ಯಂ ಚ ಸಂಯುಕ್ತಂ ಮಣಿವೇದಿಭಿಃ ।
ಸುವರ್ಣರತ್ನರಚಿತಪ್ರಾಕಾರೇಣ ಸಮಾವೃತಮ್ ॥ ೮ ॥

ಅತ್ಯೂರ್ಧ್ವಮಂಬರಸ್ಪರ್ಶಿ ಸ್ವಚ್ಛಂ ಕ್ಷೀರನಿಭಂ ಪರಮ್ ।
ಚತುರ್ದ್ವಾರಸಮಾಯುಕ್ತಂ ಶೋಭಿತಂ ಮಣಿವೇದಿಭಿಃ ॥ ೯ ॥

---

೫. ಆ ಶಿವಲೋಕದಲ್ಲಿ ಯೋಗೀಂದ್ರರೂ, ಸಿದ್ಧರೂ, ಪಶುಪತಿ ದೀಕ್ಷಾವ್ರತಾಸಕ್ತರೂ ಮುಂತಾದ ಮಂಗಳಶೀಲರಾದ, ಶಾಂತರಾದ, ಮತ್ತು ನಿರ್ಮತ್ಸರರಾದ ಜನರು ಕೋಟಿಕಲ್ಪಗಳಲ್ಲಿ ಮಾಡಿದ ಪುಣ್ಯಪರಿಪಾಕದಿಂದ ವಾಸಮಾಡುತ್ತಿರುವರು.

೬. ಆ ಲೋಕವು ಪಾರಿಜಾತವೇ ಮುಂತಾದ ಶುಭ ವೃಕ್ಷಗಳಿಂದಲೂ ಕಾಮಧೇನುಗಳಿಂದಲೂ ಶೋಭಿಸಲ್ಪಟ್ಟಿರುವುದು. ಆ ಲೋಕವು ಯೋಗಿಯಾದ ಶಂಕರನಿಂದ ಯೋಗಬಲದಿಂದ ಸ್ವೇಚ್ಛಾವಶದಿಂದ ಸೃಷ್ಟಿಸಲ್ಪಟ್ಟಿರುವುದು.

೭. ಪದ್ಮರಾಗ ಶಿಲೆಗಳಿಂದ ರಾರಾಜಿಸುವ ನೂರಾರು ಸರೋವರಗಳಿಂದ ರಮಣೀಯವಾದ ಆ ಲೋಕವು ಶಿಲ್ಪಿಗಳಿಗೆಲ್ಲ ಗುರುವಾದ ವಿಶ್ವಕರ್ಮನಿಂದ ಸ್ವಪ್ನದಲ್ಲಿ ಕೂಡ ನೋಡಲ್ಪಟ್ಟಿಲ್ಲ.

೮. ರತ್ನಮಯವಾದ ವೇದಿಕೆಗಳಿಂದ ಕೂಡಿಕೊಂಡು ಅತಿ ಶೋಭಾದಾಯಕವಾಗಿಯೂ, ಅತಿ ರಮ್ಯವೂ ಮತ್ತು ಸುವರ್ಣ-ರತ್ನಗಳಿಂದ ರಚಿಸಲ್ಪಟ್ಟಿರುವ ಪ್ರಾಕಾರದಿಂದ ವೇಷ್ಟಿಸಲ್ಪಟ್ಟಿರುವುದೂ ಆಗಿದೆ.

೯. ಗಗನವನ್ನು ಮುಟ್ಟುವಂತೆ ಅತ್ಯಂತೋನ್ನತವಾಗಿಯೂ ಕ್ಷೀರದಂತೆ ಅತಿ ಶುಭ್ರವಾಗಿಯೂ ಚತುರ್ದ್ವಾರಗಳಿಂದ ಕೂಡಿರುವುದಾಗಿಯೂ ಮತ್ತು ಮಣಿಮಯವಾದ ವೇದಿಕೆಗಳಿಂದ ಶೋಭಿಸಲ್ಪಟ್ಟಿರುವುದಾಗಿಯೂ ಇದೆ.

7

ರತ್ನಸೋಪಾನಯುಕ್ತೈಶ್ಚ ರತ್ನಸ್ತಂಭಕಪಾಟಕೈಃ ।
ನಾನಾಚಿತ್ರವಿಚಿತ್ರೈಶ್ಚ ಶೋಭಿತೈಃ ಸುಮನೋಹರೈಃ ॥ ೧೦ ॥

ತನ್ಮಧ್ಯೇ ಭವನಂ ರಮ್ಯಂ ಸಿಹ್ಮದ್ವಾರೋಪಶೋಭಿತಮ್ ।
ದದರ್ಶ ರಾಮೋ ಧರ್ಮಾತ್ಮಾ ವಿಚಿತ್ರಮಿವ ಸಂಗತಃ ॥ ೧೧ ॥

ತತ್ರ ಸ್ಥಿತೌ ದ್ವಾರಪಾಲೌ ದದರ್ಶಾತಿಭಯಂಕರೌ ।
ಮಹಾಕರಾಲದಂತಾಸ್ಯೌ ವಿಕೃತಾರಕ್ತಲೋಚನೌ ॥ ೧೨ ॥

ದಗ್ಧಶೈಲಪ್ರತೀಕಾಶೌ ಮಹಾಬಲಪರಾಕ್ರಮೌ ।
ವಿಭೂತಿಭೂಷಿತಾಂಗೌ ಚ ವ್ಯಾಘ್ರಚರ್ಮಾಂಬರೌ ಚ ತೌ ॥ ೧೩ ॥

ತ್ರಿಶೂಲಪಟ್ಟಿಶಧರೌ ಜ್ವಲಂತೌ ಬ್ರಹ್ಮತೇಜಸಾ ।
ತೌ ದೃಷ್ಟ್ವಾ ಮನಸಾ ಭೀತಃ ಕಿಂಚಿದಾಹ ವಿನೀತವತ್ ॥ ೧೪ ॥

---

೧೦. ಅತ್ಯಂತ ಚಿತ್ರವಿಚಿತ್ರವಾಗಿಯೂ, ಶೋಭಿಸಲ್ಪಟ್ಟಿದ್ದಾಗಿಯೂ ಮತ್ತು ಮನೋಹರವಾಗಿಯೂ ಇರುವ ರತ್ನಸೋಪಾನ, ರತ್ನಮಯವಾದ ಸ್ತಂಭ ಮತ್ತು ರತ್ನಮಯವಾದ ಕಪಾಟಗಳಿಂದ ಕೂಡಿಕೊಂಡಿರುವುದು.

೧೧. ಆ ಲೋಕದ ಮಧ್ಯದಲ್ಲಿ ಹೋಗಿ ಧರ್ಮಾತ್ಮನಾದ ರಾಮನು ಸಿಹ್ಮಾಂಕಿತದ್ವಾರಗಳಿಂದ ಶೋಭಿಸಲ್ಪಟ್ಟ, ರಮಣೀಯವಾದ, ಮತ್ತು ಬಹು ವಿಚಿತ್ರದಂತಿರುವ ಒಂದು ಭವನವನ್ನು ನೋಡಿದನು.

೧೨. ಆ ಭವನದಲ್ಲಿ ನಿಂತಿರುವ ಮಹಾವಿಕಾರವುಳ್ಳ ದಂತ-ಮುಖಗಳಿಂದಲೂ ಕರಾಲವಾದ ಕೆಂಪು ಕಣ್ಣುಗಳಿಂದಲೂ ಅತ್ಯಂತ ಭಯಂಕರವಾದ ಆಕಾರವುಳ್ಳ ಇಬ್ಬರು ದ್ವಾರಪಾಲಕರನ್ನು ನೋಡಿದನು.

೧೩. ಆ ದ್ವಾರಪಾಲಕರು ಸುಟ್ಟುಹೋದ ಬೆಟ್ಟದಂತೆ ತೋರುವವರೂ, ಅಧಿಕವಾದ ಬಲ-ಪರಾಕ್ರಮವುಳ್ಳವರೂ, ವಿಭೂತಿ ಲೇಪದಿಂದ ಅಲಂಕರಿಸಲ್ಪಟ್ಟ ದೇಹವುಳ್ಳವರೂ ಮತ್ತು ವ್ಯಾಘ್ರಚರ್ಮವನ್ನೇ ವಸ್ತ್ರವಾಗಿ ಧರಿಸಿದವರೂ ಆಗಿದ್ದರು.

೧೪. ಮತ್ತು ತ್ರಿಶೂಲ-ಪಟ್ಟಿಶ ಆಯುಧಗಳನ್ನು ಧರಿಸಿಕೊಂಡು ಬ್ರಹ್ಮತೇಜಸ್ಸಿನಿಂದ ಜ್ವಲಿಸುತ್ತಲಿದ್ದರು. ಅವರನ್ನು ನೋಡಿ ರಾಮನು ಮನಸ್ಸಿನಲ್ಲಿ ಸ್ವಲ್ಪ ಭಯಗೊಂಡು ವಿನೀತನಂತೆ ಆಗಿ ಸ್ವಲ್ಪ ಮಾತನಾಡಲಾರಂಭಿಸಿದನು.

ನಮಸ್ಕರೋಮಿ ವಾಮೀಶೌ ಶಂಕರಂ ದ್ರಷ್ಟುಮಾಗತಃ ।
ಈಶ್ವರಾಜ್ಞಾಂ ಸಮಾದಾಯ ಮಾಮಥಾಜ್ಞಪ್ತುಮರ್ಹಥಃ ॥ ೧೫ ॥

ತೌ ತು ತದ್ವಚನಂ ಶ್ರುತ್ವಾ ಗೃಹೀತ್ವಾಜ್ಞಾಂ ಶಿವಸ್ಯ ಚ ।
ಪ್ರವೇಷ್ಟುಮಾಜ್ಞಾಂ ದದತುರೀಶ್ವರಾನುಚರೌ ಚ ತೌ ॥ ೧೬ ॥

ಸ ತದಾಜ್ಞಾಮನುಪ್ರಾಪ್ಯ ವಿವೇಶಾಂತಃಪುರಂ ಮುದಾ ।
ತತ್ರಾತಿರಮ್ಯಾಂ ಸಿದ್ಧೌಘೈಃ ಸಮಾಕೀರ್ಣಾಂ ಸಭಾಂ ದ್ವಿಜಃ ॥ ೧೭ ॥

ದೃಷ್ಟ್ವಾ ವಿಸ್ಮಯಮಾಪೇದೇ ಸುಗಂಧಬಹುಲಾಂ ವಿಭೋಃ ।
ತತ್ರಾಪಶ್ಯಚ್ಛಿವಂ ಶಾಂತಂ ತ್ರಿನೇತ್ರಂ ಚಂದ್ರಶೇಖರಮ್ ॥ ೧೮ ॥

ತ್ರಿಶೂಲಶೋಭಿತಕರಂ ವ್ಯಾಘ್ರಚರ್ಮವರಾಂಬರಮ್ ।
ವಿಭೂತಿಭೂಷಿತಾಂಗಂ ಚ ನಾಗಯಜ್ಞೋಪವೀತಿನಮ್ ॥ ೧೯ ॥

---

೧೫. ಪ್ರಭುಗಳೆ! ನಾನು ನಿಮ್ಮನ್ನು ನಮಸ್ಕರಿಸುವೆನು. ನಾನು ಶಂಕರನನ್ನು ಸಂದರ್ಶಿಸಲು ಬಂದಿರುವೆನು. ಇದನ್ನು ಶಂಕರನಿಗೆ ತಿಳಿಸಿ ಅಲ್ಲಿಂದ ಆಜ್ಞೆಯನ್ನು ಪಡೆದು ನನಗೆ ದರ್ಶನಕ್ಕೆ ಆಜ್ಞೆಯನ್ನು ಕೊಡಲು ಅರ್ಹರಾಗಿದ್ದೀರಿ.

೧೬. ಆ ವಚನವನ್ನು ಅಂಗೀಕರಿಸಿ ಶಿವನ ಆಜ್ಞೆಯನ್ನು ಹೊಂದಿ ಈಶ್ವರನ ಅನುಚರರಾದ ಆ ದ್ವಾರಪಾಲಕರು ರಾಮನು ಪ್ರವೇಶಮಾಡುವಂತೆ ಆಜ್ಞೆಯನ್ನು ಮಾಡಿದರು.

೧೭. ರಾಮನು ಅವರ ಅನುಮತಿಯನ್ನು ಪಡೆದು ಆನಂದದಿಂದ ಅಂತಃಪುರವನ್ನು ಪ್ರವೇಶಮಾಡಿದನು. ದ್ವಿಜನಾದ ರಾಮನು ಅಲ್ಲಿ ಅನೇಕ ಸಿದ್ಧಪುರುಷರಿಂದ ವ್ಯಾಪ್ತವಾದ ಮತ್ತು ಅತಿ ರಮ್ಯವಾದ ಸಭೆಯನ್ನು ನೋಡಿದನು.

೧೮. ಸುವಾಸನೆಯಿಂದ ಪೂರ್ಣವಾದ ಆ ವ್ಯಾಪಕನಾದ ಭಗವಂತನ ಸಭೆಯನ್ನು ನೋಡಿ ಆಶ್ಚರ್ಯವನ್ನು ಹೊಂದಿದನು. ಆ ಸಭೆಯಲ್ಲಿ ಶಿರದಲ್ಲಿ ಚಂದ್ರನನ್ನು ಧರಿಸಿಕೊಂಡು ಮೂರು ಕಣ್ಣುಗಳಿಂದ ಪ್ರಕಾಶಿಸುತ್ತಿರುವ ಶಾಂತವಾದ ಆಕಾರವುಳ್ಳ ಶಿವನನ್ನು ಸಂದರ್ಶಿಸಿದನು.

೧೯. ಮತ್ತು ಶಂಕರನು ತ್ರಿಶೂಲದಿಂದ ಅಲಂಕರಿಸಲ್ಪಟ್ಟ ಹಸ್ತಗಳುಳ್ಳವನೂ ಉತ್ತಮವಾದ ವ್ಯಾಘ್ರಚರ್ಮವನ್ನು ವಸ್ತ್ರವನ್ನಾಗಿ ಧರಿಸಿದವನೂ, ವಿಭೂತಿಲೇಪದಿಂದ ಶೋಭಿಸುವ ಶರೀರವುಳ್ಳವನೂ ಮತ್ತು ನಾಗರೂಪವಾದ ಯಜ್ಞೋಪವೀತವನ್ನು ಧರಿಸಿದವನೂ ಆಗಿದ್ದನು.

ಆತ್ಮಾರಾಮಂ ಪೂರ್ಣಕಾಮಂ ಕೋಟಿಸೂರ್ಯಸಮಪ್ರಭಮ್ ।
ಪಂಚಾನನಂ ದಶಭುಜಂ ಭಕ್ತಾನುಗ್ರಹವಿಗ್ರಹಮ್ ॥ ೨೦ ॥

ಯೋಗಜ್ಞಾನೇ ಪ್ರಬ್ರುವಂತಂ ಸಿದ್ಧೇಭ್ಯಸ್ತರ್ಕಮುದ್ರಯಾ ।
ಸ್ತೂಯಮಾನಂ ಚ ಯೋಗೀಂದ್ರೈಃ ಪ್ರಮಥಪ್ರಕರೈರ್ಮುದಾ ॥ ೨೧ ॥

ಭೈರವೈರ್ಯೋಗಿನೀಭಿಶ್ಚ ವೃತಂ ರುದ್ರಗಣೈಸ್ತಥಾ ।
ಮೂರ್ಧ್ನಾ ನನಾಮ ತಂ ದೃಷ್ಟ್ವಾ ರಾಮಃ ಪರಮಯಾ ಮುದಾ ॥ ೨೨ ॥

ವಾಮಭಾಗೇ ಕಾರ್ತಿಕೇಯಂ ದಕ್ಷಿಣೇ ಚ ಗಣೇಶ್ವರಮ್ ।
ನಂದೀಶ್ವರಂ ಮಹಾಕಾಲಂ ವೀರಭದ್ರಂ ಚ ತತ್ಪುರಃ ॥ ೨೩ ॥

ಕ್ರೋಡೇ ದುರ್ಗಾಂ ಶತಭುಜಾಂ ದೃಷ್ಟ್ವಾ ನತ್ವಾಥ ತಾಮಪಿ ।
ಸ್ತೋತುಂ ಪ್ರಚಕ್ರಮೇ ವಿದ್ವಾನ್ ಗಿರಾ ಗದ್ಗದಯಾ ವಿಭುಮ್ ॥ ೨೪ ॥

---

೨೦. ಮತ್ತು ಆತ್ಮಾನಂದವನ್ನು ಅನುಭವಿಸುವವನೂ, ಪರಿಪೂರ್ಣವಾದ ಕಾಮಗಳುಳ್ಳವನೂ, ಕೋಟಿ ಸೂರ್ಯರಿಗೆ ಸಮಾನವಾದ ಪ್ರಭಾಪುಂಜವುಳ್ಳವನೂ, ಮತ್ತು ಐದು ಮುಖ-ಹತ್ತು ಭುಜಗಳಿಂದ ಕೂಡಿದ, ಭಕ್ತರನ್ನು ಅನುಗ್ರಹಿಸುವ ಲೀಲಾವಿಗ್ರಹವುಳ್ಳವನೂ ಆಗಿದ್ದನು.

೨೧. ಶಂಕರನು ಸಿದ್ಧರಿಗೆ ತರ್ಕಮುದ್ರೆಯಿಂದ ಯೋಗ-ಜ್ಞಾನಮಾರ್ಗಗಳನ್ನು ಉಪದೇಶಿಸುತ್ತಿರುವವನೂ ಮತ್ತು ಪ್ರಮಥಗಣಗಳಿಂದಲೂ ಯೋಗಿವರ್ಯರಿಂದಲೂ ಆನಂದದಿಂದ ಸ್ತುತಿಸಲ್ಪಡುವವನೂ ಆಗಿದ್ದನು.

೨೨. ಮತ್ತು ಭೈರವಮೂರ್ತಿ, ಯೋಗಿನೀ, ರುದ್ರಗಣಗಳಿಂದ ಸುತ್ತುವರಿಯಲ್ಪಟ್ಟಿರುವ ಈಶ್ವರನನ್ನು ರಾಮನು ಸಂದರ್ಶಿಸಿ ಅತಿಶಯವಾದ ಆನಂದದಿಂದ ತಲೆ ಬಾಗಿಸಿ ನಮಸ್ಕರಿಸಿದನು.

೨೩. ಈಶ್ವರನ ವಾಮಭಾಗದಲ್ಲಿ ಷಣ್ಮುಖಸ್ವಾಮಿ, ದಕ್ಷಿಣಭಾಗದಲ್ಲಿ ಗಣೇಶ್ವರ, ಮುಂಭಾಗದಲ್ಲಿ ನಂದೀಶ್ವರ, ಮಹಾಕಾಲ, ಮತ್ತು ವೀರಭದ್ರ ಎಂಬ ಪರಿವಾರವು ಶೋಭಿಸುತ್ತಲಿತ್ತು.

೨೪. ತೊಡೆಯಲ್ಲಿ ನೂರು ಭುಜಗಳಿಂದ ಕೂಡಿರುವ ದುರ್ಗಾದೇವಿಯನ್ನೂ ಸಮಸ್ತ ಪರಿವಾರವನ್ನೂ ನೋಡಿ ನಮಸ್ಕಾರಮಾಡಿ ಜ್ಞಾನಿಯಾದ ಪರಶುರಾಮನು ಗದ್ಗದ ಧ್ವನಿಯಿಂದ ಕೂಡಿದ ಸ್ತುತಿ ವಚನಗಳಿಂದ ವಿಭುವಾದ ಈಶ್ವರನನ್ನು ಸ್ತುತಿ ಮಾಡಲು ಉಪಕ್ರಮಿಸಿದನು.

ನಮಸ್ಯೇ ಶಿವಮೀಶಾನಂ ವಿಭುಂ ವ್ಯಾಪಕಮವ್ಯಯಮ್ ।
ಭುಜಂಗಭೂಷಣಂ ಚೋಗ್ರಂ ನೃಕಪಾಲಸ್ರಗುಜ್ಜ್ವಲಮ್ ॥ ೨೫ ॥

ಯೋ ವಿಭುಃ ಸರ್ವಲೋಕಾನಾಂ ಸೃಷ್ಟಿಸ್ಥಿತಿವಿನಾಶಕೃತ್ ।
ಬ್ರಹ್ಮಾದಿರೂಪಧೃಗ್ಜ್ಯೇಷ್ಠಸ್ತಂ ತ್ವಾಂ ವೇದ ಕೃಪಾರ್ಣವಮ್ ॥ ೨೬ ॥

ವೇದಾ ನ ಶಕ್ತಾ ಯಂ ಸ್ತೋತುಮವಾಙ್ಮನಸಗೋಚರಮ್ ।
ಜ್ಞಾನಬುದ್ಧ್ಯೋರಸಾಧ್ಯಂ ಚ ನಿರಾಕಾರಂ ನಮಾಮ್ಯಹಮ್ ॥ ೨೭ ॥

ಶಕ್ರಾದಯಃ ಸುರಗಣಾ ಋಷಯೋ ಮನವೋಽಸುರಾಃ ।
ನ ಯಂ ವಿದುರ್ಯಥಾತತ್ತ್ವಂ ತಂ ನಮಾಮಿ ಪರಾತ್ಪರಮ್ ॥ ೨೮ ॥

ಯಸ್ಯಾಂಶಾಂಶೇನ ಸೃಜ್ಯಂತೇ ಲೋಕಾಃ ಸರ್ವೇ ಚರಾಚರಾಃ ।
ಲೀಯಂತೇ ಚ ಪುನರ್ಯಸ್ಮಿಂಸ್ತಂ ನಮಾಮಿ ಜಗನ್ಮಯಮ್ ॥ ೨೯ ॥

---

೨೫. ಸರ್ವಪ್ರಭುವೂ, ವ್ಯಾಪಕನೂ, ವಿವಿಧರೂಪದಿಂದ ಆವಿರ್ಭವಿಸಿದವನೂ, ಶಾಶ್ವತನೂ, ಭುಜಂಗಗಳ ಆಭರಣವುಳ್ಳವನೂ, ಉಗ್ರಮೂರ್ತಿಯೂ ಮತ್ತು ನರ ಕಪಾಲದ ಮಾಲೆಯಿಂದ ಉಜ್ಜ್ವಲನೂ ಆದ ಶಿವನನ್ನು ನಮಸ್ಕರಿಸುವೆನು.

೨೬. ಯಾವ ಸರ್ವೇಶ್ವರನು ಬ್ರಹ್ಮಾದಿ ತ್ರಿಮೂರ್ತಿರೂಪವನ್ನು ಧರಿಸಿ ಸಮಸ್ತ ಲೋಕಗಳ ಸೃಷ್ಟಿ-ಸ್ಥಿತಿ-ಲಯಗಳನ್ನು ಮಾಡುತ್ತ ಸರ್ವಜ್ಯೇಷ್ಠನಾಗಿರುವನೊ ಅಂತಹ ದಯಾಸಮುದ್ರನಾದ ನಿನ್ನನ್ನು ನಾನು ಧ್ಯಾನಿಸುತ್ತೇನೆ.

೨೭. ವಾಕ್ಕು-ಮನಸ್ಸುಗಳಿಗೆ ಅಗೋಚರನಾದ ನಿನ್ನನ್ನು ಸ್ತುತಿಗೈಯಲು ವೇದಗಳು ಕೂಡ ಅಸಮರ್ಥಗಳಾಗಿವೆ. ಅಂತಹ ಜ್ಞಾನ-ಬುದ್ಧಿಗಳಿಗೆ ಅಗಮ್ಯನಾದ ನಿರಾಕಾರನಾದ ನಿನ್ನನ್ನು ನಾನು ವಂದಿಸುವೆನು.

೨೮. ಇಂದ್ರನು ಮೊದಲಾದ ದೇವತೆಗಳು, ಋಷಿಗಳು, ಮನುಗಳು, ಮತ್ತು ಅಸುರರು-ಇವರ ಗಣವು ಯಾವ ನಿನ್ನನ್ನು ಪರಮಾರ್ಥರೂಪದಿಂದ ತಿಳಿಯಲಾರರೋ ಅಂತಹ ಸರ್ವೋತ್ಕೃಷ್ಟನಾದ ನಿನ್ನನ್ನು ನಮಸ್ಕರಿಸುವೆನು.

೨೯. ಯಾವ ಭಗವನ್ಮೂರ್ತಿಯ ಅಂಶದ ಅಂಶಮಾತ್ರದಿಂದ ಚರಾಚರಪ್ರಾಣಿಗಳಿಂದ ಕೂಡಿದ ಸಕಲ ಲೋಕಗಳು ಸೃಷ್ಟಿಸಲ್ಪಟ್ಟು ಕಡೆಯಲ್ಲಿ ಎಲ್ಲಿ ಲಯವನ್ನು ಹೊಂದುವುವೊ ಅಂತಹ ಜಗನ್ಮೂರ್ತಿಯಾದ ನಿನ್ನನ್ನು ನಮಸ್ಕರಿಸುವೆನು.

ಯಸ್ಯೇಷತ್ಕೋಪಸಂಭೂತೋ ಹುತಾಶೋ ದಹತೇऽಖಿಲಮ್ ।
ಸೋರ್ಧ್ವಲೋಕಂ ಸಪಾತಾಳಂ ತಂ ನಮಾಮಿ ಹರಂ ಪರಮ್
॥ ೩೦ ॥

ಪೃಥ್ವೀಪವನವಹ್ನ್ಯಂಭೋನಭೋಯಜ್ವೇಂದುಭಾಸ್ಕರಾಃ ।
ಮೂರ್ತಯೋऽಷ್ಟೌ ಜಗತ್ಪೂಜ್ಯಾಸ್ತಂ ಯಜ್ಞಂ ಪ್ರಣಮಾಮ್ಯಹಮ್
॥ ೩೧ ॥

ಯಃ ಕಾಲರೂಪೋ ಜಗದಾದಿಕರ್ತಾ
ಪಾತಾ ಪೃಥಗ್ರೂಪಧರೋ ಜಗನ್ಮಯಃ ।
ಹರ್ತಾ ಪುನಾ ರುದ್ರವಪುಸ್ತಥಾಂತೇ
ತಂ ಕಾಲರೂಪಂ ಶರಣಂ ಪ್ರಪದ್ಯೇ ॥ ೩೨ ॥

ಇತ್ಯೇವ ಮುಕ್ತ್ವಾ ಸ ತು ಭಾರ್ಗವೋ ಮುದಾ
ಪಪಾತ ತಸ್ಯಾಂಘ್ರಿಸಮೀಪ ಆತುರಃ ।
ಉತ್ಥಾಪ್ಯ ತಂ ವಾಮಕರೇಣ ಲೀಲಯಾ ।
ದಧ್ರೇ ತದಾ ಮೂರ್ಧ್ನಿ ಕರಂ ಕೃಪಾರ್ಣವಃ ॥ ೩೩ ॥

---

೩೦. ಯಾವ ರುದ್ರನ ಲೇಶಮಾತ್ರ ಕೋಪಕಲೆಯಿಂದ ಹುಟ್ಟಿದ ಅಗ್ನಿಯು ಊರ್ಧ್ವಲೋಕ-ಅಧೋಲೋಕಗಳಿಂದ ಕೂಡಿದ ಸಮಸ್ತ ಭುವನವನ್ನು ದಹಿಸ ಬಲ್ಲುದೋ ಅಂತಹ ಪರಮಾತ್ಮನಾದ ಹರನನ್ನು ವಂದಿಸುವೆನು.

೩೧. ಯಾವ ಶಂಕರನಿಗೆ ಪೃಥಿವೀ, ವಾಯು, ತೇಜಸ್ಸು, ಜಲ, ಆಕಾಶ, ಸೂರ್ಯ, ಚಂದ್ರ ಮತ್ತು ಯಾಗಕರ್ತೃ-ಎಂಬ ಅಷ್ಟಮೂರ್ತಿಗಳು ಜಗತ್ತಿಗೆ ಪೂಜ್ಯ ವಾಗಿವೆಯೊ ಅಂತಹ ಯಜ್ಞಮೂರ್ತಿಯಾದ ಶಿವನನ್ನು ವಂದಿಸುವೆನು.

೩೨. ಯಾವ ಪರಮಾತ್ಮನು ಆದಿಕಾಲರೂಪದಿಂದ ಜಗತ್ತನ್ನು ಸೃಷ್ಟಿಸುವನೋ ಜಗನ್ಮಯನಾಗಿ ವಿವಿಧ ರೂಪಗಳನ್ನು ಸ್ವೀಕರಿಸಿ ಜಗತ್ತನ್ನು ರಕ್ಷಿಸುವನೋ ಮತ್ತು ಅಂತ ಕಾಲದಲ್ಲಿ ರುದ್ರರೂಪದಿಂದ ಜಗತ್ತನ್ನು ಸಂಹರಿಸುವನೋ ಅಂತಹ ಕಾಲ ರೂಪಿಯಾದ ಭಗವಂತನನ್ನು ಶರಣು ಹೊಂದಿರುವೆನು.

೩೩. ಈ ರೀತಿಯಾಗಿ ಸ್ತೋತ್ರಮಾಡಿ ಆ ಭಾರ್ಗವರಾಮನು ಬಹು ಆತುರತೆ ಯಿಂದ ಆನಂದಮಗ್ನನಾಗಿ ಈಶ್ವರನ ಪಾದಯುಗ್ಮದಲ್ಲಿ ಬಿದ್ದನು. ಆಗ ದಯಾ ಸಮುದ್ರನಾದ ಈಶ್ವರನು ತನ್ನ ವಾಮ-ಪಾಣಿಯಿಂದ ಅವನನ್ನು ಲೀಲೆಯಿಂದ ಮೇಲಕ್ಕೆ ಎತ್ತಿ ಅವನ ಶಿರದಲ್ಲಿ ತನ್ನ ಹಸ್ತವನ್ನು ಇರಿಸಿದನು.

ಆಶೀರ್ಭಿರೇನಂ ಹ್ಯಭಿನಂದ್ಯ ಸಾದರಂ
ನಿವೇಶಯಾಮಾಸ ಗಣೇಶಪೂರ್ವತಃ ।
ಉವಾಚ ವಾಮಾಮಭಿವೀಕ್ಷ್ಯ ಚಾಪ್ಯುಮಾಂ
ಕೃಪಾರ್ದ್ರದೃಷ್ಟ್ಯಾಖಿಲ ಕಾಮಪೂರಕಃ ॥ ೩೪ ॥

ಶಿವ ಉವಾಚ :—
ಕಸ್ತ್ವಂ ವಟೋ ಕಸ್ಯ ಕುಲೇ ಪ್ರಸೂತಃ
ಕಿಂ ಕಾರ್ಯಮುದ್ದಿಶ್ಯ ಭವಾನಿಹಾಗತಃ ।
ವಿನಿರ್ದಿಶಾಹಂ ತವ ಭಕ್ತಿಭಾವತಃ
ಪ್ರೀತಃ ಪ್ರದದ್ಯಾಂ ಭವತೋ ಮನೋಗತಮ್ ॥ ೩೫ ॥

ಇತ್ಯೇವಮುಕ್ತಃ ಸ ಭೃಗುರ್ಮಹಾತ್ಮನಾ
ಹರೇಣ ವಿಶ್ವಾರ್ತಿಹರೇಣ ಸಾದರಂ ।
ಪುನಶ್ಚ ನತ್ವಾ ವಿಬುಧಾಂ ಪತಿಂ ಗುರುಂ
ಕೃಪಾಸಮುದ್ರಂ ಸಮುವಾಚ ಸತ್ವರಮ್ ॥ ೩೬ ॥

---

೩೪. ಮತ್ತು ರಾಮನನ್ನು ಆಶೀರ್ವಾದವಚನದಿಂದ ಸಂತೋಷಪಡಿಸಿ ಆದರ ಪೂರ್ವಕವಾಗಿ ಗಣೇಶನ ಪೂರ್ವಭಾಗದಲ್ಲಿ ಕುಳ್ಳಿರಿಸಿದನು. ಮತ್ತು ಅಖಿಲ ಇಷ್ಟಾರ್ಥಗಳನ್ನು ಪೂರ್ತಿಗೊಳಿಸುವ ಪರಮೇಶ್ವರನು ಕೃಪಾರ್ದ್ರ ದೃಷ್ಟಿಯಿಂದ ವಾಮಭಾಗದಲ್ಲಿರುವ ಪಾರ್ವತಿಯನ್ನು ನೋಡುತ್ತ ಹೀಗೆ ಹೇಳಿದನು.

೩೫. ಶಿವನು ಈ ರೀತಿಯಾಗಿ ಹೇಳಿದನು :—ವಟುವೆ! ನೀನು ಯಾರು? ಯಾರ ವಂಶದಲ್ಲಿ ಜನಿಸಿರುತ್ತೀ? ನೀನು ಯಾವ ಕಾರ್ಯವನ್ನು ಸಾಧಿಸುವ ಉದ್ದೇಶದಿಂದ ಇಲ್ಲಿಗೆ ಬಂದಿದ್ದೀ? ಅದೆಲ್ಲವನ್ನು ನನಗೆ ಹೇಳು. ನಾನು ನಿನ್ನ ಭಕ್ತಿಭಾವದಿಂದ ಸುಪ್ರೀತನಾಗಿ ನಿನ್ನ ಮನೋಗತವಾದ ಇಷ್ಟವನ್ನು ಕೊಡುವೆನು.

೩೬. ಪ್ರಪಂಚದ ಆರ್ತಿಯನ್ನು ಅಪಹರಿಸುವ ಮಹಾತ್ಮನಾದ ಹರನಿಂದ ಈ ರೀತಿಯಾಗಿ ಆದರದಿಂದ ಹೇಳಲ್ಪಟ್ಟ ಭಾರ್ಗವರಾಮನು ದೇವತೆಗಳಿಗೆ ಪ್ರಭುವಾದ, ದಯಾಘನನಾದ, ಮತ್ತು ಲೋಕಗುರುವಾದ ಈಶ್ವರನನ್ನು ನಮಸ್ಕರಿಸಿ ಶೀಘ್ರವಾಗಿ ಹೀಗೆ ಹೇಳಿದನು.

**ಪರಶುರಾಮ ಉವಾಚ :**

**ಭೃಗೋಶ್ಚಾಹಂ ಕುಲೇ ಜಾತೋ ಜಮದಗ್ನಿಸುತೋ ವಿಭೋ ।**
**ರಾಮೋ ನಾಮ ಜಗದ್ವಂದ್ಯಂ ತ್ವಾಮಹಂ ಶರಣಂ ಗತಃ ॥ ೩೭ ॥**

**ಯತ್ಕಾರ್ಯಾರ್ಥಮಹಂ ನಾಥ ತವ ಸಾನ್ನಿಧ್ಯಮಾಗತಃ ।**
**ತಂ ಪ್ರಸಾಧಯ ವಿಶ್ವೇಶ ವಾಂಛಿತಂ ಕಾಮಮೇವ ಮೇ ॥ ೩೮ ॥**

**ಮೃಗಯಾಮಾಗತಸ್ಯಾಪಿ ಕಾರ್ತವೀರ್ಯಸ್ಯ ಭೂಪತೇಃ ।**
**ಆತಿಥ್ಯಂ ಕೃತವಾನ್ ದೇವ ಜಮದಗ್ನಿಃ ಪಿತಾ ಮಮ ॥ ೩೯ ॥**

**ರಾಜಾ ತಂ ಸ ಬಲಾಲ್ಲೋಭಾತ್ ಪಾತಯಾಮಾಸ ಮಂದಧೀಃ ।**
**ಸಾ ಧೇನುಸ್ತಂ ಮೃತಂ ದೃಷ್ಟ್ವಾ ಗವಾಂ ಲೋಕಂ ಜಗಾಮ ಹ ॥ ೪೦ ॥**

**ರಾಜಾ ನ ಶೋಚೇನ್ಮರಣಂ ಪಿತುರ್ಮಮ ನಿರಾಗಸಃ ।**
**ಜಗಾಮ ಸ್ವಪುರಂ ಪಶ್ಚಾನ್ಮಾತಾ ಮೇ ಪ್ರಾರುದದ್ಭೃಶಮ್ ॥ ೪೧ ॥**

---

೩೭. ಪರಶುರಾಮನು ಇಂತೆಂದನು :—ವಿಭುವಾದ ಈಶ್ವರನೆ! ಭೃಗುಮುನಿಯ ಕುಲದಲ್ಲಿ ಹುಟ್ಟಿದ ಜಮದಗ್ನಿಮುನಿಯ ಪುತ್ರನಾದ ಪರಶುರಾಮನು ನಾನು. ಜಗತ್ತಿಗೆ ವಂದ್ಯನಾದ ನಿನ್ನನ್ನು ಶರಣಹೊಂದಿರುವೆನು.

೩೮. ಜಗದೀಶ್ವರನೆ! ಯಾವ ಕಾರ್ಯವನ್ನು ಉದ್ದೇಶಿಸಿಕೊಂಡು ನಾನು ನಿನ್ನ ಸನ್ನಿಧಿಗೆ ಬಂದಿರುವೆನೊ ಆ ನನ್ನ ಆಕಾಂಕ್ಷಿತವಾದ ಕಾಮವನ್ನು ನೆರವೇರಿಸು.

೩೯. ದೇವನೆ! ಮೃಗಬೇಟೆಗೋಸ್ಕರ ಬಂದಿದ್ದ ಕಾರ್ತವೀರ್ಯಮಹಾರಾಜನಿಗೆ ನನ್ನ ತಂದೆಯಾದ ಜಮದಗ್ನಿಮುನಿಯು ಸಾಧುಜನರಿಗೆ ಮಾಡಬೇಕಾದ ಆತಿಥ್ಯ ಸತ್ಕಾರವನ್ನು ಮಾಡಿದನು.

೪೦. ಆದರೆ ಮೂರ್ಖಬುದ್ಧಿಯುಳ್ಳ ಆ ರಾಜನು ತನ್ನ ಬಲದಿಂದಲೂ ಲೋಭದಿಂದಲೂ ಆತಿಥ್ಯಮಾಡಿದ ಆ ಮುನಿಯನ್ನು ಕೆಳಕ್ಕೆ ಕೆಡವಿದನು. ಆ ಕಾಮಧೇನುವು ಮುನಿಯು ಮೃತನಾದುದನ್ನು ಕಂಡು ಗೋಲೋಕವನ್ನು ಸೇರಿತು.

೪೧. ಆದರೆ ರಾಜನು ಮಾತ್ರ ನಿರಪರಾಧಿಯಾದ ನನ್ನ ಪಿತೃಮರಣವನ್ನು ಕುರಿತು ಶೋಕಪಡದೆ ಅದನ್ನು ಲಕ್ಷಿಸದೆ ತನ್ನ ನಗರಕ್ಕೆ ಹೋದನು. ನನ್ನ ತಾಯಿಯು ಆಗ ಬಹಳ ರೋದನ ಮಾಡಿದಳು.

ತಜ್ಜ್ಞಾತ್ವಾ ಲೋಕವೃತ್ತಜ್ಞೋ ಭೃಗುರ್ನಃ ಪ್ರಪಿತಾಮಹಃ ।
ಆಜಗಾಮ ಮಹಾದೇವ ಹ್ಯಹಮಪ್ಯಾಗತೋ ವನಾತ್ ॥ ೪೨ ॥

ಮಯಾ ಸಹ ಸುದುಃಖಾರ್ತಾನ್ ಭ್ರಾತೄನ್ ಮಾತ್ರಾ ಸಹೈವ ನೋ ।
ಸಾಂತ್ವಯಿತ್ವಾ ಸ ಮಂತ್ರಜ್ಞೋಽಜೀವಯತ್ಪಿತರಂ ಮಮ ॥ ೪೩ ॥

ಅನಾಗತೇ ಭೃಗೌ ಮಾತೃದುಃಖೇನಾಹಂ ಪ್ರಕೋಪಿತಃ ।
ಪ್ರತಿಜ್ಞಾಂ ಕೃತವಾನ್ ದೇವ ಸಾಂತ್ವಯನ್ ಮಾತರಂ ಸ್ವಕಾಮ್ ॥ ೪೪ ॥

ತ್ರಿಃಸಪ್ತಕೃತ್ವೋ ಯದುರಸ್ತಾಡಿತಂ ಮಾತುರಾತ್ಮನಃ ।
ತಾವತ್ಸಂಖ್ಯಮಹಂ ಪೃಥ್ವೀಂ ಕರಿಷ್ಯೇ ಕ್ಷತ್ರವರ್ಜಿತಾಮ್ ॥ ೪೫ ॥

ಇತ್ಯೇವಂ ಪರಿಪೂರ್ಣಾಂ ಮೇ ಕರ್ತಾ ದೇವೋ ಜಗತ್ಪತಿಃ ।
ಮಹಾದೇವೋ ಹ್ಯತೋ ನಾಥ ತ್ವತ್ಸಕಾಶಮಿಹಾಗತಃ ॥ ೪೬ ॥

---

೪೨. ಮಹಾದೇವನೆ! ಸಕಲಲೋಕ ವೃತ್ತಾಂತವನ್ನು ಅರಿತಿರುವ ನಮ್ಮ ಪ್ರಪಿತಾಮಹನಾದ ಭೃಗುಮುನಿಯು ಈ ವೃತ್ತಾಂತವನ್ನು ತಿಳಿದು ಅಲ್ಲಿಗೆ ಬಂದನು. ಅಷ್ಟರಲ್ಲಿ ನಾನು ವನದಿಂದ ಹಿಂತಿರುಗಿ ಬಂದೆನು.

೪೩. ಮಂತ್ರವನ್ನು ತಿಳಿದ ಆ ಭೃಗುಮುನಿಯು ನನ್ನೊಡನೆ ಶೋಕಿಸುತ್ತ ಪೀಡಿತರಾಗಿದ್ದ ನನ್ನ ಸಹೋದರರನ್ನೂ ತಾಯಿಯನ್ನೂ ಸಮಾಧಾನಮಾಡಿ ನನ್ನ ತಂದೆಯನ್ನು ಬದುಕಿಸಿದನು.

೪೪. ದೇವನೆ! ಆದರೆ ಭೃಗುಮುನಿಯು ಬರುವಷ್ಟರಲ್ಲಿ ಮಾತೃವಿನ ದುಃಖ ಪರಂಪರೆಯಿಂದ ಕುಪಿತನಾದ ನಾನು ನನ್ನ ತಾಯಿಯನ್ನು ಸಮಾಧಾನಮಾಡುತ್ತ ಒಂದು ತೀವ್ರ ಪ್ರತಿಜ್ಞೆಯನ್ನು ಮಾಡಿದೆನು.

೪೫. ತಾಯಿಯು ದುಃಖವನ್ನು ಸಹಿಸಲಾರದೆ ಇಪ್ಪತ್ತೊಂದುಸಲ ತನ್ನ ವಕ್ಷಸ್ಥಳವನ್ನು ಹೊಡೆದುಕೊಂಡಿದ್ದರಿಂದ ಆ ಸಂಖ್ಯೆಯನ್ನು ಅನುಸರಿಸಿ ಅಷ್ಟು ಸಲ ನಾನು ಭೂಮಿಯನ್ನು ಕ್ಷತ್ರಿಯರಿಲ್ಲದಂತೆ ಮಾಡುವೆನು.

೪೬. ಹೀಗೆಂದು ನಾನು ಮಾಡಿರುವ ಕಠಿನ ಪ್ರತಿಜ್ಞೆಯನ್ನು ಜಗತ್ತಿಗೆ ಪ್ರಭುವಾದ ಮಹಾದೇವನು ಪೂರ್ತಿಗೊಳಿಸಬೇಕು. ನಾಥನೆ! ಈ ಕಾರಣದಿಂದ ನಾನು ಇಲ್ಲಿ ನಿನ್ನ ಸನ್ನಿಧಿಗೆ ಬಂದಿರುವೆನು.

ವಸಿಷ್ಠ ಉವಾಚ :—

ಇತ್ಯೇವಂ ತದ್ವಚಃ ಶ್ರುತ್ವಾ ದೃಷ್ಟ್ವಾ ದುರ್ಗಾಮುಖಂ ಹರಃ ।
ಬಭೂವಾನಮ್ರವದನಶ್ಚಿಂತಯಾನಃ ಕ್ಷಣಂ ತದಾ ॥ ೪೭ ॥

ಏತಸ್ಮಿನ್ನಂತರೇ ದುರ್ಗಾ ವಿಸ್ಮಿತಾ ಪ್ರಾಹಸದ್ಭೃಶಮ್ ।
ಉವಾಚ ಚ ಮಹಾರಾಜ ಭಾರ್ಗವಂ ವೈರಸಾಧಕಮ್ ॥ ೪೮ ॥

ತಪಸ್ವಿನ್ ದ್ವಿಜಪುತ್ರ ಕ್ಷ್ಮಾಂ ನಿರ್ಭೂಪಾಂ ಕರ್ತುಮಿಚ್ಛಸಿ ।
ತ್ರಿಃಸಪ್ತಕೃತ್ವಃ ಕೋಪೇನ ಸಾಹಸಸ್ತೇ ಮಹಾನ್ ವಟೋ ॥ ೪೯ ॥

ಹಂತುಮಿಚ್ಛಸಿ ನಿಃಶಸ್ತ್ರಃ ಸಹಸ್ರಾರ್ಜುನಮೀಶ್ವರಮ್ ।
ಭ್ರೂಭಂಗಲೀಲಯಾ ಯೇನ ರಾವಣೋಽಪಿ ನಿರಾಕೃತಃ ॥ ೫೦ ॥

ತಸ್ಮೈ ಪ್ರದತ್ತಂ ದತ್ತೇನ ಶ್ರೀಹರೇಃ ಕವಚಂ ಪುರಾ ।
ಶಕ್ತಿರತ್ಯರ್ಥವೀರ್ಯಾ ಚ ತಂ ಕಥಂ ಹಂತುಮಿಚ್ಛಸಿ ॥ ೫೧ ॥

---

೪೭. ವಸಿಷ್ಠಮುನಿಯು ಇಂತೆಂದನು :—ಈಶ್ವರನು ಪರಶುರಾಮನ ಆ ವಾಣಿಯನ್ನು ಕೇಳಿ ಆಗ ದುರ್ಗಾದೇವಿಯ ಮುಖವನ್ನು ನೋಡಿ ಮುಖವನ್ನು ಬಾಗಿಸಿ ಕ್ಷಣಕಾಲಮಾತ್ರ ಚಿಂತಿಸುತ್ತಿರುವವನಾದನು.

೪೮. ಮಹಾರಾಜನೆ! ಇದೇ ಸಮಯದಲ್ಲಿ ದುರ್ಗಾದೇವಿಯು ವಿಸ್ಮಯಗೊಂಡವಳಾಗಿ ಅತಿಶಯವಾಗಿ ನಕ್ಕಳು. ಮತ್ತು ವೈರವನ್ನು ಬೆಳೆಸುತ್ತಿರುವ ಭಾರ್ಗವರಾಮನನ್ನು ಕುರಿತು ಈ ರೀತಿಯಾಗಿ ಹೇಳಿದಳು.

೪೯. ಬ್ರಾಹ್ಮಣಪುತ್ರನೆ! ತಪಸ್ವಿಯೆ! ವಟುವೆ! ಕೋಪದಿಂದ ಭೂಮಿಯೆಲ್ಲವನ್ನೂ ಇಪ್ಪತ್ತೊಂದುಸಲ ಕ್ಷತ್ರಿಯ ಜಾತಿಯಿಲ್ಲದಂತೆ ಮಾಡಲು ಇಷ್ಟಪಡುತ್ತಲಿದ್ದೀಯೆ. ಇದು ನಿನ್ನ ಮಹತ್ತರವಾದ ಸಾಹಸವು.

೫೦. ಯಾವ ಕಾರ್ತವೀರ್ಯಾರ್ಜುನನು ಹುಬ್ಬು ಗಂಟುಹಾಕುವ ಒಂದು ಲೀಲಾಮಾತ್ರದಿಂದ ರಾವಣನನ್ನು ನಿರಾಕರಿಸಿರುವನೋ ಅಂತಹ ವಿಕ್ರಮವುಳ್ಳ ಸಹಸ್ರಾರ್ಜುನರಾಯನನ್ನು ನಿಶ್ಶಸ್ತ್ರನಾದ ನೀನು ಸಂಹರಿಸಲು ಇಚ್ಛಿಸುತ್ತೀ.

೫೧. ದತ್ತಾತ್ರೇಯ ಮುನಿಯಿಂದ ಪೂರ್ವದಲ್ಲಿ ಕಾರ್ತವೀರ್ಯಾರ್ಜುನನಿಗೆ ಶ್ರೀಹರಿಯ ಕವಚಮಂತ್ರವು ಉಪದೇಶಿಸಲ್ಪಟ್ಟಿದೆ. ಮತ್ತು ಅತಿಯಾದ ವೀರ್ಯವುಳ್ಳ ಶಕ್ತಿಯು ಅನುಗ್ರಹಿಸಲ್ಪಟ್ಟಿದೆ. ಅಂತಹ ರಾಜನನ್ನು ಕೊಲ್ಲಲು ನೀನು ಇಚ್ಛಿಸುವುದು ಹೇಗೆ?

ಶಂಕರಃ ಕರುಣಾಸಿದ್ಧಃ ಕರ್ತುಂ ಚಾಪ್ಯನ್ಯಥಾ ವಿಭುಃ ।
ನಚಾನ್ಯಃ ಶಂಕರಾತ್ಪುತ್ರ ತ್ವತ್ಕಾರ್ಯಂ ಕರ್ತುಮೀಶ್ವರಃ ॥ ೫೨ ॥

ಅಥ ದೇವ್ಯಾ ಅನುಮತಿಂ ಪ್ರಾಪ್ಯ ಶಂಭುರ್ದಯಾರ್ಣವಃ ।
ಅಭ್ಯಧಾದ್ಭದ್ರಯಾ ವಾಚಾ ಜಮದಗ್ನಿಸುತಂ ವಿಭುಃ ॥ ೫೩ ॥

ಶಿವ ಉವಾಚ :—

ಅದ್ಯ ಪ್ರಭೃತಿ ವಿಪ್ರ ತ್ವಂ ಮಮ ಸ್ಕಂದಸಮೋ ಭವ ।
ದಾಸ್ಯಾಮಿ ಮಂತ್ರಂ ದಿವ್ಯಂ ತೇ ಕವಚಂ ಚ ಮಹಾಮತೇ ॥ ೫೪ ॥

ಲೀಲಯಾ ಯತ್ಪ್ರಸಾದೇನ ಕಾರ್ತವೀರ್ಯಂ ಹನಿಷ್ಯಸಿ ।
ತ್ರಿಃಸಪ್ತಕೃತ್ವೋ ನಿರ್ಭೂಪಾಂ ಮಹೀಂ ಚಾಪಿ ಕರಿಷ್ಯಸಿ ॥ ೫೫ ॥

---

೫೨. ಕರುಣೆ ತೋರಿಸುವುದರಲ್ಲಿ ಸಿದ್ಧಪುರುಷನಾದ ಮತ್ತು ಸರ್ವಪ್ರಭುವಾದ ಶಂಕರನು ಮಾತ್ರ ಅದೆಲ್ಲವನ್ನೂ ಬದಲಾಯಿಸಲು ಶಕ್ತನಾಗಬಹುದು. ಪುತ್ರನೆ! ಶಂಕರನು ಹೊರತು ಮತ್ತಾರಿಂದಲೂ ನಿನ್ನ ಇಷ್ಟಕಾರ್ಯವನ್ನು ಮಾಡಲು ಶಕ್ಯವಾಗುವುದಿಲ್ಲ.

೫೩. ತರುವಾಯ ಕರುಣಾಸಮುದ್ರನೂ ಸರ್ವೇಶ್ವರನೂ ಆದ ಪರಮೇಶ್ವರನು ದೇವಿಯ ಅನುಮತಿಯನ್ನು ಹೊಂದಿ ಭದ್ರಕರವಾದ ವಚನದಿಂದ ಜಮದಗ್ನಿಪುತ್ರನಾದ ಪರಶುರಾಮನನ್ನು ಕುರಿತು ಹೇಳಿದನು.

೫೪. ಶಿವನು ಈ ರೀತಿಯಾಗಿ ಹೇಳಿದನು :—ಮಹಾ ಪ್ರಜ್ಞಾಶಾಲಿಯಾದ ವಿಪ್ರನೇ! ಈ ದಿನ ಮೊದಲುಗೊಂಡು ನೀನು ನನಗೆ ಪುತ್ರನಾದ ಸ್ಕಂದನಂತೆ ಆಗಿರುತ್ತೀ. ನಿನಗೆ ದಿವ್ಯಮಂತ್ರಾತ್ಮಕವಾದ ಕವಚವನ್ನು ಉಪದೇಶಿಸುತ್ತೇನೆ.

೫೫. ಆ ಕವಚದ ಪ್ರಭಾವದಿಂದ ಲೀಲೆಯಿಂದ ಕಾರ್ತವೀರ್ಯಾರ್ಜುನನನ್ನು ಸಂಹಾರಮಾಡುತ್ತೀ. ಪೃಥಿವಿಯನ್ನು ಇಪ್ಪತ್ತೊಂದು ಸಲ ಕ್ಷತ್ರಿಯ ಶೂನ್ಯವನ್ನಾಗಿ ಮಾಡುತ್ತೀ. ಅದರಿಂದ ನಿನ್ನ ಪ್ರತಿಜ್ಞೆಯು ಸಾರ್ಥಕವಾಗುವುದು.

ಇತ್ಯುಕ್ತ್ವಾ ಶಂಕರಸ್ತಸ್ಮೈ ದದೌ ಮಂತ್ರಂ ಸುದುರ್ಲಭಮ್ ।
ತ್ರೈಲೋಕ್ಯವಿಜಯಂ ನಾಮ ಕವಚಂ ಪರಮಾದ್ಭುತಮ್ ॥ ೫೬ ॥

ನಾಗಪಾಶಂ ಪಾಶುಪತಂ ಬ್ರಹ್ಮಾಸ್ತ್ರಂ ಚ ಸುದುರ್ಲಭಮ್ ।
ನಾರಾಯಣಾಸ್ತ್ರಮಾಗ್ನೇಯಂ ವಾಯವ್ಯಂ ವಾರುಣಂ ತಥಾ ॥ ೫೭ ॥

ಗಾಂಧರ್ವಂ ಗಾರುಡಂ ಚೈವ ಜೃಂಭಣಾಸ್ತ್ರಂ ಮಹಾದ್ಭುತಮ್ ।
ಗದಾಂ ಶಕ್ತಿಂ ಚ ಪರಶುಂ ಶೂಲಂ ದಂಡಮನುತ್ತಮಮ್ ॥ ೫೮ ॥

ಶಸ್ತ್ರಾಸ್ತ್ರಗ್ರಾಮಮಖಿಲಂ ಪ್ರಹೃಷ್ಟಃ ಸಂಬಭೂವ ಹ ।
ನಮಸ್ಕೃತ್ಯ ಶಿವಂ ಶಾಂತಂ ದುರ್ಗಾಂ ಸ್ಕಂದಂ ಗಣೇಶ್ವರಮ್ ॥ ೫೯ ॥

ಪರಿಕ್ರಮ್ಯ ಯಯೌ ರಾಮಃ ಪುಷ್ಕರಂ ತೀರ್ಥಮುತ್ತಮಮ್ ।
ಸಿದ್ಧಂ ಕೃತ್ವಾ ಶಿವೋಕ್ತಂ ತು ಮಂತ್ರಂ ಕವಚಮುತ್ತಮಮ್ ॥ ೬೦ ॥

---

೫೬. ಹೀಗೆಂದು ಹೇಳಿ ಶಂಕರನು ಆ ಪರಶುರಾಮನಿಗೆ ಪರಮ ಅದ್ಭುತ ಪ್ರಾಯವಾಗಿರುವ ತ್ರೈಲೋಕ್ಯ ವಿಜಯವೆಂದು ಅನ್ವರ್ಥನಾಮಾಂಕಿತವಾದ ಕವಚರೂಪವಾದ ದುರ್ಲಭಮಂತ್ರವನ್ನು ಉಪದೇಶಿಸಿದನು.

೫೭. ಅಲ್ಲದೆ ನಾಗಪಾಶ, ಪಾಶುಪತಾಸ್ತ್ರ, ದುರ್ಲಭವಾದ ಬ್ರಹ್ಮಾಸ್ತ್ರ, ನಾರಾಯಣಾಸ್ತ್ರ, ಆಗ್ನೇಯಾಸ್ತ್ರ, ವಾಯವ್ಯಾಸ್ತ್ರ, ವಾರುಣಾಸ್ತ್ರಗಳೆಂಬ ಅನೇಕ ಅಮೋಘಾಸ್ತ್ರಗಳನ್ನು ಅನುಗ್ರಹಿಸಿದನು.

೫೮. ಮತ್ತು ಗಾಂಧರ್ವಾಸ್ತ್ರ, ಗಾರುಡಾಸ್ತ್ರ, ಅದ್ಭುತವಾದ ಜೃಂಭಣಾಸ್ತ್ರ, ಗದಾ, ಶಕ್ತಿ, ಪರಾಶು, ಶೂಲ ಮತ್ತು ಅತ್ಯುತ್ತಮವಾದ ದಂಡ ಮುಂತಾದ ವೀರ್ಯವತ್ತಾದ ಅಸ್ತ್ರಗಳನ್ನು ಕರುಣಿಸಿದನು.

೫೯. ಇಂತಹ ನಿಖಿಲ ಅಸ್ತ್ರ-ಶಸ್ತ್ರಗಳ ಸಮೂಹವನ್ನು ಹೊಂದಿ ಪರಶುರಾಮನು ಬಹಳ ಆನಂದವನ್ನು ಹೊಂದಿದವನಾದನು. ಅನಂತರದಲ್ಲಿ ನಿರ್ವಿಕಾರನಾದ ಶಿವನನ್ನೂ ದುರ್ಗಾದೇವಿಯನ್ನೂ ಸ್ಕಂದನನ್ನೂ ಮತ್ತು ಗಣೇಶ್ವರನನ್ನೂ ನಮಸ್ಕರಿಸಿದನು.

೬೦. ಅಲ್ಲಿಂದ ಪರಶುರಾಮನು ಪುಷ್ಕರವೆಂಬ ಉತ್ತಮವಾದ ತೀರ್ಥದ ಸಮೀಪಕ್ಕೆ ಹೋಗಿ ಶಿವನಿಂದ ಉಪದೇಶಿಸಲ್ಪಟ್ಟ ಉತ್ತಮ ಕವಚರೂಪವಾದ ಮಂತ್ರವನ್ನು ಜಪಿಸಿ ಸಿದ್ಧಿಮಾಡಿಕೊಂಡನು.

ಸಾಧಯಾಮಾಸ ನಿಖಿಲಂ ಸ್ವಕಾರ್ಯಂ ಭೃಗುನಂದನಃ
ನಿಹತ್ಯ ಕಾರ್ತವೀರ್ಯಂ ತಂ ಸಸೈನ್ಯಂ ಸಕುಲಂ ಮುದಾ ।
ವಿನಿವೃತ್ತೋ ಗೃಹಂ ಪ್ರಾಗಾತ್ ಪಿತುಃ ಸ್ವಸ್ಯ ಭೃಗೂದ್ವಹಃ ॥ ೬೧ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ದ್ವಾತ್ರಿಂಶತ್ತಮೋಽಧ್ಯಾಯಃ

---

೬೧. ಈ ರೀತಿಯಾಗಿ ಭೃಗುಮುನಿವಂಶ ಕುಮಾರನಾದ ರಾಮನು ನಿಖಿಲ ಸ್ವಕಾರ್ಯವನ್ನು ಸಾಧಿಸಿ ಸೈನ್ಯ ಸಮೇತನಾಗಿರುವ ಕಾರ್ತವೀರ್ಯರಾಜನ ವಂಶವನ್ನು ಕೊಂದು ನಿರ್ಮೂಲಮಾಡಿ ಹಿಂತಿರುಗಿ ತನ್ನ ತಂದೆಯ ಗೃಹವನ್ನು ಸೇರಿದನು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಮೂವತ್ತೆರಡನೆಯ ಅಧ್ಯಾಯವು ಮುಗಿದುದು.



# ತ್ರಯಸ್ತ್ರಿಂಶತ್ತಮೋಽಧ್ಯಾಯಃ

**ಸಗರ ಉವಾಚ :—**

**ಶ್ರುತಂ ಸರ್ವಂ ಮುನಿಶ್ರೇಷ್ಠ ಕೀರ್ತ್ಯಮಾನಂ ತ್ವಯಾ ವಿಭೋ ।**
**ಕವಚಂ ವದ ಸರ್ವತ್ರ ತ್ರೈಲೋಕ್ಯವಿಜಯಪ್ರದಮ್ ॥ ೧ ॥**

**ವಸಿಷ್ಠ ಉವಾಚ :—**

**ಶೃಣು ವತ್ಸ ಪ್ರವಕ್ಷ್ಯಾಮಿ ಕವಚಂ ಪರಮಾದ್ಭುತಮ್ ।**
**ಮಂತ್ರಂ ಚ ಸಿದ್ಧಿದಂ ಶಶ್ವತ್ಸಾಧಕಾನಾಂ ಸುಖಾವಹಮ್ ॥ ೨ ॥**

**ಗೋಪೀಜನಪದಸ್ಯಾಂತೇ ವಲ್ಲಭಾಯ ಸಮುಚ್ಚರೇತ್ ।**
**ಸ್ವಾಹಾಂತೋಽಯಂ ಮಹಾಮಂತ್ರೋ ದಶಾರ್ಣೋ ಭುಕ್ತಿಮುಕ್ತಿದಃ ॥ ೩ ॥**

---

೧. ಸಗರಚಕ್ರವರ್ತಿಯು ವಸಿಷ್ಠ ಮುನಿಯನ್ನು ಕುರಿತು ಇಂತೆಂದನು: ಮುನಿವರ್ಯನೇ ! ಇದುವರೆಗೂ ನಿನ್ನಿಂದ ವರ್ಣಿಸಲ್ಪಟ್ಟ ಸಮಸ್ತ ಚರಿತ್ರೆಯನ್ನೂ ಕೇಳಿದಂತಹವನಾಗಿದ್ದೇನೆ. ಈಗ ಮೂರು ಲೋಕಗಳಲ್ಲಿಯೂ ಜಯವನ್ನು ಗಳಿಸಲು ಸಾಧಕವಾದ ಕವಚಮಂತ್ರವನ್ನು ಉಪದೇಶಿಸು.

೨. ವಸಿಷ್ಠ ಮುನಿಯು ಪ್ರತ್ಯುತ್ತರವಿತ್ತನು. ಮಗನೆ! ಪರಮಾಶ್ಚರ್ಯವನ್ನುಂಟುಮಾಡುವ ಕವಚವನ್ನೂ ಉಪಾಸಕರಿಗೆ ಯಾವಾಗಲೂ ಸುಖವನ್ನುಂಟುಮಾಡಿ ಫಲಸಿದ್ಧಿಯನ್ನು ದೊರಕಿಸುವ ಮಂತ್ರವನ್ನೂ ಹೇಳುವೆನು, ನೀನು ಕೇಳುವವನಾಗು.

೩. "ಗೋಪೀಜನ" ಎಂಬ ಪದವನ್ನು ಉಚ್ಚಾರಮಾಡಿ "ವಲ್ಲಭಾಯ" ಎಂಬುದನ್ನು ಅದರ ಮುಂದೆ ಸೇರಿಸಿ ಉಚ್ಚರಿಸಿ ಕಡೆಯಲ್ಲಿ "ಸ್ವಾಹಾ" ಎಂಬುದನ್ನು ಪಠಿಸಲಾಗಿ "ಗೋಪೀಜನವಲ್ಲಭಾಯ ಸ್ವಾಹಾ" ಎಂಬ ಹತ್ತು ಅಕ್ಷರಗಳಿಂದ ಕೂಡಿದ ಭೋಗ ಮೋಕ್ಷಗಳೆಂಬ ಕಾಂಕ್ಷಿತ ಫಲವನ್ನು ಅನುಗ್ರಹಿಸುವ ಮಹಾಮಂತ್ರವಾಗುವುದು.

ಸದಾಶಿವಸ್ತ್ವಸ್ಯ ಋಷಿಃ ಪಂಕ್ತಿಶ್ಛಂದ ಉದಾಹೃತಮ್ ।
ದೇವತಾ ಕೃಷ್ಣ ಉದಿತೋ ವಿನಿಯೋಗೋಽಖಿಲಾಪ್ತಯೇ ॥ ೪ ॥

ತ್ರೈಲೋಕ್ಯ ವಿಜಯಸ್ಯಾಥ ಕವಚಸ್ಯ ಪ್ರಜಾಪತಿಃ ।
ಋಷಿಶ್ಛಂದಶ್ಚ ಜಗತೀ ದೇವೋ ರಾಜೇಶ್ವರಃ ಸ್ವಯಮ್ ॥ ೫ ॥

ತ್ರೈಲೋಕ್ಯವಿಜಯಪ್ರಾಪ್ತೌ ವಿನಿಯೋಗಃ ಪ್ರಕೀರ್ತಿತಃ ।
ಪ್ರಣವೋ ಮೇ ಶಿರಃ ಪಾತು ಶ್ರೀ ಕೃಷ್ಣಾಯ ನಮಃ ಸದಾ ॥ ೬ ॥

ಪಾಯಾತ್ಕಪಾಲಂ ಕೃಷ್ಣಾಯ ಸ್ವಾಹೇತಿ ಸತತಂ ಮಮ ।
ಕೃಷ್ಣೇತಿ ಪಾತು ನೇತ್ರೇ ಮೇ ಕೃಷ್ಣಸ್ವಾಹೇತಿ ತಾರಕಾಮ್ ॥ ೭ ॥

ಹರಯೇ ನಮ ಇತ್ಯೇಷ ಭ್ರೂಲತಾಂ ಪಾತು ಮೇ ಸದಾ ।
ಓಂ ಗೋವಿಂದಾಯ ಸ್ವಾಹೇತಿ ನಾಸಿಕಾಂ ಪಾತು ಸಂತತಮ್ ॥ ೮ ॥

---

೪. ಈದಶಾರ್ಣಮಹಾಮಂತ್ರದ ಋಷಿ-ದೇವತಾ-ಛಂದಸ್ಸು-ವಿನಿಯೋಗಗಳು ಈ ರೀತಿಯಾಗಿರುವುವು. ಸದಾಶಿವನು ಋಷಿಯೆಂದೂ ಪಂಕ್ತಿಯು ಛಂದಸ್ಸೆಂದೂ ಕೃಷ್ಣನು ದೇವತೆಯೆಂದೂ ಸಮಸ್ತ ಪುರುಷಾರ್ಥಪ್ರಾಪ್ತಿಯಲ್ಲಿ ವಿನಿಯೋಗವೆಂದೂ ಹೇಳಲ್ಪಟ್ಟಿರುತ್ತವೆ.

೫. ಮುಂದೆ ಹೇಳುವ ತ್ರೈಲೋಕ್ಯವಿಜಯವೆಂಬ ಕವಚಕ್ಕೆ ಪ್ರಜಾಪತಿಯು ಋಷಿ, ಜಗತೀ ಎಂಬುದು ಛಂದಸ್ಸು, ರಾಜೇಶ್ವರನೇ ದೇವತೆಯು.

೬. ತ್ರಿಲೋಕಗಳನ್ನು ಜಯಿಸುವುದೆಂಬ ಮಹಾಫಲಪ್ರಾಪ್ತಿಯಲ್ಲಿ ವಿನಿಯೋಗವೆಂದು ಹೇಳಲ್ಪಟ್ಟಿದೆ. " ಓಂ ಶ್ರೀ ಕೃಷ್ಣಾಯನಮಃ " ಎಂಬ ಮಂತ್ರಸ್ವರೂಪಿಯೂ ಮಂತ್ರಾಭಿಮಾನಿಯೂ ಆದ ದೇವತೆಯು ಯಾವಾಗಲೂ ಶಿರವನ್ನು ರಕ್ಷಿಸಲಿ.

೭. ಕೃಷ್ಣಾಯ ಸ್ವಾಹಾ ಎಂಬುದು ಸರ್ವಕಾಲದಲ್ಲಿಯೂ ನನ್ನ ಶಿರಃಕಪಾಲವನ್ನು ಕಾಪಾಡಲಿ. " ಕೃಷ್ಣ " ಎಂಬುದು ನನ್ನ ಕಣ್ಣುಗಳನ್ನೂ " ಕೃಷ್ಣ ಸ್ವಾಹಾ " ಎಂಬುದು ನನ್ನ ತಾರಕೆ (ಕಣ್ಣುಗುಡ್ಡೆ) ಯನ್ನೂ ರಕ್ಷಿಸಲಿ.

೮. " ಹರಯೇನಮಃ " ಎಂಬುದು ಯಾವಾಗಲೂ ನನ್ನ ಬಳ್ಳಿಯಂತೆ ಬಗ್ಗಿರುವ ಹುಬ್ಬುಗಳನ್ನು ಪಾಲಿಸಲಿ. " ಓಂ ಗೋವಿಂದಾಯಸ್ವಾಹಾ " ಎಂಬುದು ಸರ್ವಕಾಲದಲ್ಲಿಯೂ ಮೂಗನ್ನು ಸಲಹಲಿ.

**ಗೋಪಾಲಾಯ ನಮೋ ಗಂಡಂ ಪಾತು ಮೇ ಸತತಂ ಮನುಃ ।**
**ಕ್ಲೀಂ ಕೃಷ್ಣಾಯ ನಮಃ ಕರ್ಣೌ ಪಾತು ಕಲ್ಪತರುರ್ಮಮ ॥ ೯ ॥**

**ಶ್ರೀಂ ಕೃಷ್ಣಾಯ ನಮಃ ಪಾತು ನಿತ್ಯಂ ಮೇಽಧರಯುಗ್ಮಕಮ್ ।**
**ಓಂ ಗೋಪೀಶಾಯ ಸ್ವಾಹೇತಿ ದಂತಪಂಕ್ತಿಂ ಮಮಾವತು ॥ ೧೦ ॥**

**ಶ್ರೀ ಕೃಷ್ಣೇತಿ ರದಚ್ಛಿದ್ರಂ ಪಾತು ಮೇ ತ್ರ್ಯಕ್ಷರೋ ಮನುಃ ।**
**ಶ್ರೀ ಕೃಷ್ಣಾಯ ಸ್ವಾಹೇತಿ ಜಿಹ್ವಿಕಾಂ ಪಾತು ಮೇ ಸದಾ ॥ ೧೧ ॥**

**ರಾಮೇಶ್ವರಾಯ ಸ್ವಾಹೇತಿ ತಾಲುಕಂ ಪಾತು ಮೇ ಸದಾ ।**
**ರಾಧಿಕೇಶಾಯ ಸ್ವಾಹೇತಿ ಕಂಠಂ ಮೇ ಪಾತು ಸರ್ವದಾ ॥ ೧೨ ॥**

**ನಮೋ ಗೋಪೀಗಣೇಶಾಯ ಗ್ರೀವಾಂ ಮೇ ಪಾತು ಸರ್ವದಾ ।**
**ಓಂ ಗೋಪೇಶಾಯ ಸ್ವಾಹೇತಿ ಸ್ಕಂಧೌ ಪಾತು ಸದಾ ಮಮ ॥ ೧೩ ॥**

---

೯. "ಗೋಪಾಲಾಯನಮಃ" ಎಂಬ ಮಂತ್ರಭಾಗವು ನನ್ನ ಕಪೋಲಭಾಗವನ್ನು ರಕ್ಷಿಸಲಿ. "ಕ್ಲೀಂ ಕೃಷ್ಣಾಯನಮಃ" ಎಂಬ ಸಕಲ ಇಷ್ಟಾರ್ಥಗಳನ್ನು ನೀಡುವುದರಲ್ಲಿ ಕಲ್ಪವೃಕ್ಷಪ್ರಾಯವಾದ ಮಹಾಮಂತ್ರವು ಕಿವಿಗಳನ್ನು ಕಾಪಾಡಲಿ.

೧೦. "ಶ್ರೀಂ ಕೃಷ್ಣಾಯನಮಃ" ಎಂಬ ಮಂತ್ರವು ನನ್ನ ಎರಡು ತುಟಿಗಳನ್ನು ನಿತ್ಯವೂ ಕಾಪಾಡಲಿ. "ಓಂ ಗೋಪೀಶಾಯ ಸ್ವಾಹಾ" ಎಂಬ ಮಂತ್ರವು ನನ್ನ ಹಲ್ಲುಗಳ ಸಾಲನ್ನು ಕಾಪಾಡಲಿ.

೧೧. "ಶ್ರೀ ಕೃಷ್ಣ" ಎಂಬ ತ್ರ್ಯಕ್ಷರ ಮಂತ್ರವು ನನ್ನ ದಂತಚ್ಛಿದ್ರ (ಹಲ್ಲುಗಳ ಸಂಧಿಭಾಗ) ವನ್ನು ಕಾಪಾಡಲಿ. "ಶ್ರೀ ಕೃಷ್ಣಾಯಸ್ವಾಹಾ" ಎಂಬ ಮಂತ್ರವು ನಿತ್ಯವೂ ನನ್ನ ನಾಲಿಗೆಯನ್ನು ರಕ್ಷಿಸಲಿ.

೧೨. "ರಾಮೇಶ್ವರಾಯ ಸ್ವಾಹಾ" ಎಂಬುದು ಯಾವಾಗಲೂ ನನ್ನ ತಾಲುಪ್ರದೇಶ (ದವಡೆ) ಯನ್ನು ಕಾಪಾಡಲಿ. "ರಾಧಿಕೇಶಾಯ ಸ್ವಾಹಾ" ಎಂಬುದು ಸರ್ವ ಕಾಲದಲ್ಲಿಯೂ ನನ್ನ ಕಂಠವನ್ನು ಪಾಲಿಸಲಿ.

೧೩. "ಗೋಪೀಗಣೇಶಾಯನಮಃ" ಎಂಬುದು ಕತ್ತಿನ ಹೊರವಲಯವನ್ನು (ಗ್ರೀವಾಭಾಗ) ಯಾವಾಗಲೂ ಕಾಪಾಡಲಿ. "ಗೋಪೇಶಾಯ ಸ್ವಾಹಾ" ಎಂಬ ಮಂತ್ರವು ಸರ್ವದಾ ನನ್ನ ಸ್ಕಂಧಗಳನ್ನು ರಕ್ಷಿಸಲಿ.

**ನಮಃ ಕಿಶೋರವೇಷಾಯ ಸ್ವಾಹಾ ಪೃಷ್ಠಂ ಮಮಾವತು ।**
**ಉದರಂ ಪಾತು ಮೇ ನಿತ್ಯಂ ಮುಕುಂದಾಯ ನಮೋ ಮನುಃ ॥ ೧೪ ॥**

**ಹ್ರೀಂ ಶ್ರೀಂ ಕ್ಲೀಂ ಕೃಷ್ಣಾಯ ಸ್ವಾಹಾ ಕರೌ ಪಾತು ಸದಾ ಮಮ ।**
**ಓಂ ವಿಷ್ಣವೇ ನಮಃ ಸ್ವಾಹಾ ಬಾಹುಯುಗ್ಮಂ ಮಮಾವತು ॥ ೧೫ ॥**

**ಓಂ ಹ್ರೀಂ ಭಗವತೇ ಸ್ವಾಹಾ ನಖಪಂಕ್ತಿಂ ಮಮಾವತು ।**
**ನಮೋ ನಾರಾಯಣಾಯೇತಿ ನಖರಂಧ್ರಂ ಮಮಾವತು ॥ ೧೬ ॥**

**ಓಂ ಹ್ರೀಂ ಶ್ರೀಂ ಪದ್ಮನಾಭಾಯ ನಾಭಿಂ ಪಾತು ಸದಾ ಮಮ ।**
**ಓಂ ಸರ್ವೇಶಾಯ ಸ್ವಾಹೇತಿ ಕೇಶಾನ್ಮಮ ಸದಾವತು ॥ ೧೭ ॥**

**ನಮಃ ಕೃಷ್ಣಾಯ ಸ್ವಾಹೇತಿ ಬ್ರಹ್ಮರಂಧ್ರಂ ಸದಾವತು ।**
**ಓಂ ಮಾಧವಾಯ ಸ್ವಾಹೇತಿ ಭಾಲಂ ಮೇ ಸರ್ವದಾವತು ॥ ೧೮ ॥**

---

೧೪. “ನಮಃ ಕಿಶೋರವೇಷಾಯಸ್ವಾಹಾ” ಎಂಬುದು ನನ್ನ ಪೃಷ್ಠಭಾಗವನ್ನು ರಕ್ಷಿಸಲಿ. “ಮುಕುಂದಾಯನಮಃ” ಎಂಬ ಮಂತ್ರವು ಸದಾ ನನ್ನ ಹೊಟ್ಟೆಯನ್ನು ರಕ್ಷಿಸಲಿ.

೧೫. “ಹ್ರೀಂ ಶ್ರೀಂ ಕ್ಲೀಂ ಕೃಷ್ಣಾಯಸ್ವಾಹಾ” ಎಂಬುದು ಯಾವಾಗಲೂ ನನ್ನ ಕೈಗಳನ್ನು ಕಾಪಾಡಲಿ. “ಓಂ ವಿಷ್ಣವೇನಮಃಸ್ವಾಹಾ” ಎಂಬುದು ನನ್ನ ಎರಡು ತೋಳುಗಳನ್ನು ಕಾಪಾಡಲಿ.

೧೬. “ಓಂ ಹ್ರೀಂ ಭಗವತೇಸ್ವಾಹಾ” ಎಂಬ ಮಂತ್ರವು ನನ್ನ ಉಗುರುಗಳ ಸಾಲನ್ನು ಕಾಪಾಡಲಿ. “ನಮೋ ನಾರಾಯಣಾಯ” ಎಂಬುದು ನನ್ನ ಉಗುರುಗಳ ರಂಧ್ರವನ್ನು ರಕ್ಷಿಸಲಿ.

೧೭. “ಓಂ ಹ್ರೀಂ ಶ್ರೀಂ ಪದ್ಮನಾಭಾಯ” ಎಂಬ ಮಂತ್ರವು ಸರ್ವದಾ ನನ್ನ ನಾಭಿಯನ್ನು ರಕ್ಷಿಸಲಿ, “ಓಂ ಸರ್ವೇಶಾಯಸ್ವಾಹಾ” ಎಂಬುದು ಯಾವಾಗಲೂ ಕೂದಲುಗಳನ್ನು ಸಂರಕ್ಷಿಸಲಿ.

೧೮. “ನಮಃ ಕೃಷ್ಣಾಯಸ್ವಾಹಾ” ಎಂಬುದು ಯಾವಾಗಲೂ ನನ್ನ ಬ್ರಹ್ಮರಂಧ್ರವನ್ನು ಕಾಪಾಡಲಿ. “ಓಂ ಮಾಧವಾಯಸ್ವಾಹಾ” ಎಂಬುದು ನಿತ್ಯವೂ ನನ್ನ ಹಣೆಯನ್ನು ಪಾಲಿಸಲಿ.

ಓಂ ಹ್ರೀಂ ಶ್ರೀಂ ರಸಿಕೇಶಾಯ ಕಟಿಂ ಮಮ ಸದಾವತು ।
ನಮೋ ಗೋಪೀಜನೇಶಾಯ ಊರೂ ಪಾತು ಸದಾ ಮಮ ॥ ೧೯ ॥

ಓಂ ನಮೋ ದೈತ್ಯನಾಶಾಯ ಸ್ವಾಹೇತ್ಯವತು ಜಾನುನೀ ।
ಯಶೋದಾನಂದನಾಯೇತಿ ನಮೋಽಂತೋ ಜಂಘೇಽವತು ॥ ೨೦ ॥

ರಾಸಾರಂಭಪ್ರಿಯಾಯೇತಿ ಸ್ವಾಹಾಂತೋಽಂಘ್ರೀ ಮಮಾವತು ।
ವೃಂದಾಪ್ರಿಯಾಯ ಸ್ವಾಹೇತಿ ಸಕಲಾಂಗಾನಿ ಮೇಽವತು ॥ ೨೧ ॥

ಕೃಪಾಪೂರ್ಣಮನಾಃ ಕೃಷ್ಣಃ ಪ್ರಾಚ್ಯಾಂ ಮಾಂ ಸರ್ವದಾವತು ।
ಸ್ವಯಂ ಗೋಲೋಕನಾಥೋ ಮಾಮಾಗ್ನೇಯ್ಯಾಂ ದಿಶಿ ರಕ್ಷತು
॥ ೨೨ ॥

ಪೂರ್ಣಬ್ರಹ್ಮಸ್ವರೂಪಶ್ಚ ದಕ್ಷಿಣೇ ಮಾಂ ಸದಾವತು ।
ನೈಋತ್ಯಾಂ ಪಾತು ಮಾಂಕೃಷ್ಣಃ ಪಶ್ಚಿಮೇ ಪಾತು ಮಾಂ ಹರಿಃ
॥ ೨೩ ॥

---

೧೯. "ಓಂ ಹ್ರೀಂ ಶ್ರೀಂ ರಸಿಕೇಶಾಯ" ಎಂಬ ಮಂತ್ರಭಾಗವು ನನ್ನ ಕಟಿ ಭಾಗವನ್ನು ಸರ್ವಕಾಲದಲ್ಲಿಯೂ ಕಾಪಾಡಲಿ. "ನಮೋಗೋಪೀಜನೇಶಾಯ" ಎಂಬುದು ಸರ್ವದಾ ನನ್ನ ತೊಡೆಗಳನ್ನು ಕಾಪಾಡಲಿ.

೨೦. "ಓಂ ನಮೋ ದೈತ್ಯನಾಶಾಯಸ್ವಾಹಾ" ಎಂಬುದು ಮಂಡಿಗಳನ್ನು ಕಾಪಾಡಲಿ. "ಯಶೋದಾನಂದನಾಯನಮಃ" ಎಂಬುದು ನನ್ನ ಮೊಣಕಾಲುಗಳನ್ನು ಕಾಪಾಡಲಿ.

೨೧. ಹ್ರೀಂ ರಾಸಾರಂಭಪ್ರಿಯಾಯಸ್ವಾಹಾ" ಎಂಬುದು ನನ್ನ ಪಾದಗಳನ್ನು ಕಾಪಾಡಲಿ. "ವೃಂದಾಪ್ರಿಯಾಯಸ್ವಾಹಾ" ಎಂಬ ಮಂತ್ರವು ನನ್ನ ಸಕಲಾವಯವಗಳನ್ನು ರಕ್ಷಿಸಲಿ.

೨೨. ಕೃಪೆಯಿಂದ ಸಂಪೂರ್ಣವಾದ ಮನಸ್ಸುಳ್ಳ ಕೃಷ್ಣನು ಸರ್ವಕಾಲದಲ್ಲಿಯೂ ನನ್ನನ್ನು ಪೂರ್ವದಿಕ್ಕಿನಲ್ಲಿ ಕಾಪಾಡಲಿ. ಗೋಲೋಕ (ಗೋಕುಲ) ಕ್ಕೆ ಪ್ರಭುವಾದ ಪರಮಾತ್ಮನು ತಾನಾಗಿಯೇ ನನ್ನನ್ನು ಆಗ್ನೇಯದಿಕ್ಕಿನಲ್ಲಿ ಕಾಪಾಡಲಿ.

೨೩. ಪೂರ್ಣ ಬ್ರಹ್ಮರೂಪಿಯಾದ ದೇವನು ನನ್ನನ್ನು ದಕ್ಷಿಣದಿಕ್ಕಿನಲ್ಲಿ ಸರ್ವದಾ ರಕ್ಷಿಸಲಿ. ಕೃಷ್ಣನು ನನ್ನನ್ನು ನಿಋತಿದಿಕ್ಕಿನಲ್ಲಿ ಕಾಪಾಡಲಿ. ಹರಿಯು ನನ್ನನ್ನು ಪಶ್ಚಿಮದಿಕ್ಕಿನಲ್ಲ ಸಂರಕ್ಷಿಸಲಿ.

ಗೋವಿಂದಃ ಪಾತು ವಾಯವ್ಯಾಮುತ್ತರೇ ರಸಿಕೇಶ್ವರಃ ।
ಐಶಾನ್ಯಾಂ ಮಾಂ ಸದಾ ಪಾತು ವೃಂದಾವನವಿಹಾರಕೃತ್ ॥ ೨೪ ॥

ವೃಂದಾಪ್ರಾಣೇಶ್ವರಃ ಶಶ್ವತ್ಪಾತು ಮಾಮೂರ್ಧ್ವದೇಶತಃ ।
ಸದೈವ ಮಾಮಧಃ ಪಾತು ಬಲಿಧ್ವಂಸೀ ಮಹಾಬಲಃ ॥ ೨೫ ॥

ಜಲೇ ಸ್ಥಲೇ ಚಾಂತರಿಕ್ಷೇ ನೃಸಿಂಹಃ ಪಾತು ಮಾಂ ಸದಾ ।
ಸ್ವಪ್ನೇ ಜಾಗರಣೇ ಚೈವ ಪಾತು ಮಾಂ ಮಾಧವಃ ಸ್ವಯಮ್ ॥ ೨೬ ॥

ಸರ್ವಾಂತರಾತ್ಮಾ ನಿರ್ಲಿಪ್ತಃ ಪಾತು ಮಾಂ ಸರ್ವತೋ ವಿಭುಃ ।
ಇತಿ ತೇ ಕಥಿತಂ ಭೂಪ ಸರ್ವಾಘೌಘವಿನಾಶನಮ್ ॥ ೨೭ ॥

ತ್ರೈಲೋಕ್ಯವಿಜಯಂ ನಾಮ ಕವಚಂ ಪರಮೇಶಿತುಃ ।
ಮಯಾ ಶ್ರುತಂ ಶಿವಮುಖಾತ್ಪ್ರವಕ್ತವ್ಯಂ ನ ಕಸ್ಯಚಿತ್ ॥ ೨೮ ॥

---

೨೪. ಗೋವಿಂದನು ವಾಯವ್ಯದಿಕ್ಕಿನಲ್ಲಿ ನನ್ನನ್ನು ಕಾಪಾಡಲಿ. ರಸಿಕೇಶ್ವರನಾದ ದೇವನು ನನ್ನನ್ನು ಉತ್ತರದಲ್ಲಿ ಸಲಹಲಿ, ವೃಂದಾವನದಲ್ಲಿ ವಿಹರಿಸುವುದರಲ್ಲಿ ಪ್ರೀತಿಯುಳ್ಳ ದೇವನು ನನ್ನನ್ನು ನಿತ್ಯವೂ ಈಶಾನ್ಯದಿಕ್ಕಿನಲ್ಲಿ ಪಾಲಿಸಲಿ.

೨೫. ವೃಂದಾದೇವಿಯ ಪ್ರಾಣವಲ್ಲಭನು ಯಾವಾಗಲು ನನ್ನನ್ನು ಊರ್ಧ್ವದಿಕ್ಕಿನಲ್ಲಿ ಕಾಪಾಡಲಿ, ಬಲಿಚಕ್ರವರ್ತಿಯನ್ನು ಕೆಳಕ್ಕೆ ತಳ್ಳಿದ ಮಹಾ ಬಲಿಷ್ಠನಾದ ದೇವನು ಸರ್ವದಾ ನನ್ನನ್ನು ಅಧೋದಿಕ್ಕಿನಲ್ಲಿ ರಕ್ಷಿಸಲಿ.

೨೬. ನೀರು, ನೆಲ, ಆಕಾಶ ಈ ಎಲ್ಲೆಡೆಗಳಲ್ಲಿಯೂ ನೃಸಿಹ್ಮನು ನನ್ನನ್ನು ಕಾಪಾಡಲಿ, ಮತ್ತು ಮಾಧವನು ಸ್ವಪ್ನ, ಜಾಗರಣವೆಂಬ ಅವಸ್ಥೆಗಳಲ್ಲಿ ನನ್ನನ್ನು ಕಾಪಾಡಲಿ.

೨೭. ಸರ್ವಭೂತಗಳಲ್ಲಿ ಅಂತರ್ಯಾಮಿ ಆತ್ಮಸ್ವರೂಪನೂ, ನಿರ್ಲಿಪ್ತನೂ, ಸರ್ವವ್ಯಾಪಕನೂ ಆದ ದೇವನು ನನ್ನನ್ನು ಸಮಸ್ತ ಭಾಗಗಳಲ್ಲಿಯೂ ರಕ್ಷಿಸಲಿ. ರಾಜನೇ! ಎಲ್ಲ ಪಾಪ ಪುಂಜಗಳನ್ನು ಧ್ವಂಸಮಾಡುವ ಕವಚವನ್ನು ನಿನಗೆ ಉಪದೇಶಿಸಿರುವೆನು.

೨೮. ಪರಮ ನಿಯಾಮಕನಾದ ಭಗವಂತನ ತ್ರೈಲೋಕ್ಯ ವಿಜಯವೆಂಬ ಕವಚವನ್ನು ನಾನು ಈಶ್ವರನ ಮುಖದಿಂದ ಉಪದೇಶ ಹೊಂದಿರುವೆನು. ಇದು ಪರಮರಹಸ್ಯವಾದುದರಿಂದ ಯಾರಿಗೂ ಇದನ್ನು ಪ್ರಕಾಶಪಡಿಸತಕ್ಕುದಲ್ಲ.

ಗುರುಮಭ್ಯರ್ಚ್ಯ ವಿಧಿವತ್ಕವಚಂ ಧಾರಯೇತ್ತು ಯಃ ।
ಕಂಠೇ ವಾ ದಕ್ಷಿಣೇ ಬಾಹೌ ಸೋಽಪಿ ವಿಷ್ಣುರ್ನ ಸಂಶಯಃ ॥ ೨೯ ॥

ಸ ಸಾಧಕೋ ವಸೇದ್ಯತ್ರ ತತ್ರ ವಾಣೀರಮೇ ಸ್ಥಿತೇ ।
ಯದಿ ಸ್ಯಾತ್ಸಿದ್ಧಕವಚೋ ಜೀವನ್ಮುಕ್ತೋ ನ ಸಂಶಯಃ ॥ ೩೦ ॥

ನಿಶ್ಚಿತಂ ಕೋಟಿವರ್ಷಾಣಾಂ ಪೂಜಾಯಾಃ ಫಲಮಾಪ್ನುಯಾತ್ ।
ರಾಜಸೂಯಸಹಸ್ರಾಣಿ ವಾಜಪೇಯಶತಾನಿ ಚ ॥ ೩೧ ॥

ಮಹಾದಾನಾನಿ ಯಾನ್ಯೇವ ಭುವಶ್ಚಾಪಿ ಪ್ರದಕ್ಷಿಣಾ ।
ತ್ರೈಲೋಕ್ಯವಿಜಯಸ್ಯಾಸ್ಯ ಕಲಾಂ ನಾರ್ಹಂತಿ ಷೋಡಶೀಂ ॥ ೩೨ ॥

---

೨೯. ಯಾವ ಉಪಾಸಕನು ಈ ಕವಚ ಮಂತ್ರವನ್ನು ಉಪದೇಶಿಸಿದ ಗುರುವನ್ನು ಅರ್ಚನಾದಿಗಳಿಂದ ಸತ್ಕರಿಸಿ ಇದನ್ನು ಶಾಸ್ತ್ರವಿಧಿಯಂತೆ ಕಂಠದಲ್ಲಿ ಅಥವಾ ಬಲಭಾಗದ ತೋಳಿನಲ್ಲಿ ಧರಿಸುವನೋ ಅಂತಹವನು ಕವಚಧಾರಣ ಬಲದಿಂದ ಸಾಕ್ಷಾತ್ತಾಗಿ ವಿಷ್ಣುರೂಪನೇ ಆಗುವನು ಎಂಬುದರಲ್ಲಿ ಸಂದೇಹವಿಲ್ಲ.

೩೦. ಯಾವ ಗೃಹದಲ್ಲಿ ಈ ಕವಚೋಪಾಸಕನು ವಾಸಿಸುವನೋ ಅಲ್ಲಿ ಸರಸ್ವತಿಯೂ, ಲಕ್ಷ್ಮಿಯೂ ಸನ್ನಿಧಿಯನ್ನಿಟ್ಟು ವಾಸಮಾಡುವರು. ಈ ಕವಚ ಪುರಶ್ಚರಣದ ಸಿದ್ಧಿಯನ್ನು ಗಳಿಸಿದವನು ಸಾಕ್ಷಾತ್ತಾಗಿ ಜೀವನ್ಮುಕ್ತಿಯನ್ನು ಹೊಂದುವನು. ಈ ವಿಷಯದಲ್ಲಿ ಸ್ವಲ್ಪವೂ ಸಂಶಯವಿಲ್ಲ.

೩೧. ಈ ಕವಚಧಾರಣದಿಂದ ಒಂದು ಕೋಟಿ ವರ್ಷಕಾಲವೂ ಭಗವಂತನ ಅರ್ಚನೆಯನ್ನು ಮಾಡಿದರೆ ಲಭಿಸುವ ಫಲವು ನಿಶ್ಚಿತವಾಗಿಯೂ ಪ್ರಾಪ್ತವಾಗುವುದು. ಮತ್ತು ಸಾವಿರಾರು ರಾಜಸೂಯ ಯಾಗಗಳ ಅನೇಕಾನೇಕ ವಾಜಪೇಯ ಯಾಗಗಳ ಫಲಗಳು ಇದರಲ್ಲಿ ಅಂತರ್ಗತವಾಗಿರುವುವು.

೩೨. ಮಹಾ ಮಹಾ ದಾನಗಳೂ ಸಮಸ್ತ ಭೂಮಂಡಲ ಪ್ರದಕ್ಷಿಣೆಯೂ ಇವೇ ಆದಿಯಾದ ಮಹಾ ಪುಣ್ಯಕರ್ಮಗಳು ಈ ತ್ರೈಲೋಕ್ಯವಿಜಯಕವಚದ ಹದಿನಾರನೆಯ ಒಂದು ಅಂಶಕ್ಕೂ ಸಮವಾಗಲಾರವು. ಅವೆಲ್ಲಕ್ಕಿಂತಲೂ ಇದರ ಫಲಸಿದ್ಧಿಯು ಅತಿಶಯಿತವಾದುದು.

ವ್ರತೋಪವಾಸನಿಯಮಾಃ ಸಾಧ್ಯಾಯಾಧ್ಯಯನೇ ತಥಾ ।
ಸ್ನಾನಂ ಚ ಸರ್ವತೀರ್ಥೇಷು ನಾಸ್ಯಾರ್ಹಂತಿ ಕಲಾಮಪಿ ॥ ೩೩ ॥

ಸಿದ್ಧತ್ವಮಮರತ್ವಂ ಚ ದಾಸತ್ವಂ ಶ್ರೀಹರೇರಪಿ ।
ಯದಿ ಸ್ಯಾತ್ಸಿದ್ಧಕವಚಃ ಸರ್ವಂ ಪ್ರಾಪ್ನೋತಿ ನಿಶ್ಚಿತಮ್ ॥ ೩೪ ॥

ಸ ಭವೇತ್ಸಿದ್ಧಕವಚೋ ದಶಲಕ್ಷಂ ಜಪೇತ್ತು ಯಃ ।
ಯೋ ಭವೇತ್ಸಿದ್ಧಕವಚೋ ವಿಜಯೀ ಸ ಭವೇದ್ಧ್ರುವಮ್ ॥ ೩೫ ॥

ರಾಜ್ಯಂ ದೇಯಂ ಶಿರೋ ದೇಯಂ ಪ್ರಾಣಾ ದೇಯಾಶ್ಚ ಭೂಪತೇ ।
ಏತತ್ತು ಕವಚಂ ವತ್ಸ ನ ದೇಯಂ ಸಂಕಟೇಽಪಿ ಚ ॥ ೩೬ ॥

---

೩೩. ಅನೇಕ ವ್ರತಾನುಷ್ಠಾನ, ನಿಯಮಪೂರ್ವಕವಾದ ಉಪವಾಸ, ಬ್ರಹ್ಮಯಜ್ಞಾಂಗ ವೇದಪಾರಾಯಣ, ವೇದಾಧ್ಯಯನ, ಸಮಸ್ತ ಪುಣ್ಯತೀರ್ಥಗಳಲ್ಲಿ ಸ್ನಾನ ಈ ಎಲ್ಲ ಪುಣ್ಯಕರ್ಮಗಳು ಈ ತ್ರೈಲೋಕ್ಯ ವಿಜಯ ಕವಚದ ಒಂದು ಅಂಶಕ್ಕೆ ಕೂಡ ಸರಿಹೋಗುವುದಿಲ್ಲ. ಎಲ್ಲಕ್ಕಿಂತಲೂ ಈ ಕವಚವು ಅತಿಶಯಿತವಾಗಿರುವುದು.

೩೪. ಈ ಕವಚವನ್ನು ಧರಿಸಿ ಅದರ ಸಿದ್ಧಿಯನ್ನು ಹೊಂದುವುದಾದರೆ ಅಣಿಮಾದ್ಯಷ್ಟೈಶ್ವರ್ಯಸಿದ್ಧಿ, ಜರಾಮರಣ ಶೂನ್ಯತ್ವ, ವಿಷ್ಣು ಪರಮಾತ್ಮನ ಕೈಂಕರ್ಯಗಳೆಂಬ ಸಮಸ್ತ ಉತ್ತಮಫಲಗಳನ್ನು ನಿಶ್ಚಯವಾಗಿ ಹೊಂದುವನು.

೩೫. ಈ ಕವಚವನ್ನು ಹತ್ತುಲಕ್ಷ ಸಂಖ್ಯೆಯ ಆವೃತ್ತಿಯಿಂದ ಜಪಿಸಿದವನು ಕವಚದ ಸಿದ್ಧಿಯನ್ನು ಹೊಂದುವನು. ಈ ವಿಧದಿಂದ ಕವಚಸಿದ್ಧಿಯನ್ನು ಹೊಂದಿದ ಉಪಾಸಕನು ನಿಶ್ಚಯವಾಗಿಯೂ ಸರ್ವಕಾಲಗಳಲ್ಲಿಯೂ ಜಯಶೀಲನಾಗುವನು.

೩೬. ಮಹತ್ತರವಾದ ಕಷ್ಟಸ್ಥಿತಿಯು ಒದಗಿದಾಗಲೂ ಅದರ ಪರಿಹಾರಾರ್ಥವಾಗಿ ಸಮಸ್ತ ರಾಜ್ಯವನ್ನಾಗಲಿ ತನ್ನ ತಲೆಯನ್ನಾಗಲಿ ಪ್ರಾಣಗಳನ್ನೇ ಆಗಲಿ ಅರ್ಪಿಸಬಹುದು. ಎಲೈ ಪ್ರಿಯನಾದ ರಾಜನೇ! ಈ ಗೋಪ್ಯವಾದ ಕವಚವನ್ನು ಮಾತ್ರ ಪ್ರಕಾಶಗೊಳಿಸಬಾರದು. ರಾಜ್ಯಾದಿಗಳಿಗಿಂತಲೂ ಹೆಚ್ಚಿನ ಸಿದ್ಧಿಯನ್ನು ಕೊಡುವುದರಿಂದ ಈ ಕವಚವು ಸರ್ವೋತ್ತಮವೆಂದೂ ಅತಿ ರಹಸ್ಯವಾದುದೆಂದೂ ಅಭಿಪ್ರಾಯವು.

ಮಯಾ ಪ್ರಕಾಶಿತಂ ಯತ್ತೇ ಚೈತೇಷಾಂ ತ್ರಾಣಕಾರಣಾತ್ ।
ಮಮಾಜ್ಞಾಕರಣಾಚ್ಚೈವ ತದ್ವಿದ್ಧಿ ಕುಲಭಾಸ್ಕರ ।
ಇದಂ ಧೃತ್ವಾ ತು ಕವಚಂ ಚರ್ಕವರ್ತೀ ಭವಾನ್ಭವ ॥ ೩೭ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ
ತ್ರಯಸ್ತ್ರಿಂಶತ್ತಮೋಽಧ್ಯಾಯಃ

---

೩೭. ಸದ್ವಂಶವನ್ನು ಬೆಳಗುವಂತಹ ಗುಣನಿಧಿಯಾದ ರಾಜನೇ ! ನನ್ನ ಆಜ್ಞೆಯಂತೆ ನಡೆದುಕೊಳ್ಳುವ ವಿನಯವನ್ನು ಕಂಡು ಇವರೆಲ್ಲರನ್ನು ರಕ್ಷಿಸುವ ಸಲುವಾಗಿ ನಿನಗೆ ಪ್ರಕಾಶಪಡಿಸಿದ ಈ ಕವಚವನ್ನು ನೀನು ತಿಳಿದು ಈ ಕವಚವನ್ನು ಧಾರಣ ಮಾಡಿ ಇದರ ಬಲದಿಂದ ನೀನು ಚಕ್ರವರ್ತಿಯಾಗಿ ಬಾಳು. ಫಲಶ್ರುತಿಯಿಂದ ಕೂಡಿದ ಕವಚೋಪದೇಶವು ಇಲ್ಲಿಗೆ ಮುಗಿದುದು. ಹಿಂದೆ ತೋರಿಸಿದ ಮಂತ್ರಭಾಗಗಳೆಲ್ಲವೂ ಶ್ರೀ ಕೃಷ್ಣನ ಸ್ತುತ್ಯವಾದ ಗುಣವಾಚಕಗಳಿಂದಲೂ ಅನ್ವರ್ಥವಾದ ಸಂಜ್ಞೆಗಳಿಂದಲೂ ಕೂಡಿದವುಗಳಾಗಿವೆ.

ಬ್ರಹ್ಮಾಂಡ ಪುರಾಣದಲ್ಲಿ ಉತ್ತರಾರ್ಧದಲ್ಲಿ ಮೂವತ್ತಮೂರನೆಯ ಅಧ್ಯಾಯವು
ಸಮಾಪ್ತವು.



# ಚತುಸ್ತ್ರಿಂಶತ್ತಮೋಽಧ್ಯಾಯಃ

**ಸಗರ ಉವಾಚ :—**

**ಬ್ರಹ್ಮಪುತ್ರ ಮಹಾಭಾಗ ಮಹಾನ್ ಮೇಽನುಗ್ರಹಃ ಕೃತಃ ।**
**ಯದಿದಂ ಕವಚಂ ಮಹ್ಯಂ ಪ್ರಕಾಶಿತಮನಾಮಯಮ್ ॥ ೧ ॥**

**ಔರ್ವೇಣಾನುಗೃಹೀತೋಽಹಂ ಕೃತಾಸ್ತ್ರೋ ಯದನುಗ್ರಹಾತ್ ।**
**ಭವತಸ್ತು ಕೃಪಾಪಾತ್ರಂ ಜಾತೋಽಹಮಧುನಾ ವಿಭೋ ॥ ೨ ॥**

**ರಾಮೇಣ ಭಾರ್ಗವೇಂದ್ರೇಣ ಕಾರ್ತವೀರ್ಯೋ ನೃಪೋ ಗುರೋ ।**
**ಯಥಾ ಸಮಾಪಿತೋ ವೀರಸ್ತನ್ಮೇ ವಿಸ್ತರತೋ ವದ ॥ ೩ ॥**

**ಕೃಪಾಪಾತ್ರಂ ಸ ದತ್ತಸ್ಯ ರಾಜಾ ರಾಮಃ ಶಿವಸ್ಯ ಚ ।**
**ಉಭೌ ತೌ ಸಮರೇ ವೀರೌ ಜಘಟಾತೇ ಕಥಂ ಗುರೋ ॥ ೪ ॥**

---

೧. ಇದನ್ನು ಕೇಳಿದ ಸಗರನು ವಸಿಷ್ಠ ಮುನಿಯನ್ನು ಕುರಿತು ಇಂತೆಂದನು. ಬ್ರಹ್ಮನ ಮಾನಸ ಪುತ್ರನೂ ಮಹಾಮಹಿಮೈಶ್ವರ್ಯ ಸಂಪನ್ನನೂ ಆದ ವಸಿಷ್ಠ ಗುರುವೆ, ಕಾಯಿಕ ಮಾನಸಿಕಾದಿ ಸಮಸ್ತ ವ್ಯಾಧಿನಾಶಕವಾದ ಈ ಕವಚವನ್ನು ನನಗೆ ಪ್ರಕಾಶಪಡಿಸಿ ಉಪದೇಶಮಾಡಿರುವುದು ನನ್ನ ವಿಷಯದಲ್ಲಿ ತುಂಬಾ ಅನುಗ್ರಹಮಾಡಿದಂತಿರುವುದು.

೨. ಯಾವ ಔರ್ವಮುನಿಯ ಅನುಗ್ರಹದಿಂದ ನಾನು ಅಸ್ತ್ರವಿದ್ಯೆಯಲ್ಲಿ ಶಿಕ್ಷಣವನ್ನು ಹೊಂದಿರುವೆನೊ ಅಂತಹ ಔರ್ವ ಮುನಿಯು ಹಿಂದೆ ಒಂದು ಬಾರಿ ಅಸ್ತ್ರ ವಿದ್ಯಾಶಿಕ್ಷಣದ ಮೂಲಕ ನನ್ನನ್ನು ಅನುಗ್ರಹಿಸಿರುವನು. ಸರ್ವಶಕ್ತನಾದ ಗುರುವೆ! ಈಗ ಕವಚೋಪದೇಶವನ್ನು ಹೊಂದಿದ ನಾನು ನಿನ್ನ ಕರುಣೆಗೆ ಪಾತ್ರನಾಗಿರುವೆನು.

. ಗುರುವೇ! ಭೃಗುವಂಶದಲ್ಲಿ ಶ್ರೇಷ್ಠ ಜನ್ಮವನ್ನೆತ್ತಿದ ಪರಶುರಾಮನಿಂದ ವೀರನಾದ ಕೃತವೀರ್ಯನೆಂಬ ರಾಜನ ಪುತ್ರನಾದ ಕಾರ್ತವೀರ್ಯರಾಜನು ಹೇಗೆ ಸಂಹರಿಸಲ್ಪಟ್ಟನೆಂಬ ಚರಿತ್ರೆಯನ್ನು ವಿಸ್ತಾರವಾಗಿ ಹೇಳು.

೪ ಗುರುವೇ! ಕಾರ್ತವೀರ್ಯರಾಜನು ದತ್ತಾತ್ರೇಯ ಮುನಿಯ ಕರುಣೆಗೆ ಪಾತ್ರನಾದ ಶಿಷ್ಯನು. ಪರಶುರಾಮನು ಸಾಕ್ಷಾತ್ ಪರಮಶಿವನ ದಯೆಗೆ ಪಾತ್ರನಾದ ಶಿಷ್ಯೋತ್ತಮನು. ಇಂತಹ ವೀರರಿಬ್ಬರು ಯುದ್ಧರಂಗಕ್ಕಿಳಿದುದು ಹೇಗೆ?

ವಸಿಷ್ಠ ಉವಾಚ :—

ಶೃಣು ರಾಜನ್ ಪ್ರವಕ್ಷ್ಯಾಮಿ ಚರಿತಂ ಪಾಪನಾಶನಮ್ ।
ಕಾರ್ತವೀರ್ಯಸ್ಯ ಭೂಪಸ್ಯ ರಾಮಸ್ಯ ಚ ಮಹಾತ್ಮನಃ ॥ ೫ ॥

ಸ ರಾಮಃ ಕವಚಂ ಲಬ್ಧ್ವಾ ಮಂತ್ರಂ ಚೈವ ಗುರೋರ್ಮುಖಾತ್ ।
ಚಕಾರ ಸಾಧನಂ ತಸ್ಯ ಭಕ್ತ್ಯಾ ಪರಮಯಾ ಯುತಃ ॥ ೬ ॥

ಭೂಮಿಶಾಯೀ ತ್ರಿಷವಣಂ ಸ್ನಾನಸಂಧ್ಯಾಪರಾಯಣಃ ।
ಉವಾಸ ಪುಷ್ಕರೇ ರಾಮಃ ಶತವರ್ಷಮತಂದ್ರಿತಃ ॥ ೭ ॥

ಸಮಿತ್ಪುಷ್ಪಕುಶಾದೀನಿ ದ್ರವ್ಯಾಣ್ಯಾಹರದ್ಭೃಗೋಃ ।
ಆನೀಯ ಕಾನನಾದ್ಭೂಪ ಪ್ರಾಯಚ್ಛದಕೃತವ್ರಣಃ ॥ ೮ ॥

ಸತತಂ ಧ್ಯಾನಸಂಯುಕ್ತೋ ರಾಮೋ ಮತಿಮತಾಂ ವರಃ ।
ಆರಾಧಯಾಮಾಸ ವಿಭುಂ ಕೃಷ್ಣಂ ಕಲ್ಮಷನಾಶನಮ್ ॥ ೯ ॥

---

೫. ಸಗರನ ಪ್ರಶ್ನೆಯನ್ನು ಲಾಲಿಸಿ ವಸಿಷ್ಠಮುನಿಯು ಉತ್ತರವನ್ನು ಕೊಟ್ಟನು. ರಾಜನೆ! ಕಾರ್ತವೀರ್ಯ ರಾಜನು ಮತ್ತು ಪರಶುರಾಮರೆಂಬ ಇಬ್ಬರು ಮಹಾತ್ಮರ ಸಮಸ್ತ ಪಾಪಗಳನ್ನು ದೂರಮಾಡುವ ಚರಿತ್ರೆಯನ್ನು ಹೇಳುವೆನು, ಕೇಳು.

೬. ಪರಶುರಾಮನು ಗುರುಮುಖದಿಂದ ಹಿಂದೆ ಹೇಳಿದ ತ್ರೈಲೋಕ್ಯ ವಿಜಯ ಕವಚವನ್ನೂ ಮಂತ್ರವನ್ನೂ ಉಪದೇಶ ತೆಗೆದುಕೊಂಡು ಪರಮ ಭಕ್ತಿಯಿಂದ ಅವುಗಳ ಜಪಾದಿಸಾಧನೆಯನ್ನು ಕೈಗೊಂಡನು.

೭. ಮಂತ್ರ ಜಪಾದಿಗಳ ಅನುಷ್ಠಾನ ಮಾಡುವ ಸಮಯದಲ್ಲಿ ಪರಶುರಾಮನು ಪುಷ್ಕರವೆಂಬ ಪವಿತ್ರ ಕ್ಷೇತ್ರದಲ್ಲಿ ಹಂಸತೂಲಿಕಾದಿ ಭೋಗೋಪಕರಣವನ್ನು ತ್ಯಜಿಸಿ ನೆಲದಲ್ಲಿಯೇ ಮಲಗುವುದು, ತ್ರಿಷವಣಸ್ನಾನ, ಮೂರುಹೊತ್ತು ಸಂಧ್ಯಾವಂದನ ಕರ್ಮ ಮುಂತಾದುವುಗಳನ್ನು ನಿಯಮದಿಂದಆಚರಿಸುತ್ತ ಸ್ವಲ್ಪವೂ ಆಲಸ್ಯವಿಲ್ಲದೆಯೇ ಅನೇಕ ವರ್ಷಕಾಲ ವಾಸಮಾಡಿದನು.

೮. ಭೃಗು ವಂಶದಲ್ಲಿ ಜನಿಸಿದ ಪರಶುರಾಮನ ತಪಸ್ಸಿನ ಉಪಕರಣಗಳಾದ ಸಮಿತ್, ದರ್ಭೆ, ಹೂ ಮುಂತಾದ ವಸ್ತುಗಳನ್ನು ಅಕೃತವ್ರಣನೆಂಬ ಶಿಷ್ಯನು ಕಾಡಿನಿಂದ ಪ್ರತಿನಿತ್ಯವೂ ತಂದುಕೊಡುವವನಾಗಿದ್ದನು.

೯. ಪ್ರಜ್ಞಾವಂತರಿಗೆ ಅಗ್ರಗಣ್ಯನಾದ ಪರಶುರಾಮನು ನಿರಂತರ ಪರದೇವತಾ ಧ್ಯಾನದಲ್ಲಿ ಆಸಕ್ತಿಯನ್ನಿಟ್ಟುಕೊಂಡು ಪಾಪಗಳನ್ನು ಧ್ವಂಸಮಾಡುವ ಸರ್ವೇಶನಾದ ಕೃಷ್ಣಪರಮಾತ್ಮನನ್ನು ಸಂತತವಾಗಿ ಆರಾಧಿಸಿದನು.

ತಸ್ಯೈವಂ ಯಜಮಾನಸ್ಯ ರಾಮಸ್ಯ ಜಗತೀಪತೇ ।
ಗತಂ ವರ್ಷಶತಂ ತತ್ರ ಧ್ಯಾನಯುಕ್ತಸ್ಯ ನಿತ್ಯದಾ ॥ ೧೦ ॥

ಏಕದಾ ತು ಮಹಾರಾಜ ರಾಮಃ ಸ್ನಾತುಂ ಗತೋ ಮಹಾನ್ ।
ಮಧ್ಯಮಂ ಪುಷ್ಕರಂ ತತ್ರ ದದರ್ಶಾಶ್ಚರ್ಯಮುತ್ತಮಮ್ ॥ ೧೧ ॥

ಮೃಗ ಏಕಃ ಸಮಾಯಾತೋ ವ್ಯಾಧೇನ ಯುಕ್ತಃ ಪಲಾಯಿತಃ ।
ವ್ಯಾಧಸ್ಯ ಮೃಗಯಾಂ ಪ್ರಾಪ್ತೋ ಘರ್ಮತಪ್ತೋಽತಿಪೀಡಿತಃ ॥ ೧೨ ॥

ಪಿಪಾಸಿತೋ ಮಹಾಭಾಗ ಜಲಪಾನಸಮುತ್ಸುಕಃ ।
ರಾಮಸ್ಯ ಪಶ್ಯತಸ್ತತ್ರ ಸರಸಸ್ತಟಮಾಗತಃ ॥ ೧೩ ॥

ಪಶ್ಚಾನ್ಮೃಗೀ ಸಮಾಯಾತಾ ಭೀತಾ ಸಾ ಚಕಿತೇಕ್ಷಣಾ ।
ಉಭೌ ತೌ ಪಿಬತಸ್ತತ್ರ ಜಲಂ ಶಂಕಿತಮಾನಸೌ ॥ ೧೪ ॥

---

೧೦. ಭೂಮಿಪತಿಯೆ! ಈರೀತಿಯಾಗಿ ದೇವತೆಯನ್ನು ಆರಾಧಿಸುತ್ತಾ ಸರ್ವದಾ ಧ್ಯಾನತತ್ಪರನಾಗಿ ಪರಶುರಾಮನು ತಪವನ್ನು ಮಾಡುತ್ತಿರಲು ಹಾಗೆಯೇ ಒಂದು ನೂರು ವರ್ಷಕಾಲವು ಕಳೆದುಹೋಯಿತು.

೧೧. ಮಹಾರಾಜನೇ! ಕೇಳು. ಮಹಾತಪಸ್ವಿಯಾಗಿದ್ದ ಪರಶುರಾಮನು ಒಂದಾನೊಂದು ಸಮಯದಲ್ಲಿ ಸ್ನಾನಮಾಡಲೋಸ್ಕರ ಪುಷ್ಕರಕ್ಷೇತ್ರದ ಮಧ್ಯಕ್ಕೆ ಹೋಗಿರುವಾಗ ಅಲ್ಲಿ ಒಂದು ಪ್ರೇಕ್ಷಣೀಯವಾದ ಆಶ್ಚರ್ಯವನ್ನು ಕಂಡನು.

೧೨. ಒಬ್ಬಾನೊಬ್ಬ ಬೇಡನ ಬೇಟೆಗೆ ಗುರಿಯಾಗಿದ್ದ ಒಂದು ಜಿಂಕೆಯು ಹೆಣ್ಣು ಜಿಂಕೆಯಿಂದ ಸಹಿತವಾಗಿ ಗುರಿ ತಪ್ಪಿಸಿಕೊಳ್ಳುವುದಕ್ಕಾಗಿ ಬಹುದೂರ ಓಡುತ್ತಾ ಸೆಕೆ ಮತ್ತು ನೀರಡಿಕೆಗಳಿಂದ ಬೇಸತ್ತು ಆ ಸ್ಥಳಕ್ಕೆ ಬಂದಿತು.

೧೩. ಮಹಾತ್ಮನೇ! ಆ ಜಿಂಕೆಯು ತುಂಬಾ ನೀರಡಿಕೆಯಿಂದ ದಣಿದು ನೀರನ್ನು ಕುಡಿಯುವುದಕ್ಕೆ ಉತ್ಸುಕವಾಗಿ ಅಲ್ಲಿಯೇ ಪರಶುರಾಮನು ನೋಡುತ್ತಿರುವ ಹಾಗೆಯೇ ಸರೋವರದ ದಡಕ್ಕೆ ಬಂದಿತು.

೧೪. ಆದರ ಹಿಂಭಾಗದಿಂದ ಹೆಣ್ಣು ಜಿಂಕೆಯೂ ಬೇಡನ ಅಂಜಿಕೆಯಿಂದ ಚಂಚಲವಾದ ದೃಷ್ಟಿಯನ್ನು ಬೀರುತ್ತಾ ಅಲ್ಲಿ ಬಂದು ಸೇರಿತು. ಆ ಎರಡು ಜಿಂಕೆಗಳೂ ವ್ಯಾಧನ ಶಂಕೆಯಿಂದ ಗ್ರಸ್ತವಾದ ಮನಸ್ಸುಳ್ಳವುಗಳಾಗಿಯೇ ನೀರನ್ನು ಕುಡಿಯುತ್ತಿದ್ದುವು.

ತಾವತ್ತತ್ರಾಗತೋ ವ್ಯಾಧೋ ಬಾಣಪಾಣಿರ್ಧನುರ್ಧರಃ ।
ಸ ದೃಷ್ಟ್ವಾ ತತ್ರ ಸಂವಿಷ್ಟಂ ರಾಮಂ ಭಾರ್ಗವನಂದನಮ್ ॥ ೧೫ ॥

ಅಕೃತವ್ರಣಸಂಯುಕ್ತಂ ತಸ್ಥೌ ದೂರಕೃತೇಕ್ಷಣಃ ।
ಸ ಚಿಂತಯಾಮಾಸ ತದಾ ಶಂಕಿತೋ ಭೃಗುನಂದನಾತ್ ॥ ೧೬ ॥

ಅಯಂ ರಾಮೋ ಮಹಾವೀರೋ ದುಷ್ಟಾನಾಮಂತಕಾರಕಃ ।
ಕಥಮೇತಸ್ಯ ಹನ್ಮ್ಯೇತೌ ಪಶ್ಯತೋ ಮೃಗಯಾಗತೌ ॥ ೧೭ ॥

ಇತಿ ಚಿಂತಾಸಮಾವಿಷ್ಟೋ ವ್ಯಾಧೋ ರಾಜನ್ಯಸತ್ತಮ ।
ತಸ್ಥೌ ತತ್ರೈವ ರಾಮಸ್ಯ ಭಯಾತ್ ಸಂತ್ರಸ್ತಮಾನಸಃ ॥ ೧೮ ॥

ರಾಮಸ್ತು ತೌ ಮೃಗೌ ದೃಷ್ಟ್ವಾ ಪಿಬಂತೌ ಸಭಯಂ ಜಲಮ್ ।
ತರ್ಕಯಾಮಾಸ ಮೇಧಾವೀ ಕಿಮತ್ರ ಭಯಕಾರಣಮ್ ॥ ೧೯ ॥

---

೧೫. ಅಷ್ಟರಲ್ಲಿ ಬಿಲ್ಲು ಬಾಣಗಳನ್ನು ಕೈಯಲ್ಲಿ ಹಿಡಿದಿರುವ ವ್ಯಾಧನು ಅಲ್ಲಿಗೆ ಬಂದು ಅಲ್ಲಿ ಕುಳಿತಿರುವ ಭೃಗುವಂಶ ಉತ್ಪನ್ನನಾದ ಪರಶುರಾಮನನ್ನು ಕಂಡನು.

೧೬. ಅಕೃತವ್ರಣನೆಂಬ ಶಿಷ್ಯಸಮೇತವಾಗಿರುವುದನ್ನು ದೂರದಿಂದಲೇ ದೃಷ್ಟಿಸಿ ತಿಳಿದುಕೊಂಡು ಇಂತಹ ರಾಮನಿಂದ ಶಂಕಿತನಾಗಿ ಆ ಬೇಡನು ಮನಸ್ಸಿನಲ್ಲಿ ಚಿಂತಿಸಲಾರಂಭಿಸಿದನು.

೧೭. ವೀರಾಗ್ರೇಸರನೂ ದುಷ್ಟರನ್ನು ಸದೆ ಬಡಿಯುವವನೂ ಆದ ಪರಶುರಾಮನಿವನು. ಇವನ ಇದಿರಿನಲ್ಲಿ ಬೇಟೆಗೆ ಗುರಿಪಡಿಸಿ ಈ ಮೃಗಗಳನ್ನು ಹೇಗೆ ಕೊಲ್ಲಲಿ ?

೧೮. ರಾಜೋತ್ತಮನೆ! ಈ ರೀತಿಯಾದ ಚಿಂತೆಗೆ ಒಳಗಾದ ಬೇಡನು ರಾಮನ ಭಯದಿಂದಲೇ ಬೆದರಿದ ಮನಸ್ಸುಳ್ಳವನಾಗಿ ಅಲ್ಲಿಯೇ ಸುಮ್ಮನೇ ನಿಂತುಬಿಟ್ಟನು.

೧೯. ಆ ಎರಡು ಜಿಂಕೆಗಳು ಭಯದಿಂದ ನೀರು ಕುಡಿಯುತ್ತಿರುವುದನ್ನು ಕಂಡು ಈ ರೀತಿ ಭಯಪಡಲು ಕಾರಣವೇನಿರಬಹುದೆಂದು ಮೇಧಾವಿಯಾದ ಪರಶುರಾಮನು ಚಿಂತಿಸಿದನು.

ನೈವಾತ್ರ ವ್ಯಾಘ್ರಸನ್ನಾದೋ ನ ಚ ವ್ಯಾಧೋ ಹಿ ದೃಶ್ಯತೇ ।
ಕೇನೈತೌ ಕಾರಣೇನಾಹೋ ಶಂಕಿತೌ ಚಕಿತೇಕ್ಷಣೌ ॥ ೨೦ ॥

ಅಥವಾ ಮೃಗಜಾತಿರ್ಹಿ ನಿಸರ್ಗಾಚ್ಚಕಿತೇಕ್ಷಣಾ ।
ಯೇನೈತೌ ಜಲಪಾನೇಽಪಿ ಪಶ್ಯತಶ್ಚಕಿತೇಕ್ಷಣೌ ॥ ೨೧ ॥

ನೈತಾವತ್ಕಾರಣಂ ಚಾತ್ರ ಕಿಂ ತು ಖೇದಭಯಾತುರೌ ।
ಲಕ್ಷ್ಯೇತೇ ಖಿನ್ನಸರ್ವಾಂಗೌ ಕಂಪಯುಕ್ತೌ ಯತಸ್ತ್ವಮೌ ॥ ೨೨ ॥

ಏವಂ ಸಂಚಿಂತ್ಯ ಮತಿಮಾನ್ ಸ ತಸ್ಥೌ ಮಧ್ಯಪುಷ್ಕರೇ ।
ಶಿಷ್ಯೇಣ ಸಂಯುತೋ ರಾಮೋ ಯಾವತ್ತೌ ಚಾಪಿ ಸಂಸ್ಥಿತೌ ॥ ೨೩ ॥

ಪೀತ್ವಾ ಜಲಂ ತತಸ್ತೌ ತು ವೃಕ್ಷಚ್ಛಾಯಾಸಮಾಶ್ರಿತೌ ।
ರಾಮಂ ದೃಷ್ಟ್ವಾ ಮಹಾತ್ಮಾನಂ ಕಥಾಂ ತೌ ಚಕ್ರತುರ್ಮುದಾ ॥ ೨೪ ॥

---

೨೦. ಈ ಸ್ಥಳದಲ್ಲಿ ಹುಲಿಗಳ ಸದ್ದಿಲ್ಲ. ಬೇಡನೂ ಕಾಣಿಸುವುದಿಲ್ಲ. ಹೀಗಿರಲು ಈ ಜಿಂಕೆಗಳು ಇಷ್ಟೊಂದು ಭಯಪಟ್ಟು ಚಂಚಲವಾದ ದೃಷ್ಟಿಯಿಂದ ಕೂಡಿರಲು ಕಾರಣವೇನು ?

೨೧. ಒಂದುವೇಳೆ ಜಿಂಕೆಯಜಾತಿಯು ಸ್ವಾಭಾವಿಕವಾಗಿಯೇ ಬೆದರಿದಂತೆ ಚಂಚಲದೃಷ್ಟಿಯಿಂದ ಕೂಡಿರುವುದೇ ? ಅದಕ್ಕಾಗಿಯೇ ಈ ಜಿಂಕೆಗಳು ನೀರು ಕುಡಿಯುವಾಗಲೂ ಬೆದರಿದ ದೃಷ್ಟಿಯಿಂದಲೇ ನೋಡುತ್ತಿರಬಹುದೇ ?

೨೨. ಇವುಗಳ ಸರ್ವಾಂಗಗಳಲ್ಲಿಯೂ ಉತ್ಕಟವಾದ ನಡುಕು ಮತ್ತು ಖೇದಗಳು ತುಂಬಿ ಕಾಣುವುದರಿಂದ ಇವುಗಳ ಭಯಕ್ಕೆ ಜಾತಿ ಸ್ವಭಾವವೇ ಕಾರಣವಿರಲಾರದು. ಯಾವುದೋ ಸರಿಯಾದ ನಿಮಿತ್ತದಿಂದಲೇ ಇವು ಆಯಾಸ ಮತ್ತು ಭಯಗಳಿಂದ ಪೀಡಿತವಾಗಿವೆ.

೨೩. ಪುಷ್ಕರಕ್ಷೇತ್ರದ ಮಧ್ಯಭಾಗದಲ್ಲಿಯೇ ಮೇಧಾವಿಯಾದ ಪರಶುರಾಮನು ಈರೀತಿಯಾಗಿ ಚಿಂತಿಸಿ ಶಿಷ್ಯಸಮೇತನಾಗಿ ಜಿಂಕೆಗಳು ನೀರು ಕುಡಿಯುತ್ತ ಅಲ್ಲಿರುವವರೆಗೂ ತಾನೂ ನಿಂತನು.

೨೪. ಜಿಂಕೆಗಳು ಜಲಪಾನದಿಂದ ತೃಪ್ತಿಹೊಂದಿ ಮೇಲೆ ಬಂದು ಒಂದು ಮರದ ನೆರಳಿನಲ್ಲಿ ನಿಂತು ದೂರದಲ್ಲಿಯೇ ಮಹಾತ್ಮನಾದ ಪರಶುರಾಮನಿರುವುದನ್ನು ಕಂಡು ಸಂತೋಷವಾಗಿ ಅನ್ಯೋನ್ಯ ಮಾತನಾಡಿಕೊಂಡುವು.

ಮೃಗ್ಯುವಾಚ :—

ಕಾಂತ ಚಾತ್ರೈವ ತಿಷ್ಠಾವೋ ಯಾವದ್ರಾಮೋಽತ್ರ ಸಂಸ್ಥಿತಃ ।
ಅಸ್ಯ ವೀರಸ್ಯ ಸಾನ್ನಿಧ್ಯೇ ಭಯಂ ನೈವಾವಯೋರ್ಭವೇತ್ ॥ ೨೫ ॥

ಅತ್ರಾಪ್ಯಾಗತ್ಯ ಚೇದ್ವ್ಯಾಧೋ ಹ್ಯಾವಯೋಃ ಪ್ರಹರಿಷ್ಯತಿ ।
ದೃಷ್ಟಮಾತ್ರೋ ಹಿ ಮುನಿನಾ ಭಸ್ಮೀಭೂತೋ ಭವಿಷ್ಯತಿ ॥ ೨೬ ॥

ಇತ್ಯುಕ್ತೇ ವಚನೇ ಮೃಗ್ಯಾ ರಾಮದರ್ಶನತುಷ್ಟಯಾ ।
ಮೃಗಶ್ಚೋವಾಚ ಹರ್ಷೇಣ ಸಮಾವಿಷ್ಟಃ ಪ್ರಿಯಾಂ ಸ್ವಕಾಮ್॥ ೨೭ ॥

ಏವಮೇವ ಮಹಾಭಾಗೇ ಯದ್ವೈ ವದಸಿ ಭಾಮಿನಿ ।
ಜಾನೇಽಹಮಪಿ ರಾಮಸ್ಯ ಪ್ರಭಾವಂ ಸುಮಹಾತ್ಮನಃ ॥ ೨೮ ॥

ಯೋಽಯಂ ಸಂದೃಶ್ಯತೇ ಚಾಸ್ಯ ಪಾರ್ಶ್ವೇ ಶಿಷ್ಯೋಽಕೃತವ್ರಣಃ ।
ಸ ಚಾನೇನ ಮಹಾಭಾಗಸ್ತ್ರಾತೋ ವ್ಯಾಘ್ರಭಯಾತುರಃ ॥ ೨೯ ॥

---

೨೫. ಹೆಣ್ಣು ಜಿಂಕೆಯು ಈರೀತಿಯಾಗಿ ಹೇಳಿತು, ಪ್ರಿಯನೆ! ಈ ವೀರ ರಾಮನು ಇಲ್ಲಿ ಇರುವವರೆಗೂ ನಾವು ಇಲ್ಲಿಯೇ ವಾಸಮಾಡೋಣ. ಈ ವೀರನ ಸನ್ನಿಧಿಯಲ್ಲಿ ವಾಸಮಾಡುವ ನಮಗೆ ಯಾವ ಭೀತಿಯೂ ಉಂಟಾಗಲಾರದು.

೨೬. ನಮ್ಮನ್ನು ಹೊಡೆಯಲು ಹಿಂಬಾಲಿಸಿದ ಬೇಡನು ಇಲ್ಲಿಗೂ ಬಂದು ನಮ್ಮನ್ನು ಹೊಡೆಯುವುದಾದರೆ ಈ ಪರಶುರಾಮ ಮುನಿಯ ದೃಷ್ಟಿ ಗೋಚರನಾಗು ವಷ್ಟರಲ್ಲಿಯೇ ಆ ಪಾಪಿಯಾದ ಬೇಡನು ಸುಟ್ಟು ಬೂದಿಯಾಗಿ ಬೀಳುವನು.

೨೭. ಪರಶುರಾಮನನ್ನು ನೋಡಿ ಸಂತುಷ್ಟವಾದ ಹೆಣ್ಣು ಜಿಂಕೆಯು ನಿಶ್ಶಂಕ ವಾಗಿ ಈ ಮಾತನ್ನು ಹೇಳಲಾಗಿ ಗಂಡು ಜಿಂಕೆಯು ಸಂತೋಷದಿಂದ ಅದನ್ನು ಅಂಗೀಕರಿಸಿ ತನ್ನ ಪ್ರಿಯೆಯನ್ನು ಕುರಿತು ಮುಂದಿನ ಮಾತುಗಳನ್ನು ಆಡಿತು.

೨೮. ಮಹಾ ಭಾಗ್ಯವತಿಯಾದ ಪ್ರಿಯೆಯೆ! ನೀನು ಹೇಳಿರುವುದೆಲ್ಲವೂ ಸರಿಯಾದುದು, ನಾನೂ ಮಹಾತ್ಮನಾದ ಪರಶುರಾಮನ ಮಹಿಮೆಯನ್ನು ಅರಿತಿರು ವೆನು.

೨೯. ಈ ಪರಶುರಾಮನ ಪಕ್ಕದಲ್ಲಿ ಈಗ ಕಾಣಿಸುತ್ತಲಿರುವ ಅಕೃತವ್ರಣನೆಂಬ ಶಿಷ್ಯನು ಒಂದಾನೊಂದು ಹುಲಿಯ ಬಾಯಿಗೆ ಸಿಕ್ಕಿ ನರಳುತ್ತಿರುವಾಗ ಭಾಗ ಬಲ ದಿಂದ ಈ ಪರಶುರಾಮನಿಂದ ಸಂರಕ್ಷಿಸಲ್ಪಟ್ಟಿರುವನು.

ಅಯಂ ರಾಮೋ ಮಹಾಭಾಗೇ ಜಮದಗ್ನಿಸುತೋऽನಘಃ ।
ಪಿತರಂ ಕಾರ್ತವೀರ್ಯೇಣ ದೃಷ್ಟ್ವಾ ಚೈವ ತಿರಸ್ಕೃತಮ್ ॥ ೩೦ ॥

ಚಕಾರಾತಿತರಾಂ ಕ್ರುದ್ಧಃ ಪ್ರತಿಜ್ಞಾಂ ನೃಪಘಾತಿನೀಮ್ ।
ತತ್ಪೂರ್ತಿಕಾಮೋ ಹ್ಯಗಮದ್ಬ್ರಹ್ಮಲೋಕಂ ಪುರಾ ಹ್ಯಯಮ್॥೩೧॥

ಸ ಬ್ರಹ್ಮಾ ದೃಷ್ಟವಾಂಶ್ಚೈನಂ ಶಿವಲೋಕಂ ವ್ರಜೇತಿ ಹ ।
ತಸ್ಯ ತ್ವಾಜ್ಞಾಂ ಸಮಾದಾಯ ಗತೋऽಸೌ ಶಿವಸನ್ನಿಧಿಮ್ ॥ ೩೨ ॥

ಪ್ರೋವಾಚಾಖಿಲವೃತ್ತಾಂತಂ ರಾಜ್ಞಃ ಶ್ಚಾಪ್ಯಾತ್ಮನಃ ಪಿತುಃ ।
ಸ ಕೃಪಾಲುರ್ಮಹಾದೇವಃ ಸಭಾಜ್ಯ ಭೃಗುನಂದನಮ್ ॥ ೩೩ ॥

ದದೌ ಕೃಷ್ಣಸ್ಯ ಸನ್ಮಂತ್ರಮಭೇದ್ಯಂ ಕವಚಂ ತಥಾ ।
ಸ್ವೀಯಂ ಪಾಶುಪತಂ ಚಾಸ್ತ್ರಮನ್ಯಾಸ್ತ್ರಗ್ರಾಮಮೇವ ಚ ॥ ೩೪ ॥

---

೩೦. ಭಾಗ್ಯವತಿಯೆ ! ಜಮದಗ್ನಿ ಪುತ್ರನೂ ನಿಷ್ಕಲಂಕನೂ ಆದ ಈ ಭಾರ್ಗವ ರಾಮನು ತನ್ನ ತಂದೆಯಾದ ಜಮದಗ್ನಿ ಋಷಿಗೆ ಕಾರ್ತವೀರ್ಯ ರಾಜನಿಂದ ಒದಗಿದ ಅವಮಾನವನ್ನು ಕಂಡು ಸಹಿಸದವನಾದನು.

೩೧. ಆಗ ಅತ್ಯಂತ ಕೋಪಿಯಾಗಿ ಸರ್ವ ಕ್ಷತ್ರಿಯರನ್ನು ಕೊಲ್ಲಬೇಕೆಂಬ ಉಗ್ರಪ್ರತಿಜ್ಞೆಯನ್ನು ಮಾಡಿದನು. ಅನಂತರ ಅದನ್ನು ಪೂರ್ತಿಗೊಳಿಸಲು ಪೂರ್ವ ಕಾಲದಲ್ಲಿ ಇವನು ಬ್ರಹ್ಮಲೋಕಕ್ಕೆ ಹೋದನು.

೩೨. ಬ್ರಹ್ಮಲೋಕಕ್ಕೆ ಹೋದಾಗ ಅಲ್ಲಿದ್ದ ಬ್ರಹ್ಮನು ಇವನನ್ನು ಕಂಡು ಇವನ ಕೋರಿಕೆಯನ್ನು ತಿಳಿದುಕೊಂಡು ಈ ಇಷ್ಟಾರ್ಥಪ್ರಾಪ್ತಿಗೆ ಶಿವಲೊಕಕ್ಕೆ ಹೋಗೆಂದು ಕಳಿಸಿಕೊಟ್ಟನು. ಹೀಗೆ ಬ್ರಹ್ಮನ ಆಜ್ಞೆಯನ್ನು ತೆಗೆದುಕೊಂಡು ರಾಮನು ಶಿವನ ಸನ್ನಿಧಿಗೆ ತೆರಳಿದನು.

೩೩. ಶಿವನ ಬಳಿಯಲ್ಲಿ ಈ ರಾಮನು ತನ್ನ ತಂದೆಗೆ ರಾಜನಿಂದ ಪ್ರಾಪ್ತವಾದ ತಿರಸ್ಕಾರದ ಸಕಲ ವೃತ್ತಾಂತವನ್ನೂ ಅರಿಕೆಮಾಡಿದನು. ದಯಾಮಯನೂ ದೇವೋತ್ತಮನೂ ಆದ ಶಿವನು ಭೃಗು ಪುತ್ರನಾದ ರಾಮನನ್ನು ಸತ್ಕರಿಸಿದನು.

೩೪. ಮತ್ತು ಕೃಷ್ಣ ಪರಮಾತ್ಮನ ಉತ್ತಮ ಮಂತ್ರವನ್ನೂ ಯುದ್ಧದಲ್ಲಿ ತೊಟ್ಟುಕೊಳ್ಳುವ ಸರ್ವಾಂಗ ರಕ್ಷಕವೂ ಅಭೇದ್ಯವೂ ಆದ ಕವಚದಂತೆ ಅಭೇದ್ಯವಾದ ಮೇಲೆ ಹೇಳಿರುವ ಮಂತ್ರಮಯ ಕವಚವನ್ನೂ ತನ್ನ ಪಾಶುಪತಾಸ್ತ್ರ ಮತ್ತು ಇತರಾಸ್ತ್ರಗಳ ರಾಶಿಯನ್ನೂ ಕೊಟ್ಟನು.

ವಿಸರ್ಜಯಾಮಾಸ ಮುದಾ ದತ್ತ್ವಾ ಶಸ್ತ್ರಾಣಿ ಚಾದರಾತ್ ।
ಸೋಽಯಮತ್ರಾಗತೋ ಭದ್ರೇ ಮಂತ್ರಸಾಧನತತ್ಪರಃ ॥ ೩೫ ॥

ನಿತ್ಯಂ ಜಪತಿ ಧರ್ಮಾತ್ಮಾ ಕೃಷ್ಣಸ್ಯ ಕವಚಂ ಸುಧೀಃ ।
ಶತಾವರ್ಷಾಣಿ ಯಾಪ್ಯಸ್ಯ ಗತಾನಿ ಸುಮಹಾತ್ಮನಃ ॥ ೩೬ ॥

ಮಂತ್ರಂ ಸಾಧಯತೋ ಭದ್ರೇ ನ ಚ ತತ್ಸಿದ್ಧಿರೇತಿ ಹಿ ।
ಅತ್ರಾಸ್ತಿ ಕಾರಣಂ ಭಕ್ತಿಃ ಸಾ ಚ ವೈ ತ್ರಿವಿಧಾ ಮತಾ ॥ ೩೭ ॥

ಉತ್ತಮಾ ಮಧ್ಯಮಾ ಚೈವ ಕನಿಷ್ಠಾ ತರಲೇಕ್ಷಣೇ ।
ಶಿವಸ್ಯ ನಾರದಸ್ಯಾಪಿ ಶುಕಸ್ಯ ಚ ಮಹಾತ್ಮನಃ ॥ ೩೮ ॥

ಅಂಬರೀಷಸ್ಯ ರಾಜರ್ಷೇ ರಂತಿದೇವಸ್ಯ ಮಾರುತೇಃ ।
ಬಲೇರ್ವಿಭೀಷಣಸ್ಯಾಪಿ ಪ್ರಹ್ಲಾದಸ್ಯ ಮಹಾತ್ಮನಃ ॥ ೩೯ ॥

---

೩೫. ಈ ರೀತಿಯಾಗಿ ಶಿವನು ಪ್ರೇಮದಿಂದ ಸರ್ವಾಸ್ತ್ರಗಳನ್ನು ಕೊಟ್ಟು ಅನುಗ್ರಹಿಸಿ ಇವನನ್ನು ಕಳಿಸಿಕೊಟ್ಟಿರುವನು. ಕಲ್ಯಾಣಮೂರ್ತಿಯೆ! ಅಂತಹ ರಾಮನು ಆ ಮಂತ್ರಗಳ ಜಪಾದಿವಿಧಾನದ ಸಾಧನದಲ್ಲಿ ಆಸಕ್ತಿಯಿಂದ ಇಲ್ಲಿಗೆ ಬಂದಿರುವನು.

೩೬. ಧರ್ಮಾತ್ಮನಾದ ಈ ರಾಮನು ಪ್ರಸನ್ನಚಿತ್ತದಿಂದ ಕೂಡಿ ಕೃಷ್ಣನ ಕವಚವನ್ನು ಪ್ರತಿನಿತ್ಯವೂ ಜಪಿಸುತ್ತಿರುವನು. ಹೀಗೆಯೇ ಈ ಮಹಾತ್ಮನಿಗೆ ಈಗಾಗಲೇ ನೂರಾರು ವರ್ಷಗಳು ಕಳೆದಿರುವುವು.

೩೭. ಮಂತ್ರಸಿದ್ಧಿಗಾಗಿ ಎಷ್ಟೊಂದು ಯತ್ನಿಸಿದರೂ ಆ ಮಂತ್ರಸಿದ್ಧಿಯು ಉಂಟಾಗಿರುವುದಿಲ್ಲ. ಹೀಗೆ ಸಿದ್ಧಿಯಾಗದಿರಲು ಈತನಿಗಿರುವ ಮಧ್ಯಮ ಭಕ್ತಿಯೇ ಕಾರಣವು. ಸಿದ್ಧಿಯಲಾಭ-ಅಲಾಭಗಳಿಗೆ ಕಾರಣವಾದ ಭಕ್ತಿಯು ಮೂರು ವಿಧವಾಗಿರುವುದು.

೩೮-೩೯. ಉತ್ತಮ, ಮಧ್ಯಮ, ಮತ್ತು ಕನಿಷ್ಠವೆಂಬುವು ಭಕ್ತಿಯ ಮೂರು ಭೇದಗಳು. ಚಾಂಚಲ್ಯಶೋಭಾಯುಕ್ತವಾದ ಕಣ್ಣುಗಳುಳ್ಳ ಪ್ರಿಯೆಯೆ! ಈ ಮೂರು ಭೇದಗಳಲ್ಲಿ ಶಿವ-ನಾರದ, ಮಹಾತ್ಮನೆನಿಸಿದ ಶುಕಋಷಿ, ರಾಜರ್ಷಿಯಾದ ಅಂಬರೀಷ, ರಂತಿದೇವ, ಮಾರುತಿ, ಬಲಿ, ವಿಭೀಷಣ, ಮತ್ತು ಮಹಾತ್ಮನಾದ ಪ್ರಹ್ಲಾದ ಇವರೆಲ್ಲರಿಗೂ ಇದ್ದ ಭಕ್ತಿಯು ಉತ್ತಮವಾದ ಭಕ್ತಿಯು.

ಉತ್ತಮಾ ಭಕ್ತಿರೇವಾಸ್ತಿ ಗೋಪೀನಾಮುದ್ಧವಸ್ಯ ಚ ।
ವಸಿಷ್ಠಾದಿಮುನೀಶಾನಾಂ ಮನ್ವಾದೀನಾಂ ಶುಭೇಕ್ಷಣೇ ॥ ೪೦ ॥

ಮಧ್ಯಮಾ ಭಕ್ತಿರೇವಾಸ್ತಿ ಪ್ರಾಕೃತಾನ್ಯಜನೇಷು ಸಾ ॥
ಮಧ್ಯಭಕ್ತಿರಯಂ ರಾಮೋ ನಿತ್ಯಂ ಮಮ ಪರಾಯಣಃ ॥ ೪೧ ॥

ಸೇವತೇ ಗೋಪಿಕಾಧೀಶಂ ತೇನ ಸಿದ್ಧಿಂ ನ ಚಾಗತಃ
ವಸಿಷ್ಠ ಉವಾಚ :—
ಇತ್ಯುಕ್ತ್ವಾ ತ್ವರಿತಂ ಕಾಂತಂ ಸಾ ಮೃಗೀ ಹೃಷ್ಟಮಾನಸಾ ॥ ೪೨ ॥

ಪುನಃ ಪಪ್ರಚ್ಛ ಭಕ್ತೇಸ್ತು ಲಕ್ಷಣಂ ಪ್ರೇಮದಾಯಕಮ್ ॥
ಮೃಗ್ಯುವಾಚ :—
ಸಾಧು ಕಾಂತ ಮಹಾಭಾಗ ವಚಸ್ತೇಽಲೌಕಿಕಂ ಪ್ರಿಯ ।
ಈದೃಗ್ಜ್ಞಾನಂ ತವ ಕಥಂ ಸಂಜಾತಂ ತದ್ವದಾಧುನಾ ॥ ೪೩ ॥

---

೪೦. ಸುಂದರ ದೃಷ್ಟಿಯಿಂದ ರಾಜಿಸುವ ಪ್ರಿಯೆಯೆ ! ಗೋಪಿಕಾಸ್ತ್ರೀಯರು, ಉದ್ಧವ, ವಸಿಷ್ಠಾದಿ ಮಹಾಮುನಿಗಳು ಮತ್ತು ಮನು ಮುಂತಾದವರು—ಇವರೆಲ್ಲರೂ ಮಧ್ಯಮ ಭಕ್ತಿಯಿಂದ ಕೂಡಿರುವವರು. ಇತರ ಸಾಮಾನ್ಯ ಜನರಿಗೆಲ್ಲ ಇರುವುದು ಮೂರನೆಯದಾದ ಪ್ರಾಕೃತವೆಂದು ಕರೆಯಲ್ಪಡುವ ಅಧಮಭಕ್ತಿಯು.

೪೧. ಪರಶುರಾಮನು ಮಧ್ಯಮ ಭಕ್ತಿಯುಳ್ಳವನಾಗಿ ಯಮನಿಯಮಾದಿಗಳಲ್ಲಿ ಆಸಕ್ತನಾಗಿ ಗೋಪಿಕಾ ಸ್ತ್ರೀ ಜನರಿಗೆ ವಲ್ಲಭನಾದ ಕೃಷ್ಣ ಪರಮಾತ್ಮ ದೇವತೆಯನ್ನು ಸೇವಿಸುತ್ತಿರುವನು. ಆ ಕಾರಣದಿಂದ ತಪಸ್ಸಿದ್ಧಿಯನ್ನು ಹೊಂದಿರುವುದಿಲ್ಲ.

೪೨. ವಸಿಷ್ಠ ಮುನಿಯು ಇದೇ ಚರಿತ್ರೆಯನ್ನು ಮುಂದುವರಿಸಿ ಇಂತೆಂದನು. ಈ ಪ್ರಿಯನ ವಚನವನ್ನು ಕೇಳಿ ಮನಸ್ಸಿನಲ್ಲಿ ಸಂತೋಷಗೊಂಡ ಹೆಣ್ಣು ಜಿಂಕೆಯು ಶ್ರವಣದಿಂದ ಪ್ರೇಮವನ್ನು ಹೆಚ್ಚಿಸುವ ಭಕ್ತಿಯ ಲಕ್ಷಣದ ವಿಷಯವಾಗಿ ವಿಲಂಬ ಮಾಡದೇ ಮತ್ತೆ ಪ್ರಿಯನನ್ನು ಕುರಿತು ಪ್ರಶ್ನೆ ಮಾಡಿತು.

೪೩. ಹೆಣ್ಣು ಜಿಂಕೆಯು ಹೀಗೆ ಹೇಳಿತು. ಭಾಗ್ಯಶಾಲಿ ಪ್ರಿಯ, ಕಾಂತ! ಬಹು ಸಾಧುವಾದ ನಿನ್ನ ಈ ಮಾತು ಲೋಕಾತೀತ ವಿಷಯಗಳಿಂದ ಗರ್ಭಿತವಾದುದು. ಇಂತಹ ಜ್ಞಾನವು ನಿನಗೆ ಹೇಗೆ ಉದಯವಾಗಿದೆಯೆಂಬುದನ್ನು ನನಗೆ ಮೊದಲು ಹೇಳುವವನಾಗು.

ವ್ಯಗ ಉವಾಚ :—

ಶೃಣು ಪ್ರಿಯೇ ಮಹಾಭಾಗೇ ಜ್ಞಾನಂ ಪುಣ್ಯೇನ ಜಾಯತೇ ॥ ೪೪ ॥

ತತ್ಪುಣ್ಯಮದ್ಯ ಸಂಜಾತಂ ಭಾರ್ಗವಸ್ಯಾಸ್ಯ ದರ್ಶನಾತ್ ।
ಪುಣ್ಯಾತ್ಮಾ ಭಾರ್ಗವಶ್ಚಾಯಂ ಕೃಷ್ಣಭಕ್ತೋ ಜಿತೇಂದ್ರಿಯಃ ॥ ೪೫ ॥

ಗುರುಶುಶ್ರೂಷಕೋ ನಿತ್ಯಂ ನಿತ್ಯನೈಮಿತ್ತಿಕಾದರಃ ।
ಅತೋಽಸ್ಯ ದರ್ಶನಾಜ್ಜಾತಂ ಜ್ಞಾನಂ ಮೇಽದ್ಯೈವ ಭಾಮಿನಿ ॥ ೪೬ ॥

ತ್ರೈಲೋಕ್ಯಸ್ಥಿತಸತ್ತ್ವಾನಾಂ ಶುಭಾಶುಭನಿದರ್ಶಕಮ್ ।
ಅದ್ಯೈವ ವಿದಿತಂ ಮೇಽಭೂತ್ ರಾಮಸ್ಯಾಸ್ಯ ಮಹಾತ್ಮನಃ ॥ ೪೭ ॥

ಚರಿತಂ ಪುಣ್ಯದಂ ಚೈವ ಪಾಪಘ್ನಂ ಶೃಣ್ವತಾಮಿದಮ್ ।
ಯದ್ಯತ್ಕರಿಷ್ಯತೇ ಚೈವ ತದಪಿ ಜ್ಞಾನಗೋಚರಮ್ ॥ ೪೮ ॥

---

೪೪. ಗಂಡು ಜಿಂಕೆಯು ಅದಕ್ಕೆ ಸರಿಯಾಗಿ ಉತ್ತರಕೊಟ್ಟಿತು. ಮಹಾಭಾಗ್ಯ ಸಂಪನ್ನಳಾದ ಪ್ರಿಯಳೆ! ಪುಣ್ಯದಿಂದ ಜ್ಞಾನೋದಯವಾಗುವುದು.

೪೫. ಈ ಭಾರ್ಗವ ರಾಮನನ್ನು ಸಾಕ್ಷಾತ್ಕರಿಸಿದುದರಿಂದ ಅಂತಹ ಪುಣ್ಯವು ನನಗೆ ಈಗಾಗಲೇ ಪ್ರಾಪ್ತವಾಯಿತು. ಭಾರ್ಗವ ರಾಮನು ಪುಣ್ಯಾತ್ಮನೂ ಕೃಷ್ಣ ದೇವತಾಭಕ್ತನೂ ಮತ್ತು ಜಿತೇಂದ್ರಿಯನೂ ಆಗಿರುವನು.

೪೬. ಎಲೈ ಸತಿಯೇ! ಮತ್ತು ಗುರು ಶುಶ್ರೂಷಾನಿರತನೂ ನಿತ್ಯ ನೈಮಿತ್ತಿಕ ಕರ್ಮಾಚರಣದಲ್ಲಿ ಆದರವುಳ್ಳವನೂ ಆಗಿರುವುದರಿಂದ ಇಂತಹ ಪುಣ್ಯವಂತನ ದರ್ಶನದಿಂದ ನನಗೆ ಇಂತಹ ಜ್ಞಾನೋದಯವಾಗಿದೆ.

೪೭. ನನಗೆ ಉಂಟಾದ ಜ್ಞಾನವು ಮೂರುಲೋಕದ ಪ್ರಾಣಿಗಳ ಶುಭ-ಅಶುಭಗಳನ್ನು ಕರತಲಾಮಲಕದಂತೆ ವಿಷಯೀಕರಿಸುವುದು.

೪೮. ಇದರ ಪ್ರಭಾವದಿಂದ ಈ ಮಹಾತ್ಮನಾದ ರಾಮನ, ಶ್ರವಣದಿಂದ ಪಾಪಗಳನ್ನು ದೂರಮಾಡಿ ಪುಣ್ಯವನ್ನು ಕೊಡುವ ಈ ಚರಿತ್ರೆಯನ್ನು ನಾನು ತಿಳಿದಿರುವೆನು. ಮುಂದೆ ಇವನು ಏನೇನು ಮಾಡುವನೋ ಆ ಎಲ್ಲ ಭವಿಷ್ಯವನ್ನು ಕೂಡ ನನ್ನ ಜ್ಞಾನವು ಗೋಚರಿಸಿರುವುದು.

ಯೋತ್ತಮಾ ಭಕ್ತಿರಾಖ್ಯಾತಾ ತಾಂ ವಿನಾ ನೈವ ಸಿದ್ಧ್ಯತಿ ।
ಕವಚಂ ಮಂತ್ರಸಹಿತಂ ಹ್ಯಪಿ ವರ್ಷಾಯುತಾಯುತೈಃ ॥ ೪೯ ॥

ಯದ್ಯಯಂ ಭಾರ್ಗವೋ ಭದ್ರೇ ಹ್ಯಗಸ್ತ್ಯಾನುಗ್ರಹಂ ಲಭೇತ್ ।
ಕೃಷ್ಣಪ್ರೇಮಾಮೃತಂ ನಾಮ ಸ್ತೋತ್ರಮುತ್ತಮಭಕ್ತಿದಮ್ ॥ ೫೦ ॥

ಜ್ಞಾತ್ವಾ ಚ ಲಪ್ಸ್ಯತೇ ಸಿದ್ಧಿಂ ಮಂತ್ರಸ್ಯ ಕವಚಸ್ಯ ಚ ।
ಸ ಮುನಿರ್ಜ್ಞಾತತತ್ತ್ವಾರ್ಥಃ ಸಾನುಕಂಪೋಽಭಯಪ್ರದಃ ॥ ೫೧ ॥

ಉಪದೇಕ್ಷ್ಯತಿ ಚೈವೈನಂ ತತ್ತ್ವಜ್ಞಾನಂ ಮುದಾವಹಮ್ ॥
ಶ್ರೀಕೃಷ್ಣಚರಿತಂ ಸರ್ವಂ ನಾಮಭಿರ್ಗ್ರಥಿತಂ ಯತಃ ॥ ೫೨ ॥

---

೪೯. ಭಕ್ತಿ ತಾರತಮ್ಯತರಂಗಗಳಲ್ಲಿ ಉತ್ತಮವೆಂದೆಣಿಸಲ್ಪಟ್ಟಿರುವ ಭಕ್ತಿಯನ್ನು ಅವಲಂಬಿಸಿದಹೊರತು ಹತ್ತುಸಾವಿರ ಅಥವಾ ಲಕ್ಷ ವರ್ಷಗಳ ಕಾಲ ಜಪಾದಿ ವಿಧಾನದಿಂದಲೂ ಈ ಮಂತ್ರ-ಕವಚಗಳ ಸಿದ್ಧಿಯು ಆಗಲಾರದು.

೫೦. ಮಂಗಳಶೀಲಳೇ! ಈ ಭಾರ್ಗವರಾಮನು ಅಗಸ್ತ್ಯ ಮುನಿಯ ಅನುಗ್ರಹಕ್ಕೆ ಪಾತ್ರನಾಗಿ ಉತ್ತಮಭಕ್ತಿಯನ್ನು ಹುಟ್ಟಿಸುವ ಕೃಷ್ಣಪ್ರೇಮಾಮೃತವೆಂಬ ಸ್ತೋತ್ರದ ಉಪದೇಶವನ್ನು ಹೊಂದಿ ತನ್ಮೂಲಕವಾಗಿ ಮಂತ್ರ ಕವಚಗಳ ಸಿದ್ಧಿಯನ್ನು ಹೊಂದುತ್ತಾನೆ.

೫೧. ತತ್ತ್ವವನ್ನು ಚನ್ನಾಗಿ ಅರಿತ ಅಗಸ್ತ್ಯಮುನಿಯು ದಯಾ ಮತ್ತು ಅಭಯ ಪ್ರದಾನಶೀಲನಾದುದರಿಂದ ಅವಶ್ಯವಾಗಿ ಇವನಿಗೆ ಸಂತೋಷವನ್ನು ಕೊಡುವ ತತ್ತ್ವಜ್ಞಾನವನ್ನು ಉಪದೇಶಿಸುವನು.

೫೨. ಕೃಷ್ಣಪ್ರೇಮಾಮೃತಸ್ತೋತ್ರದಲ್ಲಿ ಕಂಡ ಪ್ರತಿಯೊಂದು ನಾಮಗಳೂ ಕೃಷ್ಣನ ಚರಿತ್ರವನ್ನು ಪ್ರತಿಪಾದಿಸುವುದರಿಂದ ನಾಮಗಳಿಂದ ಚರಿತ್ರೆಯೆಲ್ಲವೂ ಕಟ್ಟಲ್ಪಟ್ಟಿರುವುದು. ಅಂತಹ ಸ್ತೋತ್ರದಿಂದ ಮಹಾ ಬುದ್ಧಿಶಾಲಿಯಾದ ಈ ರಾಮನು ಕೃಷ್ಣನ ಕಲ್ಯಾಣ ಚರಿತ್ರ ವೈಭವವನ್ನೆಲ್ಲ ತಿಳಿಯುವನು.

9

ಕೃಷ್ಣಪ್ರೇಮಾಮೃತಸ್ತೋತ್ರಾತ್ ಜ್ಞಾಸ್ಯತೇಽಯಂ ಮಹಾಮತಿಃ ।
ತತಃ ಸಂಸಿದ್ಧಕವಚೋ ರಾಜಾನಂ ಹೈಹಯಾಧಿಪಮ್ ॥ ೩೩ ॥

ಹತ್ವಾ ಸಪುತ್ರಾಮಾತ್ಯಂ ಚ ಸಸುಹೃದ್ಬಲವಾಹನಮ್ ।
ತ್ರಿಃಸಪ್ತಕೃತ್ವೋ ನಿರ್ಭೂಪಾಂ ಕರಿಷ್ಯತ್ಯವನೀಂ ಪ್ರಿಯೇ ॥ ೩೪ ॥

ವಸಿಷ್ಠ ಉವಾಚ :—

ಏವಮುಕ್ತ್ವಾ ಮೃಗೋ ರಾಜನ್ವಿರರಾಮ ಮೃಗೀಂ ತತಃ ।
ಆತ್ಮನೋ ಮೃಗಭಾವಸ್ಯ ಕಾರಣಂ ಜ್ಞಾತವಾಂಶ್ಚ ಹ ॥ ೩೫ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ಚತುಸ್ತ್ರಿಂಶತ್ತಮೋಽಧ್ಯಾಯಃ

---

೩೩-೩೪. ಪ್ರಿಯೆ! ಆ ಮೇಲೆ ಕವಚಸಿದ್ಧಿಯನ್ನು ಹೊಂದಿದ ರಾಮನು ಪುತ್ರ ಮಂತ್ರಿ-ಮಿತ್ರ-ಸೈನ್ಯ-ವಾಹನಾದಿಸಕಲ ಪರಿವಾರಸಹಿತನಾದ ಹೈಹಯ ವಂಶಾಧಿಪನಾದ ಕಾರ್ತವೀರ್ಯರಾಜನನ್ನು ಕೊಂದು ಇಪ್ಪತ್ತೊಂದುಸಲ ಭೂಮಿಯಲ್ಲಿರುವ ಸಕಲ ಕ್ಷತ್ರಿಯರನ್ನು ಸಂಹರಿಸಿ ಭೂಮಿಯನ್ನು ಕ್ಷತ್ರಿಯ ಶೂನ್ಯವಾಗಿ ರಚಿಸುವನು.

೩೫. ವಸಿಷ್ಠಮುನಿಯು ಮುಂದುವರಿಸಿ ಮಾತನಾಡಿದನು :—ಗಂಡುಜಿಂಕೆಯು ಮೃಗಿಯನ್ನು ಕುರಿತು ಇಷ್ಟು ಮಾತುಗಳನ್ನು ಹೇಳಿ ಸುಮ್ಮನಾಯಿತು. ಮತ್ತು ತನಗೆ ಮೃಗಜನ್ಮ ಬಂದಿರಲು ಕಾರಣವನ್ನು ತಿಳಿದುಕೊಂಡಿತು,

ಬ್ರಹ್ಮಾಂಡ ಪುರಾಣದಲ್ಲಿ ಉತ್ತರಾರ್ಧದಲ್ಲಿ ಮೂವತ್ತನಾಲ್ಕನೆಯ ಅಧ್ಯಾಯವು ಸಮಾಪ್ತವು.



## ಪಂಚತ್ರಿಂಶತ್ತಮೋಽಧ್ಯಾಯಃ

**ಸಗರ ಉವಾಚ :—**

**ಮುನೇ ಪರಮತತ್ತ್ವಜ್ಞ ಧ್ಯಾನಜ್ಞಾನಾರ್ಥಕೋವಿದ ।**
**ಭಗವದ್ಭಕ್ತಿಸಂಲೀನಮನಸಾನುಗ್ರಹಃ ಕೃತಃ ॥ ೧ ॥**

**ತ್ವಯಾಪಿ ಹಿ ಮಹಾಭಾಗ ಯತಃ ಶಂಸಸಿ ಸತ್ಕಥಾಃ ।**
**ಶ್ರುತ್ವಾ ನೃಗಮುಖಾತ್ಸರ್ವಂ ಭಾರ್ಗವಸ್ಯ ವಿಚೇಷ್ಟಿತಮ್ ॥ ೨ ॥**

**ಭೂತಂ ಭವದ್ಭವಿಷ್ಯಂ ಚ ನಾರಾಯಣಕಥಾನ್ವಿತಮ್ ।**
**ಪುನಃ ಪ್ರಪಚ್ಛ ಕಿಂ ನಾಥ ತನ್ಮೇ ವದ ಸವಿಸ್ತರಮ್ ॥ ೩ ॥**

**ವಸಿಷ್ಠ ಉವಾಚ :—**

**ಶೃಣು ರಾಜನ್ ಪ್ರವಕ್ಷ್ಯಾಮಿ ನೃಗಸ್ಯ ಚರಿತಂ ಮಹತ್ ।**
**ಯಥಾ ಪೃಷ್ಟಂ ತಯಾ ಸೋಽಸ್ಯೈ ವರ್ಣಯಾಮಾಸ ತತ್ತ್ವವಿತ್॥ ೪ ॥**

---

೧. ಸಗರ ಚಕ್ರವರ್ತಿಯು ಮತ್ತೆ ಹೇಳಿದನು :—ಪರಮತತ್ತ್ವವನ್ನರಿತಿರುವ, ಧ್ಯಾನಕ್ಕೂ ಜ್ಞಾನಕ್ಕೂ ವಿಷಯವಾಗುವ ವಸ್ತುವನ್ನು ನಿರ್ಧರಿಸುವುದರಲ್ಲಿ ಪಂಡಿತನಾದ ಮತ್ತು ಮಹಾಮಹಿಮನಾದ ವಸಿಷ್ಠಮುನಿಯೇ! ನೀನು ಭಗವದ್ಭಕ್ತಿಯಲ್ಲಿ ಲೀನವಾದ ಅಂತರಂಗದಿಂದ ಸಚ್ಚರಿತ್ರೆಗಳನ್ನು ಕೀರ್ತನಮಾಡಿ ನನ್ನ ಮೇಲೆ ತುಂಬಾ ಅನುಗ್ರಹವನ್ನು ಇಟ್ಟಿರುವೆ.

೨-೩. ಪ್ರಭುವೇ! ಹೆಣ್ಣುಜಿಂಕೆಯು ಪ್ರಿಯನ ಮಾತಿನಿಂದ ಪರಶುರಾಮನ ಚಾರಿತ್ರಿಕವಾದ ಭೂತ-ಭವಿಷ್ಯ-ವರ್ತಮಾನ ವೃತ್ತಾಂತಗಳನ್ನು ಶ್ರೀ ಕೃಷ್ಣನ ಕಥಾಗರ್ಭಿತವಾಗಿ ಕೇಳಿ ಮತ್ತೆಯಾವ ವಿಷಯವನ್ನು ಪ್ರಶ್ನಿಸಿತೆಂಬುದನ್ನು ವಿಸ್ತಾರವಾಗಿ ನನಗೆ ಹೇಳುವವನಾಗು.

೪. ವಸಿಷ್ಠಋಷಿಯು ಉತ್ತರವಿತ್ತನು. ರಾಜನೆ! ಜಿಂಕೆಯ ಅತಿವಿಸ್ತಾರ ಚರಿತ್ರೆಯನ್ನು ನಾನು ವರ್ಣಿಸುವೆನು, ಕೇಳು. ಜಿಂಕೆಗಳೆರಡರಲ್ಲಿ ಪ್ರಿಯೆಯು ಯಾವಾವುದನ್ನು ಪ್ರಶ್ನಿಸಿತೋ, ಅದಕ್ಕೆಲ್ಲ ಕಾಂತನು ತತ್ತ್ವಜ್ಞಾನ ಪೂರ್ವಕವಾಗಿ ಯಾವ ಯಾವ ಉತ್ತರವನ್ನು ವರ್ಣಿಸಿತೋ ಅದೆಲ್ಲವನ್ನು ಕೇಳು.

ಶ್ರುತ್ವಾ ತು ಚರಿತಂ ತಸ್ಯ ಭಾರ್ಗವಸ್ಯ ಮಹಾತ್ಮನಃ ।
ಭೂಯಃ ಪಪ್ರಚ್ಛ ತಂ ಕಾಂತಂ ಜ್ಞಾತತತ್ತ್ವಾರ್ಥಮಾದರಾತ್ ॥ ೫ ॥

ಮೃಗ್ಯುವಾಚ :—
ಸಾಧು ಸಾಧು ಮಹಾಭಾಗ ಕೃತಾರ್ಥಸ್ತ್ವಂ ನ ಸಂಶಯಃ ।
ಯದಸ್ಯ ದರ್ಶನಾತ್ತೇಽದ್ಯ ಜಾತಂ ಜ್ಞಾನಮತೀಂದ್ರಿಯಮ್ ॥ ೬ ॥

ಅಥಾತಶ್ಚಾತ್ಮನಃ ಸರ್ವಂ ಮಮಾಪಿ ವದ ಕಾರಣಮ್ ।
ಕರ್ಮಣಾ ಯೇನ ಸಂಪ್ರಾಪ್ತಾವಾವಾಂ ತಿರ್ಯಗ್ಜನಿಂ ಪ್ರಭೋ ॥ ೭ ॥

ಇತಿ ವಾಕ್ಯಂ ಸಮಾಕರ್ಣ್ಯ ಪ್ರಿಯಾಯಾಃ ಸ ಮೃಗಃ ಸ್ವಯಮ್ ।
ವರ್ಣಯಾಮಾಸ ಚರಿತಂ ಮೃಗ್ಯಾಶ್ಚೈವಾತ್ಮನಸ್ತದಾ ॥ ೮ ॥

ಮೃಗ ಉವಾಚ :—
ಶೃಣು ಪ್ರಿಯೇ ಮಹಾಭಾಗೇ ಯಥಾವಾಂ ಮೃಗತಾಂ ಗತೌ ।
ಸಂಸಾರೇಽಸ್ಮಿನ್ಮಹಾಭಾಗೇ ಭಾವೋಽಸ್ಯ ಭವಕಾರಣಮ್ ॥ ೯ ॥

---

೫. ಹೆಣ್ಣು ಜಿಂಕೆಯು ಮಹಾತ್ಮನಾದ ಆ ಭಾರ್ಗವರಾಮನ ಚರಿತ್ರೆಯನ್ನು ಸಂಪೂರ್ಣವಾಗಿ ಕೇಳಿ ಅನೇಕ ತತ್ತ್ವಗಳನ್ನು ತಿಳಿದ ಕಾಂತನನ್ನು ಕುರಿತು ಆದರದಿಂದ ಪುನಃ ಪ್ರಶ್ನೆ ಮಾಡಿತು.

೬. ಮೃಗಿಯು ಹೀಗೆ ಹೇಳಿತು :—ಮಹಾಭಾಗ್ಯವಂತನೆ! ಈ ಭಾರ್ಗವರಾಮ ದರ್ಶನದಿಂದ ಈ ದಿನ ನಿನಗೆ ಇಂದ್ರಿಯವನ್ನು ಮೀರಿಸುವ ತ್ರಿಕಾಲಜ್ಞಾನವು ಹುಟ್ಟಿರುವುದರಿಂದ ನೀನು ಕೃತಾರ್ಥನಾಗಿರುವಿ. ಸಂದೇಹವಿಲ್ಲ. ನೀನೇ ಧನ್ಯನು, ನೀನೇ ಧನ್ಯನು.

೭. ಪ್ರಭುವೆ! ಜ್ಞಾನದೃಷ್ಟಿಯುಳ್ಳ ನೀನು ಯಾವ ದುಷ್ಕರ್ಮಪರಿಪಾಕದಿಂದ ನಮಗೆ ಈ ಪಶುಜನ್ಮವು ಪ್ರಾಪ್ತವಾಗಿರುವುದೋ ನಿನಗೂ ನನಗೂ ಇದ್ದ ಅಂತಹ ದುಷ್ಕರ್ಮವೆಂಬ ನಿಮಿತ್ತವನ್ನು ಹೇಳು.

೮. ಮೃಗವು ಪ್ರಿಯೆಯ ಈ ಮಾತನ್ನು ಕೇಳಿ ತಾನು ಮೃಗಿಯ ಮತ್ತು ತನ್ನ ಪಶುಜನ್ಮ ಪ್ರಾಪ್ತಿಗೆ ಸಂಭವಿಸಿದ ನಿಮಿತ್ತದಿಂದ ಕೂಡಿದ ಚರಿತ್ರೆಯನ್ನು ಆಗಲೇ ವರ್ಣಿಸಲಾರಂಭಿಸಿತು.

೯. ಮೃಗವು ಇಂತೆಂದಿತು :—ಭಾಗ್ಯವತಿಯಾದ ಪ್ರಿಯೆ! ನಾವು ಪಶುಜನ್ಮಕ್ಕೆ ಬಂದ ನಿಮಿತ್ತವನ್ನು ಕೇಳು. ಅನಾದ್ಯಪಾರವಾದ ಈ ಸಂಸಾರದಲ್ಲಿ ಸಿಲುಕಿದ ಜೀವನಿಗೆ ಸಾಧು ಅಸಾಧು ಕರ್ಮಗಳಿಂದ ಅವಸಾನಕಾಲದಲ್ಲಿ ಸ್ಮರಣಕ್ಕೆ ಬರುವ ಭಾವನಾ ವಿಶೇಷವೇ ವಿವಿಧವಾದ ಪುನರ್ಜನ್ಮಕ್ಕೆ ಕಾರಣವು.

ಜೀವಸ್ಯ ಸದಸದ್ಭ್ಯಾಂ ಹಿ ಕರ್ಮಭ್ಯಾಮಾಗತಃ ಸ್ಮೃತಿಮ್ ।
ಪುರಾ ದ್ರವಿಡದೇಶೇ ತು ನಾನಾಋದ್ಧಿಸಮಾಕುಲೇ ॥ ೧೦ ॥

ಬ್ರಾಹ್ಮಣಾನಾಂ ಕುಲೇ ನಾಹಂ ಜಾತಃ ಕೌಶಿಕಗೋತ್ರಿಣಾಮ್
ಪಿತಾ ಮೇ ಶಿವದತ್ತೋಽಭೂನ್ನಾಮ್ನಾ ಶಾಸ್ತ್ರವಿಶಾರದಃ ॥ ೧೧ ॥

ತಸ್ಯ ಪುತ್ರಾ ವಯಂ ಜಾತಾಶ್ಚತ್ವಾರೋ ದ್ವಿಜಸತ್ತಮಾಃ ।
ಜ್ಯೇಷ್ಠೋ ರಾಮೋಽನುಜಸ್ತಸ್ಯ ಧರ್ಮಸ್ತಸ್ಯಾನುಜಃ ಪೃಥುಃ ॥ ೧೨ ॥

ಚತುರ್ಥೋಽಹಂ ಪ್ರಿಯೇ ಜಾತೋ ಸೂರಿರಿತ್ಯಭಿವಿಶ್ರುತಃ ।
ಉಪನೀಯ ಕ್ರಮಾತ್ಸರ್ವಾನ್ ಶಿವದತ್ತೋ ಮಹಾಯಶಾಃ ॥ ೧೩ ॥

ವೇದಾನಧ್ಯಾಪಯಾಮಾಸ ಸಾಂಗಾಂಶ್ಚ ಸರಹಸ್ಯಕಾನ್ ।
ಚತ್ವಾರೋಽಪಿ ವಯಂ ತತ್ರ ವೇದಾಧ್ಯಯನತತ್ಪರಾಃ ॥ ೧೪ ॥

---

೧೦-೧೧. ಪೂರ್ವಕಾಲದಲ್ಲಿ ಸಮಸ್ತ ಸಮೃದ್ಧಿಗಳಿಂದ ಕೂಡಿದ ದ್ರವಿಡದೇಶದಲ್ಲಿ ವಾಸಮಾಡುವ ಕೌಶಿಕಗೋತ್ರೋತ್ಪನ್ನರಾದ ಬ್ರಾಹ್ಮಣರ ವಂಶದಲ್ಲಿ ನಾನು ಹುಟ್ಟಿದೆನು. ಸಕಲಶಾಸ್ತ್ರಪಾರಂಗತನಾಗಿ ಶಿವದತ್ತನೆಂಬ ಹೆಸರಿನಿಂದ ಪ್ರಸಿದ್ಧನಾದ ಬ್ರಾಹ್ಮಣನು ನನ್ನ ತಂದೆಯಾಗಿದ್ದನು.

೧೨. ಪ್ರಿಯೆ! ಆ ಶಿವದತ್ತನಿಗೆ ಬ್ರಾಹ್ಮಣಶ್ರೇಷ್ಠರೆನಿಸಿದ ನಾವು ನಾಲ್ಕು ಮಂದಿ ಪುತ್ರರು ಹುಟ್ಟಿದೆವು. ಅವರಲ್ಲಿ ಜ್ಯೇಷ್ಠನು ರಾಮ. ಅವನ ಒಡಹುಟ್ಟಿದವನು ಧರ್ಮ ಅವನ ಅನುಜನು ಪೃಥು, ಸೂರಿ ಎಂಬ ನಾಮಾಂಕಿತನಾದ ನಾನು ನಾಲ್ಕನೆಯವನಾಗಿ ಜನಿಸಿದೆನು.

೧೩. ಮಹಾಯಶಸ್ವಿಯಾದ ಶಿವದತ್ತನು ಕ್ರಮವಾಗಿ ಎಲ್ಲ ಮಕ್ಕಳಿಗೂ ಉಪನಯನ ಸಂಸ್ಕಾರವನ್ನು ಮಾಡಿ ವೇದಾಂಗ—ಉಪನಿಷದ್ರಹಸ್ಯ ಸಹಿತವಾಗಿ ಎಲ್ಲ ವೇದಗಳನ್ನು ಕಲಿಸಿದನು.

೧೪. ವೇದಾಧ್ಯಯನದಲ್ಲಿ ತತ್ಪರರಾದ ನಾವು ನಾಲ್ಕು ಮಂದಿಯೂ ಗುರುಶುಶ್ರೂಷೆಯನ್ನು ನೆರವೇರಿಸುತ್ತಾ ಜ್ಞಾನಾರ್ಜನೆಯಲ್ಲಿ ಬಹುಮಟ್ಟಿಗೆ ಆಸಕ್ತಿಯುಳ್ಳವರಾದೆವು.

ಗುರುಶುಶ್ರೂಷಣೇ ಯುಕ್ತಾ ಜಾತಾ ಜ್ಞಾನಪರಾಯಣಾಃ ।
ಗತ್ವಾರಣ್ಯಂ ಫಲಾನ್ಯಂಬು ಸಮಿತ್ಕುಶಮೃದೋsನ್ವಹಮ್ ॥ ೧೫ ॥

ಆನೀಯ ಪಿತ್ರೇ ದತ್ವಾಥ ಕುರ್ವೋsಧ್ಯಯನಮೇವ ಹಿ ।
ಏಕದಾ ತು ವಯಂ ಸರ್ವೇ ಸಂಪ್ರಾಪ್ತಾಃ ಪರ್ವತಂ ವನೇ ॥ ೧೬ ॥

ಔದ್ಭಿದಂ ನಾಮ ಲೋಲಾಕ್ಷಿ ಕೃತಮಾಲಾತಟೇ ಸ್ಥಿತಮ್ ।
ಸರ್ವೇ ಸ್ನಾತ್ವಾ ಮಹಾನದ್ಯಾಮುಷಸಿ ಪ್ರೀತಮಾನಸಾಃ ॥ ೧೭ ॥

ದತ್ವಾರ್ಘಾಃ ಕೃತಜಪ್ಯಾಶ್ಚ ಸಮಾರೂಢಾ ನಗೋತ್ತಮಮ್ ।
ಶಾಲೈಸ್ತಮಾಲೈಃ ಪ್ರಿಯಕೈಃ ಪನಸೈಃ ಕೋವಿದಾರಕೈಃ ॥ ೧೮ ॥

ಸರಲಾರ್ಜುನಪೂಗೈಶ್ಚ ಖರ್ಜೂರೈರ್ನಾರಿಕೇಳಕೈಃ ।
ಜಂಬೂಭಿಃ ಸಹಕಾರೈಶ್ಚ ಕಟ್ಫಲೈರ್ಬೃಹತೀದ್ರುಮೈಃ ॥ ೧೯ ॥

ಅನ್ಯೈರ್ನಾನಾವಿಧೈರ್ವೃಕ್ಷೈಃ ಪರಾರ್ಥಪ್ರತಿಪಾದಕೈಃ ।
ಸ್ನಿಗ್ಧಚ್ಛಾಯೈಃ ಸಮಾಹೃಷ್ಟನಾನಾಪಕ್ಷಿನಿನಾದಿತೈಃ ॥ ೨೦ ॥

---

೧೫. ಗುರುಶುಶ್ರೂಷಾ ಪ್ರಸಂಗದಲ್ಲಿ ನಾವೆಲ್ಲರೂ ವನಕ್ಕೆ ಹೋಗಿ ಅಲ್ಲಿಂದ ದರ್ಭ, ಸಮಿತ್, ಮೃತ್ತಿಕಾ ಮುಂತಾದುವುಗಳನ್ನು ಪ್ರತಿನಿತ್ಯವೂ ತಂದೆಗೆ ತಂದೊಪ್ಪಿಸಿ ಸಕಾಲದಲ್ಲಿ ಅಧ್ಯಯನವನ್ನು ಮಾಡುತ್ತಲಿದ್ದೆವು.

೧೬. ಚಂಚಲ ದೃಷ್ಟಿಯುಳ್ಳ ಪ್ರಿಯೆಯೆ! ಹೀಗಿರಲು ಒಂದುಸಮಯದಲ್ಲಿ ನಾವೆಲ್ಲರೂ ಅರಣ್ಯಕ್ಕೆ ಹೋಗಿರುವಾಗ ಕೃತಮಾಲಾನದಿಯ ತೀರದಲ್ಲಿದ್ದ ಔದ್ಭಿದವೆಂಬ ಪರ್ವತವನ್ನು ಅಕಸ್ಮಾತ್ತಾಗಿ ತಲುಪಿದೆವು.

೧೭. ಆ ಕೃತಮಾಲಾ ಎಂಬ ಮಹಾನದಿಯಲ್ಲಿ ಉಷಃ ಕಾಲದಲ್ಲಿ ನಾವೆಲ್ಲರೂ ಸಂತುಷ್ಟ ಚಿತ್ತರಾಗಿ ಸ್ನಾನ, ಅರ್ಘ್ಯಪ್ರದಾನ, ಜಪಾನುಷ್ಠಾನ ವಿಧಿಗಳನ್ನು ನೆರವೇರಿಸಿ ಉತ್ತಮವಾದ ಆ ಪರ್ವತವನ್ನು ಹತ್ತಿದೆವು.

೧೮-೧೯-೨೦. ಆ ಪರ್ವತವು ರಮಣೀಯವಾದ ಶಾಲ, ತಮಾಲ, ಪ್ರಿಯಕ, ಹಲಸು, ಕೋವಿದಾರ, ಸರಲ, ಅರ್ಜುನ, ಅಡಿಕೆ, ಖರ್ಜೂರ, ತೆಂಗು, ನೇರಳೆ, ಮಾವು, ಬೇವು, ಬೃಹತೀ ಮತ್ತು ಇತರ ಅನೇಕ ಜಾತಿಯ, ಫಲಪುಷ್ಪಾದಿಗಳಿಂದ ಪರಾರ್ಥವನ್ನು ಸಂಪಾದಿಸಿಕೊಡುವ, ತಣ್ಣಗಿರುವ ನೆರಳು—ಇಂಪಾಗಿ ಹರ್ಷದಿಂದ ಧ್ವನಿಗೈಯುವ ಪಕ್ಷಿಗಳಿಂದ ಕೂಡಿದ ವೃಕ್ಷಗಳಿಂದ ಶೋಭಿತವಾಗಿತ್ತು.

ಶಾರ್ದೂಲಹರಿಭಿರ್ಭಲ್ಲೈರ್ಗಂಡಕೈರ್ಮೃಗನಾಭಿಭಿಃ ।
ಗಜೇಂದ್ರೈಃ ಶರಭಾದ್ಯೈಶ್ಚ ಸೇವಿತಂ ಕಂದರಾಗತೈಃ ॥ ೨೧ ॥

ಮಲ್ಲಿಕಾಪಾಟಲಾಕುಂದಕರ್ಣಿಕಾರಕದಂಬಕೈಃ ।
ಸುಗಂಧಿಭಿರ್ವೃತಂ ಚಾನ್ಯೈರ್ವಾತೋದ್ಧೂತಪರಾಗಿಭಿಃ ॥ ೨೨ ॥

ನಾನಾಮಣಿಗಣಾಕೀರ್ಣೈರ್ನೀಲಪೀತಸಿತಾರುಣೈಃ ।
ಶೃಂಗೈಃ ಸಮುಲ್ಲಿಖಂತಂ ಚ ವ್ಯೋಮ ಕೌತುಕಸಂಯುತಮ್ ॥ ೨೩ ॥

ಅತ್ಯುಚ್ಚಪಾತಧ್ವನಿಭಿರ್ನಿರ್ಝರೈಃ ಕಂದರೋದ್ಗತೈಃ ।
ಗರ್ಜಂತಮಿವ ಸಂಸಕ್ತಂ ವ್ಯಾಲಾದ್ಯೈರ್ಮೃಗಪಕ್ಷಿಭಿಃ ॥ ೨೪ ॥

ತತ್ರಾತಿಕೌತುಕಾಕೃಷ್ಟದೃಷ್ಟಯೋ ಭ್ರಾತರೋ ವಯಮ್ ।
ನಾಸ್ಮಾರ್ಷ್ಮ ಚಾತ್ಮನಾತ್ಮಾನಂ ವಿಯುಕ್ತಾಶ್ಚ ಪರಸ್ಪರಮ್ ॥ ೨೫ ॥

---

೨೧. ಮತ್ತು ಅಲ್ಲಲ್ಲಿ ಗವಿಗಳಲ್ಲಿ ವಾಸಮಾಡುವ ಶಾರ್ದೂಲ-ಸಿಂಹ-ಭಲ್ಲ-ಗಂಡಕ-ಕಸ್ತೂರೀ—ಮಹಾಗಜ-ಶರಭ ಮುಂತಾದ ಪ್ರಾಣಿಗಳಿಗೆ ಆಶ್ರಯವಾಗಿತ್ತು.

೨೨. ಹಾಗೆಯೇ ಗಾಳಿಯಿಂದ ಮೇಲಕ್ಕೆ ಹಾರಿಹೋಗುವ ಪುಷ್ಪಧೂಳಿಯಿಂದ ಸಹಿತವಾದ ಸುವಾಸನೆಯ ಮಲ್ಲಿಗೆ-ಪಾದರಿ-ಕುಂದ- ಕರ್ಣಿಕಾರ-ಕದಂಬ ಮುಂತಾದ ಅನೇಕ ಬಗೆಯ ಹೂ ಗಳಿಂದ ತುಂಬಿದ್ದಿತು.

೨೩. ನಾನಾಜಾತಿಯ ರತ್ನಗಳಿಂದ ಕೆತ್ತಲ್ಪಟ್ಟು ಕಪ್ಪು, ಬಿಳುಪು, ಹೊಂಬಣ್ಣ, ಕೆಂಪುಬಣ್ಣಗಳೆಂಬ ವಿವಿಧ ವರ್ಣಗಳಿಂದ ರಂಜಿಸಲ್ಪಟ್ಟ ಉನ್ನತ ಶಿಖರಗಳಿಂದ ಆಕಾಶವನ್ನು ಮುಟ್ಟುತ್ತಿರುವಂತೆ ಕಾಣುತ್ತ ಪ್ರೇಕ್ಷಕರಿಗೆ ಕುತೂಹಲವನ್ನುಂಟು ಮಾಡುತ್ತಲಿತ್ತು.

೨೪. ಬಹು ಎತ್ತರದ ಜಲಪಾತದ ಧ್ವನಿಗಳಿಂದ ಕೂಡಿದ ಗವಿಗಳಿಂದ ಹುಟ್ಟಿರುವ ಕಾಡುನದೀಪ್ರವಾಹಗಳಿಂದ ಬೆಟ್ಟವೆಲ್ಲವೂ ಗರ್ಜಿಸುವಂತೆ ತೋರುತ್ತ ಅನೇಕ ಜಾತಿಯ ಹಾವು-ಮೃಗ-ಪಕ್ಷಿಗಳಿಂದ ವ್ಯಾಪ್ತವಾಗಿತ್ತು.

೨೫. ಆ ಪರ್ವತದಲ್ಲಿ ಒಂದಕ್ಕಿಂತ ಸುಂದರವಾದ ಮತ್ತೊಂದು ದೃಶ್ಯವನ್ನು ನೋಡುವ ಕುತೂಹಲದಿಂದ ಸೆಳೆಯಲ್ಪಟ್ಟ ದೃಷ್ಟಿಯುಳ್ಳ ಸಹೋದರರಾದ ನಾವೆಲ್ಲರೂ ಮನಸ್ಸಿನಲ್ಲಿ ಸಂಪೂರ್ಣವಾಗಿ ಮೈಮರೆತು ಒಬ್ಬರನ್ನೊಬ್ಬರು ಅಗಲಿಬಿಟ್ಟೆವು.

ಏತಸ್ಮಿನ್ನಂತರೇ ಚೈಕಾ ಮೃಗೀ ಹ್ಯಾಗಾತ್ಪಿಪಾಸಿತಾ ।
ನಿರ್ಝರಾಪಾತಶಿರಸಿ ಸ್ನಾತುಕಾಮಾ ಜಲಂ ಪ್ರಿಯೇ ॥ ೨೬ ॥

ತಸ್ಯಾಃ ಪಿಬಂತ್ಯಾಸ್ತು ಜಲಂ ಶಾರ್ದೂಲೋಽತಿಭಯಂಕರಃ ।
ತತ್ರ ಪ್ರಾಪ್ತೋ ಽಯದೃಚ್ಛಾತೋ ಜಗೃಹೇ ತಾಂ ಭಯಾರ್ದಿತಾಮ್ ॥ ೨೭ ॥

ಅಹಂ ತದ್ಗ್ರಹಣಂ ಪಶ್ಯನ್ ಭಯೇನ ಪ್ರಪಲಾಯಿತಃ ।
ಅತ್ಯುಚ್ಚವತ್ಸ್ಥಾತ್ಪತಿತೋ ಮೃತಶ್ಚೈಣೀಮನುಸ್ಮರನ್ ॥ ೨೮ ॥

ಸಾ ಮೃತಾ ತ್ವಂ ಮೃಗೀ ಜಾತಾ ಮೃಗಸ್ತ್ವಹಮನುಸ್ಮರನ್ ।
ಜಾತೋ ಭದ್ರೇ ನ ಜಾನೇ ವೈ ಕ್ವ ಗತಾ ಭ್ರಾತರೋಽಗ್ರಜಾಃ ॥ ೨೯ ॥

ಏತನ್ಮೇ ಸ್ಮೃತಿಮಾಪನ್ನಂ ಚರಿತಂ ತವ ಚಾತ್ಮನಃ ।
ಭೂತಂ ಭವಿಷ್ಯಂ ಚ ತಥಾ ಶೃಣು ಭದ್ರೇ ವದಾಮ್ಯಹಮ್ ॥ ೩೦ ॥

---

೨೬. ಪ್ರಿಯೇ! ಈ ಸಮಯಕ್ಕೆ ಸರಿಯಾಗಿ ನೀರಡಿಕೆಯುಳ್ಳ ಒಂದು ಹೆಣ್ಣು ಜಿಂಕೆಯು ಜಲಪಾತದ ಮೇಲುಗಡೆಯಲ್ಲಿ ನೀರನ್ನು ಕುಡಿಯುವ ಸಲುವಾಗಿ ಸಮೀಪಕ್ಕೆ ಬಂದಿತು.

೨೭. ಆ ಜಿಂಕೆಯು ನೀರನ್ನು ಕುಡಿಯುತ್ತಿರುವಾಗ ಆಕಸ್ಮಿಕವಾಗಿ ಭಯಂಕರವಾದ ಒಂದು ಶಾರ್ದೂಲವು ಅಲ್ಲಿಗೆ ಬಂದು ಭಯಪೀಡಿತವಾದ ಆ ಜಿಂಕೆಯನ್ನು ಹಿಡಿಯಿತು.

೨೮. ಶಾರ್ದೂಲವು ಆ ಜಿಂಕೆಯನ್ನು ಹಿಡಿದ ದೃಶ್ಯವನ್ನು ನೋಡಿ ನಾನು ಭಯದಿಂದ ಓಡುತ್ತಾ ಕಣ್ಣುಕಟ್ಟಿದಂತಾಗಿ ಎತ್ತರವಾದ ಸ್ಥಳದಿಂದ ಕೆಳಕ್ಕೆ ಬಿದ್ದು ಆ ಜಿಂಕೆಯನ್ನೆ ಸ್ಮರಿಸುತ್ತ ಪ್ರಾಣಬಿಟ್ಟೆನು.

೨೯. ಮಂಗಲಶೀಲಳೇ, ಕೇಳು. ಆ ಶಾರ್ದೂಲದಿಂದ ಕೊಲ್ಲಲ್ಪಟ್ಟ ಮೃಗಿಯೇ ನೀನು. ನಿನ್ನನ್ನು ಸ್ಮರಿಸುತ್ತ ಪ್ರಾಣವನ್ನು ಬಿಟ್ಟು ನಾನು ಮೃಗರೂಪದಿಂದ ಹುಟ್ಟಿರುವೆನು. ನನ್ನ ಜ್ಯೇಷ್ಠ ಸಹೋದರರೆಲ್ಲರೂ ಎಲ್ಲಿಗೆ ಹೋದರೋ ತಿಳಿಯಲಾರೆನು.

೩೦. ನಿನಗೂ ನನಗೂ ಸಂಬಂಧಪಟ್ಟ ಭೂತ ಭವಿಷ್ಯ ಅಂಶಗಳಿಂದಕೂಡಿದ ಈ ಚರಿತ್ರವು ಈಗ ಸ್ಮೃತವಾಯಿತು, ಮಂಗಲಸ್ವರೂಪಳೇ, ಹೇಳುವೆನು, ಕೇಳು.

ಯೋಽಯಂ ವಾ ಪೃಷ್ಠ ಸಂಲಗ್ನೋ ವ್ಯಾಧೋ ದೂರಸ್ಥಿತೋಽಭವತ್ ।
ರಾಮಸ್ಯಾಸ್ಯಭಯಾತ್ಸೋಽಪಿ ಭಕ್ಷಿತೋ ಹರಿಣಾಧುನಾ ॥ ೩೧ ॥

ಪ್ರಾಣಾಂಸ್ತ್ಯಕ್ತ್ವಾ ವಿಧಾನೇನ ಸ್ವರ್ಗಲೋಕಂ ಗಮಿಷ್ಯತಿ ।
ಆವಾಭ್ಯಾಂ ತು ಜಲಂ ಪೀತಂ ಮಧ್ಯಮೇ ಪುಷ್ಕರೇ ತ್ವಿಹ ॥ ೩೨ ॥

ಸಂದೃಷ್ಟೋ ಭಾರ್ಗವಶ್ಚಾಯಂ ಸಾಕ್ಷಾದ್ವಿಷ್ಣುಸ್ವರೂಪಧೃಕ್ ।
ತೇನಾನೇಕಭವೋತ್ಪನ್ನಂ ಪಾತಕಂ ನಾಶಮಾಗತಮ್ ॥ ೩೩ ॥

ಅಗಸ್ತ್ಯದರ್ಶನಂ ಲಬ್ಧ್ವಾ ಶ್ರುತ್ವಾ ಸ್ತೋತ್ರಂ ಗತಿಪ್ರದಮ್ ।
ಗಮಿಷ್ಯಾವಃ ಶುಭಾನ್ ಲೋಕಾನ್ಯೇಷು ಗತ್ವಾ ನ ಶೋಚತಿ ॥ ೩೪ ॥

ಇತ್ಯೇವಮುಕ್ತ್ವಾ ಸ ಮೃಗಃ ಪ್ರಿಯಾಯೈ ಪ್ರಿಯದರ್ಶನಃ ।
ವಿರರಾಮ ಪ್ರಸನ್ನಾತ್ಮಾ ಪಶ್ಯನ್ ರಾಮಮನಾತುರಃ ॥ ೩೫ ॥

---

೩೧. ನಮ್ಮ ಹಿಂಬದಿಯಿಂದ ಯಾವ ವ್ಯಾಧನು ನಮ್ಮನ್ನು ಹಿಂಬಾಲಿಸಿಬಂದು ಈ ಪರಶುರಾಮನ ಭೀತಿಯಿಂದ ದೂರದಲ್ಲಿಯೇ ನಿಂತುಬಿಟ್ಟನೋ ಆ ವ್ಯಾಧನು ಈಗ ಸಿಂಹದಿಂದ ತಿನ್ನಲ್ಪಡುವನು.

೩೨-೩೩. ಮತ್ತು ತನ್ನ ವಿಧಿಯನ್ನನುಸರಿಸಿ ಪ್ರಾಣಗಳನ್ನು ತೊರೆದು ಸ್ವರ್ಗಕ್ಕೆ ತೆರಳುವನು. ನಾವಿಬ್ಬರೂ ಈ ಮಧ್ಯಮ ಪುಷ್ಕರದ ಕ್ಷೇತ್ರದಲ್ಲಿ ನೀರನ್ನು ಕುಡಿದು ಈ ಸಾಕ್ಷಾತ್ ವಿಷ್ಣುಸ್ವರೂಪಿಯಾದ ಭಾರ್ಗವರಾಮನ ಪವಿತ್ರ ಸಂದರ್ಶನವನ್ನು ಪಡೆದು ಇರುವುದರಿಂದ ನಮ್ಮ ಪ್ರಾಚೀನ ಅನೇಕ ಜನ್ಮಾರ್ಜಿತವಾದ ಪಾಪವೆಲ್ಲವೂ ನಾಶವಾಗಿರುವುದು.

೩೪. ಇನ್ನು ಮುಂದೆ ಸದ್ಗತಿಯನ್ನು ಕೊಡುವ ಅಗಸ್ತ್ಯಮುನಿಯ ದರ್ಶನವನ್ನು ಮಾಡಿ ಯಾವ ಪುಣ್ಯಲೋಕದಲ್ಲಿ ಶೋಕ ಮೋಹಾದಿ ವೇದನೆಗಳಿಗೆ ಅವಕಾಶವಿರುವುದಿಲ್ಲವೋ ಅಂತಹ ಪುಣ್ಯಲೋಕವನ್ನು ಸೇರುವೆವು.

೩೫. ಸೌಮ್ಯವಾದ ದರ್ಶನವುಳ್ಳ ಮೃಗವು ರಾಮನನ್ನು ನೋಡುತ್ತ ಶಂಕಾಪೀಡೆಯಿಂದ ರಹಿತವಾಗಿ ಪ್ರಸನ್ನವಾದ ಅಂತಃಕರಣದಿಂದ ಪ್ರಿಯೆಗೆ ಈ ರೀತಿಯಾಗಿ ಹೇಳಿ ಸುಮ್ಮನಾಯಿತು.

ಭಾರ್ಗವಃ ಶ್ರುತವಾಂಶ್ಚೈವ ಮೃಗೋಕ್ತಂ ಶಿಷ್ಯಸಂಯುತಃ
ವಿಸ್ಮಿತೋ-ಭೂಚ್ಚ ರಾಜೇಂದ್ರ ಗಂತುಂ ಕೃತಮತಿಸ್ತಥಾ ॥ ೩೬ ॥

ಅಕೃತವ್ರಣಸಂಯುಕ್ತೋ ಹ್ಯಗಸ್ತ್ಯಸ್ಯಾಶ್ರಮಂ ಪ್ರತಿ
ಸ್ನಾತ್ವಾ ನಿತ್ಯಕ್ರಿಯಾಂ ಕೃತ್ವಾ ಪ್ರತಸ್ಥೇ ಹರ್ಷಿತೋ ಭೃಶಮ್॥ ೩೭ ॥

ರಾಮೇಣ ಗಚ್ಛತಾ ಮಾರ್ಗೇ ದೃಷ್ಟೋ ವ್ಯಾಧೋ ಮೃತಸ್ತದಾ ।
ಸಿಹ್ಮಸ್ಯ ಸಂಪ್ರಹಾರೇಣ ವಿಸ್ಮಿತೇನ ಮಹಾತ್ಮನಾ ॥ ೩೮ ॥

ಅಧ್ಯರ್ಧಯೋಜನಂ ಗತ್ವಾ ಕನಿಷ್ಠಂ ಪುಷ್ಕರಂ ಪ್ರತಿ ।
ಸ್ನಾತ್ವಾ ಮಾಧ್ಯಾಹ್ನಿಕೀಂ ಸಂಧ್ಯಾಂ ಚಕಾರಾತಿ ಮುದಾನ್ವಿತಃ ॥ ೩೯ ॥

ಹಿತಂ ತದಾತ್ಮನಃ ಪ್ರೋಕ್ತಂ ಮೃಗೇಣ ಸ ವಿಚಾರಯನ್ ।
ತಾವತ್ತತ್ಪೃಷ್ಠಸಂಲಗ್ನಂ ಮೃಗಯುಗ್ಮಮುಪಾಗತಮ್ ॥ ೪೦ ॥

---

೩೬-೩೭. ರಾಜಶ್ರೇಷ್ಠನೇ! ಶಿಷ್ಯಸಹಿತನಾಗಿದ್ದ ಭಾರ್ಗವರಾಮನು ಮೃಗವು ನುಡಿದ ಎಲ್ಲ ಚರಿತ್ರೆಯನ್ನು ಕೇಳಿ ಆಶ್ಚರ್ಯಚಕಿತನಾದನು. ಮತ್ತು ಅಕೃತವ್ರಣನೆಂಬ ಶಿಷ್ಯಸಹಿತನಾಗಿಯೇ ಅಗಸ್ತ್ಯಮುನಿಯ ಆಶ್ರಮಕ್ಕೆ ಹೋಗಬೇಕೆಂದು ಯೋಚಿಸಿದವನಾದನು. ಹಾಗೆಯೇ ಬಹಳ ಹರ್ಷಗೊಂಡವನಾಗಿ ಸ್ನಾನಾದಿನಿತ್ಯ ಕರ್ಮಗಳನ್ನೆಲ್ಲ ನೆರವೇರಿಸಿ ಹೊರಟನು.

೩೮. ರಾಮನು ಆಗಸ್ತ್ಯಮುನಿಯ ಆಶ್ರಮಕ್ಕೆ ಪ್ರಯಾಣಮಾಡುತ್ತಿರುವಾಗ ಮಾರ್ಗಮಧ್ಯದಲ್ಲಿ ಸಿಂಹದಿಂದ ಹೊಡೆದು ಮಲಗಿಸಲ್ಪಟ್ಟ ವ್ಯಾಧನನ್ನು ಕಂಡು ಮಹಾತ್ಮನಾದ ರಾಮನು ಬಹು ವಿಸ್ಮಯಗೊಂಡನು.

೩೯. ಹೀಗೆ ಸುಮಾರು ಅರ್ಧಯೋಜನಕ್ಕಿಂತ ಹೆಚ್ಚು ದಾರಿಯನ್ನು ನಡೆದು ಕನಿಷ್ಠಪುಷ್ಕರವೆಂಬ ಕ್ಷೇತ್ರದ ಬಳಿಗೆ ಬಂದು ಅಲ್ಲಿ ಸಂತೋಷಚಿತ್ತದಿಂದ ಸ್ನಾನಮಾಡಿ ಮಾಧ್ಯಾಹ್ನಿಕ ಸಂಧ್ಯಾವ್ಯನುಷ್ಠಾನವನ್ನು ನೆರವೇರಿಸಿದನು.

೪೦. ಪ್ರತಿಯೊಂದು ತನ್ನ ಕರ್ತವ್ಯವನ್ನು ಮಾಡುವಾಗ ಮೃಗವು ಹೇಳಿದ ತನ್ನ ಹಿತಮಾರ್ಗವನ್ನು ರಾಮನು ಮನಸ್ಸಿನಲ್ಲಿ ವಿಚಾರಿಸುತ್ತಲಿದ್ದನು. ಇಷ್ಟರಲ್ಲಿ ಅವನ ಹಿಂದುಗಡೆಯಿಂದ ನಡೆದುಕೊಂಡುಬಂದ ಆ ಜಿಂಕೆಗಳ ಜೊತೆಯೂ ಅಲ್ಲಿಗೆ ಬಂದು ಸೇರಿತು.

ಪುಷ್ಕರೇ ತು ಜಲಂ ಪೀತ್ವಾಭಿಷಿಚ್ಯಾತ್ಮತನುಂ ಜಲೈಃ ।
ಪಶ್ಯತೋ ಭಾರ್ಗವಸ್ಯಾಗಾದಗಸ್ತ್ಯಾಶ್ರಮಸಂಮುಖಮ್ ॥ ೪೧ ॥

ರಾಮೋಽಪಿ ಸಂಧ್ಯಾಂ ನಿರ್ವರ್ತ್ಯ ಕುಂಭಜಸ್ಯಾಶ್ರಮಂ ಯಯೌ ।
ವಿಪದ್ಗತಂ ಪುಷ್ಕರಂ ತು ಪಶ್ಯಮಾನೋ ಮಹಾಮನಾಃ ॥ ೪೨ ॥

ವಿಷ್ಣೋಃ ಪದಾನಿ ನಾಗಾನಾಂ ಕುಂಡಂ ಸಪ್ತರ್ಷಿಸಂಸ್ಥಿತಮ್ ।
ಗತ್ವೋಪಸ್ಪೃಶ್ಯ ಶುಚ್ಯಂಭೋ ಜಗಾಮಾಗಸ್ತ್ಯಸಂಶ್ರಯಮ್॥ ೪೩ ॥

ಯತ್ರ ಬ್ರಹ್ಮಸುತಾ ರಾಜನ್ ಸಮಾಯಾತಾ ಸರಸ್ವತೀ ।
ತ್ರೀನ್ ಸಂಪೂರಯಿತುಂ ಕುಂಡಾನ್ ಅಗ್ನಿಹೋತ್ರಸ್ಯ ವೈ ವಿಧೇಃ ॥ ೪೪ ॥

ತತ್ರ ತೀರೇ ಶುಭಂ ಪುಣ್ಯಂ ನಾನಾಮುನಿನಿಷೇವಿತಮ್ ।
ದದರ್ಶ ಮಹದಾಶ್ಚರ್ಯಂ ಭಾರ್ಗವಃ ಕುಂಭಜಾಶ್ರಮಮ್ ॥ ೪೫ ॥

---

೪೧. ಭಾರ್ಗವರಾಮನು ನೋಡುತ್ತಲಿರುವಾಗ ಆ ಜಿಂಕೆಗಳು ಪುಷ್ಕರದಲ್ಲಿ ನೀರನ್ನು ಕುಡಿದು ಆ ಪುಷ್ಕರತೀರ್ಥದಿಂದ ಮೈಯನ್ನು ನೆನೆಸಿ ಸ್ನಾನಮಾಡಿ ಅಲ್ಲಿಂದ ಅಗಸ್ತ್ಯ ಮುನಿಯ ಆಶ್ರಮಕ್ಕೆ ಎದುರಾಗಿ ನಡೆದುಹೋದುವು.

೪೨-೪೩. ಸಂಧ್ಯಾನುಷ್ಠಾನವನ್ನು ಮಾಡಿದ ಗಂಭೀರಮಾನಸವುಳ್ಳ ಭಾರ್ಗವ ರಾಮನು ಅಗಸ್ತ್ಯಾಶ್ರಮಕ್ಕೆ ತೆರಳುತ್ತಾ ಪುಷ್ಕರತೀರ್ಥದ ಅವಸಾನಪ್ರದೇಶವನ್ನೂ ಅಲ್ಲಿಂದ ಮುಂದೆ ವಿಷ್ಣುವಿನ ಪಾದಚಿಹ್ನಗಳಿಂದ ಅಂಕಿತವಾದ ವಿಷ್ಣುಪಾದಕ್ಷೇತ್ರ, ಮತ್ತು ಸಪ್ತರ್ಷಿಗಳು ವಾಸಮಾಡಿದ ನಾಗಕುಂಡ—ಇವುಗಳನ್ನು ನೋಡಿ ಪರಿಶುದ್ಧ ವಾದ ನೀರನ್ನು ಆಚಮನಮಾಡಿ ಅಗಸ್ತ್ಯಾಶ್ರಮಕ್ಕೆ ಹೋದನು.

೪೪. ಸಂತತವಾಗಿ ನಡೆಯುತ್ತಲಿದ್ದ ಅಗ್ನಿಹೋತ್ರವಿಧಾನಕ್ಕೆ ಸೌಕರ್ಯ ವನ್ನುಂಟುಮಾಡಲು ಮೂರುಕುಂಡಗಳನ್ನು ತುಂಬಿಡಲು ಬ್ರಹ್ಮಪುತ್ರಿಯಾದ ಸರಸ್ವತೀ ನದಿಯು ಆ ಅಗಸ್ತ್ಯಾಶ್ರಮದಲ್ಲಿ ಹರಿಯುತ್ತಿತ್ತು.

೪೫. ಆ ಸ್ಥಳದಲ್ಲಿ ಸರಸ್ವತೀ ತೀರದಲ್ಲಿ ಅನೇಕ ಮಹರ್ಷಿಗಳು ವಾಸಮಾಡಿ ರುವ ಅನೇಕಾಶ್ಚರ್ಯ ಸನ್ನಿವೇಶಗಳಿಂದ ಕೂಡಿದ ಪವಿತ್ರವಾದ ಅಗಸ್ತ್ಯಾಶ್ರಮ ವನ್ನು ಕಂಡನು.

ಮೃಗೈಃ ಸಿಹ್ಯೈಃ ಸಹಗತೈಃ ಸೇವಿತಂ ಶಾಂತಮಾನಸೈಃ ।
ಕುಟಜೈರರ್ಜುನೈರ್ನಿಂಬೈಃ ಪಾರಿಭದ್ರಧವೇಂಗುದೈಃ ॥ ೪೬ ॥

ಖದಿರಾಸನಖರ್ಜೂರೈಃ ಸಂಕುಲಂ ಬದರೀದ್ರುಮೈಃ ।
ತತ್ರ ಪ್ರವಿಶ್ಯ ವೈ ರಾಮೋ ಹ್ಯಕೃತವ್ರಣಸಂಯುತಃ ॥ ೪೭ ॥

ದದರ್ಶ ಮುನಿಮಾಸೀನಂ ಕುಂಭಜಂ ಶಾಂತಮಾನಸಮ್ ।
ಸ್ತಿಮಿತೋದಸರಃಪ್ರಖ್ಯಂ ಧ್ಯಾಯಂತಂ ಬ್ರಹ್ಮ ಶಾಶ್ವತಮ್ ॥ ೪೮ ॥

ಕೌಶ್ಯಾಂ ವೃಷ್ಯಾಂ ಮಾರ್ಗಕೃತ್ತಿಂ ವಸಾನಂ ಪಲ್ಲವೋಟಜೇ ।
ನನಾಮ ಚ ಮಹಾರಾಜ ಸ್ವಾಭಿಧಾನಂ ಸಮುಚ್ಚರನ್ ॥ ೪೯ ॥

ರಾಮೋಽಸ್ಮಿ ಜಾಮದಗ್ನ್ಯೋಽಹಂ ಭವಂತಂ ದ್ರಷ್ಟುಮಾಗತಃ ।
ತದ್ವಿದ್ಧಿ ಪ್ರಣಿಪಾತೇನ ನಮಸ್ತೇ ಲೋಕಭಾವನ ॥ ೫೦ ॥

---

೪೬. ಆ ಆಶ್ರಮವು ಪರಸ್ಪರ ವೈರವನ್ನು ಬಿಟ್ಟು ಶಾಂತವಾದ ಮನಸ್ಸಿನಿಂದ ಕೂಡಿ ಜಿಂಕೆ ಮತ್ತು ಸಿಂಹಗಳು ಒಟ್ಟಿಗೆ ವಾಸಮಾಡುವ ಪವಿತ್ರ ಸ್ಥಳವಾಗಿತ್ತು ಮತ್ತು ಅಲ್ಲಿ ಕುಟಜ-ಅರ್ಜುನ-ನಿಂಬ-ಪಾರಿಭದ್ರ-ಧವ-ಇಂಗುದ-ಖದಿರ-ಅಸನ-ಖರ್ಜೂರ-ಬದರೀ ಮುಂತಾದ ಬಗೆ ಬಗೆಯ ವೃಕ್ಷಗಳು ಶೋಭಿಸುತ್ತಿದ್ದುವು.

೪೭-೪೮. ಅಂತಹ ಆಶ್ರಮವನ್ನು ಅಕೃತವ್ರಣಶಿಷ್ಯ ಸಹಿತನಾಗಿ ರಾಮನು ಪ್ರವೇಶಮಾಡಿ ಪರ್ಣಗಳಿಂದ ರಚಿಸಿದ ಆಶ್ರಮಮಧ್ಯದಲ್ಲಿ ದರ್ಭಮಯವಾದ ಆಸನದಲ್ಲಿ ಕುಳಿತುಕೊಂಡು ಕೃಷ್ಣಾಜಿನವನ್ನು ಧರಿಸಿ ನಿಶ್ಚಲವಾದ ನೀರಿನ ಮಹಾ ಸರಸ್ಸಿನಂತೆ ಸನಾತನ ಬ್ರಹ್ಮಧ್ಯಾನದಲ್ಲಿ ಚಿತ್ತೈಕಾಗ್ರತೆಯುಳ್ಳ, ಶಾಂತ ಮನಸ್ಸಿನಿಂದ ಕುಳಿತುಕೊಂಡಿರುವ ಅಗಸ್ತ್ಯ ಮುನಿಯನ್ನು ನೋಡಿದನು.

೪೯-೫೦. ಮಹಾರಾಜನೆ! ಅಗಸ್ತ್ಯ ಮುನಿಯನ್ನು ಕಂಡೊಡನೆ ರಾಮನು ತನ್ನ ನಾಮಗೋತ್ರಗಳನ್ನು ಪಠಿಸಿ ನಮಸ್ಕಾರಮಾಡಿದನು. ಮತ್ತು ಲೋಕ ನಿಯಮನ ಶಕ್ತಿಯುಳ್ಳ ಮುನಿವರ್ಯನೆ! ನಿನಗೆ ನಮಸ್ಕಾರವು. ನಮಸ್ಕಾರಾದಿ ವಿನಯದಿಂದ ಕೂಡಿದ ನನ್ನನ್ನು ನಿನ್ನ ದರ್ಶನವನ್ನು ಪಡೆಯಲು ಬಂದಿರುವ ಜಮದಗ್ನಿ ಪುತ್ರನಾದ ರಾಮನೆಂದು ಅರಿಯಬೇಕೆಂದು ವಿಜ್ಞಾಪಿಸಿಕೊಂಡನು.

ಇತ್ಯುಕ್ತವಂತಂ ರಾಮಂ ತು ಉನ್ಮೀಲ್ಯ ನಯನೇ ಶನೈಃ ।
ದೃಷ್ಟ್ವಾ ಸ್ವಾಗತಮುಚ್ಚಾರ್ಯ ತಸ್ಮಾ ಆಸನಮಾದಿಶತ್ ॥ ೫೧ ॥

ಮಧುಪರ್ಕಂ ಸಮಾನೀಯ ಶಿಷ್ಯೇಣ ಮುನಿಪುಂಗವಃ ।
ದದೌ ಪಪ್ರಚ್ಛ ಕುಶಲಂ ತಪಸಶ್ಚ ಕುಲಸ್ಯ ಚ ॥ ೫೨ ॥

ಸ ಪೃಷ್ಟಸ್ತೇನ ವೈ ರಾಮೋ ಘಟೋದ್ಭವಮುವಾಚ ಹ ।
ಭವತ್ಸಂದರ್ಶನಾದೀಶ ಕುಶಲಂ ಮಮ ಸರ್ವತಃ ॥ ೫೩ ॥

ಕಿಂ ತ್ವೇಕಂ ಸಂಶಯಂ ಜಾತಂ ಛಿಂಧಿ ಸ್ವವಚನಾಮೃತೈಃ ।
ಮೃಗಶ್ಚೈಕೋ ಮಯಾ ದೃಷ್ಟೋ ಮಧ್ಯಮೇ ಪುಷ್ಕರೇ ವಿಭೋ ॥ ೫೪ ॥

ತೇನೋಕ್ತಮಖಿಲಂ ವೃತ್ತಂ ಮಮ ಭೂತಮನಾಗತಮ್ ।
ತಚ್ಛ್ರುತ್ವಾ ವಿಸ್ಮಯಾವಿಷ್ಟೋ ಭವಚ್ಛರಣಮಾಗತಃ ॥ ೫೫ ॥

---

೫೧. ರಾಮನ ವಿಜ್ಞಾಪನಾವಚನವನ್ನು ಲಾಲಿಸಿದ ಮುನಿಯು ಧ್ಯಾನದಿಂದ ಮೆಲ್ಲಗೆ ಕಣ್ಣುಗಳನ್ನು ತೆರೆದು ರಾಮನನ್ನು ನೋಡಿ ಅವನಿಗೆ ಸ್ವಾಗತವನ್ನು ಪ್ರಶ್ನಿಸಿ ಆಸನವನ್ನು ಕೊಟ್ಟನು.

೫೨. ಮುನೀಂದ್ರನು ಶಿಷ್ಯನಮೂಲಕ ರಾಮನಿಗೆ ಮಧುಪರ್ಕ ಪೂಜೆಯನ್ನು ಮಾಡಿ ರಾಮನ ವಂಶದಲ್ಲಿಯೂ ತಪೋನುಷ್ಠಾನದಲ್ಲಿಯೂ ಕ್ಷೇಮವನ್ನು ವಿಚಾರಿಸಿದನು.

೫೩. ಕುಶಲವನ್ನು ಪ್ರಶ್ನಿಸಲ್ಪಟ್ಟ ರಾಮನು ಉತ್ತರವಾಗಿ ಪ್ರಭುವೇ! ನಿನ್ನ ಸಂದರ್ಶನದ ಲಾಭದಿಂದ ನಾನು ಸರ್ವವಿಷಯಗಳಲ್ಲಿಯೂ ಕ್ಷೇಮದಿಂದಿರುವೆನೆಂದು ಹೇಳಿದನು.

೫೪. ಆದರೆ ನನಗೆ ಉಂಟಾಗಿರುವ ಒಂದು ಸಂಶಯವನ್ನು ತಮ್ಮ ವಚನಾಮೃತದಿಂದ ಹೋಗಲಾಡಿಸಬೇಕು. ನಾನು ಮಧ್ಯಮ ಪುಷ್ಕರದಲ್ಲಿ ಒಂದು ಜಿಂಕೆಯನ್ನು ನೋಡಿ ಬಂದಿರುವೆನು ಸ್ವಾಮಿ ;

೫೫. ಆ ಮೃಗವು ನನ್ನ ಭೂತ ಭಾವಿಗಳಾದ ಎಲ್ಲ ಸಮಾಚಾರಗಳನ್ನೂ ಹೇಳಿತು. ಅದನ್ನು ಕೇಳಿ ವಿಸ್ಮಿತನಾದ ನಾನು ನಿನ್ನನ್ನು ಶರಣ ಹೊಂದಿರುವೆನು.

ಪಾಹಿ ಮಾಂ ಕೃಪಯಾ ನಾಥ ಸಾಧಯಂತಂ ಮಹಾಮನುಮ್ ।
ಶಿವೇನ ದತ್ತಂ ಕವಚಂ ಮಮ ಸಾಧಯತೋ ಗುರೋ ॥ ೫೬ ॥

ಕೃಷ್ಣಸ್ಯ ಸಮತೀತಂ ತು ಸಾಧಿಕಂ ಹಿ ಶರಚ್ಛತಮ್ ।
ನ ಚ ಸಿದ್ಧಿಮವಾಪ್ನೋಽಹಂ ತನ್ಮೇ ತ್ವಂ ಕೃಪಯಾ ವದ ॥ ೫೭ ॥

ವಸಿಷ್ಠ ಉವಾಚ :—
ಏವಂ ಪ್ರಶ್ನಂ ಸಮಾಕರ್ಣ್ಯ ರಾಮಸ್ಯ ಸುಮಹಾತ್ಮನಃ ।
ಕ್ಷಣಂ ಧ್ಯಾತ್ವಾ ಮಹಾರಾಜ ಮೃಗೋಕ್ತಂ ಜ್ಞಾತವಾನ್ ಹೃದಾ॥ ೫೮ ॥

ಮೃಗಂ ಚಾಪಿ ಸಮಾಯಾತಂ ಮೃಗ್ಯಾ ಸಹ ನಿಜಾಶ್ರಮೇ ।
ಶ್ರೋತುಂ ಕೃಷ್ಣಾಮೃತಂ ಸ್ತೋತ್ರಂ ಸರ್ವಂ ತತ್ಕಾರಣಂ ಮುನಿಃ ॥
ವಿಚಾರ್ಯಾಶ್ವಾಸಯಾಮಾಸ ಭಾರ್ಗವಂ ಸ್ವವಚೋಽಮೃತೈಃ ॥ ೫೯ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ
ಪಂಚತ್ರಿಂಶತ್ತಮೋಽಧ್ಯಾಯಃ

---

೫೬-೫೭. ಪ್ರಭುವಾದ ಗುರುವೇ! ಶಿವನು ಉಪದೇಶಿಸಿರುವ ಶ್ರೀ ಕೃಷ್ಣನ ಮಹಾಮಂತ್ರವನ್ನೂ ಕವಚವನ್ನೂ ಸಾಧನಮಾಡುತ್ತಿರುವ ನನ್ನನ್ನು ಕಾಪಾಡು. ಹೀಗೆಯೇ ಮಂತ್ರಸಾಧನವನ್ನು ಮಾಡುತ್ತಲಿದ್ದ ನನಗೆ ನೂರು ವರ್ಷಗಳಿಗಿಂತಲೂ ಹೆಚ್ಚು ಕಾಲವು ಕಳೆದು ಹೋಗಿದೆ. ಆದರೂ ಇದುವರೆಗೂ ಸಿದ್ಧಿಯು ಆಗಿರುವುದಿಲ್ಲ. ಆದ್ದರಿಂದ ನೀನು ನನ್ನಲ್ಲಿ ಕರುಣೆಯಿಟ್ಟು ಹೇಳುವವನಾಗು.

೫೮-೫೯. ವಸಿಷ್ಠ ಮುನಿಯು ಹೇಳಿದನು:—ಮಹಾರಾಜನೆ! ಮಹಾತ್ಮನಾದ ಪರಶುರಾಮನ ಈ ಪ್ರಶ್ನವನ್ನು ಕೇಳಿ ಅಗಸ್ತ್ಯ ಮುನಿಯು ಕ್ಷಣಕಾಲ ಧ್ಯಾನ ದೃಷ್ಟಿಯಿಂದ ಚಿಂತಿಸಿ ಮೃಗವು ಹೇಳಿದ ಸರ್ವ ವಿಷಯವನ್ನೂ ತನ್ನ ಆಶ್ರಮಕ್ಕೆ ಕೃಷ್ಣಾಮೃತಸ್ತೋತ್ರವನ್ನು ಕೇಳಲು ಮೃಗಿಯೊಡನೆ ಮೃಗವು ಬಂದಿರುವುದನ್ನೂ ಇದೆಲ್ಲಕ್ಕೂ ಇದ್ದ ವಾಸ್ತವವಾದ ಕಾರಣವನ್ನೂ ಮನಸ್ಸಿನಲ್ಲಿ ತಿಳಿದುಕೊಂಡನು. ಮತ್ತು ಎಲ್ಲವನ್ನೂ ವಿಚಾರಮಾಡಿಕೊಂಡು ಅಮೃತಸಮಾನವಾದ ತನ್ನ ವಚನಗಳಿಂದ ಭಾರ್ಗವರಾಮನನ್ನು ಸಂತೈಸಿದನು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಮೂವತ್ತೈದನೆಯ
ಅಧ್ಯಾಯವು ಸಮಾಪ್ತವು.

# ಷಟ್ತ್ರಿಂಶತ್ತಮೋಽಧ್ಯಾಯಃ

**ವಸಿಷ್ಠ ಉವಾಚ :—**

**ಅವಗತ್ಯ ಸ ವೈ ಸರ್ವಂ ಕಾರಣಂ ಪ್ರೀತಮಾನಸಃ ।**
**ಉವಾಚ ಭಾರ್ಗವಂ ರಾಮಮಗಸ್ತ್ಯಃ ಕುಂಭಸಂಭವಃ ॥ ೧ ॥**

**ಅಗಸ್ತ್ಯ ಉವಾಚ :—**

**ಶೃಣು ರಾಮ ಮಹಾಭಾಗ ಕಥಯಾಮಿ ಹಿತಂ ತವ ।**
**ಮಂತ್ರಸ್ಯ ಸಿದ್ಧಿಂ ಯೇನ ತ್ವಂ ಶೀಘ್ರಮೇವ ಸಮಾಪ್ಸ್ಯಯಾಃ ॥ ೨ ॥**

**ಭಕ್ತೇಸ್ತು ಲಕ್ಷಣಂ ಜ್ಞಾತ್ವಾ ತ್ರಿವಿಧಾಯಾ ಮಹಾಮತೇ ।**
**ಯೋ ಯತೇತ ನರಸ್ತಸ್ಯ ಸಿದ್ಧಿರ್ಭವತಿ ಸತ್ವರಮ್ ॥ ೩ ॥**

**ಏಕದಾಹಮನುಪ್ರಾಪ್ತೋಽನಂತದರ್ಶನಕಾಂಕ್ಷಯಾ ।**
**ಪಾತಾಲಂ ನಾಗರಾಜೇಂದ್ರೈಃ ಶೋಭಿತಂ ಪರಯಾ ಮುದಾ ॥ ೪ ॥**

---

೧. ವಸಿಷ್ಠ ಮುನಿಯು ಸಗರನಿಗೆ ಇಂತೆಂದನು :—ಗಡಿಗೆಯಲ್ಲಿ ಜನಿಸಿದ ಆ ಅಗಸ್ತ್ಯ ಮುನಿಯು ಸಮಸ್ತ ಕಾರಣಗಳನ್ನೂ ತಿಳಿದುಕೊಂಡು ಸಂತುಷ್ಟ ಚಿತ್ತನಾಗಿ ಭಾರ್ಗವರಾಮನಿಗೆ ಈ ರೀತಿಯಾಗಿ ಹೇಳಿದನು.

೨. ಅಗಸ್ತ್ಯ ಮುನಿಯು ರಾಮನಿಗೆ ಹೇಳಿದನು, ಮಹಾಮಹಿಮೆಯುಳ್ಳ ರಾಮನೇ ! ಕೇಳು, ನಾನು ನಿನಗೆ ಹಿತವನ್ನು ಉಪದೇಶಿಸುವೆನು, ಅದರಿಂದ ನೀನು ಶೀಘ್ರದಲ್ಲಿಯೇ ಮಂತ್ರದ ಸಿದ್ಧಿಯನ್ನು ಹೊಂದುವವನಾಗುತ್ತೀ.

೩. ಮಹಾಬುದ್ಧಿಶಾಲಿಯೆ ! ಯಾವ ಮನುಷ್ಯನು ಮೂರು ವಿಧವಾದ ಭಕ್ತಿಯ ಲಕ್ಷಣವನ್ನು ತಿಳಿದು ಯತ್ನಿಸುವನೋ ಆ ಮನುಷ್ಯನಿಗೆ ಬೇಗನೇ ಮಂತ್ರಸಿದ್ಧಿಯು ದೊರಕುವುದು.

೪. ನಾನು ಒಂದಾನೊಂದು ಸಮಯದಲ್ಲಿ ಭಾರಿ ಭಾರಿಯಾದ ಸರ್ಪಗಳಿಂದ ಶೋಭಿಸಲ್ಪಟ್ಟಿರುವ ಪಾತಾಳಲೋಕಕ್ಕೆ ಅನಂತನನ್ನು ನೋಡಬೇಕೆಂಬ ಕುತೂಹಲ ದಿಂದ ಪರಮ ಸಂತೋಷದಿಂದ ಹೋಗಿದ್ದೆನು.

ತತ್ರ ದೃಷ್ಟಾ ಮಹಾಭಾಗ ಮಯಾ ಸಿದ್ಧಾಃ ಸಮಂತತಃ ।
ಸನಕಾದ್ಯಾ ನಾ ದಶ್ಚ ಗೌತಮೋ ಜಾಜಲಿಃ ಕ್ರತುಃ ॥ ೫ ॥

ಋಭುರ್ಹಂಸೋ ರುಣಿಶ್ಚೈವ ವಾಲ್ಮೀಕಿಃ ಶಕ್ತಿರಾಸುರಿಃ ।
ಏತೇ ನ್ಯೇ ಚ ಮಹಾಸಿದ್ಧಾ ವಾತ್ಸ್ಯಾಯನಮುಖಾ ದ್ವಿಜ ॥ ೬ ॥

ಉಪಾಸತ ಹ್ಯುಪಾಸೀನಾ ಜ್ಞಾನಾರ್ಥಂ ಫಣಿನಾಯಕಮ್ ।
ತಂ ನಮಸ್ಕೃತ್ಯ ನಾಗೇಂದ್ರೈಃ ಸಹ ಸಿದ್ಧೈರ್ಮಹಾತ್ಮಭಿಃ ॥ ೭ ॥

ಉಪವಿಷ್ಟಃ ಕಥಾಸ್ತತ್ರ ಶೃಣ್ವಾನೋ ವೈಷ್ಣವೀರ್ಮುದಾ ।
ಯೇಯಂ ಭೂಮಿರ್ಮಹಾಭಾಗ ಭೂತಧಾತ್ರೀಸ್ವರೂಪಿಣೀ ॥ ೮ ॥

ನಿವಿಷ್ಟಾ ಪುರತಸ್ತಸ್ಯ ಶೃಣ್ವಂತೀ ತಾಃ ಕಥಾಃ ಸದಾ ।
ಯದ್ಯತ್ಪೃಚ್ಛತಿ ಸಾ ಭೂಮಿಃ ಶೇಷಂ ಸಾಕ್ಷಾನ್ಮಹೀಧರಮ್ ॥ ೯ ॥

---

೫-೬. ಮಹಾಭಾಗನಾದ ದ್ವಿಜನೆ! ಅಲ್ಲಿ ನಾನು ಸುತ್ತಲೂ ಕುಳಿತುಕೊಂಡು ಇರುವ ಸನಕಾದಿಗಳಾದ ನಾರದ, ಗೌತಮ, ಜಾಜಲಿ, ಕ್ರತು, ಋಭು, ಹಂಸ, ಅರುಣಿ, ವಾಲ್ಮೀಕಿ, ಶಕ್ತಿ, ಆಸುರಿ, ಮುಂತಾದ ಅನೇಕ ಸಿದ್ಧರನ್ನೂ ವಾತ್ಸ್ಯಾಯನರೇ ಮುಂತಾದ ಮಹಾಸಿದ್ಧರನ್ನೂ ನೋಡಿದೆನು.

೭. ಅವರೆಲ್ಲರೂ ಜ್ಞಾನವನ್ನು ಸಂಪಾದಿಸಲು ಸುತ್ತಲೂ ಕುಳಿತುಕೊಂಡು ಸರ್ಪರಾಜನನ್ನು ಸೇವಿಸುವವರಾಗಿದ್ದರು. ನಾನು ಸರ್ಪರಾಜನನ್ನು ನಮಸ್ಕರಿಸಿ ಅಲ್ಲಿದ್ದ ಮಹಾ ಸರ್ಪಗಳು, ಸಿದ್ಧರು, ಮಹಾತ್ಮರು, ಇವರುಗಳೊಂದಿಗೆ ಸಂತೋಷವಾಗಿ ಅಲ್ಲಿ ನಡೆಯುತ್ತಿದ್ದ ವಿಷ್ಣು ಕಥೆಗಳ ಪ್ರಸ್ತಾವವನ್ನು ಶ್ರವಣ ಮಾಡುತ್ತ ಕುಳಿತುಕೊಂಡೆನು.

೮. ಸಮಸ್ತ ಪ್ರಾಣಿಗಳನ್ನೂ ಧರಿಸಿ ಭೂತಧಾತ್ರೀ ಎಂದೆನಿಸಿರುವ ಭೂಮಿದೇವಿಯು ಸರ್ವ ಕಾಲದಲ್ಲಿಯೂ ಆ ಕಥೆಗಳನ್ನು ಕೇಳುತ್ತಾ ಅನಂತನ ಎದುರಿಗೆ ಕುಳಿತಿರುವಳು.

೯. ಸಾಕ್ಷಾತ್ತಾಗಿ ಭೂಮಿಯನ್ನು ತಲೆಯಲ್ಲಿ ಹೊತ್ತಿರುವ ಶೇಷನನ್ನು ಕುರಿತು ಭೂಮಿದೇವಿಯು ಮಾಡಿರುವ ಪ್ರಶ್ನೆಗಳನ್ನೆಲ್ಲ ಭೂಮಿದೇವಿಯ ಅನುಗ್ರಹದಿಂದ ಅಲ್ಲಿದ್ದ ಸಮಸ್ತ ಮಹರ್ಷಿಗಳೂ ಕೇಳುತ್ತಲಿದ್ದರು

ಶೃಣ್ವಂತಿ ಋಷಯಃ ಸರ್ವೇ ತತ್ರಸ್ಥಾಸ್ತದನುಗ್ರಹಾತ್ ।
ಮಯಾ ತತ್ರ ಶ್ರುತಂ ವತ್ಸ ಕೃಷ್ಣಪ್ರೇಮಾಮೃತಂ ಶುಭಮ್ ॥ ೧೦ ॥

ಸ್ತೋತ್ರಂ ತತ್ತೇ ಪ್ರವಕ್ಷ್ಯಾಮಿ ಯಸ್ಯಾರ್ಥೇ ತ್ವಮಿಹಾಗತಃ ।
ವಾರಾಹಾದ್ಯವತಾರಾಣಾಂ ಚರಿತಂ ಪಾಪನಾಶನಮ್ ॥ ೧೧ ॥

ಸುಖದಂ ಮೋಕ್ಷದಂ ಚೈವ ಜ್ಞಾನವಿಜ್ಞಾನಕಾರಣಮ್ ।
ಶ್ರುತ್ವಾ ಸರ್ವಂ ಧರಾ ವತ್ಸ ಪ್ರಹೃಷ್ಟಾ ತಂ ಧರಾಧರಮ್ ॥ ೧೨ ॥

ಉವಾಚ ಪ್ರಣತಾ ಭೂಯೋ ಜ್ಞಾತುಂ ಕೃಷ್ಣವಿಚೇಷ್ಟಿತಮ್ ।
ಅಲಂಕೃತಂ ಜನ್ಮ ಪುಂಸಾಮಪಿ ನಂದವ್ರಜೌಕಸಾಮ್ ॥ ೧೩ ॥

ಧರಣ್ಯುವಾಚ :—

ತಸ್ಯ ದೇವಸ್ಯ ಕೃಷ್ಣಸ್ಯ ಲೀಲಾವಿಗ್ರಹಧಾರಿಣಃ ।
ಜಯೋಪಾಧಿನಿಯುಕ್ತಾನಿ ಸಂತಿ ನಾಮಾನ್ಯನೇಕಶಃ ॥ ೧೪ ॥

---

೧೦. ಮಗನೆ! ಮಂಗಳಕರವಾದ ಕೃಷ್ಣಪ್ರೇಮಾಮೃತವೆಂಬ ಸ್ತೋತ್ರವನ್ನು ನಾನು ಅಲ್ಲಿ ಕೇಳಿರುವೆನು. ಯಾವ ಸ್ತೋತ್ರವನ್ನು ಕೇಳಲು ನೀನು ಇಲ್ಲಿಗೆ ಬಂದು ಇರುವೆಯೋ ಆ ಕೃಷ್ಣಪ್ರೇಮಾಮೃತ ಸ್ತೋತ್ರವನ್ನು ನಿನಗೆ ಹೇಳುವೆನು.

೧೧-೧೨. ವತ್ಸನೆ! ಭೂಮಿದೇವಿಯು ಪಾಪವನ್ನು ಹೋಗಲಾಡಿಸಿ ಸುಖ-ಮೋಕ್ಷ-ಜ್ಞಾನ-ವಿಜ್ಞಾನಾದಿ ಫಲಗಳನ್ನು ಕೊಡುವ ವಾರಾಹಾದ್ಯವತಾರ ಚರಿತ್ರೆಯನ್ನು ಸಮಗ್ರವಾಗಿ ಕೇಳಿ ಸಂತುಷ್ಟಳಾಗಿ ಮತ್ತೆ ಕೃಷ್ಣಾವತಾರ ಚರಿತ್ರೆಯನ್ನು ಕೇಳಬೇಕೆಂಬ ಆಶೆಯಿಂದ ಆ ಸರ್ಪರಾಜನನ್ನು ನಮಸ್ಕರಿಸಿ ಕೇಳಿಕೊಂಡಳು.

೧೩-೧೪. ಭೂಮಿದೇವಿಯು ಹೀಗೆಂದಳು :—ಶ್ರೀ ಕೃಷ್ಣನು ಜನ್ಮವೆತ್ತಿದ ನಂದಗೋಕುಲದಲ್ಲಿ ವಾಸಮಾಡಿದ ಜನಗಳ ಜನ್ಮವೇ ಅಲಂಕಾರಪ್ರಾಯವೂ ಪವಿತ್ರವೂ ಆದುದು. ಅದೇ ಗೋಕುಲದಲ್ಲಿ ಲೀಲಾಮಾನುಷಶರೀರವನ್ನು ಧರಿಸಿದ ಶ್ರೀ ಕೃಷ್ಣದೇವನ ಜಯಚಿಹ್ನಾಂಕಿತಗಳಾದ ಅನೇಕ ಪವಿತ್ರ ನಾಮಗಳು ಇವೆಯಷ್ಟೆ.

ತೇಷು ನಾಮಾನಿ ಮುಖ್ಯಾನಿ ಶ್ರೋತುಕಾಮಾ ಚಿರಾದಹಮ್ ।
ತತ್ತಾನಿ ಬ್ರೂಹಿ ನಾಮಾನಿ ವಾಸುದೇವಸ್ಯ ವಾಸುಕೇ ॥ ೧೫ ॥

ಶೇಷ ಉವಾಚ :—

ನಾತಃ ಪರತರಂ ಪುಣ್ಯಂ ತ್ರಿಷು ಲೋಕೇಷು ವಿದ್ಯತೇ ।
ವಸುಂಧರೇ ವರಾರೊಹೇ ಜನಾನಾಮುಸ್ತಿ ಭುಕ್ತಿದಮ್ ॥ ೧೬ ॥

ಸರ್ವಮಂಗಲಮೂರ್ಧನ್ಯಮಣಿಮಾದ್ಯಷ್ಟಸಿದ್ಧಿದಮ್ ।
ಮಹಾಪಾತಕಕೋಟಿಘ್ನಂ ಸರ್ವತೀರ್ಥಫಲಪ್ರದಮ್ ॥ ೧೭ ॥

ಸಮಸ್ತಜಪಯಜ್ಞಾನಾಂ ಫಲದಂ ಪಾಪನಾಶನಮ್ ।
ಶೃಣು ದೇವಿ ಪ್ರವಕ್ಷ್ಯಾಮಿ ನಾಮ್ನಾಮಷ್ಟೋತ್ತರಂ ಶತಮ್ ॥ ೧೮ ॥

ಸಹಸ್ರನಾಮ್ನಾಂ ಪುಣ್ಯಾನಾಂ ತ್ರಿರಾವೃತ್ತ್ಯಾ ತು ಯತ್ಫಲಮ್ ।
ಏಕಾವೃತ್ತ್ಯಾ ತು ಕೃಷ್ಣಸ್ಯ ನಾಮೈಕಂ ತತ್ಪ್ರಯಚ್ಛತಿ ॥ ೧೯ ॥

---

೧೫. ಆ ಹೆಸರುಗಳಲ್ಲಿ ಅತಿಮುಖ್ಯವಾದ ಹೆಸರುಗಳನ್ನು ಕೇಳಲು ನಾನು ಬಹುಕಾಲದಿಂದ ಇಷ್ಟವುಳ್ಳವಳಾಗಿರುವೆನು. ಆದುದರಿಂದ ವಾಸುಕಿಯೇ! ಆ ಪವಿತ್ರ ನಾಮಗಳನ್ನು ನೀನು ನನಗೆ ಹೇಳು, ಮೂರು ಲೋಕಗಳಲ್ಲಿಯೂ ಅದಕ್ಕಿಂತಲೂ ಹೆಚ್ಚಿನ ಪವಿತ್ರವಾದ ವಸ್ತುವು ಮತ್ತೊಂದಿಲ್ಲ.

೧೬, ೧೭, ೧೮. ಆದಿಶೇಷನು ಮುಂದುವರಿಸಿ ಹೇಳಿದನು :—ನಾರೀಮಣಿಯಾದ ಭೂಮಿದೇವಿಯೆ! ಜನಗಳಿಗೆ ಸಕಲ ಭೋಗಗಳನ್ನು ಕೊಡುವುದೂ, ಎಲ್ಲ ಮಂಗಲ ಕರಗಳಿಗೂ ಮೇಲಾದುದೂ, ಅಣಿಮಾ ಮುಂತಾದ ಅಷ್ಟೈಶ್ವರ್ಯ ಸಿದ್ಧಿಗಳನ್ನು ಕೊಡುವುದೂ, ಕೋಟಿಗಟ್ಟಲೆಯಾದ ಮಹಾ ಪಾತಕಗಳನ್ನು ನಾಶಮಾಡುವುದೂ ಸರ್ವತೀರ್ಥಯಾತ್ರಾ ಫಲವನ್ನು ಅನುಗ್ರಹಿಸುವುದೂ, ಸಮಸ್ತ ಜಪ-ಯಜ್ಞಾದಿ ಪುಣ್ಯ ಕರ್ಮಗಳ ಫಲವನ್ನು ಕೊಡುವುದೂ ಸಕಲ ಪಾಪಗಳನ್ನು ಭಂಗಪಡಿಸುವುದೂ ಆದ ಶ್ರೀ ಕೃಷ್ಣಪರಮಾತ್ಮನ ಅಷ್ಟೋತ್ತರ ಶತನಾಮ ಸ್ತೋತ್ರವಿರುವುದು. ಅದನ್ನು ಹೇಳುವೆನು, ಕೇಳು.

೧೯. ಪವಿತ್ರವಾದ ಸಹಸ್ರನಾಮಗಳನ್ನು ಮೂರು ಸಲ ಆವೃತ್ತಿಮಾಡಿದ್ದರಿಂದ ಹುಟ್ಟುವ ಫಲವನ್ನು ಈ ಕೃಷ್ಣಾಷ್ಟೋತ್ತರ ನಾಮಗಳಲ್ಲಿ ಒಂದು ನಾಮದ ಒಂದು ಸಲ ಮಾತ್ರ ಆವೃತ್ತಿಯೂ ಕೊಡುವುದಾಗಿದೆ. ಆದ್ದರಿಂದ ಪಾಪಗಳನ್ನು ದೂರಮಾಡುವ ಈ ಸ್ತೋತ್ರವು ಬಹಳ ಪವಿತ್ರವಾದುದು.

ತಸ್ಮಾತ್ಪುಣ್ಯತರಂ ಚೈತತ್ ಸ್ತೋತ್ರಂ ಪಾತಕನಾಶನಮ್ ।
ನಾಮ್ನಾಮಷ್ಟೋತ್ತರಶತಸ್ಯಾಹಮೇವ ಋಷಿಃ ಪ್ರಿಯೇ ॥ ೨೦ ॥

ಛಂದೋಽನುಷ್ಟುಪ್ ದೇವತಾ ತು ಯೋಗಃ ಕೃಷ್ಣಪ್ರಿಯಾವಹಃ ।
ಶ್ರೀ ಕೃಷ್ಣಃ ಕಮಲಾನಾಥೋ ವಾಸುದೇವಃ ಸನಾತನಃ ॥ ೨೧ ॥

ವಸುದೇವಾತ್ಮಜಃ ಪುಣ್ಯೋ ಲೀಲಾಮಾನುಷವಿಗ್ರಹಃ ।
ಶ್ರೀವತ್ಸಕೌಸ್ತುಭಧರೋ ಯಶೋದಾವತ್ಸಲೋ ಹರಿಃ ॥ ೨೨ ॥

ಚತುರ್ಭುಜಾತ್ತಚಕ್ರಾಸಿಗದಾಶಂಖಾದ್ಯುದಾಯುಧಃ ।
ದೇವಕೀನಂದನಃ ಶ್ರೀಶೋ ನಂದಗೋಪಪ್ರಿಯಾತ್ಮಜಃ ॥ ೨೩ ॥

ಯಮುನಾವೇಗಸಂಹಾರೀ ಬಲಭದ್ರಪ್ರಿಯಾನುಜಃ ।
ಪೂತನಾಜೀವಿತಹರಃ ಶಕಟಾಸುರಭಂಜನಃ ॥ ೨೪ ॥

---

೨೦. ಪ್ರಿಯಳಾದ ಭೂಮಿಯೇ! ಮುಂದೆ ಹೇಳುವ ಅಷ್ಟೋತ್ತರ ಶತನಾಮ ಸ್ತೋತ್ರಕ್ಕೆ ಶೇಷನಾದ ನಾನೇ ಋಷಿಯು, ಅನುಷ್ಟುಪ್ ಛಂದಸ್ಸು, ಶ್ರೀ ಕೃಷ್ಣನು ದೇವತೆಯು, ಶ್ರೀಕೃಷ್ಣ ದೇವತಾ ಪ್ರೀತಿಗಾಗಿ ವಿನಿಯೋಗವು.

೨೧. ಇನ್ನು ಮುಂದೆ ಶ್ರೀಕೃಷ್ಣನ ಒಂದುನೂರು ಎಂಟು ನಾಮಗಳು ಹೇಳಲ್ಪಟ್ಟಿವೆ. ಅವುಗಳೆಲ್ಲವೂ ಶ್ರೀಕೃಷ್ಣಪರಮಾತ್ಮನಲ್ಲಿ ಅನ್ವಯಿಸುವ ಚರಿತ್ರವನ್ನೂ ಗುಣಗಳನ್ನೂ ವರ್ಣಿಸುವುಗಳಾಗಿವೆ. ಆ ನಾಮಗಳ ಅರ್ಥ ವಿವರಣೆಯನ್ನು ಈ ರೀತಿಯಾಗಿ ತಿಳಿಯಬೇಕು. ಭಕ್ತರ ಸಮಸ್ತಪಾಪಗಳನ್ನು ಸೆಳೆಯುವವನು, ಲಕ್ಷ್ಮೀಪತಿಯು, ಸಕಲ ಲೋಕಸ್ಥಿತಿಗೆ ಕಾರಣನಾದ ಪ್ರಕಾಶಸ್ವರೂಪನು, ಅನಾದಿಯು.

೨೨. ವಸುದೇವನ ಮಗನು, ಪವಿತ್ರಾತ್ಮನು, ಲೀಲೆಯಿಂದ ಮಾನುಷವಿಗ್ರಹವನ್ನು ಧರಿಸಿದವನು, ಶ್ರೀವತ್ಸವೆಂಬ ಮಚ್ಚೆಯನ್ನೂ ಕೌಸ್ತುಭ ರತ್ನವನ್ನೂ ಧರಿಸಿದವನು, ಯಶೋದೆಯ ಅಪತ್ಯಸ್ನೇಹಕ್ಕೆ ಪಾತ್ರನು, ಸರ್ವಾನಿಷ್ಟಗಳನ್ನು ಪರಿಹರಿಸುವವನು.

೨೩. ಚಕ್ರ, ಖಡ್ಗ, ಗದೆ, ಶಂಖವೆಂಬ ಆಯುಧಗಳನ್ನು ನಾಲ್ಕು ತೋಳುಗಳಿಂದ ಎತ್ತಿಹಿಡಿದವನು, ದೇವಕಿಯ ಪುತ್ರನು, ಸಂಪತ್ತಿಗೆ ಪ್ರಭುವು, ನಂದಗೋಪನ ಪ್ರಿಯಪುತ್ರನು.

೨೪. ಯಮುನಾನದಿಯ ವೇಗವನ್ನು ತಡೆದವನು, ಬಲರಾಮನ ಪ್ರಿಯ ಸಹೋದರನು, ಪೂತನೆಯೆಂಬ ರಕ್ಕಸಿಯ ಪ್ರಾಣವನ್ನು ಹೀರಿದವನು, ಶಕಟಾಸುರನನ್ನು ಸಂಹರಿಸಿದವನು.

ನಂದವ್ರಜಜನಾನಂದೀ ಸಚ್ಚಿದಾನಂದವಿಗ್ರಹಃ ।
ನವನೀತವಿಲಿಪ್ತಾಂಗೋ ನವನೀತನಟೋಽನಘಃ ॥ ೨೫ ॥

ನವನೀತಲವಾಹಾರೀ ಮುಚುಕುಂದಪ್ರಸಾದಕೃತ್ ।
ಷೋಡಶಸ್ತ್ರೀಸಹಸ್ರೇಶಸ್ತ್ರಿಭಂಗೀ ಮಧುರಾಕೃತಿಃ ॥ ೨೬ ॥

ಶುಕವಾಗಮೃತಾಬ್ಧೀಂದುರ್ಗೋವಿಂದೋ ಗೋವಿದಾಂಪತಿಃ ।
ವತ್ಸಪಾಲನಸಂಚಾರೀ ಧೇನುಕಾಸುರಮರ್ದನಃ ॥ ೨೭ ॥

ತೃಣೀಕೃತತೃಣಾವರ್ತೋ ಯಮಲಾರ್ಜುನಭಂಜನಃ ।
ಉತ್ತಾಲತಾಲಭೇತ್ತಾ ಚ ತಮಾಲಶ್ಯಾಮಲಾಕೃತಿಃ ॥ ೨೮ ॥

ಗೋಪಗೋಪೀಶ್ವರೋ ಯೋಗೀ ಸೂರ್ಯಕೋಟಿಸಮಪ್ರಭಃ ।
ಇಲಾಪತಿಃ ಪರಂ ಜ್ಯೋತಿರ್ಯಾದವೇಂದ್ರೋ ಯದೂದ್ವಹಃ ॥ ೨೯ ॥

---

೨೫. ನಂದಗೋಕುಲದ ಜನಗಳಿಗೆ ಆನಂದವನ್ನು ಕೊಡುವವನು, ಸಚ್ಚಿದಾನಂದಾತ್ಮಕನು, ಬೆಣ್ಣೆಯಿಂದ ಲೇಪಿಸಲ್ಪಟ್ಟ ಸಕಲಾಂಗಗಳುಳ್ಳವನು, ಬೆಣ್ಣೆಯ ನಿಮಿತ್ತವಾಗಿ ನಾಟ್ಯಮಾಡುವವನು, ಪಾಪ ಕಳಂಕಶೂನ್ಯನು.

೨೬. ಬೆಣ್ಣೆಯ ಮುದ್ದೆಯನ್ನು ಆಹಾರಮಾಡುವವನು, ಮುಚುಕುಂದ ಭಕ್ತನಲ್ಲಿ ಅನುಗ್ರಹವಿಟ್ಟವನು, ಹದಿನಾರುಸಾವಿರ ಗೋಪಿಕಾಸ್ತ್ರೀಯರ ಪತಿಯು, ತ್ರಿವಳೀ ಭಂಗಿಗಳುಳ್ಳವನು, ಮಧುರವಾದ ಆಕಾರವುಳ್ಳವನು.

೨೭. ಗಿಣಿಯಂತೆ ಮುದ್ದಾದ ಮಾತುಗಳ ಅಮೃತಸಮುದ್ರಕ್ಕೆ ಚಂದ್ರನಂತಿರುವವನು, ಗೋಪಾಲಕನು, ಗೋಪಾಲಕರಿಗೆಲ್ಲ ಪತಿಯು, ಎಳೆಯಕರುಗಳನ್ನು ರಕ್ಷಿಸುತ್ತ ಸಂಚಾರಮಾಡುವವನು, ಧೇನುಕಾಸುರನನ್ನು ಮರ್ದಿಸಿದವನು.

೨೮. ತೃಣಾವರ್ತಾಸುರನನ್ನು ತೃಣಪ್ರಾಯಮಾಡಿದವನು, ಯಮಳರಾಗಿ ಹುಟ್ಟಿದ ಅರ್ಜುನ ವೃಕ್ಷಗಳನ್ನು ಭಂಗಮಾಡಿದವನು, ಎತ್ತರವಾಗಿ ಬೆಳೆದ ತಾಲವೃಕ್ಷಗಳನ್ನು ಭೇದಿಸಿದವನು, ತಮಾಲ ವೃಕ್ಷದಂತೆ ಶ್ಯಾಮಲಕಾಂತಿಯ ಆಕಾರವುಳ್ಳವನು.

೨೯. ಗೋಪ-ಗೋಪಿಯರಿಗೆ ಈಶ್ವರನು, ಕೋಟಿಸೂರ್ಯರಿಗೆ ಸಮಾನವಾದ ತೇಜಸ್ಸುಳ್ಳವನು, ಇಲಾದೇವಿಯ ಪತಿಯು, ಪರಂಜ್ಯೋತಿರೂಪನು, ಯಾದವ ಜನಾಧಿಪತಿಯು, ಯದುಗಳನ್ನು ಮೇಲಕ್ಕೆ ತಂದವನು.

**ವನಮಾಲೀ ಪೀತವಾಸಾಃ ಪಾರಿಜಾತಾಪಹಾರಕಃ ।**
**ಗೋವರ್ಧನಾಚಲೋದ್ಧರ್ತಾ ಗೋಪಾಲಃ ಸರ್ವಪಾಲಕಃ ॥ ೩೦ ॥**

**ಅಜೋ ನಿರಂಜನಃ ಕಾಮಜನಕಃ ಕಂಜಲೋಚನಃ ।**
**ಮಧುಹಾ ಮಧುರಾನಾಥೋ ದ್ವಾರಕಾನಾಯಕೋ ಬಲೀ ॥ ೩೧ ॥**

**ವೃಂದಾವನಾಂತಸಂಚಾರೀ ತುಲಸೀದಾಮಭೂಷಣಃ ।**
**ಸ್ಯಮಂತಕಮಣೇರ್ಹರ್ತಾ ನರನಾರಾಯಣಾತ್ಮಕಃ ॥ ೩೨ ॥**

**ಕುಬ್ಜಾ ಕೃಷ್ಣಾಂಬರಧರೋ ಮಾಯೀ ಪರಮಪೂರುಷಃ ।**
**ಮುಷ್ಟಿಕಾಸುರಚಾಣೂರಮಲ್ಲಯುದ್ಧವಿಶಾರದಃ ॥ ೩೩ ॥**

**ಸಂಸಾರವೈರೀ ಕಂಸಾರಿರ್ಮುರಾರಿರ್ನರಕಾಂತಕಃ ।**
**ಅನಾದಿಬ್ರಹ್ಮಚಾರೀ ಚ ಕೃಷ್ಣಾವ್ಯಸನಕರ್ಷಕಃ ॥ ೩೪ ॥**

---

೩೦. ವನಮಾಲೆಯೆಂಬ ಪುಷ್ಪಮಾಲಿಕೆಯನ್ನು ಧರಿಸಿದವನು, ಪೀತಾಂಬರವನ್ನುಟ್ಟವನು, ಪಾರಿಜಾತವೃಕ್ಷವನ್ನು ಸ್ವರ್ಗದಿಂದ ಅಪಹರಿಸಿದವನು, ಗೋವರ್ಧನ ಪರ್ವತವನ್ನು ಎತ್ತಿದವನು, ಗೋವುಗಳ ರಕ್ಷಕನು, ಸರ್ವರನ್ನೂ ಪಾಲಿಸುವವನು.

೩೧. ಜನ್ಮರಹಿತನು, ನಿರ್ದೋಷನು, ಕಾಮನ ಪಿತನು, ಕಮಲದಂತೆ ಸುಂದರವಾದ ನೇತ್ರಗಳುಳ್ಳವನು, ಮಧುರಾಕ್ಷಸನನ್ನು ಕೊಂದವನು, ಮಧುರಾಪುರಕ್ಕೆ ರಾಜನು, ದ್ವಾರಕಾಪುರಿಗೆ ಪತಿಯು, ಬಲಿಷ್ಠನು.

೩೨. ವೃಂದಾವನ ಮಧ್ಯದಲ್ಲಿ ಸಂಚರಿಸುವವನು, ತುಲಸೀಮಾಲಿಕೆಯ ಅಲಂಕಾರವನ್ನು ಧರಿಸಿದವನು, ಸ್ಯಮಂತಕಮಣಿಯನ್ನು ಅಪಹರಿಸಿದವನು. ನರ ಮತ್ತು ನಾರಾಯಣ ಮುನಿಸ್ವರೂಪನು.

೩೩. ಕುಬ್ಜೆಯಿಂದ ಸೆಳೆಯಲ್ಪಟ್ಟ ವಸ್ತ್ರವುಳ್ಳವನು, ಮಾಯಾವಿಯು, ಪರಮ ಪುರುಷನು, ಮುಷ್ಟಿಕ-ಚಾಣೂರರೆಂಬ ಅಸುರರೊಡನೆ ದ್ವಂದ್ವ ಯುದ್ಧ ಮಾಡುವುದರಲ್ಲಿ ನಿಪುಣನು.

೩೪. ಸಂಸಾರಕ್ಕೆ ವೈರಿಯು, ಕಂಸನ ಶತ್ರುವು, ಮುರಾಸುರನ ದ್ವೇಷಿಯು, ನರಕಾಸುರನನ್ನು ಕೊಂದವನು, ಅನಾದಿಯು, ಬ್ರಹ್ಮಚಾರಿಯು, ದ್ರೌಪದಿಗೆ ಸಂಭವಿಸಿದ ವ್ಯಸನವನ್ನು ಉದ್ಧರಿಸಿದವನು.

ಶಿಶುಪಾಲಶಿರಶ್ಛೇತ್ತಾ ದುರ್ಯೋಧನಕುಲಾಂತಕೃತ್ ।
ವಿದುರಾಕ್ರೂರವರದೋ ವಿಶ್ವರೂಪಪ್ರದರ್ಶಕಃ ॥ ೩೫ ॥

ಸತ್ಯವಾಕ್ ಸತ್ಯಸಂಕಲ್ಪಃ ಸತ್ಯಭಾಮಾರತೋ ಜಯೀ ।
ಸುಭದ್ರಾಪೂರ್ವಜೋ ವಿಷ್ಣುರ್ಭೀಷ್ಮಮುಕ್ತಿಪ್ರದಾಯಕಃ ॥ ೩೬ ॥

ಜಗದ್ಗುರುರ್ಜಗನ್ನಾಥೋ ವೇಣುವಾದ್ಯವಿಶಾರದಃ ।
ವೃಷಭಾಸುರವಿಧ್ವಂಸೀ ಬಕಾರಿರ್ಬಾಣಬಾಹುಕೃತ್ ॥ ೩೭ ॥

ಯುಧಿಷ್ಠಿರಪ್ರತಿಷ್ಠಾತಾ ಬರ್ಹಿಬರ್ಹಾವತಂಸಕಃ ।
ಪಾರ್ಥಸಾರಥಿರವ್ಯಕ್ತೋ ಗೀತಾಮೃತಮಹೋದಧಿಃ ॥ ೩೮ ॥

ಕಾಲೀಯಫಣಿಮಾಣಿಕ್ಯರಂಜಿತಶ್ರೀಪದಾಂಬುಜಃ ।
ದಾಮೋದರೋ ಯಜ್ಞಭೋಕ್ತಾ ದಾನವೇಂದ್ರವಿನಾಶನಃ ॥ ೩೯ ॥

---

೩೫. ಶಿಶುಪಾಲನ ಶಿರವನ್ನು ಛೇದಿಸಿದವನು, ದುರ್ಯೋಧನನ ವಂಶವನ್ನು ನಿರ್ನಾಮಮಾಡಿದವನು, ವಿದುರ ಮತ್ತು ಅಕ್ರೂರರೆಂಬ ಭಕ್ತರಿಗೆ ವರವನ್ನು ನೀಡಿದವನು ಮತ್ತು ವಿಶ್ವರೂಪವನ್ನು ತೋರಿಸಿದವನು.

೩೬. ಸತ್ಯವಾದ ವಚನವುಳ್ಳವನು, ಸತ್ಯಸಂಕಲ್ಪವುಳ್ಳವನು, ಸತ್ಯಭಾಮಾದೇವಿಯಲ್ಲಿ ಅನುರಾಗಿಯು, ಜಯಶೀಲನು, ಸುಭದ್ರಾದೇವಿಯ ಅಗ್ರಜನು, ಸರ್ವವ್ಯಾಪಕನು, ಭೀಷ್ಮನಿಗೆ ಸದ್ಗತಿಯನ್ನಿತ್ತವನು.

೩೭. ಪ್ರಪಂಚಕ್ಕೆ ಗುರುವು, ಪ್ರಪಂಚಕ್ಕೆ ನಾಥನು, ಕೊಳಲನ್ನೂದುವುದರಲ್ಲಿ ಚತುರನು, ವೃಷಭಾಸುರನನ್ನು ಸಂಹರಿಸಿದವನು, ಬಕಾಸುರನ ಶತ್ರುವು, ಬಾಣಾಸುರನ ತೋಳನ್ನು ಕತ್ತರಿಸಿದವನು.

೩೮. ಧರ್ಮರಾಜನನ್ನು ಪ್ರತಿಷ್ಠೆಗೊಳಿಸಿದವನು, ನವಿಲುಗರಿಗಳಿಂದ ಭುಜಗಳನ್ನಲಂಕರಿಸಿದವನು, ಅರ್ಜುನನ ಸಾರಥಿಯು, ತಿಳಿಯಲಾಗದ ಸ್ವಸ್ವರೂಪವುಳ್ಳವನು, ಗೀತೆಯೆಂಬ ಅಮೃತಪ್ರಾಪ್ತಿಗೆ ಮಹೋದಧಿಯಂತಿರುವವನು.

೩೯. ಕಾಲಿಯಸರ್ಪದ ಮೇಲೆ ನೃತ್ಯವನ್ನಾಡುವ ಸಮಯದಲ್ಲಿ ಅದರ ಹೆಡೆಯಲ್ಲಿದ್ದ ಮಾಣಿಕ್ಯರತ್ನದಿಂದ ರಂಜಿಸಲ್ಪಟ್ಟ ಕಾಂತಿಯಿಂದ ಕೂಡಿದ ಪಾದಪದ್ಮಗಳುಳ್ಳವನು, ಹೊಟ್ಟೆಯ ಮೇಲೆ ದಾರದಿಂದ ಕಟ್ಟಿಹಾಕಿದ ಗುರುತುಳ್ಳವನು, ಯಜ್ಞಗಳ ಹವಿಸ್ಸನ್ನು ಭುಂಜಿಸುವವನು, ಬಲಿಷ್ಠ ದಾನವರನ್ನು ಕೊಂದವನು.

ನಾರಾಯಣಃ ಪರಂ ಬ್ರಹ್ಮ ಪನ್ನಗಾಶನವಾಹನಃ
ಜಲಕ್ರೀಡಾಸಮಾಸಕ್ತಗೋಪೀವಸ್ತ್ರಾಪಹಾರಕಃ || ೪೦ ||

ಪುಣ್ಯಶ್ಲೋಕಸ್ತೀರ್ಥಪಾದೋ ವೇದವೇದ್ಯೋ ದಯಾನಿಧಿಃ ।
ಸರ್ವತೀರ್ಥಾತ್ಮಕಃ ಸರ್ವಗ್ರಹರೂಪೀ ಪರಾತ್ಪರಃ || ೪೧ ||

ಇತ್ಯೇವಂ ಕೃಷ್ಣದೇವಸ್ಯ ನಾಮ್ನಾಮಷ್ಟೋತ್ತರಂ ಶತಮ್ ।
ಕೃಷ್ಣೇನ ಕೃಷ್ಣಭಕ್ತೇನ ಶ್ರುತ್ವಾ ಗೀತಾಮೃತಂ ಪುರಾ || ೪೨ ||

ಸ್ತೋತ್ರಂ ಕೃಷ್ಣಪ್ರಿಯಕರಂ ಕೃತಂ ತಸ್ಮಾನ್ಮಯಾ ಶ್ರುತಮ್ ।
ಕೃಷ್ಣಪ್ರೇಮಾಮೃತಂ ನಾಮ ಪರಮಾನಂದದಾಯಕಮ್ || ೪೩ ||

ಅತ್ಯುಪದ್ರವದುಃಖಘ್ನಂ ಪರಮಾಯುಷ್ಯವರ್ಧನಮ್ ।
ದಾನಂ ವ್ರತಂ ತಪಸ್ತೀರ್ಥಂ ಯತ್ಕೃತಂ ತ್ವಿಹ ಜನ್ಮನಿ || ೪೪ ||

---

೪೦. ಜಲಶಾಯಿಯು, ಪರಬ್ರಹ್ಮ ಸ್ವರೂಪನು, ಸರ್ಪವನ್ನು ಭಕ್ಷಿಸುವ ಗರುಡವಾಹನವನ್ನೇರಿದವನು, ಜಲಕ್ರೀಡಾಸಕ್ತರಾದ ಗೋಪಿಯರ ವಸ್ತ್ರಾಪಹಾರ ಮಾಡಿದವನು.

೪೧. ಪವಿತ್ರಕೀರ್ತಿಯುಳ್ಳವನು, ಗಂಗಾದಿ ತೀರ್ಥೋತ್ಪತ್ತಿಗೆ ಕಾರಣವಾದ ಪಾದಗಳುಳ್ಳವನು, ವೇದಗಳಿಂದಲೇ ತಿಳಿಯಲ್ಪಡಬೇಕಾದವನು, ದಯಾಮಯನು, ಸರ್ವತೀರ್ಥಸ್ವರೂಪಿಯು, ಸಮಸ್ತ ಗ್ರಹದೇವತಾತ್ಮನು, ಶ್ರೇಷ್ಠ ವಸ್ತುಗಳೆಲ್ಲಕ್ಕಿಂತಲೂ ಮೇಲಾದವನು.

೪೨-೪೩. ಪೂರ್ವದಲ್ಲಿ ಕೃಷ್ಣಭಕ್ತನಾದ ಅರ್ಜುನನು ಗೀತಾಮೃತವನ್ನು ಪಾನಮಾಡಿ ಕೃಷ್ಣದೇವತಾ ಪ್ರೀತಿಯನ್ನುಂಟುಮಾಡುವ, ಪರಮಾನಂದವನ್ನು ಕೊಡುವ, ಕೃಷ್ಣಪ್ರೇಮಾಮೃತವೆಂಬ ಈ ಸಂಪೂರ್ಣ ಕೃಷ್ಣಾಷ್ಟೋತ್ತರ ಶತನಾಮ ಸ್ತೋತ್ರವನ್ನು ಮಾಡಿದನು. ಅವನಿಂದ ನಾನು ಇದನ್ನು ಶ್ರವಣಮಾಡಿರುವೆನು.

೪೪. ಈ ಸ್ತೋತ್ರವನ್ನು ಪಠನ ಅಥವಾ ಶ್ರವಣಮಾಡುವವರಿಗೆ ಹೆಚ್ಚಾದ ಅನೇಕ ಪೀಡಾದುಃಖಗಳ ಶಾಂತಿಯೂ ಪೂರ್ಣಾಯುಷ್ಯವೃದ್ಧಿಯೂ ಮತ್ತು ಈ ಜನ್ಮದಲ್ಲಿ ಮಾಡಿದ ದಾನವ್ರತ, ತಪ, ತೀರ್ಥಯಾತ್ರಾದಿ ಪುಣ್ಯಕರ್ಮಗಳ ಕೋಟಿ ಗುಣಿತವಾದ ಫಲಗಳೂ ಉಂಟಾಗುತ್ತವೆ.

ಪಠತಾಂ ಶೃಣ್ವತಾಂ ಚೈವ ಕೋಟಿಕೋಟಿಗುಣಂ ಭವೇತ್ ।
ಪುತ್ರಪ್ರದಮಪುತ್ರಾಣಾಮಗತೀನಾಂ ಗತಿಪ್ರದಮ್ ॥ ೪೫ ॥

ಧನಾವಹಂ ದರಿದ್ರಾಣಾಂ ಜಯೇಚ್ಛೂನಾಂ ಜಯಾವಹಮ್ ।
ಶಿಶೂನಾಂ ಗೋಕುಲಾನಾಂ ಚ ಪುಷ್ಟಿದಂ ಪುಣ್ಯವರ್ಧನಮ್ ॥ ೪೬ ॥

ಬಾಲರೋಗಗ್ರಹಾದೀನಾಂ ಶಮನಂ ಶಾಂತಿಕಾರಕಮ್ ।
ಅಂತೇ ಕೃಷ್ಣಸ್ಮರಣದಂ ಭವತಾಪತ್ರಯಾಪಹಮ್ ॥ ೪೭ ॥

ಅಸಿದ್ಧಸಾಧಕಂ ಭದ್ರೇ ಜಪಾದಿನಿರತಾತ್ಮನಾಮ್ ।
ಕೃಷ್ಣಾಯ ಯಾದವೇಂದ್ರಾಯ ಜ್ಞಾನಮುದ್ರಾಯ ಯೋಗಿನೇ॥ ೪೮ ॥

ನಾಥಾಯ ರುಕ್ಮಿಣೀಶಾಯ ನಮೋ ವೇದಾಂತವೇದಿನೇ ।
ಇಮಂ ಮಂತ್ರಂ ಮಹಾದೇವಿ ಜಪನ್ನೇವ ದಿವಾನಿಶಮ್ ॥ ೪೯ ॥

ಸರ್ವಗ್ರಹಾನುಗ್ರಹಭಾಕ್ ಸರ್ವಪ್ರಿಯತಮೋ ಭವೇತ್ ।
ಪುತ್ರಪೌತ್ರೈಃ ಪರಿವೃತಃ ಸರ್ವಸಿದ್ಧಿಸಮೃದ್ಧಿಮಾನ್ ॥ ೫೦ ॥

---

೪೫-೪೬. ಮತ್ತು ಈ ಸ್ತೋತ್ರದ ಪಠನ-ಶ್ರವಣಗಳು ಅಪುತ್ರರಿಗೆ ಪುತ್ರ ಸಂತಾನವನ್ನೂ ನಿರ್ಗತಿಕರಿಗೆ ಸದ್ಗತಿಯನ್ನೂ ದರಿದ್ರರಿಗೆ ಧನಸಂಪತ್ತಿಯನ್ನೂ, ಜಯಾ ಕಾಂಕ್ಷಿಗಳಿಗೆ ಜಯಲಾಭವನ್ನೂ ಶಿಶು-ಗೋಧನಗಳ ವೃದ್ಧಿಯನ್ನೂ ಕೊಟ್ಟು ಪುಣ್ಯ ವನ್ನು ವೃದ್ಧಿಗೊಳಿಸುವುವು.

೪೭. ಮತ್ತು ಈ ಸ್ತೋತ್ರವು ಬಾಲಗ್ರಹ ಬಾಲಾರಿಷ್ಟಾದಿ ರೋಗಗಳನ್ನು ಶಮನಮಾಡಿ ಶಾಂತಿಕಾರಕವೂ ಅವಸಾನದಲ್ಲಿ ಕೃಷ್ಣಸ್ಮರಣವನ್ನು ಕೊಡುವುದೂ ಸಂಸಾರದ ತಾಪತ್ರಯಗಳನ್ನು ನಿವಾರಣೆಮಾಡುವುದೂ ಆಗಿರುವುದು.

೪೮. ಮಂಗಳ ಸ್ವರೂಪಳೆ! ಜಪಾದ್ಯನುಷ್ಠಾನವಂತರಿಗೆ ಹಿಂದಾಗದಿರುವ ಸಿದ್ಧಿಯನ್ನು ಈ ಸ್ತೋತ್ರವು ಕೊಡುವುದು. ಯಾದವರ ಪ್ರಭುವೂ, ಜ್ಞಾನ ಮುದ್ರೆಯನ್ನು ಧರಿಸಿದವನೂ, ಪರಮಯೋಗಿಯೂ ಜಗನ್ನಾಥನೂ, ರುಕ್ಮಿಣೀ ಪತಿಯೂ, ವೇದಾಂತವೇದಿಯೂ ಆದ ಕೃಷ್ಣ ಪರಮಾತ್ಮನಿಗೆ ನಮಸ್ಕಾರವು, ಇದೊಂದು ಕೃಷ್ಣಮಂತ್ರವು.

೪೯-೫೦. ಮಹಾದೇವಿಯೆ! ಈ ಮಹಾಮಂತ್ರವನ್ನು ಹಗಲು ಮತ್ತು ರಾತ್ರಿಯಲ್ಲಿಯೂ ಜಪಿಸಿದವನು, ಸಮಸ್ತ ಗ್ರಹಗಳ ಅನುಗ್ರಹಕ್ಕೆ ಪಾತ್ರನಾಗಿ ಸರ್ವರಿಗೂ ಪ್ರೀತಿಪಾತ್ರನಾದ ಮಾನವನಾಗುವನು ಮತ್ತು ಇಹಲೋಕದಲ್ಲಿ ಪುತ್ರ

ಅಗಸ್ತ್ಯ ಉವಾಚ :—

ನಿಷೇವ್ಯ ಭೋಗಾನಂತೇಽಪಿ ಕೃಷ್ಣಸಾಯುಜ್ಯಮಾಪ್ನುಯಾತ್ ।
ಏತಾವದುಕ್ತ್ವಾ ಭಗವಾನನಂತೋ
ಮೂರ್ತಿಸ್ತು ಸಂಕರ್ಷಣಸಂಜ್ಞಿತಾ ವಿಭೋಃ ॥ ೫೧ ॥

ಧರಾಧರೋಽಲಂ ಜಗತಾಂ ಧರಾಯೈ
ನಿರ್ದಿಶ್ಯ ಭೂಯೋ ವಿರರಾಮ ಮಾನಸದಃ ।
ತತಸ್ತು ಸರ್ವೇ ಸನಕಾದಯೋ ಯೇ
ಸಮಾಸ್ಥಿತಾಸ್ತತ್ಪರಿತಃ ಕಥಾದೃತಾಃ ।
ಆನಂದಪೂರ್ಣಾಂಬುನಿಧೌ ನಿಮಗ್ನಾಃ
ಸಭಾಜಯಾಮಾಸುರಹೀಶ್ವರಂ ತಮ್ ॥ ೫೨ ॥

ಋಷಯ ಊಚುಃ :—

ನಮೋ ನಮಸ್ತೇಽಖಿಲವಿಶ್ವಭಾವನ
ಪ್ರಸನ್ನಭಕ್ತಾರ್ತಿಹರಾವ್ಯಯಾತ್ಮನ್ ।
ಧರಾಧರಾಯಾಪಿ ಕೃಪಾರ್ಣವಾಯ
ಶೇಷಾಯ ವಿಶ್ವಪ್ರಭವೇ ನಮಸ್ತೇ ॥ ೫೩ ॥

---

ಪೌತ್ರಾದಿಗಳಿಂದ ಕೂಡಿ ಸಕಲ ಮಾನುಷಾನಂದ ಸಮೃದ್ಧಿಯನ್ನೂ ಭೋಗಸೌಖ್ಯಗಳನ್ನೂ ಅನುಭವಿಸಿ ಅವಸಾನಕಾಲದಲ್ಲಿ ಕೃಷ್ಣಪರಮಾತ್ಮನ ಸಾಯುಜ್ಯಮುಕ್ತಿಯನ್ನು ಹೊಂದುವನು.

೫೧. ಅಗಸ್ತ್ಯಮುನಿಯು ಇಂತೆಂದನು :—ಸರ್ವವ್ಯಾಪಕನಾದ ಪರಮಾತ್ಮನ ಸಂಕರ್ಷಣನೆಂಬ ಹೆಸರಿನಿಂದ ಅಂಕಿತವಾದ ಮೂರ್ತಿಸ್ವರೂಪನೂ ಷಡ್ಗುಣೈಶ್ವರ್ಯ ಸಂಪನ್ನನೂ ಭೂಮಿಯನ್ನು ಹೊತ್ತವನೂ, ಜಗತ್ತುಗಳಿಗೆ ಪ್ರಭುವೂ ಆದ ಅನಂತನು ಭೂಮಿದೇವಿಗೆ ಇಷ್ಟನ್ನು ಹೇಳಿ ಮರ್ಯಾದೆ ತೋರಿಸಿ ಮತ್ತೆ ಸುಮ್ಮನಾದನು.

೫೨. ಅನಂತರದಲ್ಲಿ ಆ ಸರ್ಪರಾಜನ ಸುತ್ತಲೂ ಕಥಾ ಶ್ರವಣದಲ್ಲಿ ಕುತೂಹಲಿಗಳಾಗಿ ಕುಳಿತುಕೊಂಡಿದ್ದ ಸನಕಾದಿ ಸಿದ್ಧರೆಲ್ಲರೂ ಆನಂದವೆಂಬ ಪೂರ್ಣಸಮುದ್ರದಲ್ಲಿ ಮುಳುಗಿದವರಾಗಿ ಕಥಾನಕಗಳನ್ನು ಹೇಳಿ ಉಪಕರಿಸಿದ ಆ ಸರ್ಪರಾಜನನ್ನು ಪೂಜಿಸಿದರು.

೫೩. ಋಷಿಗಳು ನುಡಿದರು :—ಸಮಸ್ತ ಪ್ರಪಂಚವನ್ನು ಸೃಷ್ಟಿಸುವವನೆ! ಶರಣಾಗತರಾದ ಭಕ್ತರ ಕಷ್ಟಗಳನ್ನು ಪರಿಹರಿಸುವವನೆ! ಅನಾದಿ ಅನಂತಸ್ವರೂಪವುಳ್ಳವನೆ! ಭೂಮಿಯನ್ನು ಹೊತ್ತವನೂ ಕರುಣಾಸಮುದ್ರನೂ, ಪ್ರಪಂಚಕ್ಕೆ ಪ್ರಭುವೂ ಆದ ಶೇಷಪರಮಾತ್ಮನಾದ ನಿನಗೆ ಪುನಃ ಪುನಃ ನಮಸ್ಕಾರವು.

ಕೃಷ್ಣಾಮೃತಂ ನಃ ಪರಿಪಾಯಿತಂ ವಿಭೋ
ವಿಧೂತಪಾಪಾ ಭವತಾ ಕೃತಾ ವಯಮ್ ।
ಭವಾದೃಶಾ ದೀನದಯಾಲವೋ ವಿಭೋ
ಸಮುದ್ಧರಂತ್ಯೇವ ನಿಜಾನ್ ಹಿ ಸನ್ನತಾನ್ ॥ ೩೪ ॥

ಏವಂ ನಮಸ್ಕೃತ್ಯ ಫಣೀಶಪಾದಯೋ
ರ್ಮನೋ ನಿಧಾಯಾಖಿಲಕಾಮಪೂರಯೋಃ ।
ಪ್ರದಕ್ಷಿಣೀಕೃತ್ಯ ಧರಾ ಧರಾಧರಂ
ಸರ್ವೇ ವಯಂ ಸ್ವಾವಸಥಾನುಪಾಗತಾಃ ॥ ೩೫ ॥

ಇತಿ ತೇಽಭಿಹಿತಂ ರಾಮ ಸ್ತೋತ್ರಂ ಪ್ರೇಮಾಮೃತಾಭಿಧಮ್ ।
ಕೃಷ್ಣಸ್ಯ ಪರಿಪೂರ್ಣಸ್ಯ ರಾಧಾಕಾಂತಸ್ಯ ಸಿದ್ಧಿದಮ್ ॥ ೩೬ ।

ಇದಂ ರಾಮ ಮಹಾಭಾಗ ಸ್ತೋತ್ರಂ ಪರಮದುರ್ಲಭಮ್ ।
ಶ್ರುತಂ ಸಾಕ್ಷಾದ್ಭಗವತಃ ಶೇಷಾತ್ಕಥಯತಃ ಕಥಾಃ ॥ ೩೭ ॥

---

೩೪. ವಿಶ್ವರೂಪಿಯಾದ ಶೇಷಸ್ವಾಮಿಯೆ! ನೀನು ನಮ್ಮೆಲ್ಲರಿಗೂ ಕೃಷ್ಣ ಸ್ತೋತ್ರಾಮೃತವನ್ನು ಪಾನಮಾಡಿಸಿದೆ. ನಮ್ಮೆಲ್ಲರನ್ನೂ ಪಾಪನಿರ್ಮುಕ್ತರನ್ನಾಗಿ ಮಾಡಿದೆ, ದೀನರಲ್ಲಿ ದಯಾಲುಗಳಾದ ನಿನ್ನಂತಹ ಮಹಾತ್ಮರು ಸ್ವಕೀಯ ಭಕ್ತರನ್ನು ಉದ್ಧರಿಸದೇ ಇರಲಾರರಲ್ಲವೆ.

೩೫. ಅನಂತರದಲ್ಲಿ ಸಮಸ್ತ ಫಲಗಳನ್ನು ಕೊಟ್ಟು ನಮ್ಮ ಆಶೆಗಳನ್ನು ಈಡೇರಿಸಿದ ಸರ್ಪರಾಜನ ಪಾದಾರವಿಂದಗಳಲ್ಲಿ ಮನಸ್ಸನ್ನಿಟ್ಟು ನಮಸ್ಕರಿಸಿ ನಾವೆಲ್ಲರೂ ಭೂಮಿದೇವಿ-ಅನಂತರನ್ನು ಪ್ರದಕ್ಷಿಣೆ ಮಾಡಿ ನಮ್ಮ ನಮ್ಮ ವಾಸಸ್ಥಳಕ್ಕೆ ಹಿಂತಿರುಗಿ ಬಂದೆವು.

೩೬. ಭಾರ್ಗವರಾಮನೇ! ಪೂರ್ಣಾಕಾರನೂ, ರಾಧಾರಮಣನೂ ಆದ ಶ್ರೀ ಕೃಷ್ಣನ ಸಕಲ ಸಿದ್ಧಿಗಳನ್ನು ಕೊಡುವ ಪ್ರೇಮಾಮೃತವೆಂಬ ಸ್ತೋತ್ರವು ನನ್ನಿಂದ ನಿನಗೆ ಉಪದೇಶಿಸಲ್ಪಟ್ಟಿರುವುದು.

೩೭. ಭಾಗ್ಯವಂತನಾದ ರಾಮನೆ! ಪರಮದುರ್ಲಭವೂ ಗೋಪ್ಯವೂ ಆದ ಈ ಸ್ತೋತ್ರವನ್ನು ಸಾಕ್ಷಾತ್ತಾಗಿ ಪೂಜ್ಯನಾದ ಆದಿಶೇಷಸ್ವಾಮಿಯಿಂದ ಅನೇಕ ಕಥೆಗಳನ್ನು ಹೇಳುತ್ತಿರುವ ಪ್ರಸಂಗದಲ್ಲಿ ಶ್ರವಣಮಾಡಿದೆನು.

**ಯಾವಂತಿ ಮಂತ್ರಜಾಲಾನಿ ಸ್ತೋತ್ರಾಣಿ ಕವಚಾನಿ ಚ ।**
**ತ್ರೈಲೋಕ್ಯೇ ತಾನಿ ಸರ್ವಾಣಿ ಸಿಧ್ಯಂತ್ಯೇವಾಸ್ಯ ಶೀಲನಾತ್ ॥ ೫೮ ॥**

**ವಸಿಷ್ಠ ಉವಾಚ :—**

**ಏವಮುಕ್ತ್ವಾ ಮಹಾರಾಜ ಕೃಷ್ಣಪ್ರೇಮಾಮೃತಂ ಸ್ತವಮ್ ।**
**ಯಾವದ್ವೈರಂಸೀತ್ಸ ಮುನಿಸ್ತಾವತ್ಸ್ವರ್ಯಾನಮಾಗತಮ್ ॥ ೫೯ ॥**

**ಚತುರ್ಭಿರದ್ಭುತೈಃ ಸಿದ್ಧೈಃ ಕಾಮರೂಪೈರ್ಮನೋಜವೈಃ ।**
**ಅನುಯಾತಮಥೋತ್ಪ್ಲುತ್ಯ ಸ್ತ್ರೀಪುಂಸೌ ಹರಿಣೌ ತದಾ ।**
**ಅಗಸ್ತ್ಯಚರಣೌ ನತ್ವಾ ಸಮಾರುರುಹತುರ್ಮುದಾ ॥ ೬೦ ॥**

**ದಿವ್ಯದೇಹಧರೌ ಭೂತ್ವಾ ಶಂಖಚಕ್ರಾದಿಚಿಹ್ನಿತೌ ।**
**ಗತೌ ಚ ವೈಷ್ಣವಂ ಲೋಕಂ ಸರ್ವದೇವನಮಸ್ಕೃತಮ್ ।**
**ಪಶ್ಯತಾಂ ಸರ್ವಭೂತಾನಾಂ ಭಾರ್ಗವಾಗಸ್ತ್ಯಯೋಸ್ತಥಾ ॥ ೬೧ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ಷಟ್ತ್ರಿಂಶತ್ತಮೋಽಧ್ಯಾಯಃ**

---

೫೮. ಮಂತ್ರಗಳು, ಸ್ತೋತ್ರಗಳು, ಕವಚಗಳಾವುವೇ ಆಗಲಿ ತ್ರಿಲೋಕಗಳಲ್ಲಿರುವ ಅವೆಲ್ಲವೂ ಈ ಕೃಷ್ಣಪ್ರೇಮಾಮೃತ ಸ್ತೋತ್ರದ ಅಭ್ಯಾಸದಿಂದ ಸಿದ್ಧಿಯನ್ನು ಕೊಡುವುವು.

೫೯. ವಸಿಷ್ಠಋಷಿಯು ಮತ್ತೆ ಹೇಳಿದನು :—ಮಹಾರಾಜನೆ! ಅಗಸ್ತ್ಯ ಮುನಿಯು ಈ ರೀತಿಯಾಗಿ ಕೃಷ್ಣಪ್ರೇಮಾಮೃತ ಸ್ತೋತ್ರವನ್ನು ಹೇಳಿ ಮುಗಿಸುವಷ್ಟರಲ್ಲಿಯೇ ಎದುರಿನಲ್ಲಿ ಸ್ವರ್ಗಲೋಕದಿಂದ ವಿಮಾನವು ಬಂದಿಳಿಯಿತು.

೬೦. ಪರಮಾದ್ಭುತಪ್ರಾಯರೂ ಕಾಮನಂತೆ ರೂಪವಂತರೂ ಮನೋವೇಗವುಳ್ಳವರೂ ಆದ ನಾಲ್ಕು ಜನಯೋಗಸಿದ್ಧರಿಂದ ಕೂಡಿದ ಆ ವಿಮಾನಕ್ಕೆ ಈ ಗಂಡು ಹೆಣ್ಣು ಎರಡು ಜಿಂಕೆಗಳೂ ಅಗಸ್ತ್ಯಮುನಿಯ ಪಾದಗಳಿಗೆ ನಮಸ್ಕರಿಸಿ ಸಂತೋಷದಿಂದ ಮೇಲೆ ನೆಗೆದು ಹತ್ತಿದುವು.

೬೧. ಆ ಜಿಂಕೆಗಳಿಗೆ ಆಗ ಶಂಖಚಕ್ರಾದಿಗಳಿಂದ ಅಂಕಿತವಾದ ದಿವ್ಯದೇಹವು ಬಂದು ಇಬ್ಬರು ಸಿದ್ಧರಾದರು. ಮತ್ತು ಸರ್ವಪ್ರಾಣಿಗಳೂ ಭಾರ್ಗವರಾಮನೂ ಮತ್ತು ಅಗಸ್ತ್ಯಮುನಿಯೂ ನೋಡುತ್ತಿರುವ ಹಾಗೆಯೇ ಅವರು ಸರ್ವದೇವತೆಗಳಿಗೂ ಪೂಜ್ಯವಾದ ವಿಷ್ಣುಲೋಕಕ್ಕೆ ಹೋದರು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಮೂವತ್ತಾರನೆಯ
ಅಧ್ಯಾಯವು ಸಮಾಪ್ತವು.

# ಸಪ್ತತ್ರಿಂಶತ್ತಮೋಽಧ್ಯಾಯಃ

**ವಸಿಷ್ಠ ಉವಾಚ :—**

**ದೃಷ್ಟ್ವಾ ಪರಶುರಾಮುಸ್ತು ತದಾಶ್ಚರ್ಯಂ ಮಹಾದ್ಭುತಮ್**
**ಜಗಾದ ಸರ್ವವೃತ್ತಾಂತಂ ಮೃಗಯೋಸ್ತು ಯಥಾಶ್ರುತಮ್ ॥ ೧ ॥**

**ತಚ್ಛ್ರುತ್ವಾ ಭಗವಾನ್ ಸಾಕ್ಷಾದಗಸ್ತ್ಯಃ ಕುಂಭಸಂಭವಃ ।**
**ಮೋದಮಾನ ಉವಾಚೇದಂ ಭಾರ್ಗವಂ ಪುರತಃ ಸ್ಥಿತಮ್ ॥ ೨ ॥**

**ಅಗಸ್ತ್ಯ ಉವಾಚ :—**

**ಶೃಣು ರಾಮ ಮಹಾಭಾಗ ಕಾರ್ಯಾಕಾರ್ಯವಿಶಾರದ ।**
**ಹಿತಂ ವದಾಮಿ ಯತ್ತ್ವೇಽದ್ಯ ತತ್ಕುರುಷ್ವ ಸಮಾಹಿತಃ ॥ ೩ ॥**

**ಇತೋ ವಿದೂರೇ ಸುಮಹಾಸ್ಥಾನಂ ವಿಷ್ಣೋಃ ಸುದುರ್ಲಭಮ್ ।**
**ಪದಾನಿ ಯತ್ರ ದೃಶ್ಯಂತೇ ನ್ಯಸ್ತಾನಿ ಸುಮಹಾತ್ಮನಾ ॥ ೪ ॥**

---

೧. ವಸಿಷ್ಠಮುನಿಯು ಮುಂದೆ ವಿವರಿಸಿದನು :—ಅತ್ಯದ್ಭುತವಾಗಿ ನಡೆದ ಈ ಆಶ್ಚರ್ಯ ಸಂಗತಿಯನ್ನು ಪರಶುರಾಮನು ಕಂಡು ವ್ಯಾಧನ ವಿಷಯವಾಗಿ ಕೇಳಿದ ಎಲ್ಲ ಸಮಾಚಾರವನ್ನೂ ತಪ್ಪದೇ ಹೇಳಿದನು.

೨. ಕುಂಭಸಂಭವನಾದ ಆ ಪೂಜ್ಯ ಅಗಸ್ತ್ಯಮುನಿಯು ಅದನ್ನು ಕೇಳಿ ಮುಂದುಗಡೆ ನಿಂತುಕೊಂಡಿರುವ ಭಾರ್ಗವನನ್ನು ಕುರಿತು ಸಂತೋಷಪಟ್ಟು ಮುಂದೆ ಹೇಳುವಂತೆ ಮಾತನಾಡಿದನು.

೩. ಅಗಸ್ತ್ಯಮುನಿಯು ಇಂತೆಂದನು :—ಕಾರ್ಯಾಕಾರ್ಯಗಳನ್ನರಿತ ಮಹಾ ಮಹಿಮವಂತನಾದ ರಾಮನೆ ! ಕೇಳು, ಸಮಾಧಾನಚಿತ್ತನಾಗಿ ನಾನು ನಿನಗೆ ಉಪದೇಶಮಾಡುವ ಹಿತಮಾರ್ಗವನ್ನು ಅವಲಂಬಿಸಿ ನಡೆದುಕೋ.

೪. ಮಹಾತ್ಮನಾದ ವಿಷ್ಣುವಿನಿಂದ ಇಡಲ್ಪಟ್ಟ ಹೆಜ್ಜೆಗಳ ಗುರುತುಗಳು ಕಾಣಿಸುವ ಪರಮದುರ್ಲಭವಾದ, ವಿಷ್ಣುವಿನ ಮಹಾಪೂಜ್ಯಸ್ಥಾನವು ಇಲ್ಲಿಗೆ ಸ್ವಲ್ಪ ದೂರದಲ್ಲಿಯೇ ಇದೆ.

ಯತ್ರ ಗಂಗಾ ಸಮುದ್ಭೂತಾ ವಾಮನಸ್ಯ ಮಹಾತ್ಮನಃ ।
ಪದಾಗ್ರಾತ್ಕ್ರಮತೋ ಲೋಕಾಂಸ್ತದ್ಬಲೇಸ್ತು ವಿನಿಗ್ರಹೇ ॥ ೫ ॥

ತತ್ರ ಗತ್ವಾ ಸ್ತವಂ ಚೇದಂ ಮಾಸಮೇಕಮನನ್ಯಧೀಃ ।
ಪಠಸ್ವ ನಿಯಮೋಸ್ಯೈವ ನಿಯತೋ ನಿಯತಾಶನಃ ॥ ೬ ॥

ಯತ್ತ್ವಯಾ ಕವಚಂ ಪೂರ್ವಮಭ್ಯಸ್ತಂ ಸಿದ್ಧಿಮಿಚ್ಛತಾ ।
ಶತ್ರೂಣಾಂ ನಿಗ್ರಹಾರ್ಥಾಯ ತಚ್ಚ ತೇ ಸಿದ್ಧಿದಂ ಭವೇತ್ ॥ ೭ ॥

ವಸಿಷ್ಠ ಉವಾಚ :—

ಏವಮುಕ್ತೋ ಹ್ಯಗಸ್ತ್ಯೇನ ರಾಮಃ ಶತ್ರುನಿಬರ್ಹಣಃ ।
ನಮಸ್ಕೃತ್ಯ ಮುನಿಂ ಶಾಂತಂ ನಿರ್ಜಗಾಮಾಶ್ರಮಾದ್ಬಹಿಃ ॥ ೮ ॥

ಪುನಸ್ತೇನೈವ ಮಾರ್ಗೇಣ ಸಂಪ್ರಾಪ್ತಸ್ತತ್ರ ಸತ್ವರಮ್ ।
ಯತ್ರೋತ್ತರಾತ್ಪದನ್ಯಾಸಾನ್ನಿರ್ಗತಾ ಸ್ವರ್ಣದೀ ನೃಪ ॥ ೯ ॥

---

೫. ಬಲಿಚಕ್ರವರ್ತಿಯನ್ನು ನಿಗ್ರಹಮಾಡಿದ ಸಮಯದಲ್ಲಿ ಲೋಕಗಳನ್ನೆಲ್ಲ ವ್ಯಾಪಿಸಿ ಹೆಜ್ಜೆಯಿಡುತ್ತಿರುವ ವಾಮನಾವತಾರ ಮಾಡಿದ ಮಹಾತ್ಮನಾದ ವಿಷ್ಣುವಿನ ಪಾದಾಗ್ರದಿಂದ ಗಂಗೆಯು ಹುಟ್ಟಿರುವ ಸ್ಥಳವೂ ಅದೇ ಆಗಿದೆ.

೬. ಆ ಸ್ಥಳಕ್ಕೆ ಹೋಗಿ ಒಂದು ತಿಂಗಳು ಪೂರ್ತಿಯಾಗಿ ವಿಷಯಾಂತರಗಳ ಜಿಜ್ಞಾಸೆಯನ್ನು ಬಿಟ್ಟು ಈ ಕೃಷ್ಣನಾಮಸ್ತೋತ್ರವನ್ನು ನೀನು ಜಿತೇಂದ್ರಿಯನೂ ಮಿತಾಹಾರ ಭೋಜಿಯೂ ಆಗಿ ನಿಯಮಪೂರ್ವಕವಾಗಿ ಪಠಿಸು.

೭. ಸಮಸ್ತ ಶತ್ರುಗಳ ನಿಗ್ರಹವೆಂಬ ಫಲಸಿದ್ಧಿಯನ್ನು ಅಪೇಕ್ಷಿಸಿ ಯಾವ ಕವಚವು ಪೂರ್ವದಲ್ಲಿ ನಿನ್ನಿಂದ ಅಭ್ಯಾಸಮಾಡಲ್ಪಟ್ಟಿತೋ ಆ ಕವಚವೂ ನಿನಗೆ ಸಿದ್ಧಿಪ್ರದವಾಗುವುದು.

೮. ವಸಿಷ್ಠಮುನಿಯು ಉಪದೇಶಿಸಿದನು :—ಶತ್ರು ಸಂಹಾರದಕ್ಷನಾದ ಪರಶುರಾಮನು ಅಗಸ್ತ್ಯ ಮುನಿಯಿಂದ ಈ ರೀತಿ ಹೇಳಲ್ಪಟ್ಟವನಾಗಿ ಶಾಂತರಾದ ಮುನಿಗಳನ್ನು ನಮಸ್ಕರಿಸಿ ಸಿದ್ಧಿಗೋಸ್ಕರ ಆಶ್ರಮದಿಂದ ಹೊರಕ್ಕೆ ಹೊರಟನು.

೯. ರಾಜನೆ! ಮೊದಲು ಯಾವ ಮಾರ್ಗದಿಂದ ಆಶ್ರಮಕ್ಕೆ ತೆರಳಿದ್ದನೋ ಅದೇ ದಾರಿಯಿಂದ ರಾಮನು ವೇಗವಾಗಿ ನಡೆದು ಬಂದು ಊರ್ಧ್ವಮುಖವಾದ ಪಾದನ್ಯಾಸದಿಂದ ಗಂಗೆಯು ಹುಟ್ಟಿದ ಸ್ಥಳವನ್ನು ಸೇರಿದನು.

ತತ್ರ ವಾಸಂ ಪ್ರಕಲ್ಪ್ಯಾಸಾವಕೃತವ್ರಣಸಂಯುತಃ ।
ಸಮಭ್ಯಸ್ಯತ್ ಸ್ತವಂ ದಿವ್ಯಂ ಕೃಷ್ಣಪ್ರೇಮಾಮೃತಾಭಿಧಮ್ ॥ ೧೦ ॥

ನಿತ್ಯಂ ಪ್ರಜಪತಸ್ತಸ್ಯ ಸ್ತೋತ್ರಂ ತುಷ್ಟೋಽಭವದ್ಧರಿಃ ।
ಜಗಾಮ ದರ್ಶನಂ ತಸ್ಯ ಜಾಮದಗ್ನ್ಯಸ್ಯ ಭೂಪತೇ ॥ ೧೧ ॥

ಚತುರ್ವ್ಯೂಹಾಧಿಪಃ ಸಾಕ್ಷಾತ್ಕೃಷ್ಣಃ ಕಮಲಲೋಚನಃ ।
ಕಿರೀಟೇನಾರ್ಕವರ್ಣೇನ ಕುಂಡಲಾಭ್ಯಾಂ ಚ ರಾಜಿತಃ ॥ ೧೨ ॥

ಕೌಸ್ತುಭೋದ್ಭಾಸಿತೋರಸ್ಕಃ ಪೀತವಾಸಾ ಘನಪ್ರಭಃ ।
ಮುರಳೀವಾದನಪರಃ ಸಾಕ್ಷಾನ್ಮೋಹನರೂಪಧೃಕ್ ॥ ೧೩ ॥

ತಂ ದೃಷ್ಟ್ವಾ ಸಹಸೋತ್ಥಾಯ ಜಾಮದಗ್ನ್ಯೋ ಮುದಾನ್ವಿತಃ ।
ಪ್ರಣಮ್ಯ ದಂಡವದ್ಭೂಮೌ ತುಷ್ಟಾವ ಪ್ರಯತೋ ವಿಭುಮ್ ॥ ೧೪ ॥

---

೧೦. ಅಕೃತವ್ರಣನೆಂಬ ಶಿಷ್ಯ ಸಹಿತನಾಗಿ ಆ ಸ್ಥಳದಲ್ಲಿಯೇ ವಾಸಮಾಡಿರುವಂತೆ ಏರ್ಪಡಿಸಿಕೊಂಡು ದಿವ್ಯವಾದ ಕೃಷ್ಣಪ್ರೇಮಾಮೃತವೆಂಬ ಸ್ತೋತ್ರದ ಅಭ್ಯಾಸವನ್ನು ಮಾಡಿದನು.

೧೧. ರಾಜನೆ! ಗೋಕುಲನಾಥನಾದ ಕೃಷ್ಣಪರಮಾತ್ಮನ ಸ್ತೋತ್ರವನ್ನು ನಿತ್ಯವೂ ಪಠನ ಮಾಡಲಾಗಿ ಅದರಿಂದ ಶ್ರೀಹರಿಯು ಪ್ರಸನ್ನನಾಗಿ ಆ ಭಕ್ತನಾದ ಜಾಮದಗ್ನ್ಯ ರಾಮನಿಗೆ ದರ್ಶನವನ್ನು ಕೊಟ್ಟನು.

೧೨. ಸಂಕರ್ಷಣ, ವಾಸುದೇವ, ಪ್ರದ್ಯುಮ್ನ, ಅನಿರುದ್ಧರೆಂಬ ನಾಲ್ಕು ವ್ಯೂಹಗಳಿಗೆ ಅಧಿಪತಿಯಾದ ಕಮಲದಂತೆ ಸುಂದರ ನೇತ್ರಗಳುಳ್ಳ ಶ್ರೀ ಕೃಷ್ಣಪರಮಾತ್ಮನು ಸಾಕ್ಷಾತ್ತಾಗಿ ಸೂರ್ಯನಂತೆ ತೇಜಸ್ವಿಯಾದ ಕಿರೀಟದಿಂದಲೂ ಎರಡು ಕುಂಡಲಗಳಿಂದಲೂ ಅಲಂಕೃತನಾಗಿ ಪ್ರಕಾಶವಾದನು.

೧೩. ಮತ್ತು ಶ್ರೀ ಕೃಷ್ಣನು ಪ್ರತ್ಯಕ್ಷ ದರ್ಶನವನ್ನಿತ್ತಾಗ ಆ ಭಗವಂತನ ಆಕಾರವು ಈ ರೀತಿಯಾಗಿತ್ತು. ಕೌಸ್ತುಭರತ್ನದಿಂದ ಥಳ ಥಳಿಸುವ ಎದೆ, ಉಟ್ಟಿರುವ ಪೀತಾಂಬರ, ಮೇಘದಂತೆ ಶ್ಯಾಮಲಕಾಂತಿ, ಕೊಳಲನ್ನೂದುವ ಆಸಕ್ತಿ ಇವೆಲ್ಲವುಗಳಿಂದ ಸಾಕ್ಷಾನ್ಮೋಹನ ರೂಪವನ್ನು ಧರಿಸಿಕೊಂಡಿದ್ದನು.

೧೪. ಆ ಕೃಷ್ಣನನ್ನು ಕಂಡು ಬೇಗನೆ ಎದ್ದು ಪರಶುರಾಮನು ಸಂತೋಷಪಟ್ಟವನಾಗಿ ಭೂಮಿಯಲ್ಲಿ ದಂಡಾಕಾರವಾಗಿ ಪ್ರಣಾಮಮಾಡಿ ಶುದ್ಧ ಮನಸ್ಸಿನಿಂದ ಪರಮಾತ್ಮನನ್ನು ಸ್ತುತಿಮಾಡಿದನು.

ಪರಶುರಾಮ ಉವಾಚ :—

ನಮೋ ನಮಃ ಕಾರಣವಿಗ್ರಹಾಯ
ಪ್ರಪನ್ನಪಾಲಾಯ ಸುರಾರ್ತಿಹಾರಿಣೇ ।
ಬ್ರಹ್ಮೇಶವಿಷ್ಣ್ವಿಂದ್ರಮುಖಸ್ತುತಾಯ
ನತೋಽಸ್ಮಿ ನಿತ್ಯಂ ಪರಮೇಶ್ವರಾಯ ॥ ೧೫ ॥

ಯಂ ವೇದವಾದೈರ್ವಿವಿಧಪ್ರಕಾರೈ
ರ್ನಿಣೇತುಮೀಶಾನಮುಖಾ ನ ಶಕ್ನುಯುಃ ।
ತಂ ತ್ವಾಮನಿರ್ದೇಶ್ಯಮಜಂ ಪುರಾಣ
ಮನಂತಮೀಡೇ ಭವ ಮೇ ದಯಾಪರಃ ॥ ೧೬ ॥

ಯಸ್ತ್ವೇಕ ಈಶೋ ನಿಜವಾಂಛಿತಪ್ರದೋ
ಧತ್ತೇ ತನೂರ್ಲೋಕವಿಹಾರರಕ್ಷಣೇ ।
ನಾನಾವಿಧಾ ದೇವಮನುಷ್ಯತಿರ್ಯ
ಗ್ಯಾದಸ್ಸು ಭೂಮೇರ್ಭರವಾರಣಾಯ ॥ ೧೭ ॥

---

೧೫. ಸಮಸ್ತ ಪ್ರಪಂಚಕ್ಕೂ ಕಾರಣವಾದ ವಿಗ್ರಹವನ್ನು ಧರಿಸಿದವನೂ ಭಕ್ತರನ್ನು ಪಾಲಿಸುವವನೂ ದೇವತೆಗಳ ಪೀಡಾ ಕಂಟಕಗಳನ್ನು ಪರಿಹರಿಸುವವನೂ ಬ್ರಹ್ಮ-ಮಹೇಶ್ವರ-ವಿಷ್ಣು-ಇಂದ್ರ ಆದಿಯಾದ ನಿಖಿಲ ದೇವತೆಗಳಿಂದ ಸ್ತುತಿಸಲ್ಪಟ್ಟವನೂ ಆದ ಪರಮಾತ್ಮನಿಗೆ ಯಾವಾಗಲೂ ನಮಸ್ಕರಿಸಿದವನಾಗಿರುವೆನು, ಮತ್ತೆ ಮತ್ತೆ ನಮಸ್ಕಾರವು.

೧೬. ಈಶ್ವರನೇ ಮುಂತಾದ ತ್ರಿಮೂರ್ತ್ಯಾದಿ ದೇವತೆಗಳೂ ಯಾವ ಪರಮಾತ್ಮನನ್ನು ನಾನಾ ಪ್ರಕಾರವಾದ ವಾಕ್ಯಾರ್ಥ ಚರ್ಚೆಗಳಿಂದಲೂ ನಿರ್ಣಯಿಸಲಾಗದೇ ಇರುವರೊ, ನಿರ್ದೇಶ ಮಾಡಲು ಅಸಾಧ್ಯನೂ ಜನ್ಮವಿಲ್ಲದವನೂ ಅನಾದಿಯೂ ಅನಂತನೂ ಆದ ಅಂತಹ ನಿನ್ನನ್ನು ಸ್ತುತಿಸುವೆನು. ಭಕ್ತನಾದ ನನ್ನಲ್ಲಿ ದಯಾಶಾಲಿಯಾಗು.

೧೭. ಭಕ್ತರ.-ವಾಂಛಿತ ವರಗಳನ್ನು ಕೊಡುವ ಒಬ್ಬನೇ ಪರಮಾತ್ಮನು ಲೋಕರಚನಾ ಲೀಲೆ ಮತ್ತು ಪ್ರಪಂಚ ರಕ್ಷಣ ನಿಮಿತ್ತವಾಗಿ ದೇವ-ಮಾನವ-ಪಶು-ಜಲಚರ ಮುಂತಾದ ನಾನಾ ವಿಧದ ದೇಹಗಳನ್ನು ಭೂಮಿಯ ಭಾರವನ್ನು ಇಳಿಸಲೋಸ್ಕರ ಸ್ವೀಕರಿಸುತ್ತಾನೆ.

ತಂ ತ್ವಾಮಹಂ ಭಕ್ತಜನಾನುರಕ್ತಂ
ವಿರಕ್ತ ಮತ್ಯಂತಮಪೀಂದಿರಾದಿಷು ।
ಸ್ವಯಂ ಸಮಕ್ಷಂವ್ಯಭಿಚಾರದುಷ್ಟ
ಚಿತ್ತಾಸ್ವಪಿ ಪ್ರೇಮನಿಬದ್ಧ ಮಾನಸಮ್ ॥ ೧೮ ॥

ಯಂ ವೈ ಪ್ರಪನ್ನಾ ಅಸುರಾಃ ಸುರಾ ನರಾ
ಸ ಕಿನ್ನರಾಸ್ತಿರ್ಯಗಯೋ ನಯೋಽಪಿ ಹಿ ।
ಗತಾಃ ಸ್ವರೂಪಂ ನಿಖಿಲಂ ವಿಹಾಯ ತೇ
ದೇಹಸ್ತ್ರ್ಯಪತ್ಯಾರ್ಥಮಮತ್ವಮೀಶ್ವರ ॥ ೧೯ ॥

ತಂ ದೇವದೇವಂ ಭಜತಾಮಭೀಪ್ಸಿತ
ಪ್ರದಂ ನಿರೀಹಂ ಗುಣವರ್ಜಿತಂ ಚ ।
ಅಚಿಂತ್ಯಮವ್ಯಕ್ತಮಘೌಘನಾಶನಂ
ಪ್ರಾಪ್ತೋಽಶರಣಂ ಪ್ರೇಮನಿಧಾನ ಮಾದರಾತ್ ॥ ೨೦ ॥

---

೧೮. ಅತ್ಯಂತ ಸನ್ನಿಹಿತ ಭೋಗ್ಯವಸ್ತುಗಳಾದ ಲಕ್ಷ್ಮೀ ಮುಂತಾದ ಉಪಕರಣಗಳಲ್ಲಿ ವಿರಕ್ತನಾದರೂ ಭಕ್ತಜನರಲ್ಲಿ ಮಾತ್ರ ಅನುರಾಗಿಯಾಗಿಯೂ ಪ್ರತ್ಯಕ್ಷವಾಗಿಯೇ ವ್ಯಭಿಚಾರ ದೋಷದಿಂದ ದುಷ್ಟಚಿತ್ತರಾದ ಗೋಪಿಯರಲ್ಲಿ ಕೂಡ ತಾನಾಗಿಯೇ ಪ್ರೇಮವನ್ನಿಟ್ಟ ಮನಸ್ಸುಳ್ಳವನಾಗಿಯೂ ಇರುವ ನಿನ್ನನ್ನು ನಾನು ಶರಣ ಹೊಂದಿರುವೆನು.

೧೯. ಈಶ್ವರನೇ ! ಅಸುರರು, ಸುರರು, ಕಿಂನರರು, ತಿರ್ಯಗ್ಜಂತುಗಳು ಇವುಗಳಲ್ಲಿ ಯಾರೇ ಆಗಲಿ ನಿನ್ನನ್ನು ಶರಣಹೊಂದಿದವರು ನಿನ್ನ ಅನುಗ್ರಹದಿಂದ ದೇಹ-ಸ್ತ್ರೀ-ಪುತ್ರ-ಧನಾದಿಗಳಲ್ಲಿ ಮಮತ್ವವನ್ನು ಬಿಟ್ಟು ಸಂಪೂರ್ಣ ಸ್ವಸ್ವರೂಪವನ್ನು ಹೊಂದಿರುವರು.

೨೦. ಭಜಕರಿಗೆ ಇಷ್ಟಾರ್ಥಗಳನ್ನು ಕೊಡುವವನೂ, ಆಪ್ತಕಾಮನೂ, ಗುಣದೋಷವರ್ಜಿತನೂ, ಮನಸ್ಸಿನಿಂದ ಯೋಚಿಸಲು ಕೂಡ ಅಶಕ್ಯನೂ, ಅಪ್ರಕಾಶನೂ, ಪಾಪರಾಶಿಗಳನ್ನು ಧ್ವಂಸಮಾಡುವವನೂ, ಪ್ರೇಮನಿಧಿಯೂ ಆದ ಆ ದೇವೋತ್ತಮನಾದ ಪರಮಾತ್ಮನನ್ನು ಆದರಪೂರ್ವಕವಾಗಿ ಶರಣ ಹೊಂದಿರುವೆನು.

ತಪಂತಿ ತಾಪೈರ್ವಿವಿಧೈಃ ಸ್ವದೇಹ
ಮನ್ಯೇ ತು ಯಜ್ಞೈರ್ವಿವಿಧೈರ್ಯಜಂತಿ।
ಸ್ವಪ್ನೇಽಪಿ ತೇ ರೂಪಮಲೌಕಿಕಂ ವಿಭೋ
ಪಶ್ಯಂತಿ ನೈವಾರ್ಥನಿಬದ್ಧವಾಸನಾಃ ॥ ೨೧ ॥

ಯೇ ವೈ ತ್ವದೀಯಂ ಚರಣಂ ಭವಶ್ರಮಾ
ನ್ನಿರ್ವಿಣ್ಣಚಿತ್ತಾ ವಿಧಿವತ್ಸ್ಮರಂತಿ ।
ನಮಂತಿ ಭಕ್ತ್ಯಾಥ ಸಮರ್ಚಯಂತಿ ವೈ
ಪರಸ್ಪರಂ ಸಂಸದಿ ವರ್ಣಯಂತಿ ॥ ೨೨ ॥

ತೇನೈಕಜನ್ಮೋದ್ಭವಪಂಕಭೇದನೇ
ಪ್ರಸಕ್ತಚಿತ್ತಾ ಭವತೋಽಂಘ್ರಿಪದ್ಮೇ ।
ತರಂತಿ ಚಾನ್ಯಾನಪಿ ತಾರಯಂತಿ ಹಿ
ಭವೌಷಧಂ ನಾಮಸುಧಾ ತವೇಶ ॥ ೨೩ ॥

---

೨೧. ಕೆಲವರು ನಿನ್ನ ಭಜನಾಸಕ್ತರಾಗಿ ನಾನಾ ವಿಧ ಕ್ಲೇಶಕರವಾದ ತಾಪ ಕರ್ಮಗಳಿಂದ ದೇಹವನ್ನು ತಪಿಸಿಕೊಳ್ಳುವರು; ಇನ್ನು ಕೆಲವರು ನಾನಾ ವಿಧ ಯಜ್ಞಕರ್ಮಗಳನ್ನು ಆಚರಿಸಿ ನಿನ್ನನ್ನು ಪೂಜಿಸುವರು, ಅವರೆಲ್ಲರೂ ವಿಷಯ ಸೌಖ್ಯದಲ್ಲಿ ಸಂಗವುಳ್ಳ ಮನೋವಾಸನೆಯುಳ್ಳವರಾದ್ದರಿಂದ ಅವರಿಗೆ ನಿನ್ನ ದಿವ್ಯವಾದ ಅಲೌಕಿಕ ರೂಪಸಾಕ್ಷಾತ್ಕಾರವು ಸ್ವಪ್ನದಲ್ಲಿ ಕೂಡ ಆಗುವುದಿಲ್ಲ.

೨೨. ಸಂಸಾರಖೇದದಿಂದ ಬೇಸರಗೊಂಡ ಮನಸ್ಸುಳ್ಳವರಾಗಿ ಪುಣ್ಯಾತ್ಮರಾದ ಮನುಷ್ಯರು ನಿನ್ನ ಚರಣವನ್ನು ಯಥಾವಿಧಿಯಾಗಿ ಸ್ಮರಿಸುವರು. ಮತ್ತು ಭಕ್ತಿಯಿಂದ ಪ್ರಣಾಮವನ್ನೂ ಅರ್ಚನೆಯನ್ನೂ ಮಾಡುವರು.

೨೩. ಅಂತಹ ಮನುಷ್ಯರು ಅನೇಕ ಜನ್ಮಾರ್ಜಿತವಾದ ಪಾಪಪಂಕವನ್ನು ಭೇದಿಸುವ ನಿನ್ನ ಪಾದಪದ್ಮದಲ್ಲಿ ಮನಸ್ಸನ್ನಿಟ್ಟವರಾಗಿ ತಾವು ಭವಸಾಗರದಿಂದ ತರಣಹೊಂದುವುದು ಮಾತ್ರವಲ್ಲದೆ ಇತರರನ್ನು ಕೂಡ ತಾರಣಮಾಡಿಸುವರು. ಈಶ್ವರನೇ, ನಿನ್ನ ನಾಮಾಮೃತವು ಸಂಸಾರವೆಂಬ ವ್ಯಾಧಿಯ ಶಮನಕ್ಕೆ ದಿವ್ಯೌಷಧವು.

11

ಅಹಂ ಪ್ರಭೋ ಕಾಮನಿಬದ್ಧಚಿತ್ತೋ
ಭವಂತಮಾರ್ಯಂ ವಿವಿಧ ಪ್ರಯತ್ನೈಃ ।
ಆರಾಧಯಂ ನಾಥ ಭವಾನಭಿಜ್ಞಃ
ಕಿಂತೇऽಹ ವಿಜ್ಞಾಪ್ಯಮಿಹಾಸ್ತಿ ಲೋಕೇ ॥ ೨೪ ॥

ವಸಿಷ್ಠ ಉವಾಚ :—
ಇತ್ಯೇವಂ ಜಾಮದಗ್ನ್ಯಂ ತು ಸ್ತುವಂತಂ ಪ್ರಣತಂ ಪುರಃ ।
ಉವಾಚಾಗಾಧಯಾ ವಾಚಾ ಮೋಹಯನ್ನಿವ ಮಾಯಯಾ ॥ ೨೫ ॥

ಕೃಷ್ಣ ಉವಾಚ :—
ಹಂತ ರಾಮ ಮಹಾಭಾಗ ಸಿದ್ಧಂ ತೇ ಕಾರ್ಯಮುತ್ತಮಮ್ ।
ಕವಚಸ್ಯ ಸ್ತವಸ್ಯಾಪಿ ಪ್ರಭಾವಾದವಧಾರಯ ॥ ೨೬ ॥

ಹತ್ವಾ ತಂ ಕಾರ್ತವೀರ್ಯಂ ಹಿ ರಾಜಾನಂ ದೃಪ್ತಮಾನಸಮ್ ।
ಸಾಧಯಿತ್ವಾ ಪಿತುರ್ವೈರಂ ಕುರು ನಿಃಕ್ಷತ್ರಿಯಾಂ ಮಹೀಮ್ ॥ ೨೭ ॥

---

೨೪. ಪ್ರಭುವೇ ! ನಾನು ಕಾಮನೆಯಿಂದ ಕಟ್ಟಲ್ಪಟ್ಟ ಮನಸ್ಸುಳ್ಳವನಾಗಿ ನಾನಾವಿಧ ಪ್ರಯತ್ನಗಳಿಂದ ಪೂಜ್ಯನಾದ (ಸ್ವಾಮಿಯಾದ) ನಿನ್ನನ್ನು ಆರಾಧಿಸಿರುವೆನು. ನೀನು ಸರ್ವ ಮೂರ್ತಿಯು, ಈ ಲೋಕದಲ್ಲೆಲ್ಲ ನಿನಗೆ ವಿಜ್ಞಾಪನೆಮಾಡಿ ತಿಳಿಸಬೇಕಾಗಿರುವ ಹೊಸ ವಿಷಯವು ಏನುತಾನೆ ಇದೆ ?

೨೫. ವಸಿಷ್ಠ ಮಹರ್ಷಿಯು ಹೀಗೆ ನುಡಿದನು, ಈ ವಿಧವಾಗಿ ಮುಂದುಗಡೆಯಲ್ಲಿ ನಮಸ್ಕಾರಮಾಡಿ ವಿನಯದಿಂದ ಸ್ತುತಿಮಾಡುತ್ತಲಿರುವ ಜಾಮದಗ್ನ್ಯರಾಮನನ್ನು ನೋಡಿ ಪರಮಾತ್ಮನು ಮಾಯೆಯಿಂದ ಮೋಹವನ್ನುಂಟುಮಾಡುವವನಂತೆ ಗಂಭೀರವಾದ ವಾಣಿಯಿಂದ ಮಾತನಾಡಿದನು.

೨೬. ಶ್ರೀ ಕೃಷ್ಣನು ಇಂತೆಂದನು, ಭಾಗ್ಯಶಾಲಿಯಾದ ಪರಶುರಾಮನೇ ! ನೀನು ಸಾಧಿಸಿದ ಕವಚ ಮತ್ತು ಸ್ತೋತ್ರಗಳ ಮಹಿಮೆಯಿಂದ ನೀನು ಕೈಗೊಂಡಿರುವ ಉತ್ತಮವಾದ ಕಾರ್ಯವು ಸಿದ್ಧಿ ಹೊಂದಿದೆಯೆಂದು ನಿಶ್ಚಯಿಸು, ಬಹಳ ಸಂತೋಷ !

೨೭. ನೀನು ಅಹಂಕಾರದಿಂದ ಕೊಬ್ಬಿರುವ ಮನಸ್ಸುಳ್ಳ ಕಾರ್ತವೀರ್ಯ ರಾಜನನ್ನು ಕೊಂದು ತಂದೆಯನ್ನು ಅವಮಾನಪಡಿಸಿದ ಸೇಡನ್ನು ತೀರಿಸಿಕೊಂಡು ಭೂಮಿಯಲ್ಲಿ ಕ್ಷತ್ರಿಯ ಜಾತಿಯೇ ಉಳಿಯದಂತೆ ಮಾಡು.

ಮಮ ಚಕ್ರಾವತಾರೋ ಹಿ ಕಾರ್ತವೀರ್ಯೋ ಧರಾತಲೇ ।
ಕೃತಕಾರ್ಯೋ ದ್ವಿಜಶ್ರೇಷ್ಠ ತಂ ಸಮಾಪಯ ಮಾನದ　　॥ ೨೮ ॥

ಅದ್ಯಪ್ರಭೃತಿ ಲೋಕೇಽಸ್ಮಿನ್ ಅಂಶಾವೇಶೇನ ಮೇ ಭವಾನ್ ।
ಚರಿಷ್ಯತಿ ಯಥಾಕಾಲಂ ಕರ್ತಾ ಹರ್ತಾ ಸ್ವಯಂ ಪ್ರಭುಃ　　॥ ೨೯ ॥

ಚತುರ್ವಿಂಶೇ ಯುಗೇ ವತ್ಸ ತ್ರೇತಾಯಾಂ ರಘುವಂಶಜಃ ।
ರಾಮೋ ನಾಮ ಭವಿಷ್ಯಾಮಿ ಚತುರ್ವ್ಯೂಹಃ ಸನಾತನಃ　　॥ ೩೦ ॥

ಕೌಸಲ್ಯಾನಂದಜನಕೋ ರಾಜ್ಞೋ ದಶರಥಾದಹಮ್ ।
ತದಾ ಕೌಶಿಕಯಜ್ಞಂ ತು ಸಾಧಯಿತ್ವಾ ಸಲಕ್ಷ್ಮಣಃ　　॥ ೩೧ ॥

ಗಮಿಷ್ಯಾಮಿ ಮಹಾಭಾಗ ಜನಕಸ್ಯ ಪುರಂ ಮಹತ್ ।
ತತ್ರೇಶಚಾಪಂ ನಿರ್ಭಜ್ಯ ಪರಿಣೀಯ ವಿದೇಹಜಾಮ್　　॥ ೩೨ ॥

---

೨೮. ಮಾನ್ಯರಿಗೆ ಸನ್ಮಾನ ಮಾಡುವ ಬ್ರಾಹ್ಮಣ ಶ್ರೇಷ್ಠನೇ! ನನ್ನ ಚಕ್ರಾಯುಧವು ಭೂಮಂಡಲದಲ್ಲಿ ಕಾರ್ತವೀರ್ಯ ರೂಪದಿಂದ ಅವತಾರ ಮಾಡಿರುವುದು. ಅಂತಹ ಕಾರ್ತವೀರ್ಯರಾಜನು ಅವತಾರ ಪ್ರಯೋಜನವನ್ನು ಸಾಧಿಸಿರುವುದರಿಂದ ನೀನು ಅವನನ್ನು ಸಂಹರಿಸು.

೨೯. ಈ ದಿನ ಮೊದಲುಗೊಂಡು ಈ ಲೋಕದಲ್ಲಿ ನೀನು ನನ್ನ ಅಂಶಾವೇಶದಿಂದ ಕೂಡಿದವನಾಗಿ ಕಾಲಾನುಗುಣವಾಗಿ ನಿಗ್ರಹಾನುಗ್ರಹಗಳನ್ನು ತೋರಿಸುವುದರಲ್ಲಿ ಪ್ರಭುವಾಗಿ ಪ್ರಪಂಚವನ್ನೆಲ್ಲ ಸಂಚರಿಸುವೆ.

೩೦. ನಾಲ್ಕು ವ್ಯೂಹಗಳ ಅಂಶವುಳ್ಳ ಅನಾದಿಯಾದ ನಾನು ಇಪ್ಪತ್ತನಾಲ್ಕನೆಯ ತ್ರೇತಾಯುಗದಲ್ಲಿ ರಘುವಂಶದಲ್ಲಿ ದಶರಥನೆಂಬ ರಾಜನಿಂದ ಕೌಸಲ್ಯಾ ದೇವಿಯನ್ನು ಆನಂದಪಡಿಸುವ ಮಗನಾಗಿ ಹುಟ್ಟಿ ರಾಮ ರೂಪದಿಂದ ಅವತರಿಸುವೆನು.

೩೧. ಮಹಾಶಯನೆ! ಆಗ ಲಕ್ಷ್ಮಣನೊಡಗೂಡಿ ವಿಶ್ವಾಮಿತ್ರ ಮಹರ್ಷಿಯ ಯಜ್ಞಾಚರಣೆಗೆ ಸಹಾಯಮಾಡಿ ವಿಶಾಲವಾದ ಜನಕಮಹಾರಾಜನ ಪಟ್ಟಣಕ್ಕೆ ಹೋಗುವೆನು.

೩೨ ಅಲ್ಲಿ ಈಶ್ವರನ ಬಿಲ್ಲನ್ನು ಮುರಿದು ವಿದೇಹ ರಾಜನ ಮಗಳಾದ ಸೀತೆಯನ್ನು ಮದುವೆಯಾಗಿ ಅಯೋಧ್ಯಾ ರಾಜಧಾನಿಗೆ ಸಮೀಪಿಸಿ ಬರುತ್ತಿರುವಾಗ ನಿನ್ನ ಮದೋನ್ಮತ್ತವಾದ ತೇಜಸ್ಸನ್ನು ಇಳಿಸುವೆನು.

ತದಾ ಯಾಸ್ಯನ್ನಯೋಧ್ಯಾಂ ತೇ ಹರಿಷ್ಯೇ ತೇಜ ಉನ್ಮದಮ್ ।

ವಸಿಷ್ಠ ಉವಾಚ :—

ಕೃಷ್ಣ ಏವಂ ಸಮಾದಿಶ್ಯ ಜಾಮದಗ್ನ್ಯಂ ತಪೋನಿಧಿಮ್ ।
ಪಶ್ಯತೋಽಂತರ್ದಧೇ ತತ್ರ ರಾಮಸ್ಯ ಸುಮಹಾತ್ಮನಃ ॥ ೩೩ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಸಪ್ತತ್ರಿಂಶೋಽಧ್ಯಾಯಃ

---

೩೩. ವಸಿಷ್ಠ ಋಷಿಯು ಹೇಳಿದನು. ಶ್ರೀ ಕೃಷ್ಣನು ತಪಸ್ವಿಯಾದ ಜಾಮದಗ್ನ್ಯ ರಾಮನಿಗೆ ಈ ರೀತಿಯಾಗಿ ಅಪ್ಪಣೆ ಮಾಡಿ ಮಹಾತ್ಮನಾದ ರಾಮನು ನೋಡುತ್ತಿರುವಷ್ಟರಲ್ಲಿಯೇ ಅಂತರ್ಧಾನಹೊಂದಿದನು.

ಬ್ರಹ್ಮಾಂಡ ಪುರಾಣದಲ್ಲಿ ಉತ್ತರಾರ್ಧದಲ್ಲಿ ಮೂವತ್ತೇಳನೆಯ ಅಧ್ಯಾಯವು ಸಮಾಪ್ತವು.

---

## ಅಷ್ಟತ್ರಿಂಶತ್ತಮೋऽಧ್ಯಾಯಃ

ವಸಿಷ್ಠ ಉವಾಚ :—

ಅಂತರ್ಧಾನಂ ಗತೇ ಕೃಷ್ಣೇ ರಾಮುಸ್ತು ಸುಮಹಾಯಶಾಃ ।
ಸಮುದ್ರಿಕ್ತಮಥಾತ್ಮಾನಂ ಮೇನೇ ಕೃಷ್ಣಾನುಭಾವತಃ ॥ ೧ ॥

ಅಕೃತವ್ರಣಸಂಯುಕ್ತಃ ಪ್ರದೀಪ್ತಾಗ್ನಿರಿವ ಜ್ವಲನ್ ।
ಸಮಾಯಾತೋ ಭಾರ್ಗವೋऽಸೌ ಪುರೀಂ ಮಾಹಿಷ್ಮತೀಂ ಪ್ರತಿ ॥ ೨ ॥

ಯತ್ರ ಪಾಪಹರಾ ಪುಣ್ಯಾ ನರ್ಮದಾ ಸರಿತಾಂ ವರಾ ।
ಪುನಾತಿ ದರ್ಶನಾದೇವ ಪ್ರಾಣಿನಃ ಪಾಪಿನೋ ಹ್ಯಪಿ ॥ ೩ ॥

ಪುರಾ ಯತ್ರ ಹರೇಣಾಪಿ ನಿವಿಷ್ಟೇನ ಮಹಾತ್ಮನಾ ।
ತ್ರಿಪುರಸ್ಯ ವಿನಾಶಾಯ ಕೃತೋ ಯತ್ನೋ ಮಹೀಪತೇ ॥ ೪ ॥

---

೧. ವಸಿಷ್ಠ ಮುನಿಯು ಇಂತೆಂದನು :—ಶ್ರೀಕೃಷ್ಣನು ಅಂತರ್ಧಾನ ಹೊಂದಲಾಗಿ ಮಹಾ ಯಶಸ್ವಿಯಾದ ಪರಶುರಾಮನು ಕೃಷ್ಣಾಂಶದ ಆವೇಶ ಮಹಿಮೆಯಿಂದ ತನ್ನನ್ನು ಪ್ರಭಾವೋದ್ರೇಕವುಳ್ಳವನನ್ನಾಗಿ ಅರಿತುಕೊಂಡನು.

೨. ಉರಿಯುವ ಅಗ್ನಿಜ್ವಾಲೆಯಂತೆ ಜ್ವಲಿಸುತ್ತಿರುವ ಪರಶುರಾಮನು ಅಕೃತವ್ರಣಶಿಷ್ಯ ಸಮೇತನಾಗಿ ಮಾಹಿಷ್ಮತೀ ನಗರಕ್ಕೆ ಬಂದನು.

೩. ಆ ಮಾಹಿಷ್ಮತೀ ನಗರಿಯಲ್ಲಿ ನದಿಗಳಲ್ಲೆಲ್ಲ ಪ್ರಶಸ್ತವೂ ಪವಿತ್ರವೂ ಪಾಪನಾಶಕವೂ ಆದ ನರ್ಮದಾ ನದಿಯು ದರ್ಶನ ಮಾತ್ರದಿಂದಲೇ ಮಹಾ ಪಾತಕಿಗಳಾದ ಪ್ರಾಣಿಗಳನ್ನೂ ಪವಿತ್ರಮಾಡುತ್ತಿದೆ

೪. ರಾಜನೆ! ಮತ್ತು ಪೂರ್ವದಲ್ಲಿ ಮಹಾತ್ಮನಾದ ಶಿವನು ಅದೇ ಸ್ಥಳದಲ್ಲಿ ಕುಳಿತುಕೊಂಡು ತ್ರಿಪುರಾಸುರನ ಸಂಹಾರಕ್ಕೆ ಯತ್ನಮಾಡಿರುವನು.

ತತ್ರ ಕಿಂ ವರ್ಣ್ಯತೇ ಪುಣ್ಯಂ ನೃಣಾಂ ದೇವಸ್ವರೂಪಿಣಾಮ್ ।
ಸ ದೃಷ್ಟ್ವಾ ನರ್ಮದಾಂ ಭೂಪ ಭಾರ್ಗವಃ ಕುಲನಂದನಃ ॥ ೫ ॥

ನಮಶ್ಚಕಾರ ಸುಪ್ರೀತಃ ಶತ್ರುಸಾಧನತತ್ಪರಃ ।
ನಮೋಽಸ್ತು ನರ್ಮದೇ ತುಭ್ಯಂ ಹರದೇಹಸಮುದ್ಭವೇ ॥ ೬ ॥

ಕ್ಷಿಪ್ರಂ ನಾಶಯ ಶತ್ರೂನ್ಮೇ ವರದಾ ಭವ ಶೋಭನೇ ।
ಇತ್ಯೇವಂ ಸ ನಮಸ್ಕೃತ್ಯ ನರ್ಮದಾಂ ಪಾಪನಾಶಿನೀಮ್ ॥ ೭ ॥

ದೂತಂ ಪ್ರಸ್ಥಾಪಯಾಮಾಸ ಕಾರ್ತವೀರ್ಯಾರ್ಜುನಂ ಪ್ರತಿ ।
ದೂತ ರಾಜಾ ತ್ವಯಾ ವಾಚ್ಯೋ ಯದಹಂ ವಚ್ಮಿ ತೇಽನಘ ॥ ೮ ॥

ನ ಸಂದೇಹಸ್ತ್ವಯಾ ಕಾರ್ಯೋ ದೂತಃ ಕ್ವಾಪಿ ನ ಬಧ್ಯತೇ ।
ಯದ್ಬಲಂ ತು ಸಮಾಶ್ರಿತ್ಯ ಜಮದಗ್ನಿಮುನಿಂ ನೃಪಃ ॥ ೯ ॥

---

೫. ಆ ಮಾಹಿಷ್ಮತೀ ನಗರದಲ್ಲಿ ದೇವತಾರೂಪದಿಂದ ವಾಸಿಸುವ ಜನಗಳ ಪವಿತ್ರತೆಯನ್ನು ವರ್ಣಿಸುವುದೇನಿದೆ? ದೊರೆಯೆ! ವಂಶವನ್ನು ಉದ್ಧಾರಮಾಡುವ ಮತ್ತು ಶತ್ರುಗಳ ಜಯದಲ್ಲಿ ಆಸಕ್ತನಾದ ರಾಮನು ನರ್ಮದಾ ನದಿಯನ್ನು ಕಂಡು ಸಂತುಷ್ಟಚಿತ್ತನಾಗಿ ನಮಸ್ಕಾರಮಾಡಿದನು.

೬. ಈಶ್ವರನ ದೇಹದಿಂದ ಹುಟ್ಟಿರುವ ನರ್ಮದಾ ಮಹಾನದಿಯೆ! ನಿನ್ನನ್ನು ನಮಸ್ಕರಿಸುವೆನು. ನನ್ನ ಶತ್ರುಗಳನ್ನು ಬೇಗ ನಾಶಮಾಡು. ಮಂಗಳಕರಳೇ, ನನಗೆ ವರವನ್ನು ನೀಡುವವಳಾಗು.

೭. ಪಾಪ ನಾಶಕವಾದ ನರ್ಮದಾ ನದಿಯನ್ನು ಈ ಮಂತ್ರದಿಂದ ಸ್ತುತಿಸಿ ನಮಸ್ಕಾರಮಾಡಿ ಕಾರ್ತವೀರ್ಯಾರ್ಜುನನ ಬಳಿಗೆ ದೂತನನ್ನು ಕಳುಹಿಸಿದನು.

೮. ನಿರ್ದೋಷನಾದ ದೂತನೇ, ನಾನು ಹೇಳಿ ಕಳುಹಿಸುವ ಸಂದೇಶ ವಚನವನ್ನು ನೀನು ಕಾರ್ತವೀರ್ಯಾರ್ಜುನ ರಾಜನಿಗೆ ಹೇಳು. ಯಾವಾಗಲೂ ದೂತನನ್ನು ಬಂಧಿಸುವುದು ನೀತಿಯಲ್ಲದ್ದರಿಂದ ನೀನು ಬಂಧನಕ್ಕೆ ಹೆದರಿ ಸಂದೇಹಪಡಬೇಕಾಗಿಲ್ಲ.

೯. ರಾಜನಾದ ನೀನು ಜಮದಗ್ನಿ ಮುನಿಯನ್ನು ಬಲವಿದೆಯೆಂಬ ದರ್ಪವನ್ನು ಅವಲಂಬಿಸಿ ಏತಕ್ಕೆ ತಿರಸ್ಕಾರಮಾಡಿರುವೆಯೋ! ಮೂಢನೆ, ಅದಕ್ಕಾಗಿ ಆ ಜಮದಗ್ನಿ ಪುತ್ರನು ನಿನ್ನೊಡನೆ ಯುದ್ಧಕ್ಕೆ ಬಂದಿರುವನು.

ತಿರಸ್ಕೃತಂ ಕೃತವಾನ್ ಮೂಢ ತತ್ಪ್ರತೋ್ರೀ ಯೋದ್ಧುಮಾಗತಃ ।
ಶೀಘ್ರಂ ನಿರ್ಗಚ್ಛ ಮಂದಾತ್ಮನ್ ಯುದ್ಧಂ ರಾಮಾಯ ದೇಹಿ ತತ್ ॥ ೧೦ ॥

ಭಾರ್ಗವಂ ತ್ವಂ ಸಮಾಸಾದ್ಯ ಗಚ್ಛ ಲೋಕಾಂತರಂ ತ್ವರ ।
ಇತ್ಯೇವಮುಕ್ತ್ವಾ ರಾಜಾನಂ ಶ್ರುತ್ವಾ ತಸ್ಯ ವಚಸ್ತಥಾ ॥ ೧೧ ॥

ಶೀಘ್ರಮಾಗಚ್ಛ ಭದ್ರಂ ತೇ ವಿಲಂಬೋ ನೇಹ ಶಸ್ಯತೇ ।
ತೇನೈವಮುಕ್ತೋ ದೂತಸ್ತು ಗತೋ ಹೈಹಯಭೂಪತಿಮ್ ॥ ೧೨ ॥

ರಾಮೋದಿತಂ ತತ್ಸಕಲಂ ಶ್ರಾವಯಾಮಾಸ ಸಂಸದಿ ।
ಸ ರಾಜಾತ್ರೇಯಭಕ್ತಸ್ತು ಮಹಾಬಲಪರಾಕ್ರಮಃ ॥ ೧೩ ॥

ಚುಕ್ರೋಧ ಶ್ರುತ್ವಾ ವಾಕ್ಯಂ ತದ್ದೂತಮುತ್ತರಮಾವಹತ್ ।
ಕಾರ್ತವೀರ್ಯ ಉವಾಚ :
ಮಯಾ ಭುಜಬಲೇನೈವ ದತ್ತದತ್ತೇನ ಮೇದಿನೀ ॥ ೧೪ ॥

---

೧೦. ಮಂದಬುದ್ಧಿಯೆ! ಶೀಘ್ರವಾಗಿ ಹೊರಕ್ಕೆ ಹೊರಟು ಬಾ, ರಾಮನೊಡನೆ ಯುದ್ಧವನ್ನು ಮಾಡು. ಭಾರ್ಗವರಾಮನೊಡನೆ ಸೇರಿ ಯುದ್ಧಮಾಡಿ ಪರಲೋಕಕ್ಕೆ ತೆರಳು. ತ್ವರೆಮಾಡು.

೧೧. ಈ ರೀತಿಯಾಗಿ ಕಾರ್ತವೀರ್ಯರಾಜನಿಗೆ ಹೇಳಿ ಹಾಗೆ ಅವನು ಹೇಳುವ ಮಾತನ್ನು ಕೇಳಿಕೊಂಡು ಶೀಘ್ರವಾಗಿ ಅಲ್ಲಿಂದ ಹಿಂತಿರುಗಿ ಬಾ, ನಿನಗೆ ಮಂಗಳವಾಗಲಿ, ಈ ಕಾರ್ಯದಲ್ಲಿ ವಿಳಂಬಮಾಡುವುದು ಪ್ರಶಸ್ತವಲ್ಲ.

೧೨. ಪರಶುರಾಮನಿಂದ ಹೀಗೆ ಅಪ್ಪಣೆಮಾಡಲ್ಪಟ್ಟ ದೂತನು ಹೈಹಯ ರಾಜನಾದ ಕಾರ್ತವೀರ್ಯಾರ್ಜುನನಿಗೆ ಆಸ್ಥಾನ ಸಭೆಯಲ್ಲಿ ರಾಮನು ಹೇಳಿ ಕಳಿಸಿರುವ ಎಲ್ಲ ವಿಷಯವನ್ನೂ ಹೇಳಿದನು.

೧೩. ಮಹಾಸೈನ್ಯ ಮತ್ತು ಪರಾಕ್ರಮಸಂಪನ್ನನೂ ದತ್ತಾತ್ರೇಯ ಭಕ್ತನೂ ಆದ ಆ ಕಾರ್ತವೀರ್ಯಾರ್ಜುನರಾಜನು ಆ ಭಾರ್ಗವರಾಮನ ಸಂದೇಶವನ್ನು ಕೇಳಿ ಕುಪಿತನಾಗಿ ಆ ದೂತನ ಮೂಲಕವಾಗಿ ಪ್ರತ್ಯುತ್ತರವನ್ನು ಕಳುಹಿಸಿದನು.

೧೪-೧೫. ಕಾರ್ತವೀರ್ಯಾರ್ಜುನನು ಇಂತೆಂದನು :–ದತ್ತಾತ್ರೇಯಮುನಿಯ ಅನುಗ್ರಹಿಸಿದ ಭುಜಬಲದಿಂದಲೇ ಬಲಾತ್ಕಾರದಿಂದ ಭೂಪಾಲರನ್ನೆಲ್ಲ ಬಂಧಿಸಿ

ಜಿತಾ ಪ್ರಸಹ್ಯ ಭೂಪಾಲಾನ್ ಬದ್ಧ್ವಾನೀಯ ನಿಜಂ ಪುರಮ್ ।
ತದ್ಬಲಂ ಮಯಿ ವರ್ತೇತ ಯುದ್ಧಂ ದಾಸ್ಯೇ ತವಾಧುನಾ ॥ ೧೫ ॥

ಇತ್ಯುಕ್ತ್ವಾ ವಿಸಸರ್ಜಾಶು ದೂತಂ ಹೈಹಯಭೂಪತಿಃ
ಸೇನಾಧ್ಯಕ್ಷಂ ಸಮಾಹೂಯ ಪ್ರೋವಾಚ ವದತಾಂ ವರಃ ॥ ೧೬ ॥

ಸಜ್ಜಂ ಕುರು ಮಹಾಭಾಗ ಸೈನ್ಯಂ ಮೇ ವೀರಸಮ್ಮತಃ ।
ಯೋತ್ಸ್ಯೇ ರಾಮೇಣ ಭೃಗುಣಾ ವಿಲಂಬೋ ಮಾ ಭವತ್ವಿತಿ ॥ ೧೭ ॥

ಏವಮುಕ್ತೋ ಮಹಾವೀರಃ ಸೇನಾಧ್ಯಕ್ಷಃ ಪ್ರತಾಪನಃ ।
ಸೈನ್ಯಂ ಸಜ್ಜಂ ವಿಧಾಯಾಶು ಚತುರಂಗಂ ನ್ಯವೇದಯತ್ ॥ ೧೮ ॥

ಸೈನ್ಯಂ ಸಜ್ಜಂ ಸಮಾಕರ್ಣ್ಯ ಕಾರ್ತವೀರ್ಯೋ ನೃಪೋ ಮುದಾ ।
ಸೂತೋಪನೀತಂ ಸ್ವರಥಮಾರುರೋಹ ವಿಶಾಂ ಪತೇ ॥ ೧೯ ॥

---

ನನ್ನ ರಾಜಧಾನಿಗೆ ಸೆಳೆದುತಂದು ಸಂಪೂರ್ಣ ಭೂಮಿಯನ್ನು ಗೆದ್ದಿರುವೆನು. ಆ ಭುಜ ಬಲವು ಇಂದಿಗೂ ನನ್ನಲ್ಲಿರುವುದು. ಈಗ ನಿನ್ನೊದನೆ ಯುದ್ಧಮಾಡಲು ಸಿದ್ಧನಾಗಿ ರುವೆನು.

೧೬. ಹೈಹಯಾಧಿಪತಿಯೂ ಉತ್ತಮವಾಗ್ಮಿಯೂ ಆದ ಕಾರ್ತವೀರ್ಯಾ ರ್ಜುನನು ಈ ರೀತಿಯಾಗಿ ಹೇಳಿ ದೂತನನ್ನು ಬೇಗ ಕಳಿಸಿಕೊಟ್ಟು ತನ್ನ ಸೇನಾಪತಿ ಯನ್ನು ಕರೆದು ಹೇಳಿದನು.

೧೭. ಮಹಾಶಯನೇ! ವೀರಪುರುಷರ ಮೆಚ್ಚಿಗೆಯನ್ನು ಪಡೆದ ನೀನು ನಮ್ಮ ಸೈನ್ಯವನ್ನೆಲ್ಲ ಸಿದ್ಧಪಡಿಸು. ಭಾರ್ಗವರಾಮನೊಡನೆ ಯುದ್ಧ ಹೂಡುವೆನು. ತಡ ಮಾಡಬೇಡ ಎಂದು ಹೇಳಿದನು.

೧೮. ಮಹಾವೀರ್ಯದಿಂದ ತಪಿಸುತ್ತಿದ್ದ ಸೇನಾಪತಿಯು ಈ ರೀತಿ ಆಜ್ಞಾಪಿ ಸಲ್ಪಟ್ಟ ಕೂಡಲೆ ತನ್ನ ಗಜಾಶ್ವರಥ ಪದಾತಿಗಳೆಂಬ ಚತುರಂಗ ಸೈನ್ಯವನ್ನು ಸಜ್ಜು ಗೊಳಿಸಿ ಅರಿಕೆಮಾಡಿಕೊಂಡನು.

೧೯. ಪ್ರಜಾನಾಥನೆ! ಕಾರ್ತವೀರ್ಯಾರ್ಜುನ ರಾಜನು ಸೈನ್ಯವು ಸಿದ್ಧ ವಾದುದನ್ನು ಕೇಳಿ ಸಂತೋಷದಿಂದ ಸಾರಥಿಯು ತಂದು ನಿಲ್ಲಿಸಿದ ರಥವನ್ನೇರಿದನು.

ತಸ್ಯ ರಾಜ್ಞಃ ಸಮಂತಾತ್ತು ಸಾಮಂತಾ ಮಂಡಲೇಶ್ವರಾಃ ।
ಅನೇಕಾಕ್ಷೌಹಿಣೀಯುಕ್ತಾಃ ಪರಿವಾರ್ಯೋಪತಸ್ಥಿರೇ ॥ ೨೦ ॥

ನಾಗಾಸ್ತು ಕೋಟಿಶಸ್ತತ್ರ ಹಯಸ್ಯಂದನಪತ್ತಯಃ ।
ಅಸಂಖ್ಯಾತಾ ಮಹಾರಾಜ ಸೈನ್ಯೇ ಸಾಗರಸನ್ನಿಭೇ ॥ ೨೧ ॥

ದೃಶ್ಯಂತೇ ತತ್ರ ಭೂಪಾಲಾ ನಾನಾವಂಶಸಮುದ್ಭವಾಃ ।
ಮಹಾವೀರಾ ಮಹಾಕಾಯಾ ನಾನಾಯುದ್ಧವಿಶಾರದಾಃ ॥ ೨೨ ॥

ನಾನಾಶಸ್ತ್ರಾಸ್ತ್ರಕುಶಲಾಃ ನಾನಾವಾಹಗತಾ ನೃಪಾಃ ।
ನಾನಾಲಂಕಾರಸಂಯುಕ್ತಾ ಮತ್ತಾ ದಾನವಿಭೂಷಿತಾಃ ॥ ೨೩ ॥

ಮಹಾಮಾತ್ರಕೃತೋದ್ದೇಶಾಃ ಭಾಂತಿ ನಾಗಾ ಹ್ಯನೇಕಶಃ ।
ನಾನಾಜಾತಿಸಮುತ್ಪನ್ನಾ ಹಯಾಃ ಪವನರಂಹಸಃ ॥ ೨೪ ॥

---

೨೦. ಆ ರಾಜನ ಸುತ್ತಲೂ ಚಿಕ್ಕ ಚಿಕ್ಕ ಪಾಳ್ಯಗಳಿಗೆ ಅಧಿಪತಿಗಳಾದ ಸಾಮಂತರಾಜರು ಅನೇಕ ಅಕ್ಷೌಹಿಣೀ ಸೈನ್ಯಸಹಿತರಾಗಿ ಆ ರಾಜನನ್ನು ಸುತ್ತುವರಿದು ನಿಂತರು.

೨೧-೨೨. ಮಹಾರಾಜನೇ! ಸಮುದ್ರದಂತೆ ವಿಶಾಲವಾದ ಆ ಸೈನ್ಯದಲ್ಲಿ ಕೋಟಿಗಟ್ಟಲೆಯಾಗಿ ಆನೆಗಳೂ ಎಣಿಸಲು ಆಗದಷ್ಟು ಕುದುರೆ-ರಥ-ಪದಾತಿ ಸೈನ್ಯಗಳೂ ಕಾಣಿಸುತ್ತಿದ್ದುವು. ಮತ್ತು ನಾನಾ ವಂಶಗಳಲ್ಲಿ ಹುಟ್ಟಿ ಮಹಾ ವೀರರೂ ಮಹಾಕಾಯರೂ ವಿವಿಧ ಯುದ್ಧ ನಿಷ್ಣಾತರೂ ಎಂದೆನಿಸಿದ ಅನೇಕ ದೊರೆಗಳೂ ಅಲ್ಲಿ ಕಾಣಿಸುತ್ತಿದ್ದರು.

೨೩-೨೪. ಅಲ್ಲಿ ಮೆರೆವ ರಾಜರೆಲ್ಲರೂ ಅನೇಕ ಶಸ್ತ್ರಾಸ್ತ್ರ ಪ್ರವೀಣರೂ ವಿವಿಧಾಲಂಕಾರಗಳಿಂದ ಅಲಂಕೃತರೂ ಆಗಿ ಅನೇಕ ವಾಹನಗಳನ್ನು ಏರಿಕೊಂಡಿದ್ದರು. ಮತ್ತು ಸಾವಿರಾರು ಮದೋದಕದಿಂದ ಶೋಭಿಸಲ್ಪಟ್ಟ ಮದ್ದಾನೆಗಳು ಮಾವಟಿಗರಿಂದ ಅಲ್ಲಲ್ಲಿ ನಡೆಸಲ್ಪಡುತ್ತಲಿದ್ದುವು. ರಾಜನೆ! ಹಾಗೆಯೇ ಸವಾರರಿಂದ ಚನ್ನಾಗಿ ಶಿಕ್ಷಿತಗಳಾದ ವಾಯುವೇಗವುಳ್ಳ ನಾನಾ ಜಾತಿಯ ಕುದುರೆಗಳು ಮೇಲೆ ಮೇಲೆ ಕುಣಿದಾಡುತ್ತ ಪ್ರಕಾಶಿಸುತ್ತಲಿದ್ದುವು.

ಪ್ಲವಂತೋ ಭಾಂತಿ ಭೂಪಾಲ ಸಾದಿಭಿಃ ಕೃತಶಿಕ್ಷಣಾಃ ।
ಸ್ಯಂದನಾನಿ ಸುದೀರ್ಘಾಣಿ ಜವನಾಶ್ವಯುತಾನಿ ಚ ॥ ೨೫ ॥

ಚಕ್ರನಿನಿರ್ಘೋಷಯುಕ್ತಾನಿ ಪ್ರಾವೃಣ್ಮೇಘೋಪಮಾನಿ ಚ ।
ಪದಾತಯಸ್ತು ರಾಜಂತೇ ಖಡ್ಗಚರ್ಮಧರಾ ನೃಪ ॥ ೨೬ ॥

ಅಹಂ ಪೂರ್ವಮಹಂ ಪೂರ್ವಮಿತ್ಯಹಂಪೂರ್ವಿಕಾನ್ವಿತಾಃ ।
ಯದಾ ಪ್ರಚಲಿತಂ ಸೈನ್ಯಂ ಕಾರ್ತವೀರ್ಯಾರ್ಜುನಸ್ಯ ವೈ ॥ ೨೭ ॥

ತದಾ ಪ್ರಚ್ಛಾದಿತಂ ವ್ಯೋಮ ರಜಸಾ ಚ ದಿಶೋ ದಶ ।
ನಾನಾವಾದಿತ್ರನಿರ್ಘೋಷೈರ್ಹಯಾನಾಂ ಹ್ರೇಷಿತೈಸ್ತಥಾ ॥ ೨೮ ॥

ಗಜಾನಾಂ ಬೃಂಹಿತೈ ರಾಜನ್ ವ್ಯಾಪ್ತಂ ಗಗನಮಂಡಲಮ್ ।
ಮಾರ್ಗೇ ದದರ್ಶ ರಾಜೇಂದ್ರೋ ವಿಪರೀತಾನಿ ಭೂಪತೇ ॥ ೨೯ ॥

---

೨೫. ಬಲುವೇಗದಿಂದ ನಡೆಯುವ ಕುದುರೆಗಳನ್ನು ಕಟ್ಟಿದ್ದ ಚಕ್ರಗಳ ಗಂಭೀರ ಧ್ವನಿಯಿಂದ ಗುಡುಗುವ ವರ್ಷಋತುವಿನ ಮೇಘಗಳಿಗೆ ಸಮಾನವಾದ ಅತ್ಯುನ್ನತವಾದ ರಥಗಳು ಶೋಭಿಸುತ್ತಿದ್ದುವು.

೨೬. ದೊರೆಯೆ! ಖಡ್ಗ-ಚರ್ಮಗಳನ್ನು ಧರಿಸಿ ತಾನು ಮುಂದೆ ತಾನು ಮುಂದೆ ಎಂಬ ಅಹಂಭಾವನೆಯಿಂದ ಕೂಡಿದ ಪದಾತಿಗಳೂ ಶೋಭಿಸುತ್ತವೆ.

೨೭. ಕಾರ್ತವೀರ್ಯಾರ್ಜುನನ ಸೈನ್ಯವು ಮುಂದು ಮುಂದಕ್ಕೆ ನಡೆಯುತ್ತಿರಲಾಗಿ ಮೇಲಕ್ಕೆದ್ದ ಧೂಳಿಯಿಂದ ಹತ್ತು ದಿಕ್ಕುಗಳೂ ಆಕಾಶವೆಲ್ಲವೂ ಮುಚ್ಚಿ ಹೋದುವು.

೨೮. ರಾಜನೆ! ನಾನಾ ವಿಧವಾದ ಜಯವಾದ್ಯಗಳ ಘೋಷ, ಕುದುರೆಗಳ ಹೇಷಾಧ್ವನಿ, ಆನೆಗಳ ಬೃಂಹಿತಗರ್ಜನ ಇವುಗಳಿಂದ ಆಕಾಶವೆಲ್ಲವೂ ಶಬ್ದಮಯವಾಯಿತು.

೨೯. ಭೂಪತಿಯೇ! ಮಹಾರಾಜನಾದ ಕಾರ್ತವೀರ್ಯ ಅರ್ಜುನನು ಪ್ರಯಾಣಮಾಡುವಾಗ ಮಧ್ಯಮಾರ್ಗದಲ್ಲಿ ತನ್ನ ಸಾವನ್ನು ಸೂಚಿಸಲು ದೂತಕರ್ಮದಿಂದ ಬಂದಂತಿರುವ ಅನೇಕ ಅಪಶಕುನಗಳನ್ನು ಕಂಡನು.

ಶಕುನಾನಿ ರಣೇ ತಸ್ಯ ಮೃತ್ಯುದೌತ್ಯಕರಾಣಿ ಚ ।
ಮುಕ್ತಕೇಶಾಂ ಛಿನ್ನನಾಸಾಂ ರುದಂತೀಂ ಚ ದಿಗಂಬರಾಮ್ ॥ ೩೦ ॥

ಕೃಷ್ಣವಸ್ತ್ರಪರೀಧಾನಾಂ ವನಿತಾಂ ಸ ದದರ್ಶ ಹ ।
ಕುಚೈಲಂ ಪತಿತಂ ಭಗ್ನಂ ನಗ್ನಂ ಕಾಷಾಯವಾಸಸಮ್ ॥ ೩೧ ॥

ಅಂಗಹೀನಂ ದದರ್ಶಾಸೌ ನರಂ ದುಃಖಿತಮಾನಸಮ್ ।
ಗೋಧಾಂ ಚ ಶಶಕಂ ಶಲ್ಯಂ ರಿಕ್ತಕುಂಭಂ ಸರೀಸೃಪಮ್ ॥ ೩೨ ॥

ಕಾರ್ಪಾಸಂ ಕಚ್ಛಪಂ ತೈಲಂ ಲವಣಂ ಚಾಸ್ಥಿಖಂಡಕಮ್ ।
ಸ್ವದಕ್ಷಿಣೇ ಶೃಗಾಲಂ ಚ ಕುರ್ವಂತಂ ಭೈರವಂ ರವಮ್ ॥ ೩೩ ॥

ರೋಗಿಣಂ ಪುಲ್ಕಸಂ ಚೈವ ವೃಷಂ ಚ ಶ್ಯೇನಭಲ್ಲುಕೌ ।
ದೃಷ್ಟ್ವಾಪಿ ಪ್ರಯಯೌ ಯೋದ್ಧುಂ ಕಾಲಪಾಶಾವೃತೋ ಹಠಾತ್ ॥ ೩೪ ॥

---

೩೦. ಅವನು ಕಂಡ ದುರ್ನಿಮಿತ್ತಗಳಲ್ಲಿ ಕೆಲವು ಇಂತಹ ಅಪಶಕುನಗಳು ಮುಖ್ಯವಾದುವು. ಕೂದಲುಗಳನ್ನು ಕೆದರಿಸಿದ, ಮೂಗನ್ನು ಕತ್ತರಿಸಿದ, ಕೃಷ್ಣವಸ್ತ್ರವನ್ನು ಮೈಮೇಲೆ ಹಾಕಿಕೊಂಡಿರುವ ದಿಗಂಬರೆಯಾದ ವನಿತೆಯು ಅಳುತ್ತ ಬರುವುದನ್ನು ಕಂಡನು.

೩೧. ಅಸಹ್ಯವಾದ ವಸ್ತ್ರ ಗ್ರಂಥಿಯುಳ್ಳವನೂ, ಪತಿತನೂ, ಮೈಮುರಿದಂತಿರುವವನೂ, ಕಾಷಾಯವಸ್ತ್ರವನ್ನು ಹೊದ್ದವನೂ, ದಿಗಂಬರನೂ, ಅಂಗಹೀನನೂ, ಮನಸ್ಸು ನೊಂದವನೂ ಆದ ಒಬ್ಬ ದೀನ ಮನುಷ್ಯನನ್ನು ನೋಡಿದನು.

೩೨. ಹಾವು ರಾಣಿ, ಮೊಲ, ಮುಳ್ಳುಹಂದಿ, ಶೂನ್ಯವಾದ ಗಡಿಗೆ, ಹಾವು, ಹತ್ತಿ, ಆಮೆ, ಎಣ್ಣೆ, ಉಪ್ಪು, ಮೂಳೆಗಳ ಚೂರುಗಳು–ಮುಂತಾದ ಈ ಅಪಶಕುನ ಸೂಚಕವಾದ ವಸ್ತುಗಳ ಸಾಲನ್ನು ಕಂಡನು.

೩೩. ತನ್ನ ಬಲಗಡೆಯಲ್ಲಿ ಭಯಂಕರವಾಗಿ ಕೂಗುತ್ತಲಿರುವ ನರಿಯನ್ನೂ ರೋಗದಿಂದ ನರಳುವ ಚಂಡಾಲನನ್ನೂ ಗೂಳಿ, ಹದ್ದು, ಭಲ್ಲ ಮೃಗ ಇವೆಲ್ಲವನ್ನೂ ನೋಡುವವನಾದನು.

೩೪. ಇಷ್ಟು ಅಪಶಕುನಗಳನ್ನು ಕಂಡಿದ್ದರೂ ಮೃತ್ಯುವಿನ ಪಾಶದಿಂದ ಬದ್ಧನಾದ ಆ ರಾಜನು ಹಠವಾಗಿ ಯುದ್ಧಕ್ಕೆ ಹೋದನು.

ನರ್ಮದೋತ್ತರತೀರಸ್ಥೋ ಹ್ಯಕೃತವ್ರಣಸಂಯುತಃ ।
ವಟಚ್ಛಾಯಾಸಮಾಸೀನೋ ರಾಮೋಽಪಶ್ಯದುಪಾಗತಮ್ ॥ ೩೫ ॥

ಕಾರ್ತವೀರ್ಯಂ ನೃಪವರಂ ಶತಕೋಟಿನೃಪಾನ್ವಿತಮ್ ।
ಸಹಸ್ರಾಕ್ಷೌಹಿಣೀಯುಕ್ತಂ ದೃಷ್ಟ್ವಾ ಹೃಷ್ಟೋ ಬಭೂವ ಹ ॥ ೩೬ ॥

ಅದ್ಯ ಮೇ ಸಿದ್ಧಿಮಾಯಾತಂ ಕಾರ್ಯಂ ಚಿರಸಮೀಹಿತಮ್ ।
ಯದ್ದೃಷ್ಟಿಗೋಚರೋ ಜಾತಃ ಕಾರ್ತವೀರ್ಯೋನೃಪಾಧಮಃ ॥ ೩೭ ॥

ಇತ್ಯೇವಮುಕ್ತ್ವಾ ಚೋತ್ಥಾಯ ಧೃತ್ವಾ ಪರಶುಮಾಯುಧಮ್ ।
ವ್ಯಜೃಂಭತಾರಿನಾಶಾಯ ಸಿಹ್ಮಃ ಕ್ರುದ್ಧೋ ಯಥಾ ತಥಾ ॥ ೩೮ ॥

ದೃಷ್ಟ್ವಾ ಸಮುದ್ಯತಂ ರಾಮಂ ಸೈನಿಕಾನಾಂ ವಧಾಯ ಚ ।
ಚಕಂಪಿರೇ ಭೃಶಂ ಸರ್ವೇ ಮೃತ್ಯೋರಿವ ಶರೀರಿಣಃ ॥ ೩೯ ॥

---

೩೫-೩೬. ಅಕೃತ ವ್ರಣ ಶಿಷ್ಯ ಸಮೇತನಾಗಿ ನರ್ಮದಾ ನದಿಯ ಉತ್ತರ ತೀರದಲ್ಲಿ ಆಲದ ಮರದ ನೆರಳಿನಲ್ಲಿ ಕುಳಿತುಕೊಂಡಿರುವ ಭಾರ್ಗವರಾಮನು ಸಾವಿರಾರು ಅಕ್ಷೌಹಿಣೀ ಸೈನ್ಯ, ಅನೇಕಾನೇಕ ರಾಜ ವೃಂದದಿಂದ ಕೂಡಿ ಸಮೀಪಿಸಿ ಬಂದ ರಾಜಶ್ರೇಷ್ಠನಾದ ಕಾರ್ತವೀರ್ಯಾರ್ಜುನನ್ನು ನೋಡಿದನು. ಮತ್ತು ಅವನನ್ನು ಕಂಡು ಬಹಳ ಸಂತೋಷಪಟ್ಟವನಾದನು.

೩೭. ನೃಪಾಧಮನಾದ ಕಾರ್ತವೀರ್ಯ ರಾಜನು ಯುದ್ಧಕ್ಕೆ ಕಣ್ಣೆದುರಿಗೆ ಬಂದಿರುವುದರಿಂದ ಬಹು ಕಾಲದಿಂದ ನಿರೀಕ್ಷಿಸಲ್ಪಟ್ಟಿರುವ ನನ್ನ ಇಷ್ಟಾರ್ಥವು ಈ ದಿನ ಸಿದ್ಧಿಸದಂತೆಯೇ ಆಯಿತು.

೩೮. ಎಂಬುದಾಗಿ ಹೇಳಿಕೊಂಡು ತನ್ನ ಪರಶು ಆಯುಧವನ್ನು ಧರಿಸಿ ಮೇಲಕ್ಕೆದ್ದು ಕೋಪಗೊಂಡ ಸಿಂಹದಂತೆ ಶತ್ರು ನಾಶಕ್ಕೆ ವಿಜೃಂಭಿಸಿದನು.

೩೯. ಸೈನಿಕರನ್ನೆಲ್ಲ ಕೊಲ್ಲಲು ಎದುರುಬಿದ್ದು ಬರುವ ಶೂರ ಭಾರ್ಗವನನ್ನು ಕಂಡು ಎಲ್ಲರೂ ಮೃತ್ಯುದೇವನಿಗೆ ಮರ್ತ್ಯರೆಲ್ಲರೂ ಹೆದರಿದಂತೆ ಹೆಚ್ಚಾಗಿ ನಡುಗಿದರು.

ಸ ಯತ್ರ ಯತ್ರಾನಿಲರಂಹಸಂ ಭೃಗು
ಶ್ಲಿಕ್ಷೇಪ ರೋಷೇಣ ಯುತಃ ಪರಶ್ವಧಮ್ ।
ತತಸ್ತತಶ್ಛಿನ್ನಭುಜೋರುಕಂಧರಾ
ನಾಗಾ ಹಯಾಃ ಶೂರನರಾ ನಿಪೇತುಃ ॥ ೪೦ ॥

ಯಥಾ ಗಜೇಂದ್ರೋ ಮದಯುಕ್ ಸಮಂತತೋ
ನಾಲಂ ವನಂ ಮರ್ದಯತಿ ಪ್ರಧಾವನ್ ।
ತಥೈವ ರಾಮೋಽಪಿ ಮನೋನಿಲೌಜಾ
ವಿಮರ್ದಯಾಮಾಸ ನೃಪಸ್ಯ ಸೇನಾಮ್ ॥ ೪೧ ॥

ದೃಷ್ಟ್ವಾ ತಮಿತ್ಥಂ ಪ್ರಹರಂತಮೋಜಸಾ
ರಾಮಂ ರಣೇ ಶಸ್ತ್ರಭೃತಾಂ ವರಿಷ್ಠಮ್ ।
ಉದ್ಯಮ್ಯ ಚಾಪಂ ಮಹದಾಸ್ಥಿತೋ ರಥಂ
ಸಜ್ಯಂ ಚ ಕೃತ್ವಾ ಕಿಲ ಮತ್ಸ್ಯರಾಜಃ ॥ ೪೨ ॥

---

೪೦. ಆ ಭೃಗುರಾಮನು ರೋಷದಿಂದ ಕೂಡಿ ಎಲ್ಲೆಲ್ಲಿ ವಾಯುವೇಗದಿಂದ ಕೂಡಿ ಕೊಡಲಿಯಿಂದ ಹೊಡೆದನೋ ಅಲ್ಲಲ್ಲಿ ಬಾಹು ತೋಳು ಕತ್ತುಗಳು ಕತ್ತರಿಸಲ್ಪಟ್ಟ ಆನೆ ಕುದುರೆ ಮತ್ತು ಶೂರ ಪುರುಷರು ಬೀಳುತ್ತಲಿದ್ದರು.

೪೧. ಭಾರಿಯಾದ ಆನೆಗೆ ಮದವೇರಿದಾಗ ಅದು ಅಲ್ಲಲ್ಲಿ ಸುತ್ತಲೂ ಓಡಾಡುತ್ತ ನಲವೆಂಬ ತೃಣವನ ಪ್ರದೇಶವನ್ನು ಹೇಗೆ ಧ್ವಂಸಮಾಡುವುದೋ ಹಾಗೆಯೇ ರಾಮನೂ ಮನೋವೇಗ ವಾಯುವೇಗಗಳಿಂದ ಕೂಡಿ ರಾಜನ ಸೇನೆಯನ್ನು ಮರ್ದನಮಾಡಿಬಿಟ್ಟನು.

೪೨. ಮತ್ಸ್ಯದೇಶಾಧಿಪತಿಯಾದ ಮಂಗಲರಾಜನು ಯುದ್ಧರಂಗದಲ್ಲಿ ಈ ರೀತಿಯಾಗಿ ಬಲುಪರಾಕ್ರಮದಿಂದ ಶಸ್ತ್ರಗಳಿಂದ ಪ್ರಹರಿಸುತ್ತಲಿದ್ದ ಶಸ್ತ್ರಧಾರಿಗಳಲ್ಲಿ ಪ್ರವೀಣನಾದ ಪರಶುರಾಮನನ್ನು ಕಂಡು ತನ್ನ ದೊಡ್ಡ ಬಿಲ್ಲನ್ನು ಹುರಿಕಟ್ಟಿ ಸಿದ್ಧಮಾಡಿ ರಥದಲ್ಲಿ ಕುಳಿತು ಯುದ್ಧ ಸಿದ್ಧನಾದನು.

ಆಕೃಷ್ಯ ಬಾಣಾನನಲೋಗ್ರತೇಜಸಃ
ಸಮಾಕಿರನ್ ಭಾರ್ಗವಮಾಸಸಾದ ।
ದೃಷ್ಟ್ವಾ ತಮಾಯಾಂತಮಥೋ ಮಹಾತ್ಮಾ
ರಾಮೋ ಗೃಹೀತ್ವಾ ಧನುಷಂ ಮಹೋಗ್ರಮ್ ॥ ೪೩ ॥

ವಾಯವ್ಯಮಸ್ತ್ರಂ ವಿದಧೇ ರುಷಾನ್ವಿತೋ
ನಿವಾರಯನ್ಮಂಗಲಬಾಣವರ್ಷಮ್ ।
ಸ ಚಾಪಿ ರಾಜಾತಿಬಲೋ ಮನಸ್ವೀ
ಸಸರ್ಜ ರಾಮಾಯ ತು ಪರ್ವತಾಸ್ತ್ರಮ್ ॥ ೪೪ ॥

ತಸ್ತಂಭ ತೇನಾತಿಬಲಂ ತದಸ್ತ್ರಂ
ವಾಯವ್ಯಮಿಷ್ವಸ್ತ್ರವಿಧಾನದಕ್ಷಃ ।
ರಾಮೋಽಪಿ ತತ್ರಾತಿಬಲಂ ವಿದಿತ್ವಾ
ತಂಮತ್ಸ್ಯರಾಜಂ ವಿವಿಧಾಸ್ತ್ರಪೂರ್ಣೈಃ ॥ ೪೫ ॥

---

೪೩. ಅಗ್ನಿಯಂತೆ ಉಗ್ರ ತೇಜಸ್ಸುಳ್ಳ ಬಾಣಗಳನ್ನು ಸೆಳೆದು ಎರಚುತ್ತ ಭಾರ್ಗವರಾಮನ ಸಮೀಪಕ್ಕೆ ಬಂದನು. ಅನಂತರದಲ್ಲಿ ಮಹಾತ್ಮನಾದ ರಾಮನು ಈರೀತಿಯಾಗಿ ರಾಜನು ಬರುತ್ತಿರುವುದನ್ನು ಕಂಡು ಮಹಾ ಉಗ್ರವಾದ ಧನುಸ್ಸನ್ನು ಕೈಯಲ್ಲಿ ಹಿಡಿದವನಾದನು.

೪೪. ಮತ್ತು ಕೋಪಗೊಂಡವನಾಗಿ ಮಂಗಲ ರಾಜನ ಬಾಣಪ್ರಯೋಗವನ್ನು ತಡೆಗಟ್ಟಿ ವಾಯವ್ಯಾಸ್ತ್ರವನ್ನು ಸಂಧಾನ ಮಾಡಿದನು. ಆ ಅತಿ ಬಲಿಷ್ಠನೂ ಮಾನವಂತನೂ ಆದ ರಾಜನು ಪರಶುರಾಮನ ಮೇಲೆ ಪರ್ವತಾಸ್ತ್ರವನ್ನು ಪ್ರಯೋಗ ಮಾಡಿದನು.

೪೫-೪೬. ರಾಜಪ್ರಯುಕ್ತವಾದ ಪರ್ವತಾಸ್ತ್ರದಿಂದ ಅತಿ ಬಲಿಷ್ಠವಾದ ರಾಮನ ವಾಯವ್ಯಾಸ್ತ್ರವು ಸ್ತಬ್ಧವಾಯಿತು. ಬಿಲ್ಲು ಬಾಣಗಳ ವಿಧಾನದಲ್ಲಿ ದಕ್ಷನಾದ ರಾಮನು ರಾಜನ ಅಮಾನುಷವಾದ ಬಲವನ್ನು ತಿಳಿದುಕೊಂಡು ಯುದ್ಧದಲ್ಲಿ ನಾನಾವಿಧ ಅಸ್ತ್ರಪೂರಿತಗಳಾದ ಬಾಣ ವೃಷ್ಟಿಯನ್ನು ಸುರಿಸುತ್ತಿರುವ ಮತ್ಸ್ಯ

ಕಿರಂತಮಾಜೌ ಪ್ರಸಭಂ ಮುಮೋಚ
ನಾರಾಯಣಾಸ್ತ್ರಂ ವಿಧಿಮಂತ್ರಯುಕ್ತಮ್ ।
ನಾರಾಯಣಾಸ್ತ್ರೇ ಭೃಗುಣಾ ಪ್ರಯುಕ್ತೇ
ರಾಮೇಣ ರಾಜನ್ ನೃಪತೇರ್ವಧಾಯ ॥ ೪೬ ॥

ದಿಶಸ್ತು ಸರ್ವಾಃ ಸುಭೃಶಂ ಹಿ ತೇಜಸಾ
ಪ್ರಜಜ್ವಲುರ್ಮತ್ಸ್ಯಪತಿಶ್ಚ ಕಂಪೇ ।
ರಾಮಸ್ತು ತಸ್ಯಾಥ ವಿಲಕ್ಷ್ಯ ಕಂಪಂ
ಬಾಣೈಶ್ಚತುರ್ಭಿರ್ನಿಜಘಾನ ವಾಹಾನ್ ॥ ೪೭ ॥

ಶರೇಣ ಚೈಕೇನ ಧ್ವಜಂ ಮಹಾತ್ಮಾ
ಚಿಚ್ಛೇದ ಚಾಪಂ ಚ ಶರದ್ವಯೇನ ।
ಬಾಣೇನ ಚೈಕೇನ ಪ್ರಸಹ್ಯ ಸಾರಥಿಂ
ನಿಪಾತ್ಯ ಭೂಮೌ ರಥಮಾರ್ದಯತ್ತ್ರಿಭಿಃ ॥ ೪೮ ॥

---

ರಾಜನ ಮೇಲೆ ಹಠಾತ್ತಾಗಿ ಶಾಸ್ತ್ರವಿಧಿಯನ್ನನುಸರಿಸಿ ಅಭಿಮಂತ್ರಣ ಮಾಡಿದ ನಾರಾಯಣಾಸ್ತ್ರವನ್ನು ಬಿಟ್ಟನು. ರಾಜನೇ, ಮತ್ಸ್ಯರಾಜನ ವಧಕ್ಕೋಸ್ಕರ ಭಾರ್ಗವರಾಮನು ನಾರಾಯಣಾಸ್ತ್ರವನ್ನು ಪ್ರಯೋಗ ಮಾಡಿದನು.

೪೭. ಆ ಅಸ್ತ್ರದ ಜ್ವಾಲೆಗಳಿಂದ ಸಕಲ ದಿಕ್ಕುಗಳು ಉರಿದುವು. ಮತ್ಸ್ಯರಾಜನು ನಡುಗಿಬಿಟ್ಟನು. ಭಾರ್ಗವರಾಮನು ರಾಜನ ಕಂಪವನ್ನು ಕಂಡು ಮತ್ತೆ ನಾಲ್ಕು ಬಾಣಗಳಿಂದ ಅವನ ಕುದುರೆಗಳನ್ನು ಕೊಂದನು.

೪೮. ಮತ್ತು ಅದೇ ಸಮಯದಲ್ಲಿ ಮಹಾತ್ಮ ರಾಮನು ಒಂದು ಬಾಣದಿಂದ ರಾಜನ ರಥಧ್ವಜವನ್ನೂ ಎರಡು ಬಾಣಗಳಿಂದ ಬಿಲ್ಲನ್ನೂ ಛೇದಿಸಿದನು. ಹಠದಿಂದ ಒಂದೇ ಬಾಣದಿಂದ ಸಾರಥಿಯನ್ನು ನೆಲಕ್ಕೆ ಕೆಡವಿ ಮೂರು ಬಾಣಗಳಿಂದ ರಥವನ್ನು ಮರ್ದಿಸಿದನು.

ತ್ಯಕ್ತ್ವಾ ರಥಂ ಭೂಮಿಗತಂ ಚ ಮಂಗಲಂ
ಪರಶ್ವಧೇನಾಶು ಜಘಾನ ಮೂರ್ಧನಿ ।
ಸ ಭಿನ್ನಶೀರ್ಷೋ ರುಧಿರಂ ವಮನ್ಮುಹು
ರ್ಮೂರ್ಛಾಮವಾಪ್ಯಾಥ ಮಮಾರ ಚ ಕ್ಷಣಾತ್ ॥ ೪೯ ॥

ತತ್ಸೈನ್ಯಮಸ್ತ್ರೇಣ ಚ ಸಂಪ್ರದಗ್ಧಂ ವಿನಾಶಮಾಯಾದಥ ಭಸ್ಮಸಾತ್
ಕ್ಷಣಾತ್ ॥ ೫೦ ॥

ತಸ್ಮಿನ್ನಿಪತಿತೇ ರಾಜ್ಞಿ ಚಂದ್ರವಂಶಸಮುದ್ಭವೇ ।
ಮಂಗಲೇ ನೃಪತಿಶ್ರೇಷ್ಠೇ ರಾಮೋ ಹರ್ಷಮುಪಾಗತಃ ॥ ೫೧ ॥

ಇತಿ ಶ್ರೀಬ್ರಹ್ಮಾಂಡಪುರಾಣೇ ಉತ್ತರಾರ್ಧೇ ಅಷ್ಟತ್ರಿಂಶತ್ತಮೋಽಧ್ಯಾಯಃ

---

೪೯. ರಥವನ್ನು ಬಿಟ್ಟು ಮಂಗಲರಾಜನು ನೆಲಕ್ಕೆ ಬೀಳಲು ತಕ್ಷಣದಲ್ಲಿ ರಾಮನು ಅವನ ತಲೆಯಲ್ಲಿ ಕೊಡಲಿಯಿಂದ ಹೊಡೆದನು. ಅದರಿಂದ ಆ ರಾಜನು ಕತ್ತರಿಸಲ್ಪಟ್ಟ ತಲೆಯುಳ್ಳವನಾಗಿ ರಕ್ತವನ್ನು ವಮನಮಾಡುತ್ತಾ ಮೂರ್ಛಿತನಾಗಿ ಬಿದ್ದು ಸ್ವಲ್ಪ ಹೊತ್ತಿನಲ್ಲಿಯೇ ಮರಣ ಹೊಂದಿದನು.

೫೦-೫೧. ರಣದಲ್ಲಿ ಅಸ್ತ್ರಜ್ವಾಲೆಗಳಿಂದ ಸುಟ್ಟುಹೋದ ಆ ರಾಜನ ಸೈನ್ಯವು ನಿಮಿಷ ಮಾತ್ರದಿಂದ ಬೂದಿಯಾಗಿಹೋಯಿತು. ಹೀಗೆ ಚಂದ್ರವಂಶದಲ್ಲಿ ಹುಟ್ಟಿದ ರಾಜಶ್ರೇಷ್ಠನಾದ ಮಂಗಲನೆಂಬ ರಾಜನು ಸತ್ತುಬೀಳಲು ಪರಶುರಾಮನು ಸಂತೋಷವನ್ನು ಹೊಂದಿದನು.

ಬ್ರಹ್ಮಾಂಡ ಪುರಾಣದಲ್ಲಿ ಉತ್ತರಾರ್ಧದಲ್ಲಿ ಮೂವತ್ತೆಂಟನೆಯ ಅಧ್ಯಾಯವು
ಸಮಾಪ್ತವು.



# ಏಕೋನಚತ್ವಾರಿಂಶತ್ತಮೋಽಧ್ಯಾಯಃ

ವಸಿಷ್ಠ ಉವಾಚ :—

ಮತ್ಸ್ಯರಾಜೇ ನಿಪತಿತೇ ರಾಜಾ ಯುದ್ಧವಿಶಾರದಃ ।
ರಾಜೇಂದ್ರಾನ್ ಪ್ರೇರಯಾಮಾಸ ಕಾರ್ತವೀರ್ಯೋ ಮಹಾಬಲಃ ॥ ೧ ॥

ಬೃಹದ್ಬಲಃ ಸೋಮದತ್ತೋ ವಿದರ್ಭೋ ಮಿಥಿಲೇಶ್ವರಃ ।
ನಿಷಧಾಧಿಪತಿಶ್ಚೈವ ಮಗಧಾಧಿಪತಿಸ್ತಥಾ ॥ ೨ ॥

ಆಯಯುಃ ಸಮರೇ ಯೋದ್ಧುಂ ಭಾರ್ಗವೇಂದ್ರೇಣ ಭೂಪತೇ ।
ವರ್ಷಂತಃ ಶರಜಾಲಾನಿ ನಾನಾಯುದ್ಧವಿಶಾರದಾಃ ॥ ೩ ॥

ವೀರಾಭಿಮಾನಿನಃ ಸರ್ವೇ ಹೈಹಯಸ್ಯಾಜ್ಞಯಾ ತದಾ ।
ಪಿನಾಕಹಸ್ತಃ ಸ ಭೃಗುರ್ಜ್ವಲದಗ್ನಿಶಿಖೋಪಮಃ ॥ ೪ ॥

---

೧. ಯುದ್ಧದಲ್ಲಿ ಪ್ರವೀಣನೂ ಬಲಿಷ್ಠನೂ ಆದ ಕಾರ್ತವೀರ್ಯರಾಜನು ರಂಗದಲ್ಲಿ ಮತ್ಸ್ಯೇಶ್ವರನು ಪ್ರಾಣಬಿಡಲಾಗಿ ಇತರ ಮುಖ್ಯ ಮುಖ್ಯ ರಾಜರನ್ನು ರಾಮನೊಡನೆ ಯುದ್ಧಮಾಡಲು ಪ್ರೇರೇಪಿಸಿದನು.

೨-೩. ರಾಜನೆ! ವಿವಿಧ ಯುದ್ಧಗಳಲ್ಲಿ ನಿಪುಣರೆನಿಸಿದ ಬೃಹದ್ಬಲ, ಸೋಮದತ್ತ, ವಿದರ್ಭ, ಮಿಥಿಲಾಪತಿ, ನಿಷಧರಾಜ, ಮಗಧೇಶ್ವರ ಮುಂತಾದ ಮುಖ್ಯ ರಾಜರು ಹೈಹಯರಾಜನ ಆಜ್ಞಾಧಾರಕರಾಗಿ ರಣರಂಗದಲ್ಲಿ ಭಾರ್ಗವರಾಮನ ಕೂಡ ಕಾದಾಡಲು ವೀರಾಭಿಮಾನದಿಂದ ಬಾಣವೃಷ್ಟಿಯನ್ನು ಸುರಿಸುತ್ತ ಮುಂದೆ ಬಂದರು.

೪. ಕೈಯಲ್ಲಿ ಪಿನಾಕವೆಂಬ ಬಿಲ್ಲನ್ನು ಧರಿಸಿ ಉರಿಯುವ ಅಗ್ನಿಜ್ವಾಲೆಯಂತೆ ತೋರುವ ಆ ಭೃಗುರಾಮನು ಉತ್ತಮ ಬಾಣವಾದ ನಾಗಪಾಶವನ್ನು ಮಂತ್ರಿಸಿ ಪ್ರಯೋಗಿಸಿದನು.

ಚಿಕ್ಷೇಪ ನಾಗಪಾಶಂ ಚ ಅಭಿಮಂತ್ರ್ಯ ಶರೋತ್ತಮಮ್ ।
ತದಸ್ತ್ರಂ ಭಾರ್ಗವೇಂದ್ರೇಣ ಕ್ಷಿಪ್ತಂ ಸಂಗ್ರಾಮಮೂರ್ಧನಿ ॥ ೫ ॥

ಚಕರ್ತ ಗಾರುಡಾಸ್ತ್ರೇಣ ಸೋಮದತ್ತೋ ಮಹಾಬಲಃ ।
ತತಃ ಕ್ರುದ್ಧೋ ಮಹಾಭಾಗೋ ರಾಮಃ ಶತ್ರುವಿದಾರಣಃ ॥ ೬ ॥

ರುದ್ರದತ್ತೇನ ಶೂಲೇನ ಸೋಮದತ್ತಂ ಜಘಾನ ಹ ।
ಬೃಹದ್ಬಲಂ ಚ ಗದಯಾ ವಿದರ್ಭಂ ಮುಷ್ಟಿನಾ ತಥಾ ॥ ೭ ॥

ಮೈಥಿಲಂ ಮುದ್ಗರೇಣೈವ ಶಕ್ತ್ಯಾ ಚ ನಿಷಧಾಧಿಪಮ್ ।
ಮಾಗಧಂ ಚರಣಾಘಾತೈರಸ್ತ್ರಜಾಲೇನ ಸೈನಿಕಾನ್ ॥ ೮ ॥

ನಿಹತ್ಯ ನಿಖಿಲಾಂ ಸೇನಾಂ ಸಂಹಾರಾಗ್ನಿಸಮಿಾರಣೇ ।
ದುದ್ರಾವ ಕಾರ್ತವೀರ್ಯಂ ಚ ಜಾಮದಗ್ನ್ಯೋ ಮಹಾಬಲಃ ॥ ೯ ॥

---

೫. ಸಂಗ್ರಾಮ ಸೀಮಾಂಗಣದಲ್ಲಿ ಭಾರ್ಗವನು ಪ್ರಯೋಗಿಸಿದ ಆ ನಾಗ ಪಾಶವನ್ನು ಮಹಾಬಲಶಾಲಿಯಾದ ಸೋಮದತ್ತ ರಾಜನು ಗಾರುಡಾಸ್ತ್ರದಿಂದ ಕತ್ತರಿಸಿದನು.

೬. ನಾಗಪಾಶಚ್ಛೇದದಿಂದ ಕುಪಿತನಾಗಿ ಶತ್ರು ಸಂಹಾರಕನಾದ ಭಾಗ್ಯಶಾಲಿ ಯಾದ ರಾಮನು ಈಶ್ವರ ದತ್ತವಾದ ಶೂಲದಿಂದ ಸೋಮದತ್ತರಾಜನನ್ನು ಕೊಂದು ಹಾಕಿದನು.

೭-೮. ಹಾಗೆಯೇ ಗದೆಯಿಂದ ಬೃಹದ್ಬಲನೆಂಬ ರಾಜನನ್ನೂ ಮುಷ್ಟಿಯಿಂದ ವಿದರ್ಭರಾಜನನ್ನೂ ದಂಡದಿಂದ ಮಿಥಿಲೇಶ್ವರನನ್ನೂ ಶಕ್ತಿಯಿಂದ ನಿಷಧ ರಾಜ ನನ್ನೂ ಪಾದಘಾತಗಳಿಂದ ಮಗಧಾಧಿಪತಿಯನ್ನೂ ಸಾಮಾನ್ಯ ಇತರಾಸ್ತ್ರಪ್ರಯೋಗ ಗಳಿಂದ ಸೈನಿಕರೆಲ್ಲರನ್ನೂ ಕೊಂದನು.

೯. ಪ್ರಲಯಾಗ್ನಿ ಜ್ವಾಲೆಯಲ್ಲಿ ಸಮಸ್ತ ಸೈನ್ಯವನ್ನೂ ಸುಟ್ಟುಹಾಕಿ ಮಹಾ ಬಲಶಾಲಿಯಾದ ಜಮದಗ್ನಿ ಪುತ್ರನಾದ ರಾಮನು ಕಾರ್ತವೀರ್ಯಾರ್ಜುನನ ಬಳಿಗೆ ಓಡಿಹೋದನು.

ದೃಷ್ಟ್ವಾ ತಂ ಯೋದ್ಧುಮಾಯಾಂತಂ ರಾಜಾನೋಽನ್ಯೇ ಮಹಾರಥಾಃ ।
ಕಾರ್ಯಾಕಾರ್ಯವಿಧಾನಜ್ಞಾಃ ಪೃಷ್ಠೇ ಕೃತ್ವಾ ಚ ಹೈಹಯಮ್ ॥ ೧೦ ॥

ರಾಮೇಣ ಯುಯುಧುಶ್ಚೈವ ದರ್ಶಯಂತಶ್ಚ ಸೌಹೃದಮ್ ।
ಕಾನ್ಯಕುಬ್ಜಾಶ್ಚ ಶತಶಃ ಸೌರಾಷ್ಟ್ರಾವಂತಯಸ್ತಥಾ ॥ ೧೧ ॥

ಚಕ್ರುಶ್ಚ ಶರಜಾಲಾನಿ ರಾಮಸ್ಯ ಚ ಸಮಂತತಃ ।
ಶರಜಾಲಾವೃತಸ್ತೇಷಾಂ ರಾಮಸ್ಸಂಗ್ರಾಮಮೂರ್ಧನಿ ॥ ೧೨ ॥

ನ ಚಾದೃಶ್ಯತ ರಾಜೇಂದ್ರ ತದಾ ಸ ತ್ವಕೃತವ್ರಣಃ ।
ಸಸ್ಮಾರ ರಾಮಚರಿತಂ ಯದುಕ್ತಂ ಹರಿಣೇನ ವೈ ॥ ೧೩ ॥

ಕುಶಲಂ ಭಾರ್ಗವೇಂದ್ರಸ್ಯ ಯಾಚಮಾನೋ ಹರಿಂ ಮುನಿಃ ।
ಏತಸ್ಮಿನ್ನೇವ ಕಾಲೇ ತು ರಾಮಃ ಶಸ್ತ್ರಾಸ್ತ್ರಕೋವಿದಃ ॥ ೧೪ ॥

---

೧೦. ಮಹಾರಥರಾದ ಇತರ ರಾಜರು ಕಾರ್ತವೀರ್ಯಾರ್ಜುನನ ಬಳಿಗೆ ರಾಮನು ಯುದ್ಧಕ್ಕೆ ಬರುತ್ತಲಿರುವುದನ್ನು ಕಂಡು ಕಾರ್ಯಾಕಾರ್ಯಗಳನ್ನು ಬಲ್ಲವರಾಗಿ ಕಾರ್ತವೀರ್ಯಾರ್ಜುನನನ್ನು ಹಿಂಬದಿಯಲ್ಲಿರಿಸಿ ಅವನಲ್ಲಿ ತಮಗಿರುವ ವಿಶ್ವಾಸವನ್ನು ಪ್ರಕಟಿಸುತ್ತ ಮುಂದೆ ಬಂದು ರಾಮನ ಜೊತೆಯಲ್ಲಿ ಯುದ್ಧಮಾಡಿದರು.

೧೧. ಕಾನ್ಯಕುಬ್ಜ, ಸೌರಾಷ್ಟ್ರ, ಆವಂತಿ ಮುಂತಾದ ದೇಶದ ಅನೇಕ ರಾಜರು ರಾಮನ ಸುತ್ತಲೂ ಬಾಣರಾಶಿಯನ್ನು ಎರಚಿದರು.

೧೨-೧೩. ರಾಜೇಂದ್ರನೆ! ಸಂಗ್ರಾಮ ಭೂಮಿಯಲ್ಲಿ ರಾಜರ ಶರಜಾಲಗಳಿಂದ ಮುಚ್ಚಿಹೋದ ಪರಶುರಾಮನು ಕಣ್ಣಿಗೆ ಕಾಣಿಸದಂತಾದನು. ಆಗ ಆ ಅಕೃತವ್ರಣ ಶಿಷ್ಯನು ಹಿಂದೆ ಜಿಂಕೆಯಿಂದ ಹೇಳಲ್ಪಟ್ಟ ಭಾರ್ಗವರಾಮನ ಭವಿಷ್ಯ ಚರಿತ್ರೆಯನ್ನು ನೆನಸಿಕೊಂಡು ಭಾರ್ಗವೇಂದ್ರ ಗುರುವಿನ ಕ್ಷೇಮವನ್ನು ಪ್ರಾರ್ಥಿಸುತ್ತ ಶ್ರೀಕೃಷ್ಣನನ್ನು ಸ್ಮರಿಸಿದನು.

೧೪-೧೫. ಶಸ್ತ್ರಾಸ್ತ್ರಪ್ರಯೋಗದಲ್ಲಿ ಕುಶಲನಾದ ರಾಮನು ಇದೇ ಹೊತ್ತಿನಲ್ಲಿ ಮಂತ್ರಜಪಬಲದಿಂದ ವಾಯುವ್ಯಾಸ್ತ್ರದಿಂದ ಬಾಣಜಾಲಗಳನ್ನು ಕೊಡವಿಹಾಕಿ ಹಿಮ

ವಿಧೂಯ ಶರಜಾಲಾನಿ ವಾಯವ್ಯಾಸ್ತ್ರೇಣ ಮಂತ್ರವಿತ್ ।
ಉದತಿಷ್ಠದ್ರಣಾಕಾಂಕ್ಷೀ ನೀಹಾರಾದಿವ ಭಾಸ್ಕರಃ ॥ ೧೫ ॥

ತ್ರಿರಾತ್ರಂ ಸಮರೇ ರಾಮಸ್ತೈಃ ಸಾರ್ಧಂ ಯುಯುಧೇ ಬಲೀ ।
ದ್ವಾದಶಾಕ್ಷೌಹಿಣೀಸ್ತತ್ರ ಚಿಚ್ಛೇದ ಲಘುವಿಕ್ರಮಃ ॥ ೧೬ ॥

ರಂಭಾಸ್ತಂಭವನಂ ಯದ್ವತ್ಪರಶ್ವಧವರಾಯುಧಃ ।
ಸರ್ವಾಂಸ್ತಾನ್ ಭೂಪವರ್ಗಾಂಶ್ಚ ತದೀಯಾಶ್ಚ ಮಹಾಚಮೂಃ ॥ ೧೭ ॥

ದೃಷ್ಟ್ವಾ ವಿನಿಹತಾಂ ತೇನ ರಾಮೇಣ ಸುಮಹಾತ್ಮನಾ ।
ಆಜಗಾಮ ಮಹಾವೀರ್ಯಃ ಸುಚಂದ್ರಃ ಸೂರ್ಯವಂಶಜಃ ॥ ೧೮ ॥

ಲಕ್ಷರಾಜನ್ಯಸಂಯುಕ್ತಂ ಸಪ್ತಾಕ್ಷೌಹಿಣಿಸಂಯುತಃ ।
ತತ್ರಾನೇಕಮಹಾವೀರಾ ಗರ್ಜಂತಸ್ತೋಯದಾ ಇವ ॥ ೧೯ ॥

---

ಸಮೂಹದಿಂದ ಸೂರ್ಯನು ಹೊರಕ್ಕೆ ಹೊರಟಂತೆ ಯುದ್ಧಕಾಂಕ್ಷಿಯಾಗಿ ಹೊರಕ್ಕೆ ಹೊರಟು ಕಾಣಿಸಿಕೊಂಡನು.

೧೬. ಮಹಾ ಬಲಯುತನಾದ ರಾಮನು ಯುದ್ಧರಂಗದಲ್ಲಿ ಮೂರು ದಿನ ಆ ರಾಜರ ಜೊತೆಗೆ ಯುದ್ಧಮಾಡುತ್ತ ವಿಕ್ರಮದ ಲಾಘವದಿಂದ ಹನ್ನೆರಡು ಅಕ್ಷೌಹಿಣೀ ಸೈನ್ಯವನ್ನು ಛೇದಿಸಿದನು.

೧೭. ಮತ್ತು ಕೊಡಲಿಯೆಂಬ ಉತ್ತಮಾಯುಧವನ್ನು ಧರಿಸಿ ಬಾಳೆಗಿಡಗಳ ಕಾಡನ್ನು ಸವರಿದಂತೆ ಆ ಎಲ್ಲ ರಾಜರ ಗುಂಪನ್ನೂ ಅವರವರ ಮಹಾ ಸೈನ್ಯಗಳನ್ನೂ ಕತ್ತರಿಸಿದನು.

೧೮. ಮಹಾತ್ಮನಾದ ರಾಮನಿಂದ ಸೈನ್ಯವೆಲ್ಲವೂ ಕೊಲ್ಲಲ್ಪಟ್ಟಿರುವುದನ್ನು ಕಂಡು ಮಹಾವೀರ್ಯ ಸಂಪನ್ನನೂ ಸೂರ್ಯವಂಶೋತ್ಪನ್ನನೂ ಆದ ಸುಚಂದ್ರನೆಂಬ ರಾಜನು ಲಕ್ಷರಾಜರಿಂದಲೂ ಏಳು ಅಕ್ಷೌಹೀಣೀ ಸೈನ್ಯದಿಂದಲೂ ಕೂಡಿ ಮುಂದೆ ಬಂದನು.

೧೯. ರಾಜನೆ! ಅಲ್ಲಿ ಮಹಾವೀರರು ಅನೇಕರು ಮೋಡಗಳಂತೆ ಗರ್ಜಿಸುತ್ತ ಭೂಮಿಯನ್ನು ನಡುಗಿಸುತ್ತ ಭಾರ್ಗವನೊಡನೆ ಯುದ್ಧಮಾಡಿದರು.

ಕಂಪಯಂತೋ ಭುವಂ ರಾಜನ್ ಯುಯುಧುರ್ಭಾರ್ಗವೇಣ ಚ ।
ತೈಃ ಪ್ರಯುಕ್ತಾನಿ ಶಸ್ತ್ರಾಣಿ ಮಹಾಸ್ತ್ರಾಣಿ ಚ ಭೂಪತೇ ॥ ೨೦ ॥

ಕ್ಷಣೇನ ನಾಶಯಾಮಾಸ ಭಾರ್ಗವೇಂದ್ರಃ ಪ್ರತಾಪವಾನ್ ।
ಗೃಹೀತ್ವಾ ಪರಶುಂ ದಿವ್ಯಂ ಕಾಲಾಂತಕಯಮೋಪಮಮ್ ॥ ೨೧ ॥

ಕಾಲಯನ್ ಸಕಲಾಂ ಸೇನಾಂ ಚಿಚ್ಛೇದ ಭೃಗುನಂದನಃ ।
ಕರ್ಷಕಸ್ತು ಯಥಾ ಕ್ಷೇತ್ರೇ ಪಕ್ವಂ ಧಾನ್ಯಂ ತಥಾ ತೃಣಮ್ ॥ ೨೨ ॥

ನಿಃಶೇಷಯತಿ ದಾತ್ರೇಣ ತಥಾ ರಾಮೇಣ ತತ್ಕೃತಮ್ ।
ಲಕ್ಷರಾಜನ್ಯಸೈನ್ಯಂ ತದ್ದೃಷ್ಟ್ವಾ ರಾಮೇಣ ದಾರಿತಮ್ ॥ ೨೩ ॥

ಸುಚಂದ್ರಃ ಪೃಥಿವೀಪಾಲೋ ಯುಯುಧೇ ಸಂಗರೇ ನೃಪ ।
ತಾವುಭೌ ತತ್ರ ಸಂಕ್ಷುಬ್ಧೌ ನಾನಾಶಸ್ತ್ರಾಸ್ತ್ರಕೋವಿದೌ ॥ ೨೪ ॥

---

೨೦. ನೃಪತಿಯೆ! ಆ ರಾಜರೆಲ್ಲರೂ ಪ್ರಯೋಗಿಸಿದ ಶಸ್ತ್ರಗಳನ್ನೂ ಮಹಾ ಅಸ್ತ್ರಗಳನ್ನೂ ಪ್ರತಾಪಶಾಲಿಯಾದ ಭಾರ್ಗವ ರಾಮನು ನಿಮಿಷಮಾತ್ರದಿಂದ ನಾಶಪಡಿಸಿದನು.

೨೧. ಪ್ರಲಯಕಾಲಾಂತಕನಾದ ಯಮನಂತೆ ದಿವ್ಯಪರಶು ಆಯುಧವನ್ನು ಕೈಯಲ್ಲಿ ಹಿಡಿದು ಭೃಗುಪುತ್ರನಾದ ರಾಮನು ಎಲ್ಲ ಸೈನ್ಯವನ್ನು ಸವರುತ್ತ ಕತ್ತರಿಸಿ ಹಾಕಿದನು.

೨೨. ರೈತನೊಬ್ಬನು ಕ್ಷೇತ್ರದಲ್ಲಿ ಕೊಯಲಿಗೆ ಬಂದ ಧಾನ್ಯ ಮತ್ತು ಹುಲ್ಲನ್ನು ಕತ್ತಿಯಿಂದ ನಿಶ್ಶೇಷವಾಗಿ ಕತ್ತರಿಸುವಂತೆ ರಾಮನಿಂದ ಸೈನ್ಯವೆಲ್ಲವೂ ನಿಶ್ಶೇಷವಾಗಿ ಕೊಲ್ಲಲ್ಪಟ್ಟಿತು.

೨೩. ನೃಪತಿಯೇ! ಲಕ್ಷಸಂಖ್ಯೆಯ ರಾಜಸೈನ್ಯವನ್ನು ರಾಮನು ಕೊಂದು ಕೆಡವಿದುದನ್ನು ಕಂಡು ಸುಚಂದ್ರನೆಂಬ ರಾಜನು ಯುದ್ಧಮಾಡಲು ಉಪಕ್ರಮಿಸಿದನು.

೨೪. ಅಲ್ಲಿ ನಾನಾವಿಧ ಶಸ್ತ್ರವಿದ್ಯಾನಿಷ್ಣಾತರೂ ಮಹಾವೀರರೂ ಆದ, ಮುನೀಶ್ವರನಾದ ರಾಮ, ನೃಪತೀಶ್ವರನಾದ ಸುಚಂದ್ರ ಇವರಿಬ್ಬರೂ ಜಯೇಚ್ಛೆಯಿಂದ ಕ್ಷೋಭಗೊಂಡವರಾಗಿ ಯುದ್ಧಮಾಡಿದರು.

ಯುಯುಧಾತೇ ಮಹಾವೀರೌ ಮುನೀಶನೃಪತೀಶ್ವರೌ ।
ರಾಮೋಽಸ್ಮೈ ಯಾನಿ ಶಸ್ತ್ರಾಣಿ ಚಿಕ್ಷೇಪಾಸ್ತ್ರಾಣಿ ಚಾಪಿ ಹಿ ॥ ೨೫ ॥

ತಾನಿ ಸರ್ವಾಣಿ ಚಿಚ್ಛೇದ ಸುಚಂದ್ರೋ ಯುದ್ಧಪಂಡಿತಃ ।
ತತಃ ಕ್ರುದ್ಧೋ ರಣೇ ರಾಮಃ ಸುಚಂದ್ರಂ ಪೃಥಿವೀಶ್ವರಮ್ ॥ ೨೬ ॥

ಕೃತಪ್ರತಿಕೃತಾಭಿಜ್ಞಂ ಜ್ಞಾತ್ವೋಪಸ್ಪೃಶ್ಯ ವಾರ್ಯಥ ।
ನಾರಾಯಣಾಸ್ತ್ರಂ ವಿಶಿಖೇ ಸಂದಧೇ ಚಾನಿವಾರಿತಮ್ ॥ ೨೭ ॥

ತದಸ್ತ್ರಂ ಶತಸೂರ್ಯಾಭಂ ಕ್ಷಿಪ್ತಂ ರಾಮೇಣ ಧೀಮತಾ ।
ದೃಷ್ಟ್ವೋತ್ತೀರ್ಯ ರಥಾತ್ಸದ್ಯಃ ಸುಚಂದ್ರಃ ಪ್ರಣನಾಮ ಹ ॥ ೨೮ ॥

ಸರ್ವಾಸ್ತ್ರಪೂಜ್ಯಂ ತಚ್ಚಾಪಿ ನಾರಾಯಣವಿನಿರ್ಮಿತಮ್ ।
ತಮೇವಂ ಪ್ರಣತಂ ತ್ಯಕ್ತ್ವಾ ಯಯೌ ನಾರಾಯಣಾಂತಿಕಮ್ ॥ ೨೯ ॥

---

೨೫. ಪರಶುರಾಮನು ಸುಚಂದ್ರನ ಮೇಲೆ ಯಾವ ಯಾವ ಆಯುಧಗಳನ್ನೂ ಮಾಂತ್ರಿಕಾಸ್ತ್ರಗಳನ್ನೂ ಪ್ರಯೋಗಿಸಿದನೋ ಅವೆಲ್ಲವನ್ನೂ ರಣಪಂಡಿತನಾದ ಸುಚಂದ್ರರಾಜನು ಛೇದಿಸಿದನು.

೨೬-೨೭. ಆ ಮೇಲೆ ಕುಪಿತನಾದ ಪರಶುರಾಮನು ಸುಚಂದ್ರರಾಜನನ್ನು ರಣರಂಗದಲ್ಲಿ ಪ್ರಯೋಗತತ್ಪ್ರತೀಕಾರ ವಿಧಾನವನ್ನು ಬಲ್ಲವನೆಂದು ತಿಳಿದು ನೀರನ್ನು ಆಚಮನಮಾಡಿ ಪವಿತ್ರನಾಗಿ ಅಕುಂಠಿತವಾದ ನಾರಾಯಣಾಸ್ತ್ರವನ್ನು ಬಾಣದಲ್ಲಿ ಸಂಧಾನಮಾಡಿದನು.

೨೮. ಬುದ್ಧಿಶಾಲಿಯಾದ ರಾಮನಿಂದ ಪ್ರಯೋಗಿಸಲ್ಪಟ್ಟ ನೂರು ಸೂರ್ಯ ಬಿಂಬಗಳಂತೆ ತೇಜಃಪುಂಜವುಳ್ಳ ಆ ನಾರಾಯಣಾಸ್ತ್ರವನ್ನು ನೋಡಿ ಸುಚಂದ್ರನು ಆಗಲೇ ರಥದಿಂದಿಳಿದು ಅದಕ್ಕೆ ನಮಸ್ಕಾರ ಮಾಡಿದನು.

೨೯. ಸಾಕ್ಷಾನ್ನಾರಾಯಣನಿಂದ ನಿರ್ಮಿತವಾದ ಸರ್ವಾಸ್ತ್ರಗಳಿಗೆಲ್ಲ ಪೂಜ್ಯವೂ ಆದ ಆ ನಾರಾಯಣಾಸ್ತ್ರವು ಸುಚಂದ್ರನು ತನ್ನನ್ನು ನಮಸ್ಕರಿಸಿ ಬಂದುದನ್ನು ಕಂಡು ಅವನನ್ನು ಬಿಟ್ಟು ನಾರಾಯಣನ ಸನ್ನಿಧಿಗೆ ಹೊರಟುಹೋಯಿತು.

ವಿಸ್ಮಿತೋಽಭೂತ್ತದಾ ರಾಮಃ ಸಮರೇ ಶತ್ರುಸೂದನಃ ।
ದೃಷ್ಟ್ವಾಽಽಗತಂ ಮಹಾಸ್ತ್ರಂ ತದ್ರೂಪಂ ಸ್ವಸ್ಥಂ ವಿಲೋಕ್ಯ ಚ॥ ೩೦ ॥

ರಾಮಃ ಶಕ್ತಿಂ ಚ ಮುಸಲಂ ತೋಮರಂ ಪಟ್ಟಿಶಂ ತಥಾ ।
ಗದಾಂ ಚ ಪರಶುಂ ಕೋಪಾಚ್ಚಿಕ್ಷೇಪ ನೃಪಮೂರ್ಧನಿ ॥ ೩೧ ॥

ಜಗ್ರಾಹ ತಾನಿ ಸರ್ವಾಣಿ ಸುಚಂದ್ರೋ ಲೀಲಯೈವ ಹಿ ।
ಚಿಕ್ಷೇಪ ಶಿವಶೂಲಂ ಚ ರಾಮೋ ನೃಪತಯೇ ಯದಾ ॥ ೩೨ ॥

ಬಭೂವ ಪುಷ್ಪಮಾಲಾ ಚ ತಚ್ಛೂಲಂ ನೃಪತೇರ್ಗಲೇ ।
ದದರ್ಶ ಪುರತಸ್ತಸ್ಯ ಭದ್ರಕಾಲೀಂ ಜಗತ್ಪ್ರಸೂಮ್ ॥ ೩೩ ॥

ವಹಂತೀಂ ಮುಂಡಮಾಲಾಂ ಚ ವಿಕಟಾಸ್ಯಾಂ ಭಯಂಕರೀಮ್ ।
ಸಿಂಹಸ್ಥಾಂ ಚ ತ್ರಿಣೇತ್ರಾಂ ಚ ತ್ರಿಶೂಲವರಧಾರಿಣೀಮ್ ॥ ೩೪ ॥

---

೩೦. ಯುದ್ಧದಲ್ಲಿ ಶತ್ರುಗಳನ್ನು ಸದೆಬಡಿಯುವ ರಾಮನು ನಾರಾಯಣಾಸ್ತ್ರವು ಹಾಗೆಯೇ ಹೊರಟುಹೋದುದನ್ನೂ ರಾಜನು ಸ್ವಸ್ಥನಾಗಿ ಇರುವುದನ್ನೂ ಕಂಡು ವಿಸ್ಮಯಗೊಂಡವನಾದನು.

೩೧. ರಾಮನು ಶಕ್ತಿ, ಮುಸಲ, ತೋಮರ, ಪಟ್ಟಿಶ, ಗದೆ, ಪರಶು ಮುಂತಾದ ಅನೇಕ ಬಗೆಯ ಆಯುಧಮಾಲೆಯನ್ನು ರಾಜನ ತಲೆಗೆ ಎಸೆದನು.

೩೨. ಆ ಸಮಸ್ತಾಯುಧಗಳನ್ನೂ ಸುಚಂದ್ರರಾಜನು ಲೀಲೆಯಿಂದ ಸ್ವೀಕರಿಸಿ ನಿರಾತಂಕನಾಗಿದ್ದನು. ಇದನ್ನು ನೋಡಿ ಯಾವಾಗ ರಾಮನು ರಾಜನ ಮೇಲೆ ಈಶ್ವರನ ಶೂಲವನ್ನು ಪ್ರಯೋಗಿಸಿದನೋ ಆಗ ಆ ಶೂಲವು ರಾಜನ ಕಂಠವನ್ನು ಸ್ಪರ್ಶಿಸಿ ಹೂಮಾಲೆಯಾಗಿ ಅದನ್ನು ಅಲಂಕರಿಸಿತು.

೩೩-೩೪. ಆ ರಾಜನ ಮುಂಭಾಗದಲ್ಲಿ ಜಗತ್ತಿಗೆಲ್ಲ ಮಾತೆಯೂ, ಕತ್ತಿನಲ್ಲಿ ಮುಂಡಮಾಲೆಯನ್ನು ಧರಿಸಿದವಳೂ, ವಿರೂಪವಾದ ಮುಖವುಳ್ಳವಳೂ, ಭಯಂಕರಳೂ, ಸಿಂಹವಾಹನವನ್ನೇರಿದವಳೂ, ಮೂರು ಕಣ್ಣುಗಳಿಂದ ಅಲಂಕೃತಳೂ ಶ್ರೇಷ್ಠವಾದ ತ್ರಿಶೂಲವನ್ನು ಧರಿಸಿದವಳೂ ಆದ ಭದ್ರಕಾಳೀ ದೇವಿಯನ್ನು ನೋಡಿದನು, ಮತ್ತು ತನ್ನ ಕೈಯಲ್ಲಿದ್ದ ಶಸ್ತ್ರಾಸ್ತ್ರಗಳನ್ನು ಕೆಳಗೆ ಹಾಕಿ ನಮಸ್ಕಾರ ಮಾಡಿ ಸ್ತುತಿಸಿದನು.

ದೃಷ್ಟ್ವಾ ವಿಹಾಯ ಶಸ್ತ್ರಾಸ್ತ್ರೇ ನಮಸ್ಕೃತ್ಯ ಸಮ್ಮೈಡತ ।

ರಾಮ ಉವಾಚ :—

ನಮೋಽಸ್ತು ತೇ ಶಂಕರವಲ್ಲಭಾಯ್ಯೈ ।
ಜಗತ್ಸವಿತ್ರ್ಯೈ ಸಮಲಂಕೃತಾಯ್ಯೈ ॥ ೩೫ ॥

ನಾನಾವಿಭೂಷಾಭಿರಿಭಾರಿಗಾಯ್ಯೈ
ಪ್ರಪನ್ನರಕ್ಷಾವಿಹಿತೋದ್ಯಮಾಯ್ಯೈ ।
ದಕ್ಷಪ್ರಸೂತ್ಯೈ ಹಿಮವದ್ಭವಾಯ್ಯೈ
ಮಹೇಶ್ವರಾರ್ಧಾಂಗಸಮಾಸ್ಥಿತಾಯ್ಯೈ ॥ ೩೬ ॥

ಕಾಲ್ಯೈ ಕಲಾನಾಥಕಲಾಧರಾಯ್ಯೈ
ಭಕ್ತಪ್ರಿಯಾಯ್ಯೈ ಭುವನಾಧಿಪಾಯ್ಯೈ ।
ತಾರಾಭಿಧಾಯ್ಯೈ ಶಿವತತ್ಪರಾಯ್ಯೈ
ಗಣೇಶ್ವರಾರಾಧಿತಪಾದುಕಾಯ್ಯೈ ॥ ೩೭ ॥

---

೩೫. ಶಂಕರನ ಪ್ರಿಯಪತ್ನಿಯೂ ಪ್ರಪಂಚವನ್ನು ಹೆತ್ತವಳೂ ನಾನಾಲಂಕಾರಗಳಿಂದ ಅಲಂಕೃತಳೂ, ಸಿಂಹವಾಹನದ ಮೇಲೆ ಸಂಚರಿಸುವವಳೂ ಶರಣಾಗತರ ತ್ರಾಣಾರ್ಥವಾಗಿ ಉದ್ಯಮಮಾಡುವವಳೂ ಆದ ನಿನಗೆ ನಮಸ್ಕಾರ ಮಾಡುವೆನು.

೩೬. ದಕ್ಷಬ್ರಹ್ಮನಿಂದ ಹುಟ್ಟಿದ ಸತೀದೇವಿಯರೂಪಳೂ ಹಿಮವಂತನಿಂದ ಹುಟ್ಟಿದ ಪಾರ್ವತಿದೇವೀ ಸ್ವರೂಪಿಣಿಯೂ ಈಶ್ವರಾರ್ಧಾಂಗದಲ್ಲಿ ವಾಸಿಸುವವಳೂ ಚಂದ್ರಕಳೆಯನ್ನು ಶಿರದಲ್ಲಿ ಧರಿಸಿದವಳೂ ಭಕ್ತರಲ್ಲಿ ಪ್ರೀತಿಯುಳ್ಳವಳೂ ಮತ್ತು ಪ್ರಪಂಚಕ್ಕೆಲ್ಲ ಅಧಿಪತಿಯೂ ಆದ ಭದ್ರಕಾಳಿದೇವಿಗೆ ನಮಸ್ಕಾರವು.

೩೭. ಶಿವನೆಂಬ ಪತಿಪರಾಯಣಳೂ ಗಣೇಶ್ವರನಿಂದ ಆರಾಧಿಸಲ್ಪಟ್ಟ ಪಾದುಕೆಯುಳ್ಳವಳೂ ಕಾರ್ಯಕಾರಣಗಳಿಗೆ ಅತೀತಳೂ ಬ್ರಹ್ಮಲೋಕವನ್ನನುಗ್ರಹಿಸುವವಳೂ ತಾಪತ್ರಯಗಳನ್ನು ನಿವಾರಿಸುವ ಸಂಕಲ್ಪದಿಂದ ಕೂಡಿದವಳೂ ಆದ ತಾರಾ ಎಂಬ ಹೆಸರುಳ್ಳ ದೇವಿಗೆ ನಮಸ್ಕಾರವು.

ಪರಾತ್ಪರಾಯೈ ಪರಮೇಷ್ಠಿದಾಯೈ
ತಾಪತ್ರಯೋನ್ಮೂಲನಚಿಂತನಾಯೈ ।
ಜಗದ್ಧಿತಾಯಾಸ್ತಪುರತ್ರಯಾಯೈ
ಬಾಲಾದಿಕಾಯೈ ತ್ರಿಪುರಾಭಿಧಾಯೈ ॥ ೩೮ ॥

ಸಮಸ್ತವಿದ್ಯಾಸು ವಿಲಾಸದಾಯೈ
ಜಗಜ್ಜನನ್ಯೈ ನಿಹತಾಹಿತಾಯೈ ।
ಬಕಾನನಾಯೈ ಬಹುಸೌಖ್ಯದಾಯೈ
ವಿಧ್ವಸ್ತನಾನಾಸುರದಾನವಾಯೈ ॥ ೩೯ ॥

ವರಾಭಯಾಲಂಕೃತದೋರ್ಲತಾಯೈ
ಸಮಸ್ತಗೀರ್ವಾಣನಮಸ್ಕೃತಾಯೈ ।
ಪೀತಾಂಬರಾಯೈ ಪವನಾಶುಗಾಯೈ
ಶುಭಪ್ರದಾಯೈ ಶಿವಸಂಸ್ತುತಾಯೈ ॥ ೪೦ ॥

---

೩೮. ಪ್ರಪಂಚ ಹಿತಕ್ಕೋಸ್ಕರ ತ್ರಿಪುರಾಸುರನನ್ನು ಸಂಹರಿಸಿದವಳೂ "ಬಾಲಾ, ತ್ರಿಪುರಾ "ಮುಂತಾದ ಹೆಸರುಗಳುಳ್ಳವಳೂ ಸಕಲ ವಿದ್ಯಾವಿಲಾಸಗಳನ್ನು ಕೊಡುವವಳೂ ಜಗನ್ಮಾತೆಯೂ ಮತ್ತು ಹಿತಕ್ಕೆ ವಿರೋಧವಾದ ವಿಪತ್ತುಗಳನ್ನು ನಾಶಮಾಡಿದವಳೂ ಆದ ದೇವಿಯನ್ನು ನಮಸ್ಕರಿಸುವೆನು.

೩೯. ಬಕಮುಖದ ಆಕಾರದ ಮುಖವುಳ್ಳವಳೂ ಅನಂತಸೌಖ್ಯವನ್ನು ಕೊಡುವವಳೂ ನಾನಾವಿಧರಾದ ಅಸುರ-ದಾನವರನ್ನು ಕೊಂದವಳೂ ಭುಜಗಳಲ್ಲಿ ವರದ-ಅಭಯಮುದ್ರೆಗಳಿಂದ ಅಲಂಕೃತಳೂ ಸಮಸ್ತ ದೇವವೃಂದದಿಂದ ನಮಸ್ಕರಿಸಲ್ಪಟ್ಟವಳೂ ಆದ ದೇವಿಗೆ ನಮಸ್ಕಾರವು.

೪೦. ಪೀತಾಂಬರವನ್ನು ಧರಿಸಿದವಳೂ ವಾಯುವೇಗದಿಂದ ಬೀಳುವ ಬಾಣಗಳುಳ್ಳವಳೂ ಮಂಗಲಪ್ರದಾನಶೀಲಳೂ ಈಶ್ವರನಿಂದ ಸ್ತುತ್ಯಳೂ ಸಿಂಹವಾಹನಾರೂಢಳೂ ನೂತನ ಇಕ್ಷುಖಂಡರಸವನ್ನು ಪಾನಮಾಡುವವಳೂ ಅಂಜನಪರ್ವತದಂತೆ ಬೆಳಗುವ ಅಂಗಕಾಂತಿಯುಳ್ಳವಳೂ ಆದ ದೇವಿಗೆ ನಮಸ್ಕಾರವು.

ನಾಗಾರಿಗಾಯೈ ನವಖಂಡಪಾಯೈ
ನೀಲಾಚಲಾಭಾಂಗಲಸತ್ಪ್ರಭಾಯೈ ।
ಲಘುಕ್ರಮಾಯೈ ಲಲಿತಾಭಿಧಾಯೈ
ಲೇಖಾಧಿಪಾಯೈ ಲವಣಾಕರಾಯೈ ॥ ೪೧ ॥

ಲೋಲೇಕ್ಷಣಾಯೈ ಲಯವರ್ಜಿತಾಯೈ
ಲಾಕ್ಷಾರಸಾಲಂಕೃತಪತ್ಕಜಾಯೈ ।
ರಮಾಭಿಧಾಯೈ ರತಿಸುಪ್ರಿಯಾಯೈ
ರೋಗಾಪಹಾಯೈ ರಚಿತಾಖಿಲಾಯೈ ॥ ೪೨ ॥

ರಾಜ್ಯಪ್ರದಾಯೈ ರಮಣೋತ್ಸುಕಾಯೈ
ರತ್ನಪ್ರಭಾಯೈ ರುಚಿರಾಂಬರಾಯೈ ।
ನಮೋ ನಮಸ್ತೇ ಪರತಃ ಪುರಸ್ತಾ
ತ್ಪಾರ್ಶ್ವಾಧರೋರ್ಧ್ವಂ ಚ ನಮೋ ನಮಸ್ತೇ ॥ ೪೩ ॥

---

೪೧. ಚಟುವಟಿಕೆಯಿಂದ ಲಘುವಾದ ಪಾದನ್ಯಾಸವುಳ್ಳವಳೂ, ಲಲಿತಾ ಎಂಬ ನಾಮಾಂಕಿತಳೂ, ನಿಖಿಲದೇವತಾಧಿಪತಿಯೂ, ಲಾವಣ್ಯಕ್ಕೆ ಗಣಿಯಂತಿರುವವಳೂ, ಚಂಚಲವಾದ ಈಕ್ಷಣ (ದೃಷ್ಟಿ) ಯುಳ್ಳವಳೂ ನಾಶರಹಿತಳೂ, ಲಾಕ್ಷಾರಸದಿಂದ ಪಾದಪದ್ಮವನ್ನು ಅಲಂಕರಿಸಿಕೊಂಡವಳೂ ಆದ ದೇವಿಯನ್ನು ನಮಿಪೆನು.

೪೨. ರಮಾ ಎಂಬ ಹೆಸರುಳ್ಳವಳೂ ರತಿವಿಹಾರದಲ್ಲಿ ಪ್ರೀತಿಯುಳ್ಳವಳೂ ರೋಗಗಳನ್ನು ನಿವಾರಣೆ ಮಾಡುವವಳೂ ಅಖಿಲ ವಸ್ತುಗಳನ್ನು ಸೃಜಿಸಿದವಳೂ ರಾಜ್ಯಪ್ರದಾನ ಮಾಡುವವಳೂ ರಮಣನಲ್ಲಿ ಔತ್ಸುಕ್ಯವುಳ್ಳವಳೂ ರತ್ನಕಾಂತಿಯಿಂದ ಅಲಂಕೃತಳೂ ರಮ್ಯವಾದ ವಸ್ತ್ರಗಳನ್ನುಟ್ಟವಳೂ ಆದ ದೇವಿಗೆ ನಮಸ್ಕಾರವು.

೪೩. ದೇವಿಯೆ ! ಹಿಂಭಾಗ, ಮುಂಭಾಗ, ಪಾರ್ಶ್ವಗಳು, ಅಧೋಭಾಗ ಊರ್ಧ್ವಭಾಗ ಮುಂತಾದ ಸಮಸ್ತ ಪ್ರದೇಶಗಳಲ್ಲಿಯೂ ಇರುವ ಸರ್ವ ವಸ್ತು ಆತ್ಮಕವಾದ ವಿಗ್ರಹವನ್ನು ಧರಿಸಿರುವ ನಿನಗೆ ಯಾವಾಗಲೂ ಎಲ್ಲೆಲ್ಲಿಯೂ ನಮಸ್ಕಾರವು. ಪುನಃ ಪುನಃ ನಿನ್ನನ್ನು ನಮಸ್ಕರಿಸುವೆನು.

ಸದಾ ಚ ಸರ್ವತ್ರ ನಮೋ ನಮಸ್ತೇ
ನಮೋ ನಮಸ್ತೇಽಖಿಲವಿಗ್ರಹಾಯೈ ।
ಪ್ರಸೀದ ದೇವೇಶಿ ಮಮ ಪ್ರತಿಜ್ಞಾಂ
ಪುರಾಕೃತಾಂ ಪಾಲಯ ಭದ್ರಕಾಲಿ ॥ ೪೪ ॥

ತ್ವಮೇವ ಮಾತಾ ಚ ಪಿತಾ ತ್ವಮೇವ
ಜಗತ್ರಯಸ್ಯಾಪಿ ನಮೋ ನಮಸ್ತೇ ।
ವಸಿಷ್ಠ ಉವಾಚ :—
ಏವಂ ಸ್ತುತಾ ತದಾ ದೇವೀ ಭದ್ರಕಾಲೀ ತರಸ್ವಿನೀ ॥ ೪೫॥

ಉವಾಚ ಭಾರ್ಗವಂ ಪ್ರೀತಾ ವರದಾನಕೃತೋತ್ಸವಾ ।
ಭದ್ರಕಾಲ್ಯುವಾಚ :—
ವತ್ಸ ರಾಮ ಮಹಾಭಾಗ ಪ್ರೀತಾಸ್ಮಿ ತವ ಸಾಂಪ್ರತಮ್ ॥ ೪೬ ॥

ವರಂ ವರಯ ಮತ್ತೋ ಯಸ್ತ್ವಯಾ ಚಾಭ್ಯರ್ಥಿತೋ ಹೃದಿ
ರಾಮ ಉವಾಚ :—
ಮಾತರ್ಯದಿ ವರೋ ದೇಯಸ್ತ್ವ ಯಾ ಮೇ ಭಕ್ತವತ್ಸಲೇ ॥ ೪೭ ॥

---

೪೪. ಸಮಸ್ತ ದೇವತೆಗಳಿಗೆ ಈಶ್ವರಿಯಾದ ಭದ್ರಕಾಲಿಯೇ ! ಪ್ರಸನ್ನಳಾಗು. ನಾನು ಹಿಂದೆ ಮಾಡಿದ್ದ ಶತ್ರು ಸಂಹಾರ ಪ್ರತಿಜ್ಞೆಯನ್ನು ನಡೆಸಿಕೊಡು. ತ್ರಿಭುವನ ಗಳಿಗೂ ನೀನೇ ತಾಯಿಯು, ಮತ್ತು ನೀನೇ ತಂದೆಯು, ನಿನ್ನನ್ನು ಮತ್ತೆ ಮತ್ತೆ ನಮಸ್ಕರಿಸುವೆನು.

೪೫. ವಸಿಷ್ಠ ಮಹರ್ಷಿಯು ಹೀಗೆ ನುಡಿದನು :—ಆಗ ಪರಶುರಾಮನಿಂದ ಈ ರೀತಿಯಾಗಿ ಸ್ತುತಿಸಲ್ಪಟ್ಟ ಭದ್ರಕಾಲೀ ದೇವಿಯು ಶಕ್ತಿಯುತಳಾಗಿ ಭಾರ್ಗವ ರಾಮನ ವಿಷಯದಲ್ಲಿ ಸುಪ್ರೀತಳಾಗಿ ಅವನಿಗೆ ವರದಾನ ಮಾಡುವ ಉತ್ಸಾಹವನ್ನು ತೋರಿಸುತ್ತ ಮಾತನಾಡಿದಳು.

೪೬. ಭದ್ರಕಾಲಿಯು ಹೇಳಿದಳು :—ಪ್ರಿಯ ರಾಮನೆ ! ಭಾಗ್ಯಶಾಲಿಯೆ ! ನಿನಗೆ ಈಗ ನಾನು ಪ್ರೀತಳಾಗಿರುವೆನು. ನಿನ್ನ ಮನಸ್ಸಿಗೆ ಕಾಂಕ್ಷಿತವಾದ ವರವನ್ನು ನನ್ನಲ್ಲಿ ಪ್ರಾರ್ಥಿಸು.

೪೭. ಭಾರ್ಗವನು ಹೇಳಿದನು :—ಭಕ್ತವತ್ಸಲಳಾದ ಜನನಿಯೇ ! ನನಗೆ ನೀನು ವರವನ್ನು ಅನುಗ್ರಹಿಸುವುದಾದರೆ ನಿನ್ನ ಅನುಗ್ರಹಪಾತ್ರನಾದ ಈ ಸುಚಂದ್ರನನ್ನು ನಾನು ಯುದ್ಧದಲ್ಲಿ ಜಯಿಸುವಂತೆ ಆಗಬೇಕು.

ತತ್ಸುಚಂದ್ರಂ ಜಯೇ ಯುದ್ಧೇ ತವಾನುಗ್ರಹಭಾಜನಮ್ ।
ಇತಿ ಮೇಽಭಿಹಿತಂ ದೇವಿ ಕುರು ಪ್ರೀತೇನ ಚೇತಸಾ ॥ ೪೮ ॥

ಯೇನ ಕೇನಾಪ್ಯುಪಾಯೇನ ಜಗನ್ಮಾತರ್ನಮೋಽಸ್ತು ತೇ ।
ಭದ್ರಕಾಳ್ಯುವಾಚ :—
ಆಗ್ನೇಯಾಸ್ತ್ರೇಣ ರಾಜೇಂದ್ರಂ ಸುಚಂದ್ರಂ ನಯ
ಮದ್ಗೃಹಮ್ ॥ ೪೯ ॥

ಮಮಾತಿಪ್ರಿಯಮದ್ಯೈವ ಪಾರ್ಷದೋ ಮೇ ಭವತ್ವಯಮ್ ।
ವಸಿಷ್ಠ ಉವಾಚ :—
ಇತ್ಯುಕ್ತಮಾಕರ್ಣ್ಯ ಸ ಭಾರ್ಗವೇಂದ್ರೋ
ದೇವ್ಯಾಃ ಪ್ರಿಯಂ ಕರ್ತುಮಥೋದ್ಯತೋಽಭೂತ್ ॥ ೫೦ ॥

ಪ್ರಾಣಾನ್ನಿಯಮ್ಯಾಚಮನಂ ಚ ಕೃತ್ವಾ
ಸುಚಂದ್ರಮುದ್ದಿಶ್ಯ ಚ ತತ್ಸಮಾದಧೇ ।
ಅಸ್ತ್ರಂ ಪ್ರಯುಕ್ತಂ ನೃಪತೇರ್ವಧಾಯ
ರಾಮೇಣ ರಾಜನ್ಪ್ರಸಭಂ ತದಾತತ್ ॥ ೫೧ ॥

---

೪೮. ದೇವಿಯೆ! ಈ ನನ್ನ ಪ್ರಾರ್ಥನಾ ವಚನವನ್ನು ಸಂತುಷ್ಟಾಂತರಂಗದಿಂದ ಯಾವುದಾದರೊಂದು ಉಪಾಯದಿಂದ ನೆರವೇರಿಸು. ಜಗನ್ಮಾತೆಯೇ ನಿನಗೆ ನಮಸ್ಕಾರವು.

೪೯. ಭದ್ರಕಾಲಿಕಾ ದೇವಿಯು ಹೇಳಿದಳು :—ನನಗೆ ಅತಿ ಪ್ರಿಯತಮನಾದ ಸುಚಂದ್ರ ರಾಜೇಂದ್ರನನ್ನು ಆಗ್ನೇಯಾಸ್ತ್ರದಿಂದ ಸಂಹಾರಮಾಡಿ ಈಗಲೇ ನನ್ನ ವಾಸಭೂಮಿಗೆ ಕಳುಹಿಸು, ಇವನು ನನ್ನ ಪಾರ್ಷದ ಗಣಕ್ಕೆ ಬಂದು ಸೇರಲಿ.

೫೦. ವಸಿಷ್ಠ ಮುನಿಯು ಹೇಳಿದನು :—ಆ ಭಾರ್ಗವರಾಮನು ದೇವಿಯ ಈ ಮಾತನ್ನು ಕೇಳಿ ದೇವಿಗೆ ಪ್ರಿಯವಾದ ಕರ್ಮವನ್ನು ಮಾಡಲು ಉದ್ಯುಕ್ತನಾದನು. ಆಚಮನ ಮತ್ತು ಪ್ರಾಣಾಯಾಮಗಳನ್ನು ಮಾಡಿ ಸುಚಂದ್ರನನ್ನು ಕುರಿತು ಆಗ್ನೇಯಾಸ್ತ್ರವನ್ನು ಸಂಧಾನ ಮಾಡಿದನು.

೫೧. ರಾಜನೆ! ಸುಚಂದ್ರ ರಾಜನ ವಧಕ್ಕೋಸ್ಕರವಾಗಿ ಆಗ ರಾಮನಿಂದ ಬಲಾತ್ಕಾರವಾಗಿ ಪ್ರಯೋಗಿಸಲ್ಪಟ್ಟ ಆ ಆಗ್ನೇಯಾಸ್ತ್ರವು ಸುಚಂದ್ರನ ಪಾಂಚಭೌತಿಕ ದೇಹವನ್ನು ಸುಟ್ಟು ಅವನನ್ನು ಪರದೇವತೆಯ ಲೋಕಕ್ಕೆ ತೆಗೆದುಕೊಂಡು ಹೋಯಿತು.

ದಗ್ಧ್ವಾ ವಪುರ್ಭೂತಮಯಂ ತದೀಯಂ
ನಿನಾಯ ಲೋಕಂ ಪರದೇವತಾಯಾಃ ।
ತತಸ್ತು ರಾಮೇಣ ಕೃತಪ್ರಣಾಮಾ
ಸಾ ಭದ್ರಕಾಲೀ ಜಗದಾದಿಕರ್ತ್ರೀ || ೫೨ ||

ಅಂತರ್ಹಿತಾಭೂದಥ ಜಾಮದಗ್ನ್ಯ
ಸ್ತಸ್ಥೌ ರಣೇ ಭೂಪವಧಾಭಿಕಾಂಕ್ಷೀ || ೫೩ ||

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ಏಕೋನ
ಚತ್ವಾರಿಂಶತ್ತಮೋಽಧ್ಯಾಯಃ

---

೫೨-೫೩. ಅನಂತರ ರಾಮನಿಂದ ನಮಸ್ಕರಿಸಲ್ಪಟ್ಟ ಸಮಸ್ತ ಲೋಕಕ್ಕೂ ಆದಿಕಾರಣಳಾದ ಭದ್ರಕಾಲೀ ದೇವಿಯು ಅಂತರ್ಧಾನಳಾದಳು, ಆಗ ಜಾಮದಗ್ನ್ಯ ರಾಮನು ಕಾರ್ತವೀರ್ಯ ರಾಜನ ವಧವನ್ನು ಆಕಾಂಕ್ಷಿಸಿ ರಣರಂಗದಲ್ಲಿ ನಿಂತನು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಮೂವತ್ತೊಂಭತ್ತನೆಯ
ಅಧ್ಯಾಯವು ಸಮಾಪ್ತವು.

---

# ಚತ್ವಾರಿಂಶತ್ತಮೋಽಧ್ಯಾಯಃ

---

ವಸಿಷ್ಠ ಉವಾಚ

ಸುಚಂದ್ರೇ ಪತಿತೇ ರಾಜನ್ ರಾಜೇಂದ್ರಾಣಾಂ ಶಿರೋಮಣೌ ।
ತತ್ಪುತ್ರಃ ಪುಷ್ಕರಾಕ್ಷಸ್ತು ರಾಮಂ ಯೋದ್ಧುಮಥಾಗತಃ ॥ ೧ ॥

ಸ ರಥಸ್ಥೋ ಮಹಾವೀರ್ಯಃ ಸರ್ವಶಸ್ತ್ರಾಸ್ತ್ರಕೋವಿದಃ ।
ಅಭಿವೀಕ್ಷ್ಯ ರಣೇಽತ್ಯುಗ್ರಂ ರಾಮಂ ಕಾಲಾಂತಕೋಪಮಮ್ ॥ ೨ ॥

ಚಕಾರ ಶರಜಾಲಂ ಚ ಭಾರ್ಗವೇಂದ್ರಸ್ಯ ಸರ್ವತಃ ।
ಮುಹೂರ್ತಂ ಜಾಮದಗ್ನ್ಯೋಽಪಿ ಬಾಣೈಃ ಸಂಛಾದಿತೋಽಭವತ್ ॥ ೩ ॥

ತತೋ ನಿಷ್ಕ್ರಮ್ಯ ಸಹಸಾ ಭಾರ್ಗವೇಂದ್ರೋ ಮಹಾಬಲಃ ।
ಶರಬಂಧಾನ್ಮಹಾರಾಜ ಸಮುದೈಕ್ಷತ ಸರ್ವತಃ ॥ ೪ ॥

---

೧. ವಸಿಷ್ಠಮುನಿಯು ಇಂತೆಂದನು :—ಸಗರರಾಜನೆ! ಮುಖ್ಯರಾಜರಿಗೆಲ್ಲ ಶಿರೋಮಣಿ ಪ್ರಾಯನಾದ ಸುಚಂದ್ರರಾಜನು ಮೃತನಾಗಲು ಪುಷ್ಕರಾಕ್ಷನೆಂಬ ಅವನ ಮಗನು ರಾಮನೊಡನೆ ಯುದ್ಧಕ್ಕೆ ಬಂದನು.

೨-೩. ಸರ್ವಶಸ್ತ್ರಾಸ್ತ್ರಗಳಲ್ಲಿ ಪಂಡಿತನಾದ ಮತ್ತು ಮಹಾವೀರ್ಯಸಂಪನ್ನನಾದ ಆ ಪುಷ್ಕರಾಕ್ಷನು ರಥದಲ್ಲಿ ಕುಳಿತುಕೊಂಡು ರಣಭೂಮಿಗೆ ಬಂದು ಅತ್ಯುಗ್ರನೂ ಪ್ರಲಯಕಾಲದ ಯಮನಂತೆ ಭೈರವನೂ ಆದ ರಾಮನನ್ನು ಕಂಡು ಆ ಭಾರ್ಗವೇಂದ್ರನ ಸುತ್ತಲೂ ಶರಪುಂಜವನ್ನೆಸೆದನು. ಜಾಮದಗ್ನ್ಯನು ಮುಹೂರ್ತಕಾಲ ಬಾಣಗಳಿಂದ ಮುಚ್ಚಿಹೋದನು.

೪. ಮಹಾರಾಜನೆ! ಆ ಮೇಲೆ ಮಹಾಬಲಿಷ್ಠನಾದ ಭಾರ್ಗರಾಮನು ತನ್ನ ಸುತ್ತಲೂ ಪಂಜರದಂತಿದ್ದ ಶರಬಂಧನದಿಂದ ಸಾಹಸದಿಂದ ಹೊರಕ್ಕೆ ಬಂದು ಸುತ್ತಲೂ ನೋಡಿದನು.

ದೃಷ್ಟ್ವಾ ತಂ ಪುಷ್ಕರಾಕ್ಷಂ ತು ಸುಚಂದ್ರತನಯಂ ತದಾ ।
ಕ್ರೋಧಮಾಹಾರಯಾಮಾಸ ದಿಧಕ್ಷನ್ನಿವ ಪಾವಕಃ ॥ ೫ ॥

ಸ ಕ್ರೋಧೇನ ಸಮಾವಿಷ್ಟೋ ವಾರುಣಾಸ್ತ್ರ ಮವಾಸೃಜತ್ ।
ತತೋ ಮೇಘಾಃ ಸಮುತ್ಪನ್ನಾ ಗರ್ಜಂತೋ ಭೈರವಾನ್ರವಾನ್ ॥ ೬ ॥

ವವೃಷುರ್ಜಲಧಾರಾಭಿಃ ಪ್ಲಾವಯಂತೋ ಧರಾಂ ನೃಪ ।
ಪುಷ್ಕರಾಕ್ಷೋ ಮಹಾವೀರ್ಯೋ ವಾಯವ್ಯಾಸ್ತ್ರಮವಾಸೃಜತ್॥ ೭ ॥

ತೇನ ತೇಽದರ್ಶನಂ ನೀತಾಃ ಸದ್ಯ ಏವ ಬಲಾಹಕಾಃ ।
ಅಥ ರಾಮೋ ಭೃಶಂ ಕ್ರುದ್ಧೋ ಬ್ರಾಹ್ಮಂ ತತ್ರಾಭಿಸಂದಧೇ ॥ ೮ ॥

ಪುಷ್ಕರಾಕ್ಷೋಽಪಿ ತೇನೈವ ವಿಚಕರ್ಷ ಮಹಾಬಲಃ ।
ಬ್ರಾಹ್ಮಂ ಸೋಽಪ್ಯಾಹಿತಂ ದೃಷ್ಟ್ವಾ ದಂಡಾಹತ ಇವೋರಗಃ ॥ ೯ ॥

---

೫. ಆಗ ಸುಚಂದ್ರನ ಮಗನಾದ ಪುಷ್ಕರಾಕ್ಷನನ್ನು ಕಂಡು ಅಗ್ನಿಯಂತೆ ಸುಟ್ಟುಹಾಕುವಂತಹ ಕೋಪವನ್ನು ಬರಮಾಡಿಕೊಂಡನು.

೬. ಆ ರಾಮನು ಕೋಪಾವೇಶವುಳ್ಳವನಾಗಿ ವಾರುಣಾಸ್ತ್ರವನ್ನು ಬಿಟ್ಟನು. ಅದರ ಬಲದಿಂದ ಭಯಂಕರ ಧ್ವನಿಯಾಗುವಂತೆ ಗುಡುಗುತ್ತ ಮೇಘಗಳು ಉತ್ಪನ್ನವಾದುವು.

೭. ರಾಜನೆ! ಆ ಮೋಡಗಳು ಜಲಪ್ರವಾಹದಿಂದ ಭೂಮಿಯನ್ನು ತೇಲಿ ಹೋಗುವಂತೆ ಮಳೆಯನ್ನು ಕರೆದುವು. ಆಗ ವೀರ್ಯಸಂಪನ್ನನಾದ ಪುಷ್ಕರಾಕ್ಷನು ಅದಕ್ಕೆ ಪ್ರತೀಕಾರವಾಗಿ ಮೋಡಗಳನ್ನು ಓಡಿಸುವಂತೆ ವಾಯವ್ಯಾಸ್ತ್ರವನ್ನು ಪ್ರಯೋಗಿಸಿದನು.

೮. ಆ ಮೋಡಗಳೆಲ್ಲವೂ ಆ ವಾಯವ್ಯಾಸ್ತ್ರದಿಂದ ಕಣ್ಣಿಗೆ ಕಾಣದಹಾಗೆ ಹಾರಿಹೋದುವು. ಆ ಮೇಲೆ ರಾಮನು ಮತ್ತು ಅತಿಯಾಗಿ ಕೋಪಗೊಂಡವನಾಗಿ ಅಲ್ಲಿ ಬ್ರಹ್ಮಾಸ್ತ್ರವನ್ನು ಸಂಧಾನಮಾಡಿದನು.

೯. ಬಲಿಯಾದ ಪುಷ್ಕರಾಕ್ಷನು ಆ ಅಸ್ತ್ರವನ್ನು ಅದೇ ಬ್ರಹ್ಮಾಸ್ತ್ರದಿಂದಲೇ ಸೆಳೆದುಕೊಂಡನು. ಸೆಳೆದುಹಾಕಲ್ಪಟ್ಟಿರುವುದನ್ನು ಪರಶುರಾಮನು ಕಂಡು ದಂಡದಿಂದ ಹೊಡೆಯಲ್ಪಟ್ಟ ಸರ್ಪದಂತೆ ಕೋಪದಿಂದ ನಿಟ್ಟುಸಿರನ್ನು ಬಿಡುತ್ತ ಘೋರ ಪರಶುವನ್ನು ತೆಗೆದು ಅವನ ಬಳಿಗೆ ಓಡಿಹೋದನು.

ಘೋರಂ ಪರಶುಮಾದಾಯ ನಿಶ್ಯಸಂಸ್ತ್ರಮಧಾವತ ।
ರಾಮಸ್ಯಾಧಾವತಸ್ತತ್ರ ಪುಷ್ಕರಾಕ್ಷೋ ಧನುರ್ಧರಃ ॥ ೧೦ ॥

ಸಂದಧೇ ಪಂಚ ವಿಶಿಖಾನ್ ದೀಪ್ತಾಸ್ಯಾನುರಗಾನಿವ ।
ಏಕೈಕೇನ ಚ ಬಾಣೇನ ಹೃದಿ ಶೀರ್ಷೇ ಭುಜದ್ವಯೇ ॥ ೧೧ ॥

ಶಿಖಾಯಾಂ ಚ ಕ್ರಮಾದ್ವಿತ್ವಾ ತಸ್ತಂಭ ಭೃಶಮಾತುರಮ್ ।
ಸ ಚೈವಂ ಪೀಡಿತೋ ರಾಮಃ ಪುಷ್ಕರಾಕ್ಷೇಣ ಸಂಯುಗೇ ॥ ೧೨ ॥

ಕ್ಷಣಂ ಸ್ಥಿತ್ವಾ ಭೃಶಂ ಧಾವನ್ ಪರಶುಂ ಮೂರ್ಧ್ನ್ಯಪಾತಯತ್ ।
ಶಿಖಾಮಾರಭ್ಯ ಪಾದಾಂತಂ ಪುಷ್ಕರಾಕ್ಷಂ ದ್ವಿಧಾಕರೋತ್ ॥ ೧೩ ॥

ಪತಿತೇ ಶಕಲೇ ಭೂಮೌ ತತ್ಕಾಲಂ ಪಶ್ಯತಾಂ ನೃಣಾಮ್ ।
ಆಶ್ಚರ್ಯಂ ಸುಮಹಜ್ಜಾತಂ ದಿವಿ ಚೈವ ದಿವೌಕಸಾಮ್ ॥ ೧೪ ॥

---

೧೦. ಧನುರ್ಧಾರಿಯಾದ ಪುಷ್ಕರಾಕ್ಷನು ಓಡಿಬರುತ್ತಿದ್ದ ಭಾರ್ಗವನ ಮೇಲೆ ಉರಿಯುತ್ತಿದ್ದ ಹೆಡೆಗಳುಳ್ಳ ಸರ್ಪಗಳಂತೆ ಜ್ವಲಿಸುವ ಐದು ಬಾಣಗಳನ್ನು ಸಂಧಾನ ಮಾಡಿದನು.

೧೧. ಮತ್ತು ಹೃದಯ, ಶೀರ್ಷ, ಎರಡು ಭುಜ, ಶಿಖೆ ಇವುಗಳ ಮೇಲೆ ಕ್ರಮವಾಗಿ ಒಂದೊಂದು ಬಾಣವನ್ನು ಪ್ರಯೋಗಿಸಿ ರಾಮನನ್ನು ತುಂಬಾ ವ್ಯಥೆಗೊಳಿಸಿ ಸ್ತಂಭಿಸಿದನು.

೧೨-೧೩. ರಣಭೂಮಿಯಲ್ಲಿ ಈ ರೀತಿಯಾಗಿ ಪುಷ್ಕರಾಕ್ಷನಿಂದ ಪೀಡಿತನಾದ ರಾಮನು ಸ್ವಲ್ಪಹೊತ್ತು ಸುಮ್ಮನೆ ನಿಂತು ಮತ್ತೆ ಓಡಿಹೋಗಿ ಪುಷ್ಕರಾಕ್ಷನ ತಲೆಯಲ್ಲಿ ಕೊಡಲಿಯಿಂದ ಹೊಡೆದು ಶಿಖೆ ಮೊದಲುಗೊಂಡು ಪಾದಾಗ್ರ ಪರ್ಯಂತವಾಗಿ ಪುಷ್ಕರಾಕ್ಷನನ್ನು ಎರಡು ಭಾಗವಾಗಿ ಸೀಳಿಹಾಕಿದನು.

೧೪. ಸುತ್ತಲೂ ಜನರೆಲ್ಲರೂ ನೋಡುತ್ತಿರುವಾಗ ಪುಷ್ಕರಾಕ್ಷನ ಶರೀರದ ಬೇರೆ ಬೇರೆ ಭಾಗಗಳು ನೆಲಕ್ಕೆ ಬೀಳಲಾಗಿ ಆಕಾಶದಲ್ಲಿ ದೇವತೆಗಳಿಗೆ ಕೂಡ ಮಹತ್ತಾದ ಆಶ್ಚರ್ಯವುಂಟಾಯಿತು.

ವಿದಾರ್ಯ ರಾಮಸ್ತು ಕ್ರೋಧಾತ್ಪುಷ್ಕರಾಕ್ಷಂ ಮಹಾಬಲಮ್ ।
ತತ್ಸೈನ್ಯಮದಹತ್ಕ್ರುದ್ಧಃ ಪಾವಕೋ ವಿಪಿನಂ ಯಥಾ ॥ ೧೫ ॥

ಯತೋ ಯತೋ ಧಾವತಿ ಭಾರ್ಗವೇಂದ್ರೋ
ಮನೋಽನಿಲೌಜಾಃ ಪ್ರಹರನ್ ಪರಶ್ವಧಮ್ ।
ತತಸ್ತತೋ ವಾಜಿರಥೇಭಮಾನವಾ
ನಿಕೃತ್ತಗಾತ್ರಾಃ ಶತಶೋ ನಿಪೇತುಃ ॥ ೧೬ ॥

ರಾಮೇಣ ತತ್ರಾತಿಬಲೇನ ಸಂಗರೇ
ನಿಹನ್ಯಮಾನಾಸ್ತು ಪರಶ್ವಧೇನ ।
ಹಾ ತಾತ ಮಾತಸ್ತ್ವಿತಿ ಜಲ್ಪಮಾನಾ
ಭಸ್ಮೀಬಭೂವುಃ ಸುವಿಚೂರ್ಣಿತಾಸ್ತದಾ ॥ ೧೭ ॥

ಮುಹೂರ್ತಮಾತ್ರೇಣ ಚ ಭಾರ್ಗವೇಣ
ತತ್ಪುಷ್ಕರಾಕ್ಷಸ್ಯ ಬಲಂ ಸಮಗ್ರಮ್ ।
ಅನೇಕರಾಜನ್ಯಕುಲಂ ಹತೇಶ್ವರಂ
ಹತಂ ನವಾಕ್ಷೌಹಿಣಿಕಂ ಭೃಶಾತುರಮ್ ॥ ೧೮ ॥

---

೧೫. ಆ ಬಲಿಯಾದ ಪುಷ್ಕರಾಕ್ಷನನ್ನು ರಾಮನು ಕೋಪದಿಂದ ಎರಡು ಭಾಗವಾಗಿ ಸೀಳಿಹಾಕಿ ಮತ್ತಷ್ಟು ಕುಪಿತನಾಗಿ ಕಾಡುಕಿಚ್ಚು ಅರಣ್ಯವನ್ನು ಸುಟ್ಟಂತೆ ಆ ಸೈನ್ಯವನ್ನೆಲ್ಲ ಸುಟ್ಟು ಬೂದಿಮಾಡಿದನು.

೧೬. ಮನೋವೇಗ ವಾಯುವೇಗಗಳಿಂದ ಕೂಡಿದ ಭಾರ್ಗವ ರಾಮನು ಕೊಡಲಿಯಿಂದ ಹೊಡೆಯುತ್ತ ಯಾವ ಯಾವ ಸ್ಥಳಗಳಲ್ಲಿ ಓಡಾಡಿದನೋ ಅಲ್ಲಲ್ಲಿ ಕುದುರೆ, ರಥ, ಆನೆ, ಕಾಲಾಳು ಸೈನ್ಯದಳಗಳು ಶರೀರ ಕತ್ತರಿಸಿಹೋದುವುಗಳಾಗಿ ನೂರಾರು ಸಂಖ್ಯೆಯಾಗಿ ನೆಲಕ್ಕೆ ಬಿದ್ದುವು.

೧೭. ರಾಮನು ಆ ಯುದ್ಧಭೂಮಿಯಲ್ಲಿ ಪರಶುವೆಂಬ ಆಯುಧದಿಂದ ಹೊಡೆದುರುಳಿಸಿದ ದಳಗಳು ಅಯ್ಯೋ ತಂದೆಯೆ! ತಾಯಿಯೇ! ಎಂದು ಕೂಗಿಕೊಳ್ಳುತ್ತಾ ಶರೀರವೆಲ್ಲ ಚೂರುಚೂರಾಗಿ ಮಾಡಲ್ಪಟ್ಟು ಸುಟ್ಟು ಬೂದಿಯಾದರು.

೧೮. ಭಾರ್ಗವರಾಮನಿಂದ ಪುಷ್ಕರಾಕ್ಷಸೈನ್ಯದಲ್ಲಿ ಸಹಾಯಕರಾಗಿ ಬಂದು ಸೇರಿರುವ ಒಂಭತ್ತು ಅಕ್ಷೌಹಿಣೀ ರಾಜರ ಗುಂಪು ಒಂದು ಮುಹೂರ್ತ ಕಾಲದೊಳಗೆ ನಾಯಕನಿಲ್ಲದೇ ಬಹಳಮಟ್ಟಿಗೆ ವ್ಯಥೆಗೆ ಗುರಿಮಾಡಲ್ಪಟ್ಟಿತು.

ಪತಿತೇ ಪುಷ್ಕರಾಕ್ಷೇ ತು ಕಾರ್ತವೀರ್ಯಾರ್ಜುನಃ ಸ್ವಯಮ್ ।
ಆಜಗಾಮ ಮಹಾವೀರ್ಯಃ ಸುವರ್ಣರಥಮಾಸ್ಥಿತಃ ॥ ೧೯ ॥

ನಾನಾಶಸ್ತ್ರಸಮಾಕೀರ್ಣಂ ನಾನಾರತ್ನಪರಿಚ್ಛದಮ್ ।
ದಶನಲ್ವಪ್ರಮಾಣಂ ಚ ಶತವಾಜಿಯುತಂ ನೃಪ ॥ ೨೦ ॥

ಯುತೋ ಬಾಹುಸಹಸ್ರೇಣ ನಾನಾಯುಧಧರೇಣ ಚ ।
ಬಭೌ ಸ್ವರ್ಲೋಕಮಾರೋಕ್ಷ್ಯನ್ ದೇಹಾಂತೇ ಸುಕೃತೀ ಯಥಾ ॥ ೨೧ ॥

ಪುತ್ರಾಸ್ತಸ್ಯ ಮಹಾವೀರ್ಯಾಃ ಶತಂ ಯುದ್ಧವಿಶಾರದಾಃ ।
ಸೇನಾಃ ಸಂವ್ಯೂಹ್ಯ ಸಂತಸ್ಥುಃ ಸಂಗ್ರಾಮೇ ಪಿತುರಾಜ್ಞಯಾ ॥ ೨೨ ॥

ಕಾರ್ತವೀರ್ಯಸ್ತು ಬಲವಾನ್ ರಾಮಂ ದೃಷ್ಟ್ವಾ ರಣಾಜಿರೇ ।
ಕಾಲಾಂತಕಯಮಪ್ರಖ್ಯಂ ಯೋದ್ಧುಂ ಸಮುಪಚಕ್ರಮೇ ॥ ೨೩ ॥

---

೧೯. ಪುಷ್ಕರಾಕ್ಷನು ಮರಣಹೊಂದಿದೊಡನೆ ಮಹಾ ವೀರ್ಯಸಂಪನ್ನನಾದ ಕಾರ್ತವೀರ್ಯರಾಜನು ಚಿನ್ನದ ರಥವನ್ನು ಏರಿಕೊಂಡು ತಾನೇ ಯುದ್ಧಕ್ಕೆ ಬಂದನು.

೨೦. ರಾಜನೇ ! ಕಾರ್ತವೀರ್ಯಾರ್ಜುನನ ರಥವು ಯುದ್ಧಭೂಮಿಗೆ ಬಂದಾಗ ವಿವಿಧ ಆಯುಧಗಳಿಂದ ತುಂಬಿದುದಾಗಿಯೂ ಅನೇಕ ರತ್ನಮಯ ಉಪಕರಣಗಳುಳ್ಳದ್ದೂ ಹತ್ತು ನಲ್ವವೆಂಬ ಪ್ರಮಾಣವುಳ್ಳದ್ದೂ ನೂರಾರು ಕುದುರೆಗಳಿಂದ ಕೂಡಿದುದೂ ಆಗಿತ್ತು.

೨೧. ನಾನಾ ಆಯುಧಗಳನ್ನು ಧರಿಸಿದ ಸಾವಿರ ಬಾಹುಗಳಿಂದ ಕೂಡಿದ ಕಾರ್ತವೀರ್ಯಾರ್ಜುನನು ರಥವನ್ನೇರಿ ಬಂದಾಗ ದೇಹಾವಸಾನ ಕಾಲದಲ್ಲಿ ವಿಮಾನರೂಢನಾಗಿ ಸ್ವರ್ಗಲೋಕಕ್ಕೆ ಹೋಗುತ್ತಲಿರುವ ಪುಣ್ಯವಂತನಂತೆ ಪ್ರಕಾಶಿಸಿದನು.

೨೨. ಮಹಾ ವೀರ್ಯವಂತರೂ ಯುದ್ಧ ನಿಪುಣರೂ ಆದ ಕಾರ್ತವೀರ್ಯಾರ್ಜುನನ ನೂರು ಮಂದಿ ಮಕ್ಕಳು ರಣರಂಗದಲ್ಲಿ ತಂದೆಯ ಆಜ್ಞೆಯಂತೆ ವ್ಯೂಹಾಕಾರದಿಂದ ಸೇನೆಗಳನ್ನು ಏರ್ಪಡಿಸಿ ನಿಂತುಕೊಂಡರು.

೨೩. ಶಕ್ತಿಯುತನಾದ ಕಾರ್ತವೀರ್ಯರಾಜನು ಯುದ್ಧಾಂಗಣದಲ್ಲಿ ಪ್ರಲಯ ಕಾಲದಲ್ಲಿ ಸಂಹಾರಕನಾದ ಯಮನ ಉಗ್ರಮೂರ್ತಿಯಂತೆ ಭಯಂಕರನಾದ ರಾಮನನ್ನು ಕಂಡು ಯುದ್ಧ ಮಾಡಲಾರಂಭಿಸಿದನು.

ದಕ್ಷೇ ಪಂಚಶತಂ ಬಾಣಾನ್ ವಾಮೇ ಪಂಚಶತಂ ಧನುಃ ।
ಜಗ್ರಾಹ ಭಾರ್ಗವೇಂದ್ರಸ್ಯ ಸಮರೇ ಜೇತುಮುದ್ಯತಃ || ೨೪ ||

ಬಾಣವರ್ಷಂ ಚಕಾರಾಥ ರಾಮಸ್ಯೋಪರಿ ಭೂಪತೇ ।
ಯಥಾ ಬಲಾಹಕೋ-ವೀರ ಪರ್ವತೋಪರಿ ವರ್ಷತಿ || ೨೫ ||

ಬಾಣವರ್ಷೇಣ ತೇನಾಜೌ ಸತ್ಕೃತೋ ಭೃಗುನಂದನಃ ।
ಜಗ್ರಾಹ ಸ್ವಧನುರ್ದಿವ್ಯಂ ಬಾಣವರ್ಷಂ ತಥಾಕರೋತ್ || ೨೬ ||

ತಾವುಭೌ ರಣಸಂದೃಪ್ತೌ ತದಾಭಾರ್ಗವಹೈಹಯೌ ।
ಚಕ್ರತುರ್ಯುದ್ಧಮತುಲಂ ತುಮುಲಂ ರೋಮಹರ್ಷಣಮ್ || ೨೭ ||

ಬ್ರಹ್ಮಾಸ್ತ್ರಂ ಚ ಸ ಭೂಪಾಲಃ ಸಂದಧೇ ರಣಮೂರ್ಧನಿ ।
ವಧಾಯ ಭಾರ್ಗವೇಂದ್ರಸ್ಯ ಸರ್ವಶಸ್ತ್ರಾಸ್ತ್ರಭೃದ್ಬಲೀ || ೨೮ ||

---

೨೪. ರಣದಲ್ಲಿ ಭಾರ್ಗವರಾಮನನ್ನು ಗೆಲ್ಲಬೇಕೆಂದು ಉದ್ಯುಕ್ತನಾದ ಕಾರ್ತವೀರ್ಯರಾಜನು ತನ್ನ ಬಲಭುಜಗಳಲ್ಲಿ ಐದುನೂರು ಬಾಣಗಳನ್ನೂ ಎಡಭುಜಗಳಲ್ಲಿ ಐದುನೂರು ಬಿಲ್ಲುಗಳನ್ನೂ ಧರಿಸಿದನು.

೨೫. ವೀರನಾದ ಭೂಪತಿಯೆ! ಪರ್ವತದ ಮೇಲೆ ಮೋಡವು ಮಳೆ ಸುರಿಸಿದಂತೆ ಆ ರಾಜನು ರಾಮನ ಮೇಲೆ ಬಾಣವೃಷ್ಟಿಯನ್ನು ಸುರಿಸಿದನು.

೨೬. ಆ ರಾಜನ ಬಾಣವೃಷ್ಟಿಯಿಂದ ಸತ್ಕರಿಸಲ್ಪಟ್ಟ ಭೃಗುಮುನಿ ಪುತ್ರನಾದ ರಾಮನು ದಿವ್ಯವಾದ ತನ್ನ ಧನುಸ್ಸನ್ನು ತೆಗೆದುಕೊಂಡು ಹಾಗೆಯೇ ಬಾಣಗಳನ್ನು ಮಳೆಗರೆದನು.

೨೭. ಯುದ್ಧದಲ್ಲಿ ಗರ್ವಿತರಾದ ಆ ಪರಶುರಾಮ ಕಾರ್ತವೀರ್ಯಾರ್ಜುನರಿಬ್ಬರೂ ಆಗ ರೋಮಾಂಚವಾಗುವಂತಹ ಭಯಂಕರ ಯುದ್ಧವನ್ನು ಮಾಡಿದರು.

೨೮. ರಣರಂಗದಲ್ಲಿ ಆ ಕಾರ್ತವೀರ್ಯ ರಾಜನು ಸರ್ವ ಶಸ್ತ್ರ-ಅಸ್ತ್ರಗಳನ್ನು ಧರಿಸಿ ಬಲಿಷ್ಠನಾಗಿ ಆ ಭಾರ್ಗವರಾಮನ ವಧಕ್ಕೋಸ್ಕರವಾಗಿ ಬ್ರಹ್ಮಾಸ್ತ್ರವನ್ನು ಸಂಧಾನಮಾಡಿದನು.

ರಾಮೋಽಪಿ ವಾರ್ಯುಪಸ್ಪೃಶ್ಯ ಬ್ರಾಹ್ಮಂ ಬ್ರಾಹ್ಮಾಯ ಸಂದಧೇ ।
ತತೋ ವ್ಯೋಮ್ನಿ ತದಾ ಸಕ್ತೇ ದ್ವೇ ಚಾಪ್ಯಸ್ತ್ರೇ ನರಾಧಿಪ ॥ ೨೯ ॥

ವವೃಧಾತೇ ಜಗತ್ಪ್ರಾಂತೇ ತೇಜಸಾ ಜ್ವಲನಾರ್ಕವತ್ ।
ತ್ರಯೋ ಲೋಕಾಃ ಸಪಾತಾಲಾ ದೃಷ್ಟ್ವಾ ತನ್ಮಹದದ್ಭುತಮ್ ॥ ೩೦ ॥
ಜ್ವಲದಸ್ತ್ರಯುಗಂ ತಪ್ತಾ ನೇನಿರೇಽಸ್ಯೋಪಸಂಯಮಮ್ ।
ರಾಮಸ್ತದಾ ವೀಕ್ಷ್ಯ ಜಗತ್ಪ್ರಣಾಶಂ
ಜಗನ್ನಿವಾಸೋಕ್ತಮಥಾಸ್ಮರತ್ತದಾ ॥ ೩೧ ॥

ರಕ್ಷಾ ವಿಧೇಯಾದ್ಯ ಮಯಾಸ್ಯ ಸಂಯಮೋ
ನಿವಾರಣೀಯಃ ಪರಮಾಂಶಧಾರಿಣಾ ।
ಇತಿ ವ್ಯವಸ್ಯ ಪ್ರಭುರುಗ್ರತೇಜಸಾ
ನೇತ್ರದ್ವಯೇನಾಥ ತದಸ್ತ್ರಯುಗ್ಮಮ್ ॥ ೩೨ ॥

---

೨೯. ಭಾರ್ಗವರಾಮನು ನೀರನ್ನು ಆಚಮನಮಾಡಿ ಬ್ರಹ್ಮಾಸ್ತ್ರದ ಮೇಲೆ ಬ್ರಹ್ಮಾಸ್ತ್ರವನ್ನು ಸಂಧಾನಮಾಡಿದನು. ರಾಜನೆ! ಅನಂತರದಲ್ಲಿ ಆ ಎರಡು ಅಸ್ತ್ರಗಳೂ ಆಕಾಶದಲ್ಲಿ ಸೇರಿಕೊಂಡುವುಗಳಾಗಿ ತೇಜಸ್ಸಿನಿಂದ ಬೆಂಕಿ ಮತ್ತು ಸೂರ್ಯರು ಕಲೆತುಕೊಂಡಂತೆ ಜಗತ್ತಿನ ಮೇಲು ಭಾಗದಲ್ಲಿ ವೃದ್ಧಿಹೊಂದುತ್ತ ಬಂದುವು.

೩೦. ಪಾತಾಲಸಹಿತವಾಗಿ ಮೂರು ಲೋಕದ ಪ್ರಜೆಗಳು ಆ ಮಹಾದ್ಭುತವಾಗಿ ಜ್ವಲಿಸುತ್ತಿದ್ದ ಎರಡು ಬ್ರಹ್ಮಾಸ್ತ್ರಗಳನ್ನು ನೋಡಿ ಬಹಳ ನೊಂದವರಾಗಿ ಈ ಜಗತ್ತಿಗೆಲ್ಲ ಅಸ್ತ್ರಬಂಧನವುಂಟಾಗಿ ಈ ಜಗತ್ತು ಅಳಿದು ಹೋಗುವುದೆಂದು ಅರಿತರು.

೩೧. ಪರಶುರಾಮನು ಆಗ ಆಗುತ್ತಿರುವ ಭಯಂಕರವಾದ ಪ್ರಪಂಚನಾಶವನ್ನು ಕಂಡು ಜಗನ್ನಿವಾಸನಾದ ಪರಮಾತ್ಮನಿಂದ ಹೇಳಲ್ಪಟ್ಟಿರುವ ಮಾತನ್ನು ನೆನೆಸಿಕೊಂಡನು. ಈ ದಿನ ಪರಮಾತ್ಮಾಂಶವನ್ನು ಧರಿಸಿದ ನಾನು ಎಲ್ಲವನ್ನೂ ರಕ್ಷಿಸಬೇಕು. ಇದರಿಂದಾಗುವ ಬಂಧನವನ್ನು ತಪ್ಪಿಸಬೇಕು.

೩೨. ಹೀಗೆಂದು ನಿಶ್ಚಯಿಸಿ ಪ್ರಭುವಾದ ರಾಮನು ಉಗ್ರತೇಜಸ್ಸುಳ್ಳ ತನ್ನ ಎರಡು ಕಣ್ಣುಗಳಿಂದ ಆ ಎರಡು ಬ್ರಹ್ಮಾಸ್ತ್ರಗಳನ್ನೂ ಪಾನಮಾಡಿ ಜಗತ್ತಿಗೆ ಇನ್ನು ಮುಂದೆ ಚ್ಯುತಿಯಿಲ್ಲವೆಂದು ಯೋಚಿಸಿ ಕ್ಷಣಕಾಲ ಗಂಭೀರಾಂತಃಕರಣದಿಂದ ಧ್ಯಾನಾಸಕ್ತನಾಗಿದ್ದನು.

ಪೀತ್ವಾತಿರಾಮಂ ಜಗದಾಕಲಯ್ಯ
ತಸ್ಥೌ ಕ್ಷಣಂ ಧ್ಯಾನಗತೋ ಮಹಾತ್ಮಾ ।
ಧ್ಯಾನಪ್ರಭಾವೇಣ ತತಸ್ತು ತಸ್ಯ
ಬ್ರಹ್ಮಾಸ್ತ್ರಯುಗ್ಮಂ ವಿಗತಪ್ರಭಾವಮ್ ॥ ೩೩ ॥

ಪಪಾತ ಭೂಮೌ ಸಹಸಾಽಥ ತತ್ಕ್ಷಣಂ
ಸರ್ವಂ ಜಗತ್ ಸ್ವಾಸ್ಥ್ಯಮುಪಾಜಗಾಮ ।
ಸ ಜಾಮದಗ್ನ್ಯೋ ಮಹತಾಂ ಮಹೀಯಾನ್
ಸ್ರಷ್ಟುಂ ತಥಾ ಪಾಲಯಿತುಂ ನಿಹಂತುಮ್
ವಿಭುಸ್ತಥಾಪೀಹ ನಿಜಂ ಪ್ರಭಾವಂ
ಗೋಪಾಯಿತುಂ ಲೋಕವಿಧಿಂಚಕಾರ ॥ ೩೪ ॥

ಧನುರ್ಧರಃ ಶೂರತಮೋ ಮಹಸ್ವಾನ್
ಸದಗ್ರಣೀಃ ಸಂಸದಿತಥ್ಯವಕ್ತಾ ।
ಕಲಾಕಲಾಪೇಷು ಕೃತಪ್ರಯತ್ನೋ
ವಿದ್ಯಾಸು ಶಾಸ್ತ್ರೇಷು ಬುಧೋ ವಿಧಿಜ್ಞಃ ॥ ೩೫ ॥

---

೩೩. ಆ ಮೇಲೆ ಪರಶುರಾಮನು ಮಾಡಿದ ಧ್ಯಾನಮಹಿಮೆಯಿಂದ ಬ್ರಹ್ಮಾಸ್ತ್ರಗಳೆರಡು ತಮ್ಮ ಮಹಿಮೆಯನ್ನು ಕಳೆದುಕೊಂಡುವುಗಳಾಗಿ ಕೂಡಲೆ ನೆಲದಮೇಲೆ ಬಿದ್ದುವು. ಆ ಕ್ಷಣದಲ್ಲಿಯೇ ಸಮಸ್ತ ಪ್ರಪಂಚವು ಶಾಂತಿಯನ್ನು ಹೊಂದಿತು.

೩೪. ಮಹಾತ್ಮರನ್ನು ಮೀರಿಸಿರುವ ಆ ಜಾಮದಗ್ನ್ಯ ರಾಮನು ಸಮಸ್ತ ಲೋಕಗಳನ್ನು ಸೃಷ್ಟಿ-ಸ್ಥಿತಿ-ಲಯಮಾಡಲು ಶಕ್ತನಾಗಿರುವನು. ಆದರೂ ಇಹ ಲೋಕದಲ್ಲಿ ತನ್ನ ದಿವ್ಯ ಮಹಿಮೆಯನ್ನು ಗೋಪನಮಾಡಲೋಸ್ಕರ ಲೋಕಸಾಮಾನ್ಯವಾದ ವಿಧಿಯನ್ನು ಅನುಕರಿಸಿದನು.

೩೫. ಲೋಕದಲ್ಲಿ ಮಾನುಷಭಾವವನ್ನು ಅಭಿನಯಿಸಿ ಗುಣಗಳನ್ನು ಕ್ರಮವಾಗಿ ಆರ್ಜಿಸಿ ಧನುರ್ಧಾರಿಯೂ ಶೂರಾಗ್ರೇಸರನೂ ತೇಜೋವಂತನೂ, ಸಾಧುಗಳಲ್ಲಿ ಉತ್ತಮನೂ ಸಭೆಗಳಲ್ಲಿ ಸತ್ಯವನ್ನು ನುಡಿಯುವವನೂ ನಿಖಿಲಕಲೆಗಳಲ್ಲಿ ಅಭ್ಯಾಸವುಳ್ಳನೂ ವೇದವಿದ್ಯೆ-ಶಸ್ತ್ರವಿದ್ಯೆಗಳಲ್ಲಿ ಪಂಡಿತನೂ ಮತ್ತು ಕರ್ತವ್ಯವಿಧಾನಜ್ಞನೂ ಆಗಿದ್ದನು.

ಏವಂ ನೃಲೋಕೇ ಪ್ರಥಯನ್ ಸ್ವಭಾವಂ
ಸರ್ವಾಣಿ ಕೃತ್ಯಾನಿ ಕರೋತಿ ನಿತ್ಯಮ್ ।
ಸರ್ವೇ ತು ಲೋಕಾ ವಿಜಿತಾಸ್ತು ತೇನ
ರಾಮೇಣ ರಾಜನ್ಯನಿಷೂದನೇನ ॥ ೩೬ ॥

ಏವಂ ಸ ರಾಮಃ ಪ್ರಥಿತಪ್ರಭಾವಃ
ಪ್ರಶಾಮಯಿತ್ವಾ ತು ತದಸ್ತ್ರಯುಗ್ಮಮ್ ।
ಪುನಃ ಪ್ರವೃತ್ತೋ ನಿಧನಂ ಪ್ರಕರ್ತುಂ
ರಣಾಂಗಣೇ ಹೈಹಯವಂಶಕೇತೋಃ ॥ ೩೭ ॥

ತೂಣೀರತಃ ಪತ್ರಿಯುಗಂ ಗೃಹೀತ್ವಾ
ಪುಂಖೇ ನಿಧಾಯಾಥ ಧನುರ್ಜ್ಯಕಾಯಾಮ್ ।
ಆಲಕ್ಷ್ಯ ಲಕ್ಷ್ಯಂ ನೃಪಕರ್ಣಯುಗ್ಮಂ
ಚಕರ್ತ ಚೂಡಾಮಣಿ ಹರ್ತುಕಾಮಃ ॥ ೩೮ ॥

ಸ ಕೃತ್ತಕರ್ಣೋ ನೃಪತಿರ್ಮಹಾತ್ಮಾ
ವಿನಿರ್ಜಿತಾಶೇಷಜಗತ್ಪ್ರವೀರಃ ॥ ೩೯ ॥

---

೩೬. ಹೀಗೆ ಮನುಷ್ಯಲೋಕದಲ್ಲಿ ಮಾನುಷ ಸ್ವಭಾವವನ್ನೇ ತೋರ್ಪಡಿಸುತ್ತ ರಾಮನು ಸರ್ವಕಾಲಗಳಲ್ಲಿ ಸರ್ವಕಾರ್ಯಗಳನ್ನೂ ಮಾಡುತ್ತಲಿದ್ದನು. ಅಂತಹ ಕ್ಷತ್ರಿಯಾಂತಕನಾದ ರಾಮನಿಂದ ಸಮಸ್ತ ಲೋಕಗಳೂ ಗೆಲ್ಲಲ್ಪಟ್ಟುವು.

೩೭. ಈ ರೀತಿಯಾಗಿ ಪ್ರಖ್ಯಾತವೈಭವವುಳ್ಳ ಆ ರಾಮನು ಆ ಬ್ರಹ್ಮಾಸ್ತ್ರಯುಗ್ಮವನ್ನು ಶಾಂತಿಗೊಳಿಸಿ ಮತ್ತೆ ಯುದ್ಧರಂಗದಲ್ಲಿ ಕಾರ್ತವೀರ್ಯಾರ್ಜುನನೊಡನೆ ಯುದ್ಧವನ್ನು ಮುಂದುವರಿಸಲಾರಂಭಿಸಿದನು.

೩೮. ಅನಂತರದಲ್ಲಿ ಬತ್ತಳಿಕೆಯಿಂದ ಎರಡು ಬಾಣಗಳನ್ನು ಸೆಳೆದುಕೊಂಡು ಅವುಗಳ ಗರಿಗಳನ್ನು ಬಿಲ್ಲಿನ ಹುರಿಯಲ್ಲಿಟ್ಟು ಸಂಧಾನಮಾಡಿ ಚೂಡಾಮಣಿಯನ್ನು ಅಪಹರಿಸುವ ಇಷ್ಟವುಳ್ಳನಾಗಿ ಗುರಿಯಿಟ್ಟು ರಾಜನ ಎರಡು ಕಿವಿಗಳನ್ನು ಕತ್ತರಿಸಿದನು.

೩೯. ನೃಪತಿಯೇ! ಮಹಾತ್ಮನೂ ಸಕಲ ಲೋಕಗಳನ್ನು ಗೆದ್ದು ಜಗತ್ಪ್ರಖ್ಯಾತ ವೀರನೂ ಆದ ಕಾರ್ತವೀರ್ಯ ರಾಜನು ರಾಮನಿಂದ ಕರ್ಣಚ್ಛೇದವೆಂಬ ತಿರಸ್ಕಾರ ಪಾತ್ರವಾದ ಮನಸ್ಸುಳ್ಳವನಾಗಿ ಈಗ ನನ್ನ ವೀರ್ಯವೆಲ್ಲವೂ ನಾಶವಾಯಿತೆಂಬುದಾಗಿ ಅರಿತುಕೊಂಡನು.

ಮೋನೇ ನಿಜಂ ವೀರ್ಯಮಿಹ ಪ್ರಣಷ್ಟಂ
ರಾಮೇಣ ಭೂಮಿಾಶ ತಿರಸ್ಕೃತಾತ್ಮಾ ।
ಕ್ಷಣಂ ಧರಾಧೀಶ ತನುರ್ವಿವರ್ಣಾ
ಗತಾನುಭಾವಾ ನೃಪತೇರ್ಬಭೂವ ॥ ೪೦ ॥

ಲೇಖ್ಯೇವ ಸಚ್ಚಿತ್ರಕರಪ್ರಯುಕ್ತಾ
ಸುದೀನಚಿತ್ತಸ್ಯ ವಿಲಕ್ಷ್ಯತೇಽಂಗ ।
ತತಃ ಸ ರಾಜಾ ನಿಜವೀರ್ಯವೈಭವಂ
ಸಮಸ್ತಲೋಕಾಧಿಕತಾಂ ಪ್ರಯಾತಮ್ ॥ ೪೧ ॥

ವಿಚಿತ್ಯ ಪೌಲಸ್ತ್ಯಜಯಾದಿಲಬ್ಧಂ
ಶೋಚನ್ನಿವಾಸೀತ್ಸ ಜಯಾಭಿಕಾಂಕ್ಷೀ ।
ದಧ್ಯೌ ಪ್ರಸನ್ನಿಮಿಾಲಿತಲೋಚನೋ ನೃಪೋ
ದತ್ತಂ ತಮಾತ್ರೇಯಕುಲಪ್ರದೀಪಮ್ ॥ ೪೨ ॥

---

೪೦. ಎಲೈ ರಾಜನೇ! ಕಾರ್ತವೀರ್ಯ ರಾಜನ ದೇಹವು ಪ್ರಖ್ಯಾತ ಮಹಿಮೆಯಿಂದ ಶೂನ್ಯವಾಗಿ ಮಲಿನವಾಗಿ ಮನಸ್ಸಿನ ದೈನ್ಯದಿಂದ ಕುಶಲನಾದ ಚಿತ್ರಕಾರನು ಬರೆದ ಚಿತ್ರವ್ಯಕ್ತಿಯಂತೆ ನಿಶ್ಚಲವಾಗಿ ಕಾಣಿಸುತ್ತಿತ್ತು.

೪೧. ಆ ಮೇಲೆ ಆ ರಾಜನು ಸರ್ವಲೋಕಕ್ಕಿಂತ ಅತಿಶಯವಾದ, ರಾವಣಾಸುರನ ನಿಗ್ರಹ ಮುಂತಾದ ವಿಕ್ರಮಕಾರ್ಯಗಳಿಂದ ಬಂದ ತನ್ನ ವೀರ್ಯಮಹಿಮೆಯನ್ನು ಯೋಚಿಸಿ ಅಂತಹ ವೀರ್ಯವಿದ್ದರೂ ತನಗೆ ಸಂಭವಿಸಿದ ಈ ತಿರಸ್ಕಾರಕ್ಕೆ ಶೋಕಪಟ್ಟವನಾಗಿ ಪುನಃ ಜಯಿಸಬೇಕೆಂಬ ಕುತೂಹಲವುಳ್ಳವನಾದನು.

೪೨. ಅದಕ್ಕೋಸ್ಕರ ರಾಜನು ಆತ್ರೇಯ ವಂಶದಲ್ಲಿ ಪ್ರಖ್ಯಾತ ಜನ್ಮವೆತ್ತಿದ ದತ್ತಾತ್ರೇಯ ಗುರುವನ್ನು ನೇತ್ರಗಳನ್ನು ಮುಚ್ಚಿಕೊಂಡು ಧ್ಯಾನಮಾಡಿದನು. ಆ ರಾಜನು ಆ ಗುರು ಪ್ರಭಾವದ ಅನುಗ್ರಹದಿಂದಲೇ ನಿರುಪಮ ಶಕ್ತಿಯನ್ನು ಹೊಂದಿ ಲೋಕಪಾಲಕರನ್ನು ಕೂಡ ತಿರಸ್ಕರಿಸುವಷ್ಟು ಶಕ್ತಿಸಂಪನ್ನನಾಗಿದ್ದನು.

ಯಸ್ಯ ಪ್ರಭಾವಾನುಗೃಹೀತ ಓಜಸಾ
ತಿರಶ್ಚಕಾರಾಖಿಲಲೋಕಪಾಲಕಾನ್ ।
ಯದಾಸ್ಯ ಹೃದ್ಯೇಷ ಮಹಾನುಭಾವೋ
ದತ್ತಃ ಪ್ರಯಾತೋ ನ ಹಿದರ್ಶನಂ ತದಾ ॥ ೪೩ ॥

ಖಿನ್ನೋಽತಿಮಾತ್ರಂ ಧರಣೀಪತಿಸ್ತದಾ
ಪುನಃ ಪುನರ್ಧ್ಯಾನಪಥಂ ಜಗಾಮ ।
ಸ ಧ್ಯಾಯಮಾನೋಽಪಿ ನ ಚಾಜಗಾಮ
ದತ್ತೋ ಮನೋಗೋಚರಮಸ್ಯ ರಾಜನ್ ॥ ೪೪ ॥

ತಪಸ್ವಿನೋ ದಾಂತತಮಸ್ಯ ಸಾಧೋ
ರನಾಗಸೋ ದುಷ್ಕೃತಿಕಾರಿಣೋ ವಿಭುಃ ।
ಏವಂ ಯದಾತ್ರೇಸ್ತನಯೋ ಮಹಾತ್ಮಾ
ದೃಷ್ಟೋ ನ ಚ ಧ್ಯಾನಪಥೇ ನೃಪೇಣ ॥ ೪೫ ॥

---

೪೩. ಈ ರೀತಿಯಾಗಿ ಧ್ಯಾನಮಾಡಲಾಗಿ ಈ ರಾಜನ ಹೃದಯಕ್ಕೆ ಆಗ ಮಹಾಮಹಿಮೆಯುಳ್ಳ ದತ್ತಾತ್ರೇಯ ಗುರುವು ದರ್ಶನವನ್ನು ಕೊಡಲಿಲ್ಲ. ಆಗ ಆ ರಾಜನು ಬಹಳ ಖಿನ್ನನಾಗಿ ಮತ್ತೆ ಮತ್ತೆ ಧ್ಯಾನಮಾರ್ಗದ ಸಾಧನವನ್ನು ಕೈಗೊಂಡನು.

೪೪. ಮಹಾರಾಜನೇ! ಈ ರೀತಿಯಾಗಿ ದತ್ತಾತ್ರೇಯ ಗುರುವು ಭಕ್ತಿಯಿಂದ ಧ್ಯಾನಿಸಲ್ಪಟ್ಟಾಗ್ಯೂ ಕೂಡ ರಾಜನಿಗೆ ಮನೋಗೋಚರನಾಗಲಿಲ್ಲ. ಸರ್ವೇಶನಾದ ದತ್ತಾತ್ರೇಯ ಗುರುವು ತಪಸ್ವಿಯೂ ಜಿತೇಂದ್ರಿಯನೂ ನಿರಪರಾಧಿ ಸಾಧುವೂ ಆದ ತನ್ನ ಶಿಷ್ಯನಾದ ಕಾರ್ತವೀರ್ಯಾರ್ಜುನನಿಗೆ ದುಷ್ಕರ್ಮಪರಿಣಾಮದ ಕಾಲ ಒದಗಿದೆ ಯೆಂದು ಅರಿತಿದ್ದನು.

೪೫. ರಾಜನು ಅತ್ರಿಪುತ್ರನಾದ ಮಹಾತ್ಮ ದತ್ತಾತ್ರೇಯ ಗುರುವನ್ನು ಧ್ಯಾನ ದಿಂದ ಸಾಕ್ಷಾತ್ಕರಿಸಲಾರದೆಹೋದ ಬಳಿಕ ಬಹಳ ದುಃಖದಿಂದ ಪೀಡಿತನಾಗಿ ಶೋಕ ಮೋಹಗಳಿಂದ ವ್ಯಾಕುಲನಾದನು.

ತದಾತಿದುಃಖೇನ ವಿದೂಯಮಾನಃ
ಶೋಕೇನ ಮೋಹೇನ ಯುತೋ ಬಭೂವ।
ತಂ ಶೋಕಮಗ್ನಂ ನೃಪತಿಂ ಮಹಾತ್ಮಾ
ರಾಮೋ ಜಗಾದಾಖಿಲ ಚಿತ್ತದರ್ಶೀ।
ಮಾ ಶೋಕಭಾವಂ ನೃಪತೇ ಪ್ರಯಾಹಿ
ನೈವಾನುಶೋಚಂತಿ ಮಹಾನುಭಾವಾಃ || ೪೬ ||

ಯಸ್ತೇ ವರಾಯಾಭವಮಾದಿಸರ್ಗೇ
ಸ ಏವ ಚಾಹಂ ತವ ಸಾದನಾಯ।
ಸಮಾಗತಸ್ತ್ವಂ ಭವ ಧೀರಚಿತ್ತಃ
ಸಂಗ್ರಾಮಕಾಲೇ ನ ವಿಷಾದವತ್ತಾ || ೪೭ ||

ಸರ್ವೋ ಹಿ ಲೋಕಃ ಸ್ವಕೃತಂ ಭುನಕ್ತಿ
ಶುಭಾಶುಭಂ ದೈವಕೃತಂ ವಿಪಾಕೇ।
ಅನ್ಯೋ ನ ಕೋಽಪ್ಯಸ್ಯ ಶುಭಾಶುಭಸ್ಯ
ವಿಪರ್ಯಯಂ ಕರ್ತುಮಲಂ ನರೇಶ || ೪೮ ||

---

೪೬. ಮಹಾತ್ಮನಾಗಿಯೂ ಸಕಲಪ್ರಾಣಿಗಳ ಚಿತ್ತವನ್ನರಿತವನೂ ಆದ ರಾಮನು ಶೋಕದಲ್ಲಿ ಮುಳುಗಿದ ಆ ರಾಜನನ್ನು ಕುರಿತು ಈ ರೀತಿಯಾಗಿ ಉಪದೇಶಿಸಿದನು:—ರಾಜನೆ! ಶೋಕಾವಸ್ಥೆಯನ್ನು ಹೊಂದಬೇಡ. ಮಹಾತ್ಮರು ಯಾವಾಗಲೂ ಶೋಕಕ್ಕೆ ಈಡಾಗುವವರಲ್ಲ.

೪೭. ಸೃಷ್ಟಿಯ ಆದಿಯಲ್ಲಿ ನಿನಗೆ ವರವನ್ನು ಅನುಗ್ರಹಿಸಿರುವ ನಾನು ಮತ್ತೆ ಈಗ ನಿನ್ನನ್ನು ಸಂಹಾರಮಾಡಲು ಬಂದಿರುವೆನು, ಈ ಭವಿತವ್ಯತೆಯನ್ನು ಅರಿತು ಧೀರವಾದ ಮನಸ್ಸುಳ್ಳವನಾಗು, ಯುದ್ಧ ಕಾಲದಲ್ಲಿ ವಿಷಾದದಿಂದಿರುವುದು ಯುಕ್ತವಲ್ಲ.

೪೮. ರಾಜನೆ! ಸಮಸ್ತ ಪ್ರಾಣಿಗಳು ತಾನು ಜನ್ಮಾಂತರದಲ್ಲಿ ಮಾಡಿದ ಪುಣ್ಯಪಾಪಗಳ ಪರಿಣಾಮವನ್ನು ಅನುಸರಿಸಿ ಒದಗುವ ಶುಭ ಅಥವ ಅಶುಭ ಫಲವನ್ನು ಅನುಭವಿಸುವರು. ಸ್ವಕೃತ ಕರ್ಮವನ್ನು ಮತ್ತಾವನೂ ಬದಲಾಯಿಸಲು ಶಕ್ತಿಯನ್ನು ಹೊಂದಿಲ್ಲ.

ಯತ್ತೇ ಸುಪುಣ್ಯಂ ಬಹುಜನ್ಮಸಂಚಿತಂ
ತೇನೇಹದತ್ತಸ್ಯ ವರಾರ್ಹಪಾತ್ರಮ್ ।
ಜಾತೋ ಭವಾನದ್ಯ ತು ದುಷ್ಕೃತಸ್ಯ
ಫಲಂ ಪ್ರಭುಂಕ್ಷ್ವ ತ್ವಮಿಹಾರ್ಜಿತಸ್ಯ ॥ ೪೯ ॥

ಗುರುರ್ವಿಮತ್ಯಾಪಕೃತಸ್ತ್ವಯಾ ಮೇ
ಯತಸ್ತತಃ ಕರ್ಣನಿಕೃಂತನಂ ತೇ ।
ಕೃತಂ ಮಯಾ ಪಶ್ಯ ಹರಂತವೋಜಸಾ
ಚೂಡಾಮಣಿಂ ಮಾಮಪಹೃತ್ಯ ತೇ ಯಶಃ ॥ ೫೦ ॥

ಇತ್ಯೇವಮುಕ್ತ್ವಾ ಸ ಭೃಗುರ್ಮಹಾತ್ಮಾ
ನಿಯೋಜ್ಯ ಬಾಣಂ ಚ ವಿಕೃಷ್ಯ ಚಾಪಮ್ ।
ಚಿಕ್ಷೇಪ ರಾಜ್ಞಃ ಸತು ಲಾಘವೇನ
ಛಿತ್ವಾಮಣಿಂ ರಾಮಮುಪಾಜಗಾಮ ॥ ೫೧ ॥

---

೪೯. ಅನೇಕ ಜನ್ಮಗಳಿಂದ ಸಂಪಾದಿಸಿದ ಯಾವ ಮಹತ್ತರವಾದ ಸುಕೃತವು ನಿನ್ನಲ್ಲಿದ್ದಿತೋ ಅದರ ಫಲವಾಗಿ ಈ ಲೋಕದಲ್ಲಿ ದತ್ತಾತ್ರೇಯ ಮುನಿಗೆ ಸಚ್ಛಿಷ್ಯನಾಗಿ ಸತ್ಕಾರವನ್ನು ಹೊಂದಿರುವೆ. ಈಗಲಾದರೋ ನೀನು ಪಾಪ ಫಲವನ್ನು ಅನುಭವಿಸಲು ಸಿದ್ಧನಾಗು.

೫೦. ನನ್ನ ತಂದೆಯಾದ ಭೃಗುಮುನಿಯನ್ನು ನೀನು ಅವಮಾನಪಡಿಸಿದ ಅಪಕಾರಕ್ಕೆ ನಾನು ನಿನಗೆ (ಕರ್ಣನಿಕೃಂತನ) ಕಿವಿಗಳನ್ನು ಕತ್ತರಿಸಿ ವೈರೂಪ್ಯವನ್ನು ಮಾಡಿರುವೆನು, ಮತ್ತು ನಿನ್ನ ಕೀರ್ತಿಯನ್ನು ಭಂಗಮಾಡಿ ಪರಾಕ್ರಮದಿಂದ ನಿನ್ನ ಚೂಡಾಮಣಿಯನ್ನು ನಾನು ಅಪಹರಿಸುವುದನ್ನು ಶೀಘ್ರವಲ್ಲಿಯೇ ನೋಡು.

೫೧. ಮಹಾತ್ಮನಾದ ಭಾರ್ಗವನು ಇಂತೆಂದು ಬಿಲ್ಲನ್ನು ಸೆಳೆದು ಬಾಣವನು ಸಂಧಾನಮಾಡಿ ರಾಜನ ಮೇಲೆ ಪ್ರಯೋಗ ಮಾಡಿದನು, ಆ ಬಾಣವು ವೇಗದಿಂದ ಹೋಗಿ ರಾಜನ ಚೂಡಾಮಣಿಯನ್ನು ಛೇದಿಸಿ ಮತ್ತೆ ರಾಮನ ಸಮೀಪಕ್ಕೆ ಬಂದಿತು.

ತದ್ವೀಕ್ಷ್ಯ ಕರ್ಮಾಸ್ಯ ಮುನೇಃ ಸುತಸ್ಯ
ಸ ಚಾರ್ಜುನೋ ಹೈಹಯವಂಶಧರ್ತಾ ।
ಸಮುದ್ಯತೋಽಭೂತ್ಪುನರಪ್ಯುದಾಯುಧಃ
ತಂ ಹಂತುಮಾಜೌ ದ್ವಿಜಮಾತ್ಮಶತ್ರುಮ್ ॥ ೫೨ ॥

ಶೂಲಶಕ್ತಿಗದಾಚಕ್ರಖಡ್ಗಪಟ್ಟಿಶತೋಮರೈಃ ।
ನಾನಾಪ್ರಹರಣೈಶ್ಚಾನ್ಯೈರಾಜಘಾನ ದ್ವಿಜಾತ್ಮಜಮ್ ॥ ೫೩ ॥

ಸ ರಾಮೋ ಲಾಘವೇನೈವ ಸಂಪ್ರಕ್ಷಿಪ್ತಾನ್ಯನೇನ ಚ ।
ಶೂಲಾದೀನಿ ಚಕರ್ತಾಶು ಮಧ್ಯ ಏವ ನಿಜಾಶುಗೈಃ ॥ ೫೪ ॥

ಸ ರಾಜಾ ವಾರ್ಯುಪಸ್ಪೃಶ್ಯ ಸಸರ್ಜಾಗ್ನೇಯಮುತ್ತಮಮ್ ।
ಅಸ್ತ್ರಂ ರಾಮೋ ವಾರುಣೇನ ಶಮಯಾಮಾಸ ಸತ್ವರಮ್ ॥ ೫೫ ॥

---

೫೨. ಭೃಗುಮುನಿ ಪುತ್ರನಾದ ರಾಮನ ಆ ವೀರಕರ್ಮವನ್ನು ಕಂಡು ಹೈಹಯ ವಂಶವನ್ನು ಪ್ರತಿಷ್ಠೆಗೊಳಿಸಿದ ಕಾರ್ತವೀರ್ಯಾರ್ಜುನನು ಯುದ್ಧದಲ್ಲಿ ತನ್ನ ಶತ್ರುವಾದ ದ್ವಿಜನನ್ನು ಕೊಲ್ಲಬೇಕೆಂದು ಮತ್ತೆ ಆಯುಧಗಳನ್ನು ಸಜ್ಜುಗೊಳಿಸಿ ಯುದ್ಧಕ್ಕೆ ಸಿದ್ಧನಾದನು.

೫೩. ಮತ್ತು ಶೂಲ-ಶಕ್ತಿ-ಚಕ್ರ-ಪಟ್ಟಿಶ-ತೋಮರ-ಮುಂತಾದ ಅನೇಕ ಆಯುಧಗಳಿಂದ ದ್ವಿಜ ಪುತ್ರನಾದ ರಾಮನನ್ನು ಹೊಡೆದನು.

೫೪. ಆಗ ಭಾರ್ಗವನು ರಾಜನಿಂದ ಪ್ರಯೋಗಿಸಲ್ಪಟ್ಟ ಶೂಲಾದಿ ಸಮಸ್ತ ಶಸ್ತ್ರಗಳನ್ನೂ ಅತಿ ಲಾಘವದಿಂದ ತನ್ನ ಶಸ್ತ್ರಗಳಿಂದ ಮಧ್ಯದಲ್ಲಿಯೇ ಕತ್ತರಿಸಿಬಿಟ್ಟನು.

೫೫. ಆ ರಾಜನು ನೀರನ್ನು ಆಚಮನಮಾಡಿ ಪವಿತ್ರನಾಗಿ ಉತ್ತಮವಾದ ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು. ರಾಮನು ಅದನ್ನು ವಾರುಣಾಸ್ತ್ರಬಲದಿಂದ ತತ್‌ಕ್ಷಣದಲ್ಲಿ ನಿರಾಕರಿಸಿದನು.

ಗಾಂಧರ್ವಂ ವಿದಧೇ ರಾಜಾ ವಾಯವ್ಯೇನಾಹನದ್ವಿಭುಃ ।
ನಾಗಾಸ್ತ್ರಂ ಗಾರುಡೇನಾಪಿ ರಾಮಶ್ಚಿಚ್ಛೇದ ಭೂಪತೇ । ॥ ೫೬ ॥

ದತ್ತೇನ ದತ್ತಂ ಯಚ್ಛೂಲಮವ್ಯರ್ಥಂ ಮಂತ್ರಪೂರ್ವಕಮ್ ।
ಜಗ್ರಾಹ ಸಮರೇ ರಾಜಾ ಭಾರ್ಗವಸ್ಯ ವಧಾಯ ಚ ॥ ೫೭ ॥

ತಚ್ಛೂಲಂ ಶತಸೂರ್ಯಾಭಮನಿವಾರ್ಯಂ ಸುರಾಸುರೈಃ
ಚಿಕ್ಷೇಪ ರಾಮಮುದ್ದಿಶ್ಯ ಸಮಗ್ರೇಣ ಬಲೇನ ಸಃ ॥ ೫೮ ॥

ಮೂರ್ಧ್ನಿ ತದ್ಭಾರ್ಗವಸ್ಯಾಥ ನಿಪಪಾತ ಮಹೀಪತೇ ।
ತೇನ ಶೂಲಪ್ರಹಾರೇಣ ವ್ಯಥಿತೋ ಭಾರ್ಗವಸ್ತದಾ ॥ ೫೯ ॥

ಮೂರ್ಛಾಮವಾಪ ರಾಜೇಂದ್ರ ಪಪಾತ ಚ ಹರಿಂ ಸ್ಮರನ್
ಪತಿತೇ ಭಾರ್ಗವೇ ತತ್ರ ಸರ್ವೇ ದೇವಾ ಭಯಾಕುಲಾಃ । ॥ ೬೦ ॥

---

೫೬. ಭೂಪತಿಯಾದ ಸಗರನೆ! ರಾಜನು ಪ್ರಯೋಗಿಸಿದ ಗಾಂಧರ್ವಾಸ್ತ್ರವನ್ನು ವಾಯವ್ಯಾಸ್ತ್ರದಿಂದಲೂ ಸರ್ಪಾಸ್ತ್ರವನ್ನು ಗಾರುಡಾಸ್ತ್ರದಿಂದಲೂ ರಾಮನು ಛೇದಿಸಿದನು.

೫೭. ಮಂತ್ರಪೂರ್ವಕವಾಗಿ ದತ್ತಾತ್ರೇಯ ಮುನಿಯು ಅನುಗ್ರಹಿಸಿಕೊಟ್ಟ ಅಮೋಘವಾದ ಶೂಲವನ್ನು ರಣಮಧ್ಯದಲ್ಲಿ ಭಾರ್ಗವನ ಸಂಹಾರಕ್ಕೋಸ್ಕರ ರಾಜನು ಹಸ್ತದಲ್ಲಿ ತೆಗೆದುಕೊಂಡನು.

೫೮. ರಾಜನು ದೇವ–ದಾನವರಿಂದಲೂ ತಡೆಗಟ್ಟಲಶಕ್ಯವಾದ ನೂರಾರು ಸೂರ್ಯಬಿಂಬಗಳಂತೆ ಜಾಜ್ವಲ್ಯಮಾನವಾದ ಆ ಶೂಲವನ್ನು ರಾಮನ ಮೇಲೆ ತನ್ನ ಸಂಪೂರ್ಣ ಬಲದಿಂದ ಪ್ರಯೋಗಮಾಡಿದನು.

೫೯. ರಾಜನೇ! ಆ ಶೂಲವು ಭಾರ್ಗವನ ತಲೆಯಲ್ಲಿ ಬಂದು ಬಿತ್ತು. ರಾಜೇಂದ್ರನೆ! ಆ ಶೂಲದ ಪ್ರಹಾರದಿಂದ ವ್ಯಥೆಗೊಂಡ ರಾಮನು ಮೂರ್ಛೆಗೊಂಡವನಾಗಿ ವಿಷ್ಣುವನ್ನು ಸ್ಮರಿಸುತ್ತ ಕೆಳಕ್ಕೆ ಬಿದ್ದನು.

೬೦. ರಣಭೂಮಿಯಲ್ಲಿ ಭಾರ್ಗವನು ಕೆಳಕ್ಕೆ ಬೀಳಲಾಗಿ ಸಕಲ ದೇವತೆಗಳು ಭೀತರಾಗಿ ಬ್ರಹ್ಮ-ವಿಷ್ಣು-ಈಶ್ವರರೆಂಬ ತ್ರಿಮೂರ್ತಿಗಳನ್ನು ಪುರಸ್ಕರಿಸಿ ಅಲ್ಲಿಗೆ ಬಂದರು.

ಸಮಾಜಗ್ಮುಃ ಪುರಸ್ಕೃತ್ಯ ಬ್ರಹ್ಮವಿಷ್ಣುಮಹೇಶ್ವರಾನ್ || ೬೧ ||

ಶಂಕರಸ್ತು ಮಹಾಜ್ಞಾನೀ ಸಾಕ್ಷಾನ್ಮೃತ್ಯುಂಜಯಃ ಪ್ರಭುಃ ।
ಭಾರ್ಗವಂ ಜೀವಯಾಮಾಸ ಸಂಜೀವಿನ್ಯಾ ಚ ವಿದ್ಯಯಾ || ೬೨ ||

ರಾಮಸ್ತು ಚೇತನಾಂ ಪ್ರಾಪ್ಯ ದದರ್ಶ ಪುರತಃ ಸುರಾನ್ ।
ಪ್ರಣನಾಮ ಚ ರಾಜೇಂದ್ರ ಭಕ್ತ್ಯಾ ಬ್ರಹ್ಮಾದಿಕಾಂಸ್ತು ತಾನ್ || ೬೩ ||

ತೇ ಸ್ತುತಾ ಭಾರ್ಗವೇಂದ್ರೇಣ ಸದ್ಯೋಽದರ್ಶನಮಾಗತಾಃ ।
ಸ ರಾಮೋ ವಾರ್ಯುಪಸ್ಪೃಶ್ಯ ಜಜಾಪ ಕವಚಂ ತು ತತ್ || ೬೪ ||

ಉತ್ಥಿತಶ್ಚ ಸುಸಂರಬ್ಧೋ ನಿರ್ದಹನ್ನಿವ ಚಕ್ಷುಷಾ ।
ಸ್ಮೃತ್ವಾ ಪಾಶುಪತಂ ಚಾಸ್ತ್ರಂ ಶಿವದತ್ತಂ ಸ ಭಾರ್ಗವಃ ।
ಸದ್ಯಃ ಸಂಹೃತವಾಂಸ್ತಂ ತು ಕಾರ್ತವೀರ್ಯಂ ಮಹಾಬಲಮ್ || ೬೫ ||

---

೬೧-೬೨. ತ್ರಿಮೂರ್ತಿಗಳಲ್ಲಿ ಮಹಾಜ್ಞಾನಿಯೂ ಸರ್ವಶಕ್ತನೂ ಮೃತ್ಯುಂಜಯ ಸ್ವರೂಪನೂ ಆದ ಶಿವನು ಸಂಜೀವಿನೀ ವಿದ್ಯೆಯಿಂದ ಭಾರ್ಗವ ರಾಮನನ್ನು ಬದುಕಿಸಿದನು.

೬೩. ರಾಜೇಂದ್ರನೇ! ರಾಮನು ಪುನಃ ಪ್ರಜ್ಞೆಯನ್ನು ಹೊಂದಿ ಮೇಲಕ್ಕೆದ್ದು ಮುಂದುಗಡೆಯಲ್ಲಿದ್ದ ಆ ಬ್ರಹ್ಮಾದಿ ದೇವತೆಗಳನ್ನು ಭಕ್ತಿಯಿಂದ ನಮಸ್ಕರಿಸಿದನು.

೬೪ ಆ ದೇವತೆಗಳು ಭಾರ್ಗವರಾಮನಿಂದ ಸ್ತುತಿಸಲ್ಪಟ್ಟವರಾಗಿ ತತ್‌ಕ್ಷಣದಲ್ಲಿಯೇ ಅಂತರ್ಧಾನ ಹೊಂದಿದರು. ಆ ರಾಮನು ಆಚಮನಿಂದ ಪವಿತ್ರನಾಗಿ ಆ ಕವಚವನ್ನು ಜಪಿಸಿದನು.

೬೫. ಭಾರ್ಗವ ರಾಮನು ವೇಗವಂತನಾಗಿ ಮೇಲಕ್ಕೆದ್ದು ನೇತ್ರಜ್ವಾಲೆಯಿಂದ ಜಗತ್ತನ್ನು ಸುಟ್ಟುಹಾಕುವವನಂತೆ ಜ್ವಲಿಸುತ್ತ ಈಶ್ವರದತ್ತವಾದ ಪಾಶುಪತಾಸ್ತ್ರವನ್ನು ಸ್ಮರಿಸಿಕೊಂಡು ಮಹಾಬಲಿಷ್ಠನಾದ ಆ ಕಾರ್ತವೀರ್ಯ ರಾಜನನ್ನು ಕೂಡಲೇ ಸಂಹರಿಸಿದನು.

**ಸ ರಾಜಾ ದತ್ತಭಕ್ತಸ್ತು ವಿಷ್ಣೋಶ್ಚಕ್ರಂ ಸುದರ್ಶನಮ್ ।**
**ಪ್ರವಿಷ್ಟೋ ಭಸ್ಮಸಾಜ್ಜಾತಂ ಶರೀರಂ ಬಾಹುನಂದನ ॥ ೬೬ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ**
**ಚತ್ವಾರಿಂಶತ್ತಮೋಽಧ್ಯಾಯಃ**

---

೬೬. ರಾಜನೆ! ದತ್ತಾತ್ರೇಯ ಭಕ್ತನಾದ ಆ ಕಾರ್ತವೀರ್ಯಾರ್ಜುನರಾಜನು ವಿಷ್ಣುವಿನ ಸಹಸ್ರಾರ ಚಕ್ರದಲ್ಲಿ ಐಕ್ಯವನ್ನು ಹೊಂದಿದನು. ಅವನ ಶರೀರವು ಮಾತ್ರ ಭಸ್ಮವಾಯಿತು.

ಬ್ರಹ್ಮಾಂಡ ಪುರಾಣದಲ್ಲಿ ಉತ್ತರಾರ್ಧದಲ್ಲಿ ನಲವತ್ತನೆಯ ಅಧ್ಯಾಯವು ಸಮಾಪ್ತವು.

# ಏಕಚತ್ವಾರಿಂಶತ್ತಮೋಽಧ್ಯಾಯಃ

---

ವಸಿಷ್ಠ ಉವಾಚ :—

ದೃಷ್ಟ್ವಾ ಪಿತುರ್ವಧಂ ಘೋರಂ ತತ್ಪುತ್ರಾಸ್ತೇ ಶತಂ ತ್ವರಾ ।
ವಾರಯಾಮಾಸುರತ್ಯುಗ್ರಂ ಭಾರ್ಗವಂ ಸ್ವಬಲೈಃ ಪೃಥಕ್ ॥ ೧ ॥

ಏಕೈಕಾಕ್ಷೌಹಿಣೀಯುಕ್ತಾಃ ಸರ್ವೇ ತೇ ಯುದ್ಧದುರ್ಮದಾಃ ।
ಸಂಗ್ರಾಮಂ ತುಮುಲಂ ಚಕ್ರುಃ ಸಂರಬ್ಧಾಸ್ತು ಪಿತುರ್ವಧಾತ್ ॥ ೨ ॥

ರಾಮಸ್ತು ದೃಷ್ಟ್ವಾ ತತ್ಪುತ್ರಾನ್ ಶೂರಾನ್ ರಣವಿಶಾರದಾನ್ ।
ಪರಶ್ವಧಂ ಸಮಾದಾಯ ಯುಯುಧೇ ತೈಶ್ಚ ಸಂಗರೇ ॥ ೩ ॥

ತಾಂ ಸೇನಾಂ ಭಗವಾನ್ ರಾಮಃ ಶತಾಕ್ಷೌಹಿಣಿಸಮ್ಮಿತಾಮ್ ।
ನಿಜಘಾನ ತ್ವರಾಯುಕ್ತೋ ಮುಹೂರ್ತದ್ವಯಮಾತ್ರತಃ ॥ ೪ ॥

---

೧. ವಸಿಷ್ಠ ಮುನಿಯು ಇಂತೆಂದನು :—ಘೋರವಾದ ಪಿತೃವಧವನ್ನು ಕಂಡು ಕಾರ್ತವೀರ್ಯಾರ್ಜುನನ ನೂರುಜನ ಮಕ್ಕಳು ತ್ವರೆಯಿಂದ ಬಂದು ಅತಿ ಕಠಿನನಾದ ಪರಶುರಾಮನನ್ನು ತಮ್ಮ ಸೈನ್ಯಗಳಿಂದ ಬೇರೆ ಬೇರೆಯಾಗಿ ಸುತ್ತುವರಿದರು.

೨. ಯುದ್ಧದಲ್ಲಿ ಮತ್ತರಾದ ಆ ಎಲ್ಲ ರಾಜಪುತ್ರರು ಪಿತೃವಧದಿಂದ ಕೋಪ ಗೊಂಡವರಾಗಿ ಪ್ರತಿಯೊಬ್ಬನೂ ಒಂದೊಂದು ಅಕ್ಷೌಹಿಣೀ ಸೈನ್ಯಸಮೇತನಾಗಿ ಬಂದು ಒತ್ತಡವಾಗಿ ಯುದ್ಧವನ್ನಾರಂಭಿಸಿದರು.

೩. ರಾಮನು ಯುದ್ಧವಿಶಾರದರಾದ ವೀರ ರಾಜಪುತ್ರರನ್ನು ಕಂಡು ಯುದ್ಧ ರಂಗದಲ್ಲಿ ಅವರೊಡನೆ ತನ್ನ ಪರಶು ಆಯುಧವನ್ನು ಹಿಡಿದು ಯುದ್ಧ ಮಾಡಿದನು.

೪. ಪೂಜ್ಯ ಪರಶುರಾಮನು ತ್ವರೆಯಿಂದ ಕೂಡಿ ಒಂದು ನೂರು ಅಕ್ಷೌಹಿಣೀ ಪರಿಮಿತವಾದ ಆ ಸಮಸ್ತ ಸೈನ್ಯವನ್ನು ಎರಡು ಮುಹೂರ್ತ ಕಾಲದೊಳಗೆ ಕೊಂದು ಹಾಕಿದನು.

ನಿಃಶೇಷಿತಂ ಸ್ವಸೈನ್ಯಂ ತು ಕುಠಾರೇಣೈವ ಲೀಲಯಾ ।
ದೃಷ್ಟ್ವಾ ರಾಮೇಣ ತೇ ಸರ್ವೇ ಯುಯುಧುರ್ವೀರ್ಯಸಂಮತಾಃ॥ ೫ ॥

ನಾನಾವಿಧಾನಿ ದಿವ್ಯಾನಿ ಪ್ರಹರಂತೋ ಮಹೌಜಸಃ ।
ಪರಿತೋ ಮಂಡಲಂ ಚಕ್ರುರ್ಭಾರ್ಗವಸ್ಯ ಮಹಾತ್ಮನಃ ॥ ೬ ॥

ಅಥ ರಾಮೋಽಪಿ ಬಲವಾಂಸ್ತೇಷಾಂ ಮಂಡಲಮಧ್ಯಗಃ ।
ವಿರೇಜೇ ಭಗವಾನ್ ಸಾಕ್ಷಾತ್ ಯಥಾ ನಾಭಿಸ್ತು ಚಕ್ರಗಾ ॥ ೭ ॥

ನೃತ್ಯನ್ನಿವಾಜೌ ವಿರರಾಜ ರಾಮಃ
ಶತಂ ಪುನಸ್ತೇ ಪರಿತೋ ಭ್ರಮಂತಃ ।
ರೇಜುಶ್ಚ ಗೋಪೀಗಣಮಧ್ಯಸಂಸ್ಥಃ
ಕೃಷ್ಣೋ ಯಥಾ ತಾಃ ಪರಿತೋ ಭ್ರಮಂತ್ಯಃ ॥ ೮ ॥

---

೫. ಪರಾಕ್ರಮಿಗಳೆಂದೆನಿಸಿದ ಆ ಎಲ್ಲ ರಾಜಪುತ್ರರು ಪರಶುರಾಮನಿಂದ ಪರಶು ಆಯುಧದಿಂದ ತಮ್ಮ ಸೈನ್ಯವು ನಿಶ್ಶೇಷವಾಗಿ ನಾಶವಾದುದನ್ನು ಕಂಡು ರಾಮನ ಜೊತೆಗೆ ಯುದ್ಧ ಮಾಡಿದರು.

೬. ನಾನಾ ವಿಧ ಅಸ್ತ್ರಗಳನ್ನು ಪ್ರಯೋಗಿಸುತ್ತ ವಿಶೇಷ ಸಾಮರ್ಥ್ಯವನ್ನು ತೋರಿಸಿದವರಾಗಿ ಮಹಾತ್ಮನಾದ ಭಾರ್ಗವರಾಮನನ್ನು ಸುತ್ತುವರಿದು ನಿಂತರು.

೭. ಅನಂತರದಲ್ಲಿ ಶಕ್ತಿ ಸಂಪನ್ನನೂ ಪೂಜ್ಯನೂ ಆದ ರಾಮನು ಸುತ್ತುವರಿದು ನಿಂತ ಆ ರಾಜಪುತ್ರರು ಮತ್ತು ಸೈನಿಕರ ಮಧ್ಯದಲ್ಲಿ ಚಕ್ರದ ಅರಗಳ ಮಧ್ಯದಲ್ಲಿ ನಾಭಿಯಂತೆ ಪ್ರಕಾಶಿಸಿದನು.

೮. ಪರಶುರಾಮನು ಸುತ್ತಲೂ ಸುತ್ತುತ್ತಲಿದ್ದ ಆ ನೂರು ಜನರ ಮಧ್ಯದಲ್ಲಿ ನೃತ್ಯಮಾಡುವವನಂತೆ ಪ್ರಕಾಶಿಸಿದನು, ಸುತ್ತಲೂ ರಾಜಪುತ್ರರೂ ಮಧ್ಯದಲ್ಲಿ ರಾಮನೂ ಇರುವ ಈ ಸನ್ನಿವೇಶವು ಸಾವಿರಾರು ಗೋಪೀ ಜನರು ಮಂಡಲಾಕಾರ ವಾಗಿ ನರ್ತನ ಮಾಡುತ್ತಿರಲು ಮಧ್ಯದಲ್ಲಿ ನರ್ತನ ಮಾಡುವ ಕೃಷ್ಣನಿಗೆ ಸಮಾನ ವಾಗಿತ್ತು.

ತದಾ ತು ಸರ್ವೇ ದ್ರುಹಿಣಪ್ರಧಾನಾಃ
ಸಮಾಗತಾಃ ಸ್ವಸ್ವವಿಮಾನಸಂಸ್ಥಾಃ ।
ಸಮಾಕಿರನ್ನಂದನಮಾಲ್ಯವರ್ಷೈ
ಸ್ಸಮಂತತೋ ರಾಮಮಹೀನವೀರ್ಯಮ್ ॥ ೯ ॥

ಯಃ ಶಸ್ತ್ರಪಾತಾದುದತಿಷ್ಠತ ಧ್ವನಿ
ರ್ಹುಂಕಾರಗರ್ಭೋ ದಿವಮಸ್ಪೃಶತ್ ಸ ವೈ ।
ತೌರ್ಯತ್ರಿಕಸ್ಯೇವ ಶರಕ್ಷತಾನಿ
ಭಾಂತೀವ ಯದ್ವನ್ನಖದಂತಪಾತಾಃ ॥ ೧೦ ॥

ಕ್ರಂದಂತಿ ಶಸ್ತ್ರೈಃ ಕ್ಷತವಿಕ್ಷತಾಂಗಾ
ಗಾಯಂತಿ ಯದ್ವತ್ಕಿಲ ಗೀತವಿಜ್ಞಾಃ ।
ಏವಂ ಪ್ರವೃತ್ತಂ ನೃಪಯುದ್ಧಮಂಡಲಂ
ಪಶ್ಯಂತಿ ದೇವಾ ಭೃಶವಿಸ್ಮಿತಾಕ್ಷಾಃ ॥ ೧೧ ॥

ತತಸ್ತು ರಾಮೋಽವನಿಪಾಲಪುತ್ರಾ
ಞ್ಜಿಘಾಂಸುರಾಜೌ ವಿವಿಧಾಸ್ತ್ರಪೂಗೈಃ ।
ಪೃಥಕ್ಚಕಾರಾತಿಬಲಾಂಸ್ತು ಮಂಡಲಾ
ದ್ವಿಚ್ಛಿದ್ಯ ಪಂಕ್ತಿಂ ಪ್ರಭುರಾತ್ತಚಾಪಃ ॥ ೧೨ ॥

---

೯. ಆಗ ಬಹ್ಮಾದಿ ದೇವತೆಗಳು ತಮ್ಮ ತಮ್ಮ ವಿಮಾನಾರೂಢರಾಗಿ ಅಲ್ಲಿಗೆ ಬಂದು ಅತಿಶಯವಾದ ವೀರ್ಯವುಳ್ಳ ರಾಮನನ್ನು ಮೆಚ್ಚಿ ನಂದನವನದ ರಮ್ಯವಾದ ಹೂಗಳನ್ನು ಎರಚಿದರು.

೧೦. ಶಸ್ತ್ರಪಾತದಿಂದ ಹುಟ್ಟಿದ ಹುಂಕಾರಗರ್ಭಿತವಾದ ಧ್ವನಿಯು ಆಕಾಶವನ್ನು ವ್ಯಾಪಿಸಿತು, ಮತ್ತು ಬಾಣಗಳ ಕ್ಷತಗಳು ವಾದ್ಯಗಳನ್ನು ಬಾರಿಸುವ ನಖದಂತಾದಿ ಉಪಕರಣಗಳಂತೆ ತೋರುತ್ತಲಿದ್ದುವು.

೧೧. ಶಸ್ತ್ರಗಳಿಂದ ನಾನಾ ಅವಯವಗಳು ಕತ್ತರಿಸಿ ಹೀನಾಂಗರಾದವರು ಕೂಗುವ ಧ್ವನಿಯು ಸಂಗೀತನಿಷ್ಣಾತರು ಹಾಡುವ ಗಾನದಂತೆ ಕೇಳುತ್ತಲಿತ್ತು, ಈ ರೀತಿಯಾಗಿ ನಡೆಯುತ್ತಿರುವ ರಾಜರ ಯುದ್ಧಗೋಷ್ಠಿಯನ್ನು ದೇವತೆಗಳು ವಿಸ್ಮಯಚಕಿತವಾದ ಕಣ್ಣುಳ್ಳವರಾಗಿ ನೋಡುತ್ತಲಿರುವರು.

೧೨. ಅನಂತರದಲ್ಲಿ ಪ್ರಭುವಾದ ರಾಮನು ಯುದ್ಧ ಭೂಮಿಯಲ್ಲಿ ಅತಿ ಬಲಿಷ್ಠರಾದ ರಾಜಪುತ್ರರನ್ನು ಕೊಲ್ಲಬೇಕೆಂಬ ಇಷ್ಟವುಳ್ಳವನಾಗಿ ಬಿಲ್ಲನ್ನು ಧರಿಸಿಕೊಂಡು ವಿವಿಧವಾದ ಅಸ್ತ್ರರಾಶಿಯಿಂದ ಅವರನ್ನು ಮಂಡಲದಿಂದ ಭೇದಿಸಿ ಪ್ರತ್ಯೇಕಿಸಿದನು.

ಏಕೈಕಶಸ್ತಾನ್ನಿಜಘಾನ ವೀರಾನ್
ಛತಂ ತದಾ ಪಂಚ ತತಃ ಪಲಾಯಿತಾಃ ।
ಶೂರೋ ವೃಷಾಸ್ಯೋ ವೃಷಶೂರಸೇನೌ
ಜಯಧ್ವಜಶ್ಚಾಪಿ ವಿಭಿನ್ನಧೈರ್ಯಾಃ ॥ ೧೩ ॥

ಮಹಾಭಯೇನಾಥ ಪರೀತಚಿತ್ತಾ
ಹಿಮಾದ್ರಿಪಾದಾಂತರಕಾನನಂ ಚ ।
ಪೃಥಗ್ಗತಾಸ್ತೇ ಸುಪರೀಪ್ಸವೋ ನೃಪಾ
ನ ಕೋಽಪಿಕಂಚಿದ್ದದೃಶೇ ಭೃಶಾರ್ತಃ ॥ ೧೪ ॥

ರಾಮೋಽಪಿ ಹತ್ವಾ ನೃಪಚಕ್ರಮಾಜೌ
ರಾಜ್ಞಃ ಸಹಾಯಾರ್ಥಮುಪಾಗತಂ ಚ ।
ಸಮನ್ವಿತೋಽಸಾವಕೃತವ್ರಣೇನ
ಸಸ್ನೌ ಮುದಾಗತ್ಯ ಚ ನರ್ಮದಾಯಾಮ್ ॥ ೧೫ ॥

ಸ್ನಾತ್ವಾ ನಿತ್ಯಕ್ರಿಯಾಂ ಕೃತ್ವಾ ಸಂಪೂಜ್ಯ ವೃಷಭಧ್ವಜಮ್ ।
ಪ್ರತಸ್ಥೇ ದ್ರಷ್ಟುಮುರ್ವೀಶ ಶಿವಂ ಕೈಲಾಸವಾಸಿನಮ್ ॥ ೧೬ ॥

---

೧೩. ಆ ರಾಮನು ನೂರು ಜನ ವೀರ ರಾಜಪುತ್ರರನ್ನು ಪ್ರತ್ಯೇಕವಾಗಿ ಸಂಹಾರ ಮಾಡುತ್ತಿರಲು ಅವರಲ್ಲಿ ಶೂರ-ವೃಷಾಸ್ಯ-ವೃಷ-ಶೂರಸೇನ-ಜಯಧ್ವಜ ಎಂಬ ಐವರು ಕುಮಾರರು ಧೈರ್ಯಗುಂದಿದವರಾಗಿ ಯುದ್ಧ ರಂಗದಿಂದ ಪಲಾಯನ ಮಾಡಿದರು.

೧೪. ಪಲಾಯನ ಮಾಡಿಹೋದ ರಾಜರೆಲ್ಲರೂ ಮಹಾ ಭೀತಿಯಿಂದ ಕಲು ಕಿದ ಚಿತ್ತವುಳ್ಳವರಾಗಿ ಗಾಬರಿಯಿಂದ ಹಿಮವತ್ಪರ್ವತ ಸಂಬಂಧವಾದ ಉಪಪರ್ವತ ಗಳ ಮಧ್ಯದ ಅರಣ್ಯವನ್ನು ಬೇರೆಬೇರೆಯಾಗಿ ತಲುಪಿದರು. ಆ ರಾಜರು ಅಗಲಿ ತುಂಬಾ ವಿಷಣ್ಣರಾದ್ದರಿಂದ ಒಬ್ಬನು ಮತ್ತೊಬ್ಬನನ್ನು ಕಾಣಲು ಆಗಲಿಲ್ಲ.

೧೫. ರಾಮನು ರಾಜನ ಸಹಾಯಾರ್ಥವಾಗಿ ಬಂದ ರಾಜನ್ಯ ಸೇನೆಯನ್ನು ಕೊಂದು ಅಕೃತವ್ರಣನೊಡನೆ ಸೇರಿ ಸಂತೋಷವಾಗಿ ನರ್ಮದಾನದಿಗೆ ಬಂದು ಸ್ನಾನಮಾಡಿದನು.

೧೬. ರಾಜನೇ! ನರ್ಮದಾನದಿಯಲ್ಲಿ ಸ್ನಾನ ಮತ್ತು ನಿತ್ಯಾಹ್ನಿಕಗಳನ್ನು ನೆರವೇರಿಸಿ ತನ್ನ ಪೂಜ್ಯದೇವರಾದ ಈಶ್ವರನನ್ನು ಪೂಜಿಸಿ ಕೈಲಾಸ ಲೋಕದಲ್ಲಿ ಇರುವ ಶಿವನನ್ನು ಪ್ರತ್ಯಕ್ಷವಾಗಿ ನೋಡಲು ಮುಂದಕ್ಕೆ ಹೊರಟನು.

ಗುರುಪತ್ನೀಮುಮಾಂ ಚಾಪಿ ಸುತೌ ಸ್ಕಂದವಿನಾಯಕೌ ।
ಮನೋಯಾಯೀ ಮಹಾತ್ಮಾಸಾವಕೃತವ್ರಣಸಂಯುತಃ　　॥ ೧೭ ॥

ಕೃತಕಾರ್ಯೋ ಮುದಾ ಯುಕ್ತಃ ಕೈಲಾಸಂ ಪ್ರಾಪ್ಯ ತತ್ಕ್ಷಣಮ್ ।
ದದರ್ಶ ತತ್ರ ನಗರೀಂ ಮಹತೀಮಲಕಾಭಿಧಾಮ್　　॥ ೧೮ ॥

ನಾನಾಮಣಿಗಣಾಕೀರ್ಣಭವನೈರುಪಶೋಭಿತಾಮ್ ।
ನಾನಾರೂಪಧರೈರ್ಯಕ್ಷೈಃ ಶೋಭಿತಾಂ ಚಿತ್ರಭೂಷಣೈಃ　　॥ ೧೯ ॥

ನಾನಾವೃಕ್ಷಸಮಾಕೀರ್ಣೈರ್ವನೈಶ್ಚೋಪವನೈರ್ಯುತಾಮ್ ।
ದೀರ್ಘಿಕಾಭಿಃ ಸುದೀರ್ಘಾಭಿಸ್ತಡಾಗೈರುಪಶೋಭಿತಾಮ್　　॥ ೨೦ ॥

ಸರ್ವತೋಽಭ್ಯಾವೃತಾಂ ಬಾಹ್ಯೇ ಸೀತಯಾಲಕನಂದಯಾ ।
ತತ್ರ ದೇವಾಂಗನಾಸ್ನಾನಮುಕ್ತಕುಂಕುಮಪಿಂಜರಮ್　　॥ ೨೧ ॥

---

೧೭. ಕೈಲಾಸಲೋಕದಲ್ಲಿರುವ ಗುರುಪತ್ನಿಯಾದ ಉಮಾದೇವಿ, ಗುರುಪುತ್ರರಾದ ಕುಮಾರಸ್ವಾಮಿ ಮತ್ತು ಗಣೇಶ್ವರ ಇವರನ್ನು ಕೂಡ ನೋಡುವ ಕುತೂಹಲವುಳ್ಳವನಾಗಿದ್ದನು. ಇಂತಹ ಮಹಾತ್ಮನಾದ ಪರಶುರಾಮನು ಅಕೃತವ್ರಣನ ಜೊತೆಗೆ ಮನೋವೇಗದಿಂದ ಕೈಲಾಸಲೋಕಕ್ಕೆ ಪ್ರಯಾಣಮಾಡಿದನು.

೧೮. ಶತ್ರುಕ್ಷಯವೆಂಬ ಕಾರ್ಯವನ್ನು ಪೂರೈಸಿ ಕೃತಾರ್ಥನಾದ ರಾಮನು ಆ ಕ್ಷಣದಲ್ಲಿ ಕೈಲಾಸಲೋಕವನ್ನು ಹೊಂದಿ ಅಲ್ಲಿ ಅಲಕಾ ಎಂಬ ಹೆಸರುಳ್ಳ ಮಹಾ ವಿಶಾಲವಾದ ನಗರಿಯನ್ನು ಕಂಡನು.

೧೯. ಆ ಅಲಕಾ ನಗರಿಯು ಅನೇಕ ರತ್ನಖಚಿತಗಳಾದ ಅತ್ಯುನ್ನತ ಮಹಾ ಗೃಹಗಳಿಂದಲೂ ವಿಚಿತ್ರಾಲಂಕಾರಗಳಿಂದ ಅಲಂಕರಿಸಿ ವಿವಿಧ ರೂಪಗಳನ್ನು ಧರಿಸಿದ ಯಕ್ಷರಿಂದಲೂ ಶೋಭಿಸಲ್ಪಟ್ಟಿತ್ತು.

೨೦. ಮತ್ತು ನಾನಾ ಜಾತಿಯ ಗಿಡಮರಗಳಿಂದ ತುಂಬಿ ಶೋಭಿಸುವ ವನ-ಉಪವನಗಳಿಂದಲೂ ಬಹು ಆಳವಾದ ಬಾವಿ–ಕೆರೆಗಳಿಂದಲೂ ರಮಣೀಯವಾಗಿತ್ತು.

೨೧. ಹಾಗೆಯೇ ಹೊರವಲಯವು ಸುತ್ತಲೂ ಹರಿಯುವ ಅಲಕನಂದಾ ಮತ್ತು ಸೀತಾನದಿಗಳಿಂದ ಸುತ್ತುವರಿಯಲ್ಪಟ್ಟಿತ್ತು. ಅಲ್ಲಿ ದೇವತಾ ಸ್ತ್ರೀಯರು ಸ್ನಾನಮಾಡಿ ಚ್ಯುತವಾದ ಕುಂಕುಮಪಂಕದಿಂದ ಹೊಂಬಣ್ಣದಂತಿರುವ ನೀರನ್ನು ಆನೆಗಳು ನೀರಡಿಕೆಯಿಲ್ಲದಾಗಲೂ ಪ್ರೀತಿಯಿಂದ ಕುಡಿಯುತ್ತಿವೆ.

ತೃಷಾವಿರಹಿತಾಶ್ಚಾಂಭಃ ಪಿಬಂತಿ ಕರಿಣೋ ಮುದಾ ।
ಯತ್ರ ಸಂಗೀತಸಂನಾದಾಃ ಶ್ರೂಯಂತೇ ತತ್ರ ತತ್ರ ಹ ॥ ೨೨ ॥

ಗಂಧರ್ವೈರಪ್ಸರೋಭಿಶ್ಚ ಸತತಂ ಸಹಕಾರಿಭಿಃ ।
ತಾಂ ದೃಷ್ಟ್ವಾ ಭಾರ್ಗವೋ ರಾಜನ್ ಮುದಾ ಪರಮಯಾ ಯುತಃ॥೨೩॥

ಯಯೌ ತದೂರ್ಧ್ವಗಂ ಶಿಖರಂ ಯತ್ರ ಶೈವಪರಂ ಗೃಹಮ್ ।
ತತೋ ದದರ್ಶ ರಾಜೇಂದ್ರ ಸ್ನಿಗ್ಧಚ್ಛಾಯಂ ಮಹಾವಟಮ್ ॥ ೨೪ ॥

ತಸ್ಯಾಧಸ್ತಾದ್ವರಾವಾಸಂ ಸುಸೇವ್ಯಂ ಸಿದ್ಧಸಂಯುತಮ್ ।
ದದರ್ಶ ತತ್ರ ಪ್ರಾಕಾರಂ ಶತಯೋಜನಮಂಡಲಮ್ ॥ ೨೫ ॥

ನಾನಾರತ್ನಾಚಿತಂ ರಮ್ಯಂ ಚತುರ್ದ್ವಾರಂ ಗಣಾವೃತಮ್ ।
ನಂದೀಶ್ವರಂ ಮಹಾಕಾಲಂ ರಕ್ತಾಕ್ಷಂ ವಿಕಟೋದರಮ್ ॥ ೨೬ ॥

---

೨೨. ಗಂಧರ್ವರೂ ಅಪ್ಸರಃ ಸ್ತ್ರೀಯರೂ ಪರಸ್ಪರವಾಗಿ ಸಹಕರಿಸಿ ಯಾವಾಗಲೂ ಹಾಡುವ ಇಂಪಾದ ಸಂಗೀತ ಧ್ವನಿಗಳು ಆ ನದಿಯಲ್ಲಿ ಅಲ್ಲಲ್ಲಿ ಕೇಳಿಬರುತ್ತಿವೆ.

೨೩. ರಾಜನೇ! ಅದನ್ನು ನೋಡಿ ಪರಮಾನಂದದಿಂದ ಕೂಡಿದ ಭಾರ್ಗವ ರಾಮನು ಅಲ್ಲಿಂದ ಊರ್ಧ್ವಭಾಗದಲ್ಲಿದ್ದ ಶೈವರಿಗೆ ವಾಸಮಾಡುವ ಮನೆಯಂತಿರುವ ಶಿಖರಕ್ಕೆ ಹೋದನು.

೨೪-೨೫. ರಾಜೇಂದ್ರನೆ! ಅನಂತರದಲ್ಲಿ ದಟ್ಟವಾಗಿಯೂ ಶೀತಲವಾಗಿಯೂ ಇರುವ ಛಾಯೆಯಿಂದ ಕೂಡಿದ ದೊಡ್ಡ ಆಲದ ಮರವನ್ನು ಕಂಡನು, ಮತ್ತು ಅದರ ಕೆಳಭಾಗದಲ್ಲಿ ಶ್ರೇಷ್ಠರ ವಾಸ ಭೂಮಿಯೂ ಸೇವಿಸಲು ಅತ್ಯುತ್ತಮವೂ ಸಿದ್ಧರಿಂದ ಕೂಡಿದುದೂ ನೂರು ಯೋಜನ ಪರಿಮಾಣದ ಮಂಡಲ ಭೂಮಿಯನ್ನು ಹೊಂದಿದ ಪ್ರಾಕಾರವನ್ನೂ ನೋಡಿದನು.

೨೬. ಮತ್ತು ಆ ಪ್ರಾಕಾರವು ಅನೇಕ ರತ್ನಖಚಿತವೂ ನಾಲ್ಕು ದ್ವಾರಗಳಿಂದ ಕೂಡಿದುದೂ ಅನೇಕ ಪ್ರಮಥಗಣಗಳಿಂದ ವ್ಯಾಪ್ತವಾದುದೂ ಆಗಿತ್ತು.

ಪಿಂಗಲಾಕ್ಷಂ ವಿಶಾಲಾಕ್ಷಂ ವಿರೂಪಾಕ್ಷಂ ಘಟೋದರಮ್ ।
ಮಂದಾರಂ ಭೈರವಂ ಬಾಣಂ ರುರುಂ ಭೈರವಮೇವ ಚ ॥ ೨೭ ॥

ವೀರಕಂ ವೀರಭದ್ರಂ ಚ ಚಂಡಂ ಭೃಂಗಿಂ ರಿಟಿಂ ಮುಖಮ್ ।
ಸಿದ್ಧೇನ್ದ್ರನಾಥರುದ್ರಾಂಶ್ಚ ವಿದ್ಯಾಧರಮಹೋರಗಾನ್ ॥ ೨೮ ॥

ಭೂತಪ್ರೇತಪಿಶಾಚಾಂಶ್ಚ ಕೂಷ್ಮಾಂಡಾನ್ ಬ್ರಹ್ಮರಾಕ್ಷಸಾನ್ ।
ವೇತಾಲಾನ್ ದಾನವೇಂದ್ರಾಂಶ್ಚ ಯೋಗೀಂದ್ರಾಂಶ್ಚ ಜಟಾಧರಾನ್॥೨೯॥

ಯಕ್ಷಕಿಂಪುರುಷಾಂಶ್ಚೈವ ಡಾಕಿನೀಯೋಗಿನೀಸ್ತಥಾ ।
ದೃಷ್ಟ್ವಾ ನಂದ್ಯಾಜ್ಞಯಾ ತತ್ರ ಪ್ರವಿಷ್ಟೋಽಂತರ್ಮುದಾನ್ವಿತಃ॥ ೩೦ ॥

ದದರ್ಶ ತತ್ರ ಭುವನೈರಾವೃತ್ತಂ ಶಿವಮಂದಿರಮ್ ।
ಚತುರ್ಯೋಜನವಿಸ್ತೀರ್ಣಂ ತತ್ರ ಪ್ರಾಗ್ದ್ವಾರಸಂಸ್ಥಿತೌ ॥ ೩೧ ॥

ದೃಷ್ಟ್ವಾ ವಾಮೇ ಕಾರ್ತಿಕೇಯಂ ದಕ್ಷೇ ಚೈವ ವಿನಾಯಕಮ್ ।
ನನಾಮ ಭಾರ್ಗವಸ್ತೌ ದ್ವೌ ಶಿವತುಲ್ಯಪರಾಕ್ರಮೌ ॥ ೩೨ ॥

---

೨೭-೨೮-೨೯-೩೦. ಅಂತಹ ಪ್ರಾಕಾರದಲ್ಲಿ ನಂದೀಶ್ವರ, ಮಹಾಕಾಲ, ರಕ್ತಾಕ್ಷ, ವಿಕಟೋದರ, ಪಿಂಗಲಾಕ್ಷ, ವಿಶಾಲಾಕ್ಷ, ವಿರೂಪಾಕ್ಷ, ಘಟೋದರ, ಮಂದಾರ, ಭೈರವ, ಬಾಣ, ರುರು, ಭೈರವ, ವೀರಕ, ವೀರಭದ್ರ, ಚಂಡ, ಭೃಂಗಿ, ರಿಟಿ, ಮುಖ, ಸಿದ್ಧೇಂದ್ರ, ನಾಥ, ರುದ್ರ, ವಿದ್ಯಾಧರ, ಮಹೋರಗ, ಭೂತ, ಪ್ರೇತ, ಪಿಶಾಚ, ಕೂಷ್ಮಾಂಡ, ಬ್ರಹ್ಮರಾಕ್ಷಸ, ವೇತಾಲ, ದಾನವೇಂದ್ರ, ಜಟಾಧಾರಿಗಳಾದ ಯೋಗೀಂದ್ರ, ಯಕ್ಷ, ಕಿಂಪುರುಷ, ಡಾಕಿನೀ, ಯೋಗಿನೀ–ಮುಂತಾದ ಅನೇಕ ಜಾತಿ, ವ್ಯಕ್ತಿ ವಿಶೇಷಗಳೆಂಬ ಪರಿವಾರವನ್ನು ನೋಡಿ ನಂದಿಯ ಆಜ್ಞೆಯಿಂದ ಸಂತುಷ್ಟಚಿತ್ತನಾಗಿ ಒಳಗೆ ಪ್ರವೇಶಮಾಡಿದನು.

೩೧-೩೨. ಅಲ್ಲಿ ಭಾರ್ಗವರಾಮನು ಅನೇಕ ಭವನಗಳಿಂದ ಸುತ್ತುವರಿಯಲ್ಪಟ್ಟ ನಾಲ್ಕು ಯೋಜನಪರಿಮಾಣ ವಿಸ್ತಾರವುಳ್ಳ ಶಿವಮಂದಿರವನ್ನು ನೋಡಿ ಅದರ ಪೂರ್ವದ್ವಾರದಲ್ಲಿ ಈಶ್ವರನಿಗೆ ತುಲ್ಯವಾದ ಪ್ರರಾಕ್ರಮದಿಂದ ಕೂಡಿ, ವಾಮಭಾಗದಲ್ಲಿ ಕುಮಾರಸ್ವಾಮಿಯೂ ಬಲಭಾಗದಲ್ಲಿ ವಿನಾಯಕನೂ ಇರುವುದನ್ನು ಕಂಡು ಅವರೀರ್ವರನ್ನೂ ನಮಸ್ಕಾರಮಾಡಿದನು.

ಪಾರ್ಷದಪ್ರವರಾಸ್ತತ್ರ ಕ್ಷೇತ್ರಪಾಲಾಶ್ಚ ಸಂಸ್ಥಿತಾಃ ।
ರತ್ನಸಿಹ್ಮಾಸನಸ್ಥಾಶ್ಚ ರತ್ನಭೂಷಣಭೂಷಿತಾಃ ॥ ೩೩ ॥

ಭಾರ್ಗವಂ ಪ್ರವಿಶಂತಂ ತು ಹ್ಯಪೃಚ್ಛನ್ ಶಿವಮಂದಿರಮ್ ।
ವಿನಾಯಕೋ ಮಹಾರಾಜ ಕ್ಷಣಂ ತಿಷ್ಠೇತ್ಯುವಾಚ ಹ ॥ ೩೪ ॥

ನಿದ್ರಿತೋ ಹ್ಯುಮಯಾ ಯುಕ್ತೋ ಮಹಾದೇವೋಽಧುನೇತಿ ಚ ।
ಈಶ್ವರಾಜ್ಞಾಂ ಗೃಹೀತ್ವಾಹಮತ್ರಾಗತ್ಯ ಕ್ಷಣಾಂತರೇ ॥ ೩೫ ॥

ತ್ವಯಾ ಸಾರ್ಧಂ ಪ್ರವೇಕ್ಷ್ಯಾಮಿ ಭ್ರಾತಸ್ತಿಷ್ಠಾತ್ರ ಸಾಂಪ್ರತಮ್ ।
ವಿನಾಯಕವಚಶ್ಚೈವಂ ಶ್ರುತ್ವಾ ಭಾರ್ಗವನಂದನಃ ॥ ೩೬ ॥

ಪ್ರವಕ್ತುಮುಪಚಕ್ರಾಮ ಗಣೇಶಂ ತ್ವರಯಾನ್ವಿತಃ ।
ರಾಮ ಉವಾಚ :—
ಗತ್ವಾಹ್ಯಂತಃಪುರಂ ಭ್ರಾತಃ ಪ್ರಣಮ್ಯ ಜಗದೀಶ್ವರೌ ॥ ೩೭ ॥

---

೩೩. ರತ್ನಸಿಂಹಾಸನದಲ್ಲಿ ಕುಳಿತವರೂ ರತ್ನಾಭರಣಗಳಿಂದ ಅಲಂಕೃತರೂ ಆದ ಕ್ಷೇತ್ರಪಾಲದೇವತೆಗಳು ಅಲ್ಲಿ ಪಾರ್ಷದ ಶ್ರೇಷ್ಠರಾಗಿದ್ದರು, ಭಾರ್ಗವನು ಶಿವ ಮಂದಿರಕ್ಕೆ ಪ್ರವೇಶಮಾಡುವುದನ್ನು ಕಂಡು ಅಲ್ಲಿದ್ದ ಅನೇಕ ಪಾರ್ಷದರು ಪ್ರಶ್ನಿಸಿದರು.

೩೪-೩೫. ಮಹಾದೇವನಾದ ಶಿವನು ಈಗ ತಾನೇ ಉಮಾದೇವಿಯ ಸಹಿತ ಮಲಗಿರುವನಾದ್ದರಿಂದ ಒಂದು ನಿಮಿಷದಲ್ಲಿ ನಾನು ಶಿವನಿಗೆ ತಿಳಿಸಿ ಪುನಃ ಇಲ್ಲಿಗೆ ಬಂದು ನಿನ್ನನ್ನು ಕರೆದು ಹೋಗುವವರೆಗೆ ಸ್ವಲ್ಪಹೊತ್ತು ಇಲ್ಲಿಯೇ ನಿಲ್ಲು. ತಮ್ಮನೆ! ಈಗ ಸ್ವಲ್ಪಕಾಲ ಮಾತ್ರ ಇಲ್ಲಿರು, ಎಂದು ವಿನಾಯಕನು ಹೇಳಿದನು.

೩೬. ಭೃಗು ಪುತ್ರನಾದ ರಾಮನು ಈ ವಿಧವಾದ ವಿನಾಯಕನ ವಾಣಿಯನ್ನು ಕೇಳಿ ಗಣೇಶನನ್ನು ಕುರಿತು ತ್ವರೆಯಿಂದ ಮಾತನಾಡಲು ಉಪಕ್ರಮಿಸಿದನು. ರಾಮನು ಇಂತೆಂದನು :—

೩೭. ಎಲೋ ತಮ್ಮನೆ! ಅಂತಃಪುರಕ್ಕೆ ಹೋಗಿ ಜಗದೀಶ್ವರರಾದ ಪಾರ್ವತೀ ಪರಮೇಶ್ವರರನ್ನು ನಮಸ್ಕರಿಸಿ ಕೂಡಲೇ ಅಲ್ಲಿಂದ ನನ್ನ ವಾಸಗೃಹಕ್ಕೆ ನಾನು ತೆರಳುವೆನು.

ಪಾರ್ವತೀಶಂಕರೌ ಸದ್ಯೋ ಯಾಸ್ಯಾಮಿ ನಿಜಮಂದಿರಮ್ ।
ಕಾರ್ತವೀರ್ಯಃ ಸುಚಂದ್ರಶ್ಚ ಸಪುತ್ರಬಲಬಾಂಧವಃ ॥ ೩೮ ॥

ಅನ್ಯೇ ಸಹಸ್ರಶೋ ಭೂಪಾಃ ಕಾಂಭೋಜಾಃ ಪಹ್ಲವಾಃ ಶಕಾಃ ।
ಕಾನ್ಯಕುಬ್ಜಾಃ ಕೋಶಲೇಶಾ ಮಾಯಾವಂತೋ ಮಹಾಬಲಾಃ॥ ೩೯ ॥

ನಿಹತಾಃ ಸಮರೇ ಸರ್ವೇ ಮಯಾ ಶಂಭುಪ್ರಸಾದತಃ ।
ತಮಿಮಂ ಪ್ರಣಿಪತ್ಯೈವ ಯಾಸ್ಯಾಮಿ ಸ್ವಗೃಹಂ ಪ್ರತಿ ॥ ೪೦ ॥

ಇತ್ಯುಕ್ತ್ವಾ ಭಾರ್ಗವಸ್ತತ್ರ ತಸ್ಥೌ ಗಣಪತೇಃ ಪುರಃ ।
ಪ್ರೋವಾಚ ಮಧುರಂ ವಾಕ್ಯಂ ಭಾರ್ಗವಂ ಸ ಗಣಾಧಿಪಃ ॥ ೪೧ ॥

ವಿನಾಯಕ ಉವಾಚ :—

ಕ್ಷಣಂ ತಿಷ್ಠ ಮಹಾಭಾಗ ದರ್ಶನಂ ತೇ ಭವಿಷ್ಯತಿ ।
ಅದ್ಯ ವಿಶ್ವೇಶ್ವರೋ ಭ್ರಾತರ್ಭವಾನ್ಯಾ ಸಹ ವರ್ತತೇ ॥ ೪೨ ॥

---

೩೮-೩೯. ನಾನು ಈಗತಾನೇ ಯುದ್ಧಮಾಡಿ ಯುದ್ಧರಂಗದಲ್ಲಿ ಪುತ್ರ-ಸೈನ್ಯ-ಬಂಧುಸಮೇತರಾಗಿ ಕಾರ್ತವೀರ್ಯ ಸುಚಂದ್ರ ರಾಜರನ್ನೂ ಕಾಂಭೋಜ-ಪಹ್ಲವ-ಶಕ-ಕಾನ್ಯಕುಬ್ಜ-ಕೋಸಲೇಶ ಮುಂತಾದ ನಾನಾ ದೇಶಾಧಿಪತಿಗಳೂ ಮಹಾಬಲಿಷ್ಠರೂ ಮಾಯಾವಿಗಳೂ ಆದ ಸಾವಿರಾರು ರಾಜರನ್ನೂ ಈಶ್ವರಪ್ರಸಾದದಿಂದ ಕೊಂದುಹಾಕಿ ಬಂದಿರುವೆನು.

೪೦-೪೧. ನನ್ನನ್ನು ಈ ರೀತಿ ಅನುಗ್ರಹಿಸಿದ ಶಿವನನ್ನು ನಮಸ್ಕರಿಸಿಯೇ ನಾನು ನನ್ನ ಮನೆಗೆ ಹೋಗುವೆನು ಹೀಗೆಂದು ಭಾರ್ಗವನು ಹೇಳಿ ಗಣಪತಿಯ ಮುಂದುಗಡೆಯಲ್ಲಿ ನಿಂತನು. ಆಗ ಗಣಾಧಿಪನು ಭಾರ್ಗವನನ್ನು ಕುರಿತು ಮತ್ತೆ ಮಧುರವಾಕ್ಯದಿಂದ ಮಾತನಾಡಲಾರಂಭಿಸಿದನು.

ವಿನಾಯಕನು ಇಂತೆಂದನು : —

೪೨. ಮಹಾಮಹಿಮೆಯಿಂದ ಕೂಡಿದ ರಾಮನೆ! ಸ್ವಲ್ಪಕಾಲ ಇಲ್ಲಿರು. ನಿನಗೆ ಶಿವದರ್ಶನವಾಗುವುದು ಅಣ್ಣನೆ! ಈಗ ಜಗದೀಶ್ವರನಾದ ಶಿವನು ಪಾರ್ವತಿಯೊಡನೆ ಸುಖಲೋಲನಾಗಿರುವನು.

ಸ್ತ್ರೀಪುಂಸೋರ್ಯುಕ್ತಯೋಸ್ತಾತ ಸಹೈಕಾಸನಸಂಸ್ಥಯೋಃ ।
ಕರೋತಿ ಸುಖಭಂಗಂ ಯೋ ನರಕಂ ಸ ವ್ರಜೇದ್ಧ್ರುವಮ್ ॥ ೪೩ ॥

ವಿಶೇಷತಸ್ತು ಪಿತರಂ ಗುರುಂ ವಾ ಭೂಪತಿಂ ದ್ವಿಜ ।
ರಹಸ್ಯಂ ಸಮುಪಾಸೀನಂ ನ ಪಶ್ಯೇದಿತಿ ನಿಶ್ಚಯಃ ॥ ೪೪ ॥

ಕಾಮತೋಽಕಾಮತೋ ವಾಪಿ ಪಶ್ಯೇದ್ಯಃ ಸುರತೋನ್ಮುಖಮ್ ।
ಸ್ತ್ರೀವಿಚ್ಛೇದೋ ಭವೇತ್ತಸ್ಯ ಧ್ರುವಂ ಸಪ್ತಸು ಜನ್ಮಸು ॥ ೪೫ ॥

ಶ್ರೋಣಿಂ ವಕ್ಷಃಸ್ಥಲಂ ವಕ್ತ್ರಂ ಯಃ ಪಶ್ಯತಿ ಪರಸ್ತ್ರಿಯಃ ।
ಮಾತುರ್ವಾಪಿ ಭಗಿನ್ಯಾ ವಾ ದುಹಿತುಃ ಸ ನರಾಧಮಃ ॥ ೪೬ ॥

ಭಾರ್ಗವ ಉವಾಚ :—

ಅಹೋ ಶ್ರುತಮಪೂರ್ವಂ ಕಿಂ ವಚನಂ ತವ ವಕ್ತ್ರತಃ ।
ಭ್ರಾಂತ್ಯಾ ವಿನಿರ್ಗತಂ ವಾಪಿ ಹಾಸ್ಯಾರ್ಥಮಥವೋದಿತಮ್ ॥ ೪೭ ॥

---

೪೩. ಸ್ತ್ರೀಪುರುಷರು ಏಕಾಸನದಲ್ಲಿ ಪ್ರೇಮದಿಂದ ಸೇರಿರುವಾಗ ಅಲ್ಲಿಗೆ ಪ್ರವೇಶಿಸಿ ಸುಖಭಂಗವನ್ನು ಮಾಡಿದ ಮನುಷ್ಯನು ನಿಜವಾಗಿಯೂ ನರಕಕ್ಕೆ ಹೋಗುವನು.

೪೪. ಮುನಿಯೆ ! ತಂದೆ–ಗುರು–ರಾಜ ಇವರು ಕಾಂತೆಯೊಡನೆ ರಹಸ್ಯ ವಿಹಾರದಲ್ಲಿದ್ದಾಗ ಅವರನ್ನು ನೋಡುವುದನ್ನು ವಿಶೇಷವಾಗಿ ಬಿಡತಕ್ಕದ್ದೆಂಬುದು ಶಾಸ್ತ್ರಸಿದ್ಧಾಂತವು.

೪೫. ಯಾವ ಮನುಷ್ಯನು ರತಿಕ್ರೀಡೆಯಲ್ಲಿ ಆಸಕ್ತನಾಗಿ ಕಾಂತೆಯೊಡನೆ ಇದ್ದ ಪುರುಷನನ್ನು ಇಷ್ಟಪಟ್ಟು ಅಥವಾ ಇಷ್ಟವಿಲ್ಲದೇ ನೋಡುವನೋ ಅವನಿಗೆ ಆ ಪಾಪದಿಂದ ಮುಂದೆ ಏಳು ಜನ್ಮಗಳಲ್ಲಿ ಸ್ತ್ರೀ ವಿಚ್ಛೇದವಾಗುವುದು.

೪೬. ಪರಸ್ತ್ರೀ-ಜನನೀ-ಭಗಿನೀ-ಸುತೆ ಇವರಲ್ಲಿ ಯಾರಾದರೊಬ್ಬಳ ನಿತಂಬ, ಎದೆ, ಮುಖಗಳನ್ನು ಯಾವ ಕಾಮುಕನು ನೋಡುವನೋ ಅವನು ನರಾಧಮನು.

೪೭. ಭಾರ್ಗವನು ಈ ರೀತಿಯಾಗಿ ಹೇಳಿದನು :—ನಿನ್ನ ಮುಖದಿಂದ ಈ ದಿನ ಅಪೂರ್ವವಾದ ಮಾತನ್ನು ಕೇಳಿದೆನು. ಬಲು ಆಶ್ಚರ್ಯ, ಈ ಮಾತು ಭ್ರಾಂತಿಯಿಂದೇನಾದರೂ ನಿನ್ನ ಬಾಯಿಯಿಂದ ಬಂದಿತೆ? ಅಥವಾ ಹಾಸ್ಯಕ್ಕಾಗಿ ಆಡಿದ ಮಾತಿರಬಹುದೆ?

ಕಾಮಿನಾಂ ಸವಿಕಾರಾಣಾಮೇತಚ್ಛಾಸ್ತ್ರನಿದರ್ಶನಮ್ ।
ನಿರ್ವಿಕಾರಸ್ಯ ಚ ಶಿಶೋರ್ನ ದೋಷಃ ಕಶ್ಚಿದೇವ ಹಿ ॥ ೪೮ ॥

ಯಾಸ್ಯಾಮ್ಯಂತಃಪುರಂ ಭ್ರಾತಸ್ತ್ವಂ ಕಿಂ ತಿಷ್ಠ ಬಾಲಕ ।
ಯಥಾದೃಷ್ಟಂ ಕರಿಷ್ಯಾಮಿ ತತ್ರ ಯತ್ಸಮಯೋಚಿತಮ್ ॥ ೪೯ ॥

ತತ್ರೈವ ಮಾತಾ ತಾತಶ್ಚ ತ್ವಯಾ ನಾಮ ನಿರೂಪಿತೌ ।
ಜಗತಾಂ ಪಿತರೌ ತೌ ಚ ಪಾರ್ವತೀಪರಮೇಶ್ವರೌ ॥ ೫೦ ॥

ಇತ್ಯುಕ್ತ್ವಾ ಭಾರ್ಗವೋ ರಾಜನ್ನಂತರ್ಗಂತುಂ ಸಮುದ್ಯತಃ ।
ವಿನಾಯಕಸ್ತದೋತ್ಥಾಯ ವಾರಯಾಮಾಸ ಸತ್ವರಮ್ ॥ ೫೧ ॥

ವಾಗ್ಯುದ್ಧಂ ಚ ತಯೋರಾಸೀನ್ಮಿಥೋ ಹಸ್ತವಿಕರ್ಷಣಮ್ ।
ದೃಷ್ಟ್ವಾ ಸ್ಕಂದಸ್ತು ಸಂಭ್ರಾಂತೋ ಬೋಧಯಾಮಾಸ ತೌ ತದಾ
॥ ೫೨ ॥

---

೪೮. ಕಾಮವಿಕಾರದ ಪ್ರಸಂಗವುಳ್ಳ ಕಾಮುಕರಿಗೆ ಮಾತ್ರ ಮೇಲೆ ಹೇಳಿದ ಶಾಸ್ತ್ರನಿಷೇಧವು. ನಿರ್ವಿಕಾರನಾದ ಪುರುಷ ಅಥವಾ ಶಿಶು ಇವರಿಗೆ ಪುರುಷರ ರಹಸ್ಯಕ್ರೀಡಾಗೃಹದ ಪ್ರವೇಶದಿಂದ ಯಾವ ದೋಷವೂ ಇಲ್ಲ.

೪೯. ತಮ್ಮನೆ! ನಾನು ಶಿವನ ಅಂತಃಪುರಕ್ಕೆ ಹೋಗುವೆನು, ಹುಡುಗನೆ! ನಿನಗೇನಾಗುವುದು, ನೀನು ಸುಮ್ಮನಿರು. ನಾನು ಅಲ್ಲಿಗೆ ಹೋದಾಗ ಯಾವ ಪ್ರಸಂಗವನ್ನು ನೋಡುವೆನೋ, ಆ ಸಮಯದಲ್ಲಿ ಯಾವುದು ಉಚಿತಕರ್ತವ್ಯವೋ ಅದರಂತೆ ನಡೆದುಕೊಳ್ಳುವೆನು.

೫೦. ನಿನ್ನ ತಂದೆ ಮತ್ತು ತಾಯಿ ಇವರು ಅಂತಪುರದಲ್ಲಿಯೇ ಇರುವರೆಂದು ನಿನ್ನಿಂದ ಹೇಳಲ್ಪಟ್ಟಿತು. ಆ ಪಾರ್ವತಿ-ಪರಮೇಶ್ವರರು ನಿನಗೆ ಮಾತ್ರವಲ್ಲ ಜಗತ್ತಿಗೆಲ್ಲ ತಾಯಿತಂದೆಗಳಾಗಿರುವರು.

೫೧. ರಾಜನೇ! ಭಾರ್ಗವ ರಾಮನು ಹೀಗೆ ಹೇಳಿ ಅಂತಃಪುರಕ್ಕೆ ಹೋಗಲು ಯತ್ನಿಸಿದನು. ಆಗ ವಿನಾಯಕನು ಎದ್ದು ಬೇಗ ತಡೆಗಟ್ಟಿದನು.

೫೨. ಆಗ ಅವರಿಬ್ಬರಿಗೆ ಪರಸ್ಪರವಾಗಿ ವಾಗ್ಯುದ್ಧವು ಬೆಳೆಯಿತು. ಕ್ರಮವಾಗಿ ಒಬ್ಬನ ಕೈಯನ್ನು ಇನ್ನೊಬ್ಬನು ಸೆಳೆಯಲಾರಂಭಿಸಿದನು. ಆಗ ಸ್ಕಂದನು ಅದನ್ನು ನೋಡಿ ಗಾಬರಿಗೊಂಡು ಅವರಿಬ್ಬರಿಗೂ ಸದುಪದೇಶವನ್ನು ಕೊಟ್ಟನು.

ಬಾಹುಭ್ಯಾಂ ದ್ವೌ ಸಮುದ್ಗೃಹ್ಯ ಪೃಥಗುತ್ಸಾರಿತೌ ತಥಾ ।
ಅಥ ಕ್ರುದ್ಧೋ ಗಣೇಶಾಯ ಭಾರ್ಗವಃ ಪರವೀರಹಾ ।
ಪರಶ್ವಧಂ ಸಮಾದಾಯ ಸಂಪ್ರಕ್ಷೇಪ್ತುಂ ಸಮುದ್ಯತಃ ॥ ೫೩ ॥

ತಂ ದೃಷ್ಟ್ವಾ ಸ ಗಜಾನನೋ ಭೃಗುವರಂ ಕ್ರೋಧಾತ್ ಕ್ಷಿಪಂತಂ ತ್ವರಾ
ಸ್ವಾತ್ಮಾರ್ಥಂ ಪರಶುಂ ತದಾ ನಿಜಕರೇಣೋದ್ಧೃತ್ಯ ವೇಗೇನ ತು ।
ಭೂರ್ಲೋಕಂ ಸಕಲಂ ಭುವಃ ಸ್ವರಪಿ ತಸ್ಯೋರ್ಧ್ವಂ ಮಹರ್ನೈ ಜನಂ
ಲೋಕಂ ಚಾಪಿ ತಪೋಽಥ ಸತ್ಯಮಪರಂ ವೈಕುಂಠಮಪ್ಯಾನಯತ್ ॥ ೫೪ ॥

ತಸ್ಯೋರ್ಧ್ವಂ ಚ ವಿದರ್ಶಯನ್ ಭೃಗುವರಂ ಗೋಲೋಕಮಿಶಾತ್ಮಜೋ
ನಿಷ್ಪಾತ್ಯಾಧರಲೋಕಸಪ್ತಕಮಪೀತ್ಥಂ ದರ್ಶಯಾಮಾಸ ಚ ।
ಉದ್ಧೃತ್ಯಾಥ ತತೋ ಹಿ ಗರ್ಭಸಲಿಲೇ ಪ್ರಕ್ಷಿಪ್ತಮಾತ್ರಂ ತ್ವರಾ
ಭೀತಂ ಪ್ರಾಣಪರೀಪ್ಸುಮಾನಯದಥೋ ತತ್ರೈವ ಯತ್ರಾಸ್ಥಿತಃ॥೫೫॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ಏಕಚತ್ವಾರಿಂಶತ್ತಮೋಽಧ್ಯಾಯಃ.

---

೫೩. ಇಬ್ಬರನ್ನೂ ತೋಳುಗಳಿಂದ ಎತ್ತಿ ಬೇರೆ ಬೇರೆಯಾಗಿ ಬಿಡಿಸಿದನು. ಆಗ ಶತ್ರುಕ್ಷಯಕಾರಿಯಾದ ಭಾರ್ಗವನು ಕುಪಿತನಾಗಿ ಕೊಡಲಿಯನ್ನು ತೆಗೆದುಕೊಂಡು ಗಣೇಶನ ಮೇಲೆ ಎತ್ತಿ ಹಾಕಲು ಯತ್ನ ಮಾಡಿದನು.

೫೪. ಗಜಾನನನು ತನ್ನ ಮೇಲೆ ಕೋಪಗೊಂಡು ತ್ವರೆಯಿಂದ ಪರಶು ಆಯುಧವನ್ನು ಎಸೆಯುತ್ತಿರುವ ಆ ಪರಶುರಾಮನನ್ನು ಕಂಡು ವೇಗವಾಗಿ ಅವನನ್ನು ತನ್ನ ಸೊಂಡಲಿನಿಂದ ಹಿಡಿದು ಭೂ, ಭುವಃ, ಸ್ವಃ, ಮಹಃ, ಜನಃ, ತಪಃ, ಸತ್ಯವೆಂಬ ಒಂದರಮೇಲೊಂದಾಗಿ ಕ್ರಮವಾಗಿರುವ ಸಪ್ತಭುವನಗಳನ್ನೂ ಕಡೆಯಲ್ಲಿ ವೈಕುಂಠ ಲೋಕವನ್ನೂ ತೋರಿಸುವಂತೆ ಮೇಲೆ ಮೇಲಕ್ಕೆ ಎತ್ತಿಬಿಟ್ಟನು.

೫೫. ಈಶ್ವರ ಪುತ್ರನಾದ ಗಣಪತಿಯು ಭೃಗು ಪುತ್ರನಿಗೆ ಅದಕ್ಕಿಂತಲೂ ಮೇಲೆ ಗೋಲೋಕವನ್ನು ತೋರಿಸಿ ತಕ್ಷಣ ಕೆಳಕ್ಕೆ ಎಳೆದು ಅಲ್ಲಿದ್ದ ಅತಲ ಮುಂತಾದ ಏಳು ಪಾತಾಲಲೋಕಗಳನ್ನೂ ಕ್ರಮವಾಗಿ ತೋರಿಸಿ ಎಲ್ಲಕ್ಕೂ ಕೆಳಗಿರುವ ಗರ್ಭ ಜಲಾಶಯದಲ್ಲಿ ಹಾಕಿದ ಕೂಡಲೆ ಪ್ರಾಣರಕ್ಷಣೆಯನ್ನು ಪ್ರಾರ್ಥಿಸಿದ ರಾಮನನ್ನು ಮೊದಲು ನಿಂತಿದ್ದ ಸ್ಥಳಕ್ಕೆ ತಂದುಬಿಟ್ಟನು.

ಬ್ರಹ್ಮಾಂಡ ಪುರಾಣದಲ್ಲಿ ಉತ್ತರಾರ್ಧದಲ್ಲಿ ನಲವತ್ತೊಂದನೆಯ ಅಧ್ಯಾಯವು ಸಮಾಪ್ತವು.

# ದ್ವಿಚತ್ವಾರಿಂಶತ್ತಮೋಽಧ್ಯಾಯಃ

**ವಸಿಷ್ಠ ಉವಾಚ :—**

**ಏವಂ ಸಂಭ್ರಾಮಿತೋ ರಾಮೋ ಗಣಾಧೀಶೇನ ಭೂಪತೇ ।**
**ಹರ್ಷಶೋಕಸಮಾವಿಷ್ಟೋ ವಿಚಿಂತ್ಯಾತ್ಮಪರಾಭವಮ್ ॥ ೧ ॥**

**ಗಣೇಶಂ ಚಾಭಿತೋ ವೀಕ್ಷ್ಯ ನಿರ್ವಿಕಾರಮುಪಸ್ಥಿತಮ್ ।**
**ಕ್ರೋಧಾವಿಷ್ಟೋ ಭೃಶಂ ಭೂತ್ವಾ ಪ್ರಾಕ್ಷಿಪತ್ ಸ್ವಪರಶ್ವಧಮ್ ॥ ೨ ॥**

**ಗಣೇಶಸ್ತ್ವಭಿವೀಕ್ಷ್ಯಾಥ ಪಿತ್ರಾ ದತ್ತಂ ಪರಶ್ವಧಮ್ ।**
**ಅಮೋಘಂ ಕರ್ತುಕಾಮಸ್ತು ವಾಮೇ ತಂ ದಶನೇಽಗ್ರಹೀತ್ ॥ ೩ ॥**

**ಸ ತು ದಂತಃ ಕುಠಾರೇಣ ಭಿನ್ನೋ ಭೂತಲೇಽಪತತ್ ।**
**ಭುವಿ ಶೋಣಿತಸಂದಿಗ್ಧೋ ವಜ್ರಾಹತ ಇವಾಚಲಃ ॥ ೪ ॥**

---

೧. ವಸಿಷ್ಠಮುನಿಯು ಹೇಳಿದನು :–ರಾಜನೇ ! ಗಣೇಶನಿಂದ ಈ ರೀತಿಯಾಗಿ ಊರ್ಧ್ವ ಅಧೋಲೋಕಗಳಲ್ಲಿ ಸುತ್ತಿಸಲ್ಪಟ್ಟ ರಾಮನು ತನಗಾದ ಅವಮಾನವನ್ನು ಯೋಚಿಸುತ್ತ ಲೋಕಗಳನ್ನು ಕಂಡ ಪ್ರಯುಕ್ತ ಹರ್ಷ, ಅವಮಾನ ಪ್ರಯುಕ್ತವಾಗಿ ಶೋಕ, ಇವುಗಳಿಂದ ಕೂಡಿದವನಾದನು.

೨. ತನ್ನ ಪಕ್ಕದಲ್ಲಿ ಏನೇನೂ ವಿಕಾರವಿಲ್ಲದೇ ನಿಂತಿದ್ದ ಗಣೇಶನನ್ನು ನೋಡಿ ಮತ್ತೆ ಕ್ರೋಧದಿಂದ ಜ್ವಲಿತನಾಗಿ ಅವನ ಮೇಲೆ ತನ್ನ ಕುಠಾರವನ್ನು ಪ್ರಯೋಗಿಸಿದನು.

೩. ಗಣೇಶನು ಆ ಕುಠಾರವು ತನ್ನ ತಂದೆಯಿಂದ ಕೊಡಲ್ಪಟ್ಟುದೆಂದು ತಿಳಿದು ಅದನ್ನು ಅಮೋಘ (ಸಫಲ) ಪಡಿಸಬೇಕೆಂಬ ಆಶಯದಿಂದ ತನ್ನ ಎಡಭಾಗದ ಕುಂಭದಲ್ಲಿ ಅದರ ಪ್ರಹಾರವನ್ನು ಸ್ವೀಕರಿಸಿದನು.

೪. ಕುಠಾರದಿಂದ ಕತ್ತರಿಸಲ್ಪಟ್ಟ ಆ ದಂತವು ರಕ್ತದಿಂದ ಲೇಪಿಸಲ್ಪಟ್ಟುದ್ದಾಗಿ ವಜ್ರಾಯುಧದಿಂದ ಹೊಡೆಯಲ್ಪಟ್ಟ ಬೆಟ್ಟದಂತೆ ನೆಲದ ಮೇಲೆ ಬಿದ್ದಿತು.

ದಂತಪಾತೇನ ವಿಧ್ವಸ್ತಾ ಸಾಬ್ಧಿದ್ವೀಪಧರಾ ಧರಾ ।
ಚಕಂಪೇ ಪೃಥಿವೀಪಾಲ ಲೋಕಾಸ್ತ್ರಾಸಮುಪಾಗತಾಃ ॥ ೫ ॥

ಹಾಹಾಕಾರೋ ಮಹಾನಾಸೀದ್ದೇವಾನಾಂ ದಿವಿ ಪಶ್ಯತಾಮ್ ।
ಕಾರ್ತಿಕೇಯಾದಯಸ್ತತ್ರ ಚುಕ್ರುಶುರ್ಭೃಶಮಾತುರಾಃ ॥ ೬ ॥

ಅಥ ಕೋಲಾಹಲಂ ಶ್ರುತ್ವಾ ದಂತಪಾತಧ್ವನಿಂ ತಥಾ ।
ಪಾರ್ವತೀಶಂಕರೌ ತತ್ರ ಸಮಾಜಗ್ಮತುರೀಶ್ವರೌ ॥ ೭ ॥

ಹೇರಂಬಂ ಪುರತೋ ದೃಷ್ಟ್ವಾ ವಕ್ರತುಂಡೈಕದಂತಿನಮ್ ।
ಪಪ್ರಚ್ಛ ಪಾರ್ವತೀ ಸ್ಕಂದಂ ಕಿಮೇತದಿತಿ ಕಾರಣಮ್ ॥ ೮ ॥

ಸ ತು ಪೃಷ್ಟಸ್ತದಾ ಮಾತ್ರಾ ಸೇನಾನೀಃ ಸರ್ವಮಾದಿತಃ ।
ವೃತ್ತಾಂತಂ ಕಥಯಾಮಾಸ ಮಾತ್ರೇ ರಾಮಸ್ಯ ಶೃಣ್ವತಃ ॥ ೯ ॥

---

೫. ಭೂಪಾಲನೆ! ಸಮುದ್ರ, ದ್ವೀಪ, ಬೆಟ್ಟಗಳಿಂದ ಕೂಡಿದ ಭೂಮಿಯು ಆ ದಂತದ ಪಾತದಿಂದ ಧ್ವಂಸವಾಗಿ ಕಂಪಿಸಿತು, ಮತ್ತು ಲೋಕಗಳೆಲ್ಲವೂ ದಿಗಿಲುಗೊಂಡುವು.

೬. ದಂತಪಾತವನ್ನು ಆಕಾಶದಲ್ಲಿ ನೋಡುತ್ತಿದ್ದ ದೇವತೆಗಳೆಲ್ಲರೂ ಹಾಹಾಕಾರ ಮಾಡಿದರು. ಈ ಸಂದರ್ಭದಲ್ಲಿ ಅಲ್ಲಿದ್ದ ಕುಮಾರಸ್ವಾಮಿ ಮುಂತಾದವರು ಅತಿಯಾಗಿ ಪೀಡಿತರಾಗಿ ಕೂಗಿದರು.

೭. ಅನಂತರದಲ್ಲಿ ಜಗದೀಶ್ವರರಾದ ಪಾರ್ವತಿ ಪರಮೇಶ್ವರರು ದಂತಪಾತ ಧ್ವನಿಯ ಕೋಲಾಹಲವನ್ನು ಕೇಳಿ ತಾವು ಅಲ್ಲಿಗೆ ಬಂದರು.

೮. ಮುಂಭಾಗದಲ್ಲಿದ್ದ ಗಣಪತಿಯ ಮುಖವು ವಕ್ರವಾದುದನ್ನೂ ಒಂದು ದಂತವು ಭಗ್ನವಾದುದನ್ನೂ ಕಂಡು ಪಾರ್ವತಿಯು ಸ್ಕಂದನನ್ನು ಕುರಿತು ಇದಕ್ಕೆ ಕಾರಣವೇನೆಂದು ಪ್ರಶ್ನಿಸಿದಳು.

೯. ಪಾರ್ವತಿಯಿಂದ ಪ್ರಶ್ನಿಸಲ್ಪಟ್ಟ ಆ ಸೇನಾನಿಯಾದ ಸ್ಕಂದನು ಮೊದಲಿನಿಂದ ನಡೆದಿರುವ ಎಲ್ಲ ಸಂಗತಿಯನ್ನು ರಾಮನು ಕೇಳುತ್ತ ಅಲ್ಲಿಯೇ ಇರುವಾಗಲೇ ತಾಯಿಗೆ ಹೇಳಿದನು.

ಸಾ ಶ್ರುತ್ವೇದಂತಮಖಿಲಂ ಜಗತಾಂ ಜನನೀ ನೃಪ ।
ಉವಾಚ ಶಂಕರಂ ದೃಷ್ಟ್ವಾ ಪಾರ್ವತೀ ಪ್ರಾಣನಾಯಕಮ್ ॥ ೧೦ ॥

ಪಾರ್ವತ್ಯುವಾಚ :—

ಅಯಂ ತೇ ಭಾರ್ಗವಃ ಶಂಭೋ ಶಿಷ್ಯಃ ಪುತ್ರಸಮೋಽಭವತ್ ।
ತ್ವತ್ತೋ ಲಬ್ಧ್ವಾ ಪರಂ ತೇಜೋ ವರ್ಮ ತ್ರೈಲೋಕ್ಯಜಿದ್ವಿಭೋ॥೧೧॥

ಕಾರ್ತವೀರ್ಯಾರ್ಜುನಂ ಸಂಖ್ಯೇ ಜಿತವಾನೂರ್ಜಿತಂ ನೃಪಮ್ ।
ಸ್ವಕಾರ್ಯಂ ಸಾಧಯಿತ್ವಾ ತು ಪ್ರಾದಾತ್ತುಭ್ಯಂ ಚ ದಕ್ಷಿಣಾಮ್॥ ೧೨ ॥

ಯತ್ತೇ ಸುತಸ್ಯ ದಶನಂ ಕುಠಾರೇಣ ನ್ಯಪಾತಯತ್ ।
ಅನೇನೈವ ಕೃತಾರ್ಥಸ್ತ್ವಂ ಭವಿಷ್ಯಸಿ ನ ಸಂಶಯಃ ॥ ೧೩ ॥

ತ್ವಮಿಮಂ ಭಾರ್ಗವಂ ಶಂಭೋ ರಕ್ಷಾಂತೇವಾಸಿಸತ್ತಮಮ್ ।
ತವ ಕಾರ್ಯಾಣಿ ಸರ್ವಾಣಿ ಸಾಧಯಿಷ್ಯತಿ ಸದ್ಗುರೋಃ ॥ ೧೪ ॥

---

೧೦. ರಾಜನೇ ! ಜಗಜ್ಜನನಿಯಾದ ಪಾರ್ವತೀದೇವಿಯು ಆ ಎಲ್ಲ ವೃತ್ತಾಂತವನ್ನೂ ಕೇಳಿ ಪ್ರಾಣೇಶ್ವರನಾದ ಶಂಕರನನ್ನು ಕಂಡು ಕುಪಿತಳಾಗಿ ಹೇಳಿದಳು.

೧೧. ಪಾರ್ವತಿಯು ಇಂತೆಂದಳು :—ಸರ್ವ ಶಕ್ತನಾದ ಶಂಭುವೆ! ನಿನ್ನ ಶಿಷ್ಯನಾದ ಈ ಭಾರ್ಗವ ರಾಮನು ನಿನಗೆ ಮಗನಂತೆ ಪ್ರಿಯನಾದನು. ಇವನು ನಿನ್ನಿಂದ ಕವಚವನ್ನು ಉಪದೇಶ ತೆಗೆದುಕೊಂಡು ಅದರ ಬಲದಿಂದ ಅಸಾಧಾರಣವಾದ ಶಕ್ತಿಯನ್ನು ಸಂಪಾದಿಸಿ ತ್ರೈಲೋಕ್ಯವನ್ನು ಗೆಲ್ಲುವ ಅಪ್ರತಿಮ ವೀರನಾಗಿ ಯುದ್ಧದಲ್ಲಿ ಬಲಿಷ್ಠನಾದ ಕಾರ್ತವೀರ್ಯಾರ್ಜುನ ರಾಜನನ್ನು ಕೊಂದನು.

೧೨-೧೩. ಈ ಶಿಷ್ಯನು ನಿನ್ನಿಂದ ಸ್ವಕಾರ್ಯವನ್ನು ಸಾಧಿಸಿಕೊಂಡವನಾಗಿ ನಿನಗೆ ಈಗ ಗುರು ದಕ್ಷಿಣೆಯನ್ನು ಕೊಟ್ಟಿರುವನು. ನಿನ್ನ ಪುತ್ರನಾದ ಗಣೇಶನಿಗೆ ದಂತಭಂಗವನ್ನು ಮಾಡಿರುವುದೇ ಆ ಗುರು ದಕ್ಷಿಣೆಯು, ಇಂತಹ ಶಿಷ್ಯ ಕರ್ಮದಿಂದ ನೀನು ಧನ್ಯನಾಗುವಿ, ಈ ವಿಷಯದಲ್ಲಿ ಸಂಶಯವಿಲ್ಲ.

೧೪. ಶಂಭುವೇ ! ನೀನು ಉತ್ತಮ ಶಿಷ್ಯನಾದ ಈ ಭಾರ್ಗವನನ್ನು ರಕ್ಷಿಸು, ಸದ್ಗುರುವಾದ ನಿನ್ನ ಸಮಸ್ತ ಕಾರ್ಯಗಳನ್ನು ಇವನು ನೆರವೇರಿಸುವನು.

ಅಹಂ ನೈವಾತ್ರ ತಿಷ್ಠಾಮಿ ಯತ್ತ್ವಯಾ ವಿಮತಾ ವಿಭೋ ।
ಪುತ್ರಾಭ್ಯಾಂ ಸಹಿತಾ ಯಾಸ್ಯೇ ಪಿತುಃ ಸ್ವಸ್ಯ ನಿಕೇತನಮ್ ॥ ೧೫ ॥

ಸಂತೋ ಭುಂಜಿಷ್ಯಾತನಯಂ ಸತ್ಕುರ್ವಂತ್ಯಾತ್ಮಪುತ್ರವತ್ ।
ಭವತಾ ತು ಕೃತೋ ನೈವ ಸತ್ಕಾರೋ ವಚಸಾಪಿ ಹಿ ॥ ೧೬ ॥

ಆತ್ಮನಸ್ತನಯಸ್ಯಾಸ್ಯ ತತೋ ಯಾಸ್ಯಾಮಿ ದುಃಖಿತಾ ।

ವಸಿಷ್ಠ ಉವಾಚ :—

ಏತಚ್ಛ್ರುತ್ವಾ ತು ವಚನಂ ಪಾರ್ವತ್ಯಾ ಭಗವಾನ್ ಭವಃ ॥ ೧೭ ॥

ನೋವಾಚ ಕಿಂಚಿದ್ವಚನಂ ಸಾಧು ವಾಸಾಧು ಭೂಪತೇ ।
ಸಸ್ಮಾರ ಮನಸಾ ಕೃಷ್ಣಂ ಪ್ರಣತಕ್ಲೇಶನಾಶನಮ್ ॥ ೧೮ ॥

ಗೋಲೋಕನಾಥಂ ಗೋಪೀಶಂ ನಾನಾನುನಯಕೋವಿದಮ್ ।
ಸ್ಮೃತಮಾತ್ರೋಽಥ ಭಗವಾನ್ ಕೇಶವಃ ಪ್ರಣತಾರ್ತಿಹಾ ।
ಆಜಗಾಮ ದಯಾಸಿಂಧುರ್ಭಕ್ತವಶ್ಯೋಽಖಿಲೇಶ್ವರಃ ॥ ೧೯ ॥

---

೧೫. ಸರ್ವ ವ್ಯಾಪಕನೆ! ನಿನ್ನಿಂದ ಈ ರೀತಿಯಾಗಿ ಅವಮಾನಿತಳಾದ ನಾನು ಇನ್ನು ಮುಂದೆ ಇಲ್ಲಿರಲಾರೆನು, ನನ್ನ ತಂದೆಯ ಮನೆಗೆ ಈ ಹುಡುಗರನ್ನು ಕರೆದು ಕೊಂಡು ಹೋಗುವೆನು.

೧೬. ಸತ್ಪುರುಷರು ದಾದಿಯ ಮಗನನ್ನು ಕೂಡ ತನ್ನ ಮಕ್ಕಳಂತೆ ಸತ್ಕರಿಸು ವರು, ನೀನು ನನ್ನ ಈ ಮಗನನ್ನು ಒಂದು ಸಮಾಧಾನದ ಮಾತಿನಿಂದಲೂ ಕೂಡ ಸತ್ಕರಿಸಲಿಲ್ಲ, ಇದರಿಂದ ಬಹು ದುಃಖಿತಳಾದ ನಾನು ಹೊರಟು ಹೋಗುವೆನು.

೧೭. ವಸಿಷ್ಠ ಮುನಿಯು ಮುಂದುವರಿಸಿ ಹೇಳಿದನು :—ರಾಜನೆ! ಭಗವಂತ ನಾದ ಈಶ್ವರನು ಪಾರ್ವತಿಯ ಈ ಮಾತನ್ನು ಕೇಳಿ ಸಾಧು ಅಥವಾ ಅಸಾಧುವಾದ ಒಂದು ಮಾತನ್ನು ಕೂಡ ಹೇಳಲಿಲ್ಲ.

೧೮. ಭಕ್ತರ ಕ್ಲೇಶವನ್ನು ಪರಿಹರಿಸುವವನೂ ಗೋಲೋಕಕ್ಕೆ ಪ್ರಭುವೂ ನಾನಾ ವಿಧವಾದ ಅನುನಯ ವಾಕ್ಯಗಳಲ್ಲಿ ಪ್ರವೀಣನೂ ಆದ ಶ್ರೀ ಕೃಷ್ಣನನ್ನು ಮನಸ್ಸಿನಲ್ಲಿ ಸ್ಮರಿಸಿದನು.

೧೯. ಭಕ್ತರ ಪೀಡೆಗಳನ್ನು ಧ್ವಂಸಮಾಡುವ, ದಯಾಸಮುದ್ರನಾದ, ಭಕ್ತರಿಗೆ ಅಧೀನನಾದ, ಚರಾಚರಗಳಿಗೆಲ್ಲ ಈಶ್ವರನಾದ, ಮತ್ತು ಭಗವಂತನೂ ಆದ ಶ್ರೀ ಕೃಷ್ಣನು ಸ್ಮರಣಮಾಡಿದ ಕೂಡಲೆ ಅಲ್ಲಿಗೆ ಬಂದನು.

ಮೇಘಶ್ಯಾಮೋ ವಿಶದವದನೋ ರತ್ನಕೇಯೂರಹಾರೋ
ವಿದ್ಯುದ್ಭಾಸಾ ಮಕರಸದೃಶೇ ಕುಂಡಲೇ ಸಂದಧಾನಃ ।
ಬರ್ಹಾಪೀಡಂ ಮಣಿಗಣಯುತಂ ಬಿಭ್ರದೀಷತ್ಸ್ಮಿತಾಸ್ಯೋ
ಗೋಪೀನಾಥೋ ಗದಿತಸುಯಶಾಃ ಕೌಸ್ತುಭೋದ್ಭಾಸಿವಕ್ಷಾಃ ॥ ೨೦ ॥

ರಾಧಯಾ ಸಹಿತಃ ಶ್ರೀಮಾನ್ ಶ್ರೀದಾಮ್ನಾ ಚಾಪರಾಜಿತಃ ।
ಮುಷ್ಣಂಸ್ತೇಜಾಂಸಿ ಸರ್ವೇಷಾಂ ಸ್ವರುಚಾ ಜ್ಞಾನವಾರಿಧಿಃ ॥ ೨೧ ॥

ಅಥೈನಮಾಗತಂ ದೃಷ್ಟ್ವಾ ಶಿವಃ ಸಂಹೃಷ್ಟಮಾನಸಃ ।
ಪ್ರಣಿಪತ್ಯ ಯಥಾನ್ಯಾಯಂ ಪೂಜಯಾಮಾಸ ಚಾಗತಮ್ ॥ ೨೨ ॥

ಪ್ರವೇಶ್ಯಾಭ್ಯಂತರೇ ವೇಶ್ಮ ರಾಧಯಾ ಸಹಿತಂ ವಿಭುಮ್ ।
ರತ್ನಸಿಹ್ಮಾಸನೇ ರಮ್ಯೇ ಸದಾರಂ ಸನ್ಯವೇಶಯತ್ । ॥ ೨೩ ॥

---

೨೦. ಗುಣವಾಚಕಗಳಿಂದ ಕೃಷ್ಣಪರಮಾತ್ಮನು ಸ್ತುತಿಸಲ್ಪಟ್ಟಿರುವನು. ಮೇಘದಂತೆ ಶ್ಯಾಮಲವರ್ಣ, ಸ್ವಚ್ಛವಾದ ಮುಖ, ರತ್ನಮಯವಾದ ಭುಜಕೀರ್ತಿ ಮತ್ತು ಹಾರ, ಮಿಂಚಿನಂತೆ ಹೊಳೆಯುವ ವಸ್ತ್ರ, ಮೊಸಳೆಗಳಂತೆ ರಾಜಿಸುವ ಕರ್ಣಕುಂಡಲಗಳು, ನಾನಾ ರತ್ನಗಳಿಂದ ಕೂಡಿದ ನವಿಲುಗರಿಯ ಚೂಡಾಭರಣ, ಮಂದಹಾಸ ಪೂರ್ಣವಾದ ಮುಖ, ಕೌಸ್ತುಭರತ್ನದಿಂದ ಅಲಂಕರಿಸಲ್ಪಟ್ಟ ಎದೆ, ಕೊಂಡಾಡಲ್ಪಟ್ಟ ಪುಣ್ಯಕೀರ್ತಿ, ಗೋಪಿಯ ಪತಿಭಾವ—ಇಂತಹ ಉತ್ತಮ ಗುಣಗಳಿಂದ ಶ್ರೀ ಕೃಷ್ಣನು ಕೂಡಿರುವನು.

೨೧. ಕಾಂತಿಯಿಂದ ಕೂಡಿದವನೂ, ರಾಧಾ ಮತ್ತು ಶ್ರೀ ದಾಮನಿಂದ ಸಹಿತನೂ ಪರಾಜಯಶೂನ್ಯನೂ ಜ್ಞಾನಸಮುದ್ರನೂ ಆದ ಶ್ರೀ ಕೃಷ್ಣನು ತನ್ನ ಶರೀರ ತೇಜಸ್ಸಿನಿಂದ ಸರ್ವರ ತೇಜಸ್ಸನ್ನು ಅಪಹರಿಸುವಂತಿರುವನು.

೨೨. ಅನಂತರದಲ್ಲಿ ಸಂತುಷ್ಟಚಿತ್ತನಾದ ಶಿವನು ಕೃಷ್ಣಪರಮಾತ್ಮನು ಬಂದಿರುವುದನ್ನು ಕಂಡು ನ್ಯಾಯಸಮ್ಮತವಾಗಿ ಬಂದಿರುವ ಶ್ರೀ ಕೃಷ್ಣನಿಗೆ ನಮಸ್ಕಾರ ಪೂರ್ವಕವಾಗಿ ಪೂಜಾ ಸತ್ಕಾರಮಾಡಿದನು.

೨೩. ಮತ್ತು ರಾಧಾಸಹಿತನಾದ ಆ ಕೃಷ್ಣಪರಮಾತ್ಮನನ್ನು ಮನೆಯ ಮಧ್ಯ ಮಂಟಪಕ್ಕೆ ಕರೆದುಕೊಂಡು ಹೋಗಿ ರಮಣೀಯವಾದ ರತ್ನಸಿಂಹಾಸನದಲ್ಲಿ ಪತ್ನೀ ಸಹಿತನಾಗಿ ಕುಳ್ಳಿರಿಸಿದನು.

ಅಥ ತತ್ರ ಗತಾ ದೇವೀ ಪಾರ್ವತೀ ತನಯಾನ್ವಿತಾ ।
ನನಾಮ ಚರಣಾನ್ಪ್ರಭ್ವೋಃ ಪುತ್ರಾಭ್ಯಾಂ ಸಹಿತಾ ಮುದಾ ॥ ೨೪ ॥

ಅಥ ರಾಮೋಽಪಿ ತತ್ರೈವ ಗತ್ವಾ ನಮಿತಕಂಧರಃ ।
ಪಾರ್ವತ್ಯಾಶ್ಚರಣೋಪಾಂತೇ ಪಪಾತಾಕುಲಮಾನಸಃ ॥ ೨೫ ॥

ಸಾ ಯದಾ ನಾಭ್ಯನಂದತ್ತಂ ಭಾರ್ಗವಂ ಪ್ರಣತಂ ಪುರಃ ॥ ೨೬ ॥

ತದೋವಾಚ ಜಗನ್ನಾಥಃ ಪಾರ್ವತೀಂ ಪ್ರೀಣಯನ್ಗಿರಾ ॥ ೨೭ ॥

ಶ್ರೀಕೃಷ್ಣ ಉವಾಚ :—

ಅಯಿ ನಗನಂದಿನಿ ನಿಂದಿತಚಂದ್ರಮು-
ಖಿತ್ವಮಿಮಂ ಜಮದಗ್ನಿಸುತಮ್ ।
ನಯ ನಿಜಹಸ್ತಸರೋಜಸಮರ್ಪಿತ
ಮಸ್ತಕಮಂಕಮನಂತಗುಣೇ ॥ ೨೮ ॥

---

೨೪. ಅನಂತರದಲ್ಲಿ ತನ್ನ ಮಕ್ಕಳ ಜೊತೆಯಲ್ಲಿ ಪಾರ್ವತೀದೇವಿಯು ಅಲ್ಲಿಗೆ ಹೋಗಿ ಸಂತೋಷದಿಂದ ಪ್ರಭುಗಳಾದ ರಾಧಾಮಾಧವರ ಚರಣಗಳಿಗೆ ನಮಸ್ಕರಿಸಿದಳು.

೨೫. ಅನಂತರದಲ್ಲಿ ರಾಮನು ಕತ್ತನ್ನು ಬಗ್ಗಿಸಿಕೊಂಡು ಅಲ್ಲಿಗೆ ಹೋಗಿ ವಿಷಣ್ಣವಾದ ಮನಸ್ಸುಳ್ಳವನಾಗಿ ಪಾರ್ವತಿಯ ಪಾದಸನ್ನಿಧಿಯಲ್ಲಿ ನಮಸ್ಕಾರ ಮಾಡಿದನು.

೨೬-೨೭. ಆ ಪಾರ್ವತಿಯು ಮುಂಭಾಗದಲ್ಲಿ ತನ್ನನ್ನು ನಮಸ್ಕರಿಸಿದ ಭಾರ್ಗವ ರಾಮನನ್ನು ಅಭಿನಂದನ ಮಾಡದಿರಲು ಜಗನ್ನಾಥನಾದ ಶ್ರೀ ಕೃಷ್ಣನು ಸೌಮ್ಯ ವಚನದಿಂದ ಪಾರ್ವತಿಯನ್ನು ಸಂತೋಷಪಡಿಸುತ್ತ ಹೇಳಿದನು.

೨೮. ಹಿಮವತ್ಪರ್ವತದ ಪುತ್ರಿಯೂ ಚಂದ್ರನನ್ನು ತಿರಸ್ಕರಿಸಿದ ಮುಖವುಳ್ಳವಳೂ ಅನಂತ ಗುಣಪೂರ್ಣಳೂ ಆದ ಪಾರ್ವತಿಯೇ! ನೀನು ನಿನ್ನ ಪಾಣಿಕಮಲಗಳಿಂದ ಬಗ್ಗಿರುವ ತಲೆಯನ್ನು ಮೇಲಕ್ಕೆತ್ತಿ ಈ ಜಮದಗ್ನಿಪುತ್ರನಾದ ರಾಮನನ್ನು ತೊಡೆಯ ಮೇಲೆ ಇರಿಸು.

ಭವಭಯಹಾರಿಣಿ ಶಂಭುವಿಹಾರಿಣಿ
ಕಲ್ಮಷನಾಶಿನಿ ಕುಂಭಿಗತೇ ।
ತವ ಚರಣೇ ಪತಿತಂ ಸತತಂ
ಕೃತಕಿಲ್ಬಿಷಮುಸ್ಯವದೇಹಿ ವರಮ್ || ೨೯ ||

ಶೃಣು ದೇವಿ ಮಹಾಭಾಗೇ ವೇದೋಕ್ತಂ ವಚನಂ ಮಮ ।
ಯಚ್ಛ್ರುತ್ವಾ ಹರ್ಷಿತಾ ನೂನಂ ಭವಿಷ್ಯಸಿ ನ ಸಂಶಯಃ ।
ವಿನಾಯಕಸ್ತೇ ತನಯೋ ಮಹಾತ್ಮಾ ಮಹತಾಂ ಮಹಾನ್ || ೩೦ ||

ಯಂ ಕಾಮಃ ಕ್ರೋಧ ಉದ್ವೇಗೋ ಭಯಂ ನಾವಿಶತೇ ಸದಾ ।
ವೇದಸ್ಮೃತಿಪುರಾಣೇಷು ಸಂಹಿತಾಸು ಚ ಭಾಮಿನಿ || ೩೧ ||

ನಾಮಾನ್ಯಸ್ಯೋಪದಿಷ್ಟಾನಿ ಸುಪುಣ್ಯಾನಿ ಮಹಾತ್ಮಭಿಃ ।
ಯಾನಿ ತಾನಿ ಪ್ರವಕ್ಷ್ಯಾಮಿ ನಿಖಿಲಾಘಹರಾಣಿ ಚ || ೩೨ ||

---

೨೯. ಸಂಸಾರ ಭೀತಿಯನ್ನು ಪರಿಹರಿಸುವವಳೆ! ಶಂಭುವಿನೊಡನೆ ವಿಹಾರ ಶೀಲಳೆ, ಪಾಪವನ್ನು ಧ್ವಂಸ ಮಾಡುವವಳೆ, ಗಜವಾಹನಾರೂಢಳೆ, ನಿನ್ನ ಪಾದಗಳಲ್ಲಿ ಬಿದ್ದ ನನನ್ನು ಪಾತಕಿಯಾಗಿದ್ದರೂ ಉದ್ಧರಿಸು, ವರವನ್ನು ನೀಡು.

೩೦. ಮಹಾಮಹಿಮೆಯಿಂದ ಕೂಡಿದ ಪಾರ್ವತೀ ದೇವಿಯೇ! ವೇದದಲ್ಲಿ ಹೇಳುವ ರಹಸ್ಯಗಳಿಂದ ಗರ್ಭಿತವಾದ ನನ್ನ ಮಾತನ್ನು ಕೇಳು, ಅದನ್ನು ಕೇಳಿ ನೀನು ನಿಜವಾಗಿಯೂ ಸಂತೋಷಗೊಳ್ಳುತ್ತೀ, ಸಂದೇಹವಿಲ್ಲ. ನಿನ್ನ ಮಗನಾದ ವಿನಾಯಕನು ಮಹಾತ್ಮನೂ, ದೊಡ್ಡವರಿಗೆಲ್ಲ ದೊಡ್ಡವನೂ ಆಗಿರುವನು, ಅವನಿಗೆ ಯಾವಾಗಲೂ ಕಾಮ, ಕ್ರೋಧ, ಉದ್ವೇಗ, ಭಯವೆಂಬ ದುಷ್ಟಭಾವಗಳ ಆತಂಕ ವಿರುವುದಿಲ್ಲ.

೩೧-೩೨. ನಾರೀಮಣಿಯೆ! ವೇದ, ಸ್ಮೃತಿ, ಪುರಾಣ, ಸಂಹಿತಾಗಮ, ಈ ಗ್ರಂಥಗಳಲ್ಲಿ ಮಹಾತ್ಮರಿಂದ ಉಪದೇಶಿಸಲ್ಪಟ್ಟ, ಪವಿತ್ರಗಳಾದ ಮತ್ತು ಸಕಲ ಪಾಪಗಳನ್ನು ಭಂಗಪಡಿಸುವ ನಾಮಗಳನ್ನು ನಿನಗೆ ಹೇಳುವೆನು.

ಪ್ರಮಥಾನಾಂ ಗಣಾ ಯೇ ಚ ನಾನಾರೂಪಾ ಮಹಾಬಲಾಃ ।
ತೇಷಾಮೀಶಸ್ತ್ವಯಂ ಯಸ್ಮಾದ್ಗಣೇಶಸ್ತೇನ ಕೀರ್ತಿತಃ ॥ ೩೩ ॥

ಭೂತಾನಿ ಚ ಭವಿಷ್ಯಾಣಿ ವರ್ತಮಾನಾನಿ ಯಾನಿ ಚ ।
ಬ್ರಹ್ಮಾಂಡಾನ್ಯಖಿಲಾನ್ಯೇವ ಯಸ್ಮಿನ್ ಲಂಬೋದರಸ್ತತಃ ॥ ೩೪ ॥

ಯಃ ಸ್ಥಿರೋ ದೇವಯೋಗೇನ ಛಿನ್ನಂ ಸಂಯೋಜಿತಂ ಪುನಃ ।
ಗಜಸ್ಯ ಶಿರಸಾ ದೇವಿ ತೇನ ಪ್ರೋಕ್ತೋ ಗಜಾನನಃ ॥ ೩೫ ॥

ಚತುರ್ಥ್ಯಾಮುದಿತಶ್ಚಂದ್ರೋ ದರ್ಪಿತಃ ಶಪ್ತ ಆತುರಃ ।
ಅನೇನ ವಿಧೃತೋ ಭಾಲೇ ಭಾಲಚಂದ್ರಸ್ತತಃ ಸ್ಮೃತಃ ॥ ೩೬ ॥

ಶಪ್ತಃ ಪುರಾ ಸಪ್ತಭಿಸ್ತು ಮುನಿಭಿಃ ಸಂಕ್ಷಯಂ ಗತಃ ।
ಜಾತವೇದಾ ದೀಪಿತೋಽಭೂದ್ಯೇನಾಸೌ ಶೂರ್ಪಕರ್ಣಕಃ ॥ ೩೭ ॥

---

೩೩. ವಿವಿಧ ರೂಪಗಳಿಂದ ಕೂಡಿ ಮಹಾ ಬಲಿಷ್ಠರಾಗಿ ಇಲ್ಲಿರುವ ಈ ಪ್ರಮಥಗಣಗಳಿಗೆಲ್ಲ ವಿನಾಯಕನು ಈಶನಾದುದರಿಂದ ಗಣ + ಈಶ – ಗಣೇಶನೆಂದು ಕರೆಯಲ್ಪಟ್ಟಿರುವನು.

೩೪. ಭೂತ-ಭವಿಷ್ಯ-ಮತ್ತು ವರ್ತಮಾನಗಳೆಂಬ ಕಾಲತ್ರಯದಲ್ಲಿರುವ ಸಮಸ್ತ ಬ್ರಹ್ಮಾಂಡಗಳು ಉದರಲ್ಲಿ ವಾಸವಾಗಿರುವುದರಿಂದ ಅವನು ಲಂಬೋದರನೆಂಬ ನಾಮವನ್ನು ಹೊಂದಿರುವನು.

೩೫. ಶಿರವನ್ನು ಛೇದಿಸಿದಾಗಲೂ ದೈವಬಲವೆಂಬ ಉಪಾಯದಿಂದ ಸ್ಥಿರವಾಗಿಯೇ ಇದ್ದು ಛಿನ್ನವಾದ ಶಿರಸ್ಸಿಗೆ ಬದಲಾಗಿ ಆನೆಯ ಶಿರಸ್ಸಿನಿಂದ ಸೇರಿಸಲ್ಪಟ್ಟಿರುವುದರಿಂದ ಗಜಾನನನೆಂದು ಹೇಳಲ್ಪಟ್ಟಿರುವನು.

೩೬. ಚತುರ್ಥಿಯಲ್ಲಿ ಚಂದ್ರನು ಉದಯಿಸಿ ದರ್ಪದಿಂದ ಮೆರೆಯುವುದನ್ನು ಕಂಡು ಶಾಪಕೊಡಲಾಗಿ ವ್ಯಥೆಯಿಂದ ದೀನನಾದ ಚಂದ್ರನನ್ನು ಗಣೇಶನು ಭಾಲ (ಹಣೆ)ಯಲ್ಲಿ ಧರಿಸಿದ್ದರಿಂದ ಭಾಲಚಂದ್ರನಾದನು.

೩೭. ಪೂರ್ವಕಾಲದಲ್ಲಿ ಸಪ್ತರ್ಷಿಗಳು ಶಾಪಕೊಟ್ಟು ಆದರಿಂದ ಕ್ಷಯಿಸುತ್ತಲಿದ್ದ ಅಗ್ನಿಯನ್ನು ಶೂರ್ಪಾಕಾರವಾದ ಕಿವಿಗಳಿಂದ ಜ್ವಲನಮಾಡಿರುವುದರಿಂದ ವಿನಾಯಕನಿಗೆ ಶೂರ್ಪಕರ್ಣನೆಂಬ ಹೆಸರು ಬಂದಿರುವುದು.

ಪುರಾ ದೇವಾಸುರೇ ಯುದ್ಧೇ ಪೂಜಿತೋ ದಿವಿಷದ್ಗಣೈಃ ।
ವಿಘ್ನಂ ನಿವಾರಯಾಮಾಸ ವಿಘ್ನನಾಶಸ್ತತಃ ಸ್ಮೃತಃ ॥ ೩೮ ॥

ಅದ್ಯಾಯಂ ದೇವಿ ರಾಮೇಣ ಕುಠಾರೇಣ ನಿಪಾತ್ಯಚ ।
ದಶನಂ ದೈವತೋ ಭದ್ರೇ ಹ್ಯೇಕದಂತಃ ಕೃತೋಽಮುನಾ ॥ ೩೯ ॥

ಭವಿಷ್ಯತ್ಯಥ ಪರ್ಯಾಯೇ ಬ್ರಹ್ಮಣೋ ಹರವಲ್ಲಭೇ ।
ವಕ್ರೀಭವಿಷ್ಯತ್ತುಂಡತ್ವಾದ್ವಕ್ರತುಂಡಃ ಸ್ಮೃತೋ ಬುಧೈಃ ॥ ೪೦ ॥

ಏವಂ ತವಾಸ್ಯ ಪುತ್ರಸ್ಯ ಸಂತಿ ನಾಮಾನಿ ಪಾರ್ವತಿ ।
ಸ್ಮರಣಾತ್ಪಾಪಹಾರೀಣಿ ತ್ರಿಕಾಲಾನುಗತಾನ್ಯಪಿ ॥ ೪೧ ॥

ಅಸ್ಮಾತ್ತ್ರಯೋದಶೀಕಲ್ಪಾತ್ಪೂರ್ವಸ್ಮಿನ್ದಶಮೀಭವೇ ।
ಮಯಾಸ್ಮೈ ತು ವರೋ ದತ್ತಃ ಸರ್ವದೇವಾಗ್ರಪೂಜನೇ ॥ ೪೨ ॥

---

೩೮. ಪೂರ್ವದಲ್ಲಿ ದೇವಾಸುರರಿಗೆ ಯುದ್ಧವು ಪ್ರಾಪ್ತವಾಗಲು ದೇವತಾವೃಂದದಿಂದ ಪೂಜಿಸಿ ಪ್ರಾರ್ಥಿಸಲ್ಪಟ್ಟವನಾಗಿ ಅವರ ವಿಘ್ನಗಳನ್ನು ನಿವಾರಣ ಮಾಡಿದ್ದರಿಂದ ವಿಘ್ನನಾಶನೆಂದು ಸ್ಮರಿಸಲ್ಪಟ್ಟಿರುವನು.

೩೯. ಮಂಗಳಶೀಲಳಾದ ದೇವಿಯೇ! ಈ ದಿನ ದೈವಬಲದಿಂದ ರಾಮನು ತನ್ನ ಕುಠಾರದಿಂದ ಒಂದು ದಂತವನ್ನು ಕೆಡವಿರುವುದರಿಂದ ಏಕದಂತನಾಗಿಯೂ ಮಾಡಲ್ಪಟ್ಟಿರುವನು.

೪೦. ಶಿವ ಪತ್ನಿಯಾದ ಪಾರ್ವತಿಯೆ! ಬ್ರಹ್ಮನ ಮುಂದಿನ ಪ್ರರ್ಯಾಯದಲ್ಲಿ ಇವನ (ತುಂಡ) ಮುಖವು ವಕ್ರವಾಗುವ ನಿಮಿತ್ತದಿಂದ ಪ್ರಾಜ್ಞರಿಂದ ವಕ್ರತುಂಡನೆಂದು ಸ್ಮರಿಸಲ್ಪಟ್ಟಿರುವನು.

೪೧. ಪಾರ್ವತಿಯೆ! ಈ ರೀತಿಯಾಗಿ ನಿನ್ನ ಮಗನಿಗೆ ತ್ರಿಕಾಲಗಳಲ್ಲಿ ಸಂಬದ್ಧಗಳೂ ಸ್ಮರಣ ಮಾತ್ರದಿಂದ ಪಾಪಗಳನ್ನು ನಿರ್ಮೂಲಗೊಳಿಸುವುವೂ ಆದ ಅನೇಕ ನಾಮಗಳು ಇವೆ.

೪೨. ಈ ಹದಿಮೂರನೆಯ ಕಲ್ಪದ ಹಿಂದಿನ ಹತ್ತನೆಯ ಕಲ್ಪದಲ್ಲಿ ಸರ್ವದೇವತೆಗಳಿಗಿಂತ ಈ ಗಣೇಶನಿಗೆ ಅಗ್ರಪೂಜೆಯ ವರವನ್ನು ಕೊಟ್ಟಿರುವೆನು.

ಜಾತಕರ್ಮಾದಿಸಂಸ್ಕಾರೇ ಗರ್ಭಾಧಾನಾದಿಕೇಽಪಿ ಚ ।
ಯಾತ್ರಾಯಾಂ ಚ ವಣಿಜ್ಯಾದೌ ಯುದ್ಧೇ ದೇವಾರ್ಚನೇ ಶುಭೇ ॥ ೪೩ ॥
ಸಂಕಷ್ಟೇ ಕಾಮ್ಯಸಿದ್ಧ್ಯರ್ಥಂ ಪೂಜಯೇದ್ಯೋ ಗಜಾನನಮ್ ।
ತಸ್ಯ ಸರ್ವಾಣಿ ಕಾರ್ಯಾಣಿ ಸಿದ್ಧ್ಯಂತ್ಯೇವ ನ ಸಂಶಯಃ ॥ ೪೪ ॥

ವಸಿಷ್ಠ ಉವಾಚ :—

ಇತ್ಯುಕ್ತಂ ತು ಸಮಾಕರ್ಣ್ಯ ಕೃಷ್ಣೇನ ಸುಮಹಾತ್ಮನಾ ।
ಪಾರ್ವತೀ ಜಗತಾಂ ನಾಥಾ ವಿಸ್ಮಿತಾಸೀಚ್ಛುಭಾನನಾ ॥ ೪೫ ॥

ಯದಾ ನೈವೋತ್ತರಂ ಪ್ರಾದಾತ್ಪಾರ್ವತೀ ಶಿವಸನ್ನಿಧೌ ।
ತದಾ ರಾಧಾಬ್ರವೀದ್ದೇವೀಂ ಶಿವರೂಪಾ ಸನಾತನೀ ॥ ೪೬ ॥

ಶ್ರೀರಾಧೋವಾಚ :—

ಪ್ರಕೃತಿಃ ಪುರುಷಶ್ಚೋಭಾವನ್ಯೋನ್ಯಾಶ್ರಯವಿಗ್ರಹೌ ।
ದ್ವಿಧಾ ಭಿನ್ನೌ ಪ್ರಕಾಶೇತೇ ಪ್ರಪಂಚೇಽಸ್ಮಿನ್ ಯಥಾ ತಥಾ ॥ ೪೭ ॥

---

೪೩-೪೪. ಜಾತಕರ್ಮ, ಗರ್ಭಾಧಾನ ಮುಂತಾದ ಪ್ರತಿಯೊಂದು ಸಂಸ್ಕಾರ, ಯಾತ್ರಾ, ವಾಣಿಜ್ಯ, ಯುದ್ಧ, ದೇವತಾರ್ಚನ ಮುಂತಾದ ಶುಭ ಕರ್ಮಗಳ ಆರಂಭದಲ್ಲಿಯೂ ವಿಪತ್ತುಗಳನ್ನು ನಾಶಮಾಡಿ ಕಾಮ್ಯಫಲಗಳನ್ನು ಕೊಡುವ ಕರ್ಮಾರಂಭಗಳಲ್ಲಿಯೂ ಗಣೇಶನ ಪೂಜೆಯನ್ನು ಮಾಡುವುದರಿಂದ ಸಮಸ್ತ ಕಾರ್ಯಗಳು ನಿರ್ವಿಘ್ನವಾಗಿ ಸಿದ್ಧಿಸುತ್ತವೆ ಎಂಬುದರಲ್ಲಿ ಸಂದೇಹವಿಲ್ಲ.

೪೫. ವಸಿಷ್ಠ ಮುನಿಯು ಇಂತೆಂದನು :—ಮಹಾತ್ಮನಾದ ಕೃಷ್ಣನಿಂದ ಹೇಳಲ್ಪಟ್ಟ ಈ ಮಾತನ್ನು ಕೇಳಿ ಜಗದೀಶ್ವರಿಯಾದ ಪಾರ್ವತಿಯು ವಿಸ್ಮಯಗೊಂಡು ಪ್ರಸನ್ನವೂ ಮಂಗಳಮಯವೂ ಆದ ಮುಖವುಳ್ಳವಳಾದಳು.

೪೬. ಪಾರ್ವತಿಯು ಈಶ್ವರನ ಸನ್ನಿಧಿಯಲ್ಲಿ ಈ ಎಲ್ಲ ಮಾತುಗಳಿಗೂ ಒಂದು ಉತ್ತರವನ್ನೂ ಹೇಳದಿರಲಾಗಿ ಶಿವರೂಪಳೂ ಅನಾದಿಯೂ ಆದ ರಾಧಾದೇವಿಯು ಪಾರ್ವತಿಯನ್ನು ಕುರಿತು ಹೇಳಿದಳು.

೪೭. ಈ ಪ್ರಪಂಚದಲ್ಲಿ ಪ್ರಕೃತಿ ಮತ್ತು ಪುರುಷರು ಒಂದನ್ನು ಮತ್ತೊಂದು ಆಶ್ರಯಿಸಿ ಮೂರ್ತಿಯನ್ನು ಧರಿಸಿ ಎರಡು ತತ್ತ್ವಗಳಾಗಿ ಪ್ರಕಾಶಿಸಿರುತ್ತವೆ.

ತ್ವಂ ಚಾಹಮಾವಯೋರ್ದೇವಿ ಭೇದೋ ನೈವಾಸ್ತಿ ಕಶ್ಚನ ।
ವಿಷ್ಣುಸ್ತ್ವಮಹಮೇವಾಸ್ಮಿ ಶಿವೋ ದ್ವಿಗುಣತಾಂ ಗತಃ ॥ ೪೮ ॥

ಶಿವಸ್ಯ ಹೃದಯೇ ವಿಷ್ಣುರ್ಭವತ್ಯಾ ರೂಪಮಾಸ್ಥಿತಃ ।
ಮಮ ರೂಪಂ ಸಮಾಸ್ಥಾಯ ವಿಷ್ಣೋಶ್ಚ ಹೃದಯೇ ಶಿವಃ ॥ ೪೯ ॥

ಏಷ ರಾಮೋ ಮಹಾಭಾಗೇ ವೈಷ್ಣವಃ ಶೈವತಾಂ ಗತಃ ।
ಗಣೇಶೋಽಯಂ ಶಿವಃ ಸಾಕ್ಷಾದ್ವೈಷ್ಣವತ್ವಂ ಸಮಾಸ್ಥಿತಃ ॥ ೫೦ ॥

ಏತಯೋರಾವಯೋಃ ಪ್ರಭ್ವೋಶ್ಚಾಪಿ ಭೇದೋ ನ ದೃಶ್ಯತೇ ।
ಏವಮುಕ್ತ್ವಾ ತು ಸಾ ರಾಧಾ ಕ್ರೋಡೇ ಕೃತ್ವಾ ಗಜಾನನಮ್ ॥ ೫೧ ॥

ಮೂರ್ಧ್ನ್ಯುಪಾಘ್ರಾಯ ಪಸ್ಪರ್ಶ ಸ್ವಹಸ್ತೇನ ಕಪೋಲಕೇ ।
ಸ್ಪೃಷ್ಟಮಾತ್ರೇ ಕಪೋಲೇ ತು ಕ್ಷತಂ ಪೂರ್ತಿಮುಪಾಗತಮ್ ॥ ೫೨ ॥

---

೪೮. ಅದರಂತೆ ನಾನು ಮತ್ತು ನೀನೆಂಬ ಎರಡು ತತ್ತ್ವಗಳು ಪ್ರಕಾಶಿಸುತ್ತಿವೆ, ದೇವಿಯೆ! ನಮ್ಮಿಬ್ಬರಿಗೆ ಯಾವುದೊಂದು ಭೇದವೂ ಇಲ್ಲ, ನೀನು ವಿಷ್ಣುಸ್ವರೂಪಳು, ನಾನು ಭೇದದಿಂದ ದ್ವಿತೀಯ ಸ್ವರೂಪವನ್ನು ಹೊಂದಿ ಶಿವರೂಪಳಾಗಿರುವೆನು.

೪೯. ಶಿವನ ಹೃದಯದಲ್ಲಿ ವಿಷ್ಣುವು ನಿನ್ನ ರೂಪವನ್ನು ಧರಿಸಿ ಇರುವನು, ವಿಷ್ಣು ಹೃದಯದಲ್ಲಿ ಶಿವನು ನನ್ನ ರೂಪದಿಂದಿರುವನು.

೫೦. ಮಹಾ ಭಾಗ್ಯಳೇ! ಈ ಭಾರ್ಗವರಾಮನು ವೈಷ್ಣವನಾಗಿದ್ದವನು ಶೈವತ್ವವನ್ನು ಹೊಂದಿರುವನು. ಹಾಗೆಯೇ ಈ ಗಣೇಶನು ಸಾಕ್ಷಾತ್ ಶೈವನಾಗಿದ್ದರೂ ವೈಷ್ಣವಾಂಶವುಳ್ಳವನಾಗಿರುವನು.

೫೧. ಈ ನಮ್ಮ ಪತಿಗಳಿಗೂ ನಮ್ಮಿಬ್ಬರಿಗೂ ಯಾವ ಭೇದವೂ ಕಾಣುವುದಿಲ್ಲ. ರಾಧಾದೇವಿಯು ಹೀಗೆಂದು ಹೇಳಿ ಗಣೇಶನನ್ನು ತೊಡೆಯ ಮೇಲೆ ಕುಳ್ಳಿರಿಸಿ ತಲೆಯನ್ನು ಮೂಸಿ ನೋಡಿ ಅವನ ಕಪೋಲವನ್ನು ತನ್ನ ಕೈಯಿಂದ ಸ್ಪರ್ಶಿಸಿದಳು.

೫೨. ಸ್ಪರ್ಶಮಾಡಿದ ಮಾತ್ರದಿಂದಲೇ ಕಪೋಲದಲ್ಲಿ ಆಗಿರುವ ಗಾಯವೆಲ್ಲವೂ ಮಾಯವಾಗಿ ತುಂಬಿಕೊಂಡಿತು. ಅನಂತರದಲ್ಲಿ ರಾಧೆಯಿಂದ ಸಮಾಧಾನಗೊಳಿಸಲ್ಪಟ್ಟ ಪಾರ್ವತಿಯು ಹರ್ಷದಿಂದ ಪ್ರಸನ್ನಳಾದಳು.

**ಪಾರ್ವತೀ ಸುಪ್ರಸನ್ನಾಭೂದನುನೀತಾಥ ರಾಧಯಾ ।**
**ಪಾದಯೋಃ ಪತಿತಂ ರಾಮಮುತ್ಥಾಪ್ಯ ನಿಜಪಾಣಿನಾ ॥ ೫೩ ॥**

**ಕ್ರೋಡೇ ಚಕಾರ ಸುಪ್ರೀತಾ ಮೂರ್ಧ್ನ್ಯುಪಾಘ್ರಾಯ ಪಾರ್ವತೀ ।**
**ಏವಂ ತಯೋಸ್ತು ಸತ್ಕಾರಂ ದೃಷ್ಟ್ವಾ ರಾಮಗಣೇಶಯೋಃ ॥ ೫೪ ॥**

**ಕೃಷ್ಣಃ ಸ್ಕಂದಮುಪಾಕೃಷ್ಯ ಸ್ವಾಂಕೇ ಪ್ರೇಮ್ಣಾ ನ್ಯವೇಶಯತ್ ।**
**ಅಥ ಶಂಭುರಪಿ ಪ್ರೀತಃ ಶ್ರೀದಾಮಾನಮುಪಸ್ಥಿತಮ್ ॥ ೫೫ ॥**

**ಸ್ವೋತ್ಸಂಗೇ ಸ್ಥಾಪಯಾಮಾಸ ಪ್ರೇಮ್ಣಾ ಸತ್ಕೃತ್ಯಮಾನದಃ ॥ ೫೬ ॥**

**ಇತಿ ಶ್ರೀಬ್ರಹ್ಮಾಂಡಪುರಾಣೇ ಉತ್ತರಾರ್ಧೇ ದ್ವಿಚತ್ವಾರಿಂಶತ್ತಮೋಽಧ್ಯಾಯಃ**

---

೫೩. ಅಂತಹ ಪಾರ್ವತಿಯು ತನ್ನ ಪಾದಗಳಲ್ಲಿ ನಮಸ್ಕಾರಮಾಡಿಕೊಂಡಿರುವ ರಾಮನನ್ನು ತನ್ನ ಕೈಗಳಿಂದ ಮೇಲಕ್ಕೆ ಎಬ್ಬಿಸಿಕೊಂಡಳು.

೫೪. ಈ ರೀತಿಯಾಗಿ ರಾಧಾ-ಪಾರ್ವತಿಯರು ರಾಮ-ಗಣೇಶರಿಗೆ ಮಾಡಿದ ಸತ್ಕಾರವನ್ನು ನೋಡಿ ಕೃಷ್ಣನು ಹತ್ತಿರವಿದ್ದ ಸ್ಕಂದನನ್ನು ಬರಮಾಡಿಕೊಂಡು ಪ್ರೀತಿಯಿಂದ ತನ್ನ ತೊಡೆಯಲ್ಲಿ ಇಟ್ಟುಕೊಂಡನು.

೫೫-೫೬. ಅನಂತರದಲ್ಲಿ ಮರ್ಯಾದೆಯನ್ನು ಮಾಡುವ ಆದರವುಳ್ಳ ಶಂಭುವು ಸುಪ್ರೀತನಾಗಿ ಅಲ್ಲಿ ಬಂದಿದ್ದ ಶ್ರೀರಾಮನನ್ನು ಪ್ರೇಮದಿಂದ ಸತ್ಕರಿಸಿ ತನ್ನ ತೊಡೆಯಲ್ಲಿ ಇರಿಸಿಕೊಂಡನು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ನಲವತ್ತೆರಡನೆಯ ಅಧ್ಯಾಯವು ಸಮಾಪ್ತವು.



# ತ್ರಿಚತ್ವಾರಿಂಶತ್ತಮೋಽಧ್ಯಾಯಃ

**ವಸಿಷ್ಠ ಉವಾಚ :—**

ಏವಂ ಸುಸ್ನಿಗ್ಧಚಿತ್ತೇಷು ತೇಷು ತಿಷ್ಠತ್ಸು ಭೂಪತೇ ।
ಭವಾನ್ಯುತ್ಸಂಗತೋ ರಾಮಃ ಸಮುತ್ಥಾಯ ಕೃತಾಂಜಲಿಃ ॥ ೧ ॥

ತುಷ್ಟಾವ ಪ್ರಯತೋ ಭೂತ್ವಾ ನಿರ್ವಿಶೇಷಂ ವಿಶೇಷವತ್ ।
ಅದ್ವಯಂ ದ್ವೈತಮಾಪನ್ನಂ ನಿರ್ಗುಣಂ ಸಗುಣಾತ್ಮಕಮ್ ॥ ೨ ॥

**ರಾಮ ಉವಾಚ :—**

ಪ್ರಕೃತಿವಿಕೃತಿಜಾತಂ ವಿಶ್ವಮೇತದ್ವಿಧಾತುಂ
ಮಮ ಕಿಯದನುಭಾತಂ ವೈಭವಂ ತತ್ ಪ್ರಮಾತುಮ್ ।
ಅವಿದಿತತನುನಾಮಾಭೀಷ್ಟವಸ್ತ್ವೇಕಧಾಮಾ
ಭವದಥ ಭವಭಾಮಾ ಪಾತು ಮಾಂ ಪೂರ್ಣಕಾಮಾ ॥ ೩ ॥

---

೧. ವಸಿಷ್ಠಮುನಿಯು ಇಂತೆಂದನು :—ರಾಜನೆ ! ಶ್ರೀ ಕೃಷ್ಣ ಪರಮಾತ್ಮನೊಡನೆ ಶಂಕರನ ಪರಿವಾರವೆಲ್ಲವೂ ಪರಸ್ಪರ ಪ್ರೇಮೋನ್ಮುಖವಾದ ಮಾನಸವುಳ್ಳವರಾಗಿರಲು ರಾಮನು ಅಂಜಲಿಯನ್ನು ಕಟ್ಟಿಕೊಂಡು ಪಾರ್ವತಿಯ ತೊಡೆಯಿಂದ ಮೇಲಕ್ಕೆ ಎದ್ದು ನಿಂತನು.

೨. ಮತ್ತು ಪವಿತ್ರಭಾವವುಳ್ಳವನಾಗಿ ವಿಶೇಷ ಧರ್ಮಗಳಿಂದ ವರ್ಜಿತನೂ, ದ್ವಿತೀಯ ವಸ್ತುಶೂನ್ಯನೂ ಮತ್ತು ನಿರ್ಗುಣಾತ್ಮಕನೂ ಆದ ಜಗದೀಶ್ವರನನ್ನು ಅನೇಕ ವಿಶೇಷಧರ್ಮ–ದ್ವಿತೀಯವಸ್ತು ಸಂಪರ್ಕವನ್ನು ಹೊಂದಿಕೊಂಡು ಕಲ್ಯಾಣ ಗುಣ ಪರಿಪೂರ್ಣವಾಗಿರುವಂತೆ ಸ್ತುತಿಸಿದನು.

೩. ಪ್ರಕೃತಿ ವಿಕೃತಿವಸ್ತು ಸಮೂಹರೂಪವಾದ ಈ ಪ್ರಪಂಚವನ್ನು ನಿರ್ಮಾಣ ಮಾಡಲು ಪ್ರಸಾರಹೊಂದಿದ ಜಗದೀಶಶಕ್ತಿಯ ವಿಭುತ್ವವನ್ನು ಅಳಿಯಲು ನನಗೆ ಬುದ್ಧಿವೈಭವವು ಏನುತಾನೆ ಇದೆ? ತಿಳಿಯಲಾಗದ ನಾಮ-ರೂಪಗಳುಳ್ಳವಳೂ, ಭಕ್ತರ ಇಷ್ಟವಸ್ತುಗಳಿಗೆ ಆಶ್ರಯಳೂ ಮತ್ತು ಪೂರ್ಣಕಾಮಳೂ ಆದ ಶಂಕರಪತ್ನಿಯಾದ ಪಾರ್ವತಿಯು ನನ್ನನ್ನು ರಕ್ಷಿಸಲಿ.

ಪ್ರಕಟಿತಗುಣಭಾನಂ ಕಾಲಸಂಖ್ಯಾವಿಧಾನಂ
ಸಕಲಭವನಿದಾನಂ ಕೀರ್ತ್ಯತೇ ಯತ್ ಪ್ರಧಾನಮ್ ।
ತದಿಹ ನಿಖಿಲತಾತಃ ಸಂಬಭೂವೋಕ್ಷಪಾತಃ
ಕೃತಕೃತಕನಿಪಾತಃ ಪಾತು ಮಾಮದ್ಯ ಮಾತಃ ॥ ೪ ॥

ದನುಜಕುಲವಿನಾಶೀ ಲೇಖಪಾತಾವಿನಾಶೀ
ಪ್ರಮಥಕುಲವಿಕಾಶೀ ಸರ್ವವಿದ್ಯಾಪ್ರಕಾಶೀ ।
ಪ್ರಸಭರಚಿತಕಾಶೀ ಭಕ್ತದತ್ತಾಖಿಲಾಶೀ-
ರವತು ವಿಜಿತಪಾಶೀ ಮಾಂ ಸದಾ ಷಣ್ಮುಖಾಶೀ ॥ ೫ ॥

ಹರನಿಕಟನಿವಾಸೀ ಕೃಷ್ಣಸೇವಾವಿಲಾಸೀ
ಪ್ರಣತಜನವಿಭಾಸೀ ಗೋಪಕನ್ಯಾಪ್ರಹಾಸೀ ।
ಹರಕೃತಬಹುಮಾನೋ ಗೋಪಿಕೇಶೈಕತಾನೋ
ವಿದಿತಬಹುವಿಧಾನೋ ಜಾಯತಾಮಾರ್ತಿಹಾ ನೋ ॥ ೬ ॥

---

೪. ಜನನಿಯೆ! ಪ್ರಕಟಿಸಲ್ಪಟ್ಟ ಸತ್ತ್ವ-ರಜ-ತಮೋಗುಣಗಳ ಸ್ವರೂಪ ಪ್ರಕಾಶವುಳ್ಳದ್ದೂ ಕಲಾ-ಕಾಷ್ಠಾ ಮುಂತಾದ ಕಾಲಸಂಖ್ಯೆಯ ವಿಧಾನವುಳ್ಳದ್ದೂ ಮತ್ತು ಸಕಲ ಸಂಸಾರೋತ್ಪತ್ತಿಗೆ ಮೂಲಕಾರಣವೂ ಆದ ಪ್ರಧಾನವೆಂದು ಕೀರ್ತಿಸಲ್ಪಟ್ಟಿರುವ, ವಿಶ್ವಕ್ಕೆ ಜನಕನೂ, ವೃಷವಾಹನದಿಂದ ಸಂಚರಿಸುವವನೂ, ಮಿಥ್ಯಾಭೂತಕಾರ್ಯರಚನೆಯುಳ್ಳವನೂ ಆದ ಜಗದೀಶ್ವರನು ಈಗ ನನ್ನನ್ನು ರಕ್ಷಿಸಲಿ.

೫. ರಾಕ್ಷಸವಂಶ ವಿನಾಶಕನೂ, ದೇವತಾಸಂರಕ್ಷಕನೂ, ನಾಶರಹಿತನೂ, ಪ್ರಮಥ ಗಣಗಳಿಂದ ಪ್ರಕಾಶಿಸುವವನೂ, ಸಮಸ್ತ ವಿದ್ಯೆಗಳನ್ನು ಪ್ರಕಾಶಪಡಿಸುವವನೂ, ಹಠದಿಂದ ನಿರ್ಮಿಸಲ್ಪಟ್ಟ ಕಾಶೀಕ್ಷೇತ್ರವುಳ್ಳವನೂ, ಭಕ್ತರಿಗೆ ದಾನಮಾಡಿದ ಸಕಲೇಷ್ಟಾರ್ಥವುಳ್ಳವನೂ, ಅಂತಕನನ್ನು ನಿಗ್ರಹಿಸಿದವನೂ ಮತ್ತು ಕುಮಾರಸ್ವಾಮಿಯ ಐಕ್ಯಭಕ್ತಿಗೆ ಪಾತ್ರನೂ ಆದ ಶಂಕರನು ನನ್ನನ್ನು ಪಾಲಿಸಲಿ.

೬. ಕೃಷ್ಣ ಪರಮಾತ್ಮನೆ! ಶಿವಸನ್ನಿಧಿಯಲ್ಲಿ ವಾಸಿಸುವವನೂ, ಭಕ್ತರ ಸೇವಾವಿಲಾಸವುಳ್ಳವನೂ, ಭಕ್ತಜನರ ಅಂತರಂಗದಲ್ಲಿ ಭಾಸಿಸುವವನೂ, ಗೋಪಿಕಾಸ್ತ್ರೀಯರನ್ನು ವಿನೋದಪಡಿಸುವವನೂ, ಶಿವನಿಂದ ಮಾಡಲ್ಪಟ್ಟ ಬಹುಮಾನಕ್ಕೆ ಪಾತ್ರನೂ, ಪ್ರೌಢ ಗೋಪಿಯರಲ್ಲಿ ಅತ್ಯಾದರವುಳ್ಳವನೂ, ಮತ್ತು ಅನೇಕ ಯುಕ್ತಿವಿಧಾನಗಳನ್ನು ಅರಿತವನೂ ಆದ ನೀನು ನಮ್ಮ ಕಷ್ಟಗಳನ್ನು ನಿವಾರಿಸುವವನಾಗು.

ಪ್ರಭುನಿಯತಮನಾ ಯೋ ನುನ್ನಭಕ್ತಾಂತರಾಯೋ
ಹೃತದುರಿತನಿಕಾಯೋ ಜ್ಞಾನದಾತಾ ಪರಾಯೋಃ ।
ಸಕಲಗುಣಗರಿಷ್ಠೋ ರಾಧಿಕಾಂಕೇ ನಿವಿಷ್ಟೋ
ಮಮ ಕೃತಮಪರಾಧಂ ಕ್ಷಂತುಮರ್ಹತ್ಯಗಾಧಮ್ ॥ ೭ ॥

ಯಾ ರಾಧಾ ಜಗದುದ್ಭವಸ್ಥಿತಿಲಯೇಷ್ವಾರಾಧ್ಯತೇ ವಾ ಜನೈಃ
ಶಬ್ದಂ ಬಾಧಯತೀಶವಕ್ತ್ರವಿಗಲತ್ಪ್ರೇಮಾಮೃತಾಸ್ವಾದನಮ್ ।
ರಾಸೇಶೀ ರಸಿಕೇಶ್ವರೀ ರಮಣಹೃನ್ನಿಷ್ಠಾ ನಿಜಾನಂದಿನೀ
ನೇತ್ರೀ ಸಾ ಪರಿಪಾತು ಮಾಮವನತಂ ರಾಧೇತಿ ಯಾ ಕೀರ್ತ್ಯತೇ ॥ ೮ ॥

ಯಸ್ಯಾ ಗರ್ಭಸಮುದ್ಭವೋಽಹ್ಯತಿವಿರಾಡ್ಯಸ್ಯಾಂಶಭೂತೋ ವಿರಾಟ್
ಯನ್ನಾಭ್ಯಂಬುರುಹೋದ್ಭವೇನ ವಿಧಿನೈಕಾಂತೋಪದಿಷ್ಟೇನ ವೈ ।
ಸೃಷ್ಟಂ ಸರ್ವಮಿದಂ ಚರಾಚರಮಯಂ ವಿಶ್ವಂ ಚ ಯದ್ರೋಮಸು
ಬ್ರಹ್ಮಾಂಡಾನಿ ವಿಭಾಂತಿ ತಸ್ಯ ಜನನೀ ಶಶ್ವತ್ ಪ್ರಸನ್ನಾಸ್ತು ಸಾ ॥ ೯ ॥

---

೭. ಪ್ರಭುಶಕ್ತಿಯಿಂದ ನಿಯತವಾದ ಮಾನಸವುಳ್ಳವನೂ, ಭಕ್ತರ ವಿಘ್ನಶ್ರೇಣಿಯನ್ನು ದೂರಮಾಡುವವನೂ, ಪಾಪಪುಂಜವನ್ನು ಧ್ವಂಸಮಾಡುವವನೂ, ಮರಣದಶೆಯಲ್ಲಿರುವವನಿಗೆ ಜ್ಞಾನವನ್ನು ಉಪದೇಶಿಸುವವನೂ, ಸಮಸ್ತ ಗುಣಗಳಿಂದ ಪೂರ್ಣನೂ ಮತ್ತು ರಾಧಾದೇವಿಯ ಅಂಕದಲ್ಲಿ ಕುಳಿತಿರುವವನೂ ಆದ ಶ್ರೀ ಕೃಷ್ಣನು ಅಗಾಧವಾದ ನನ್ನ ಅಪರಾಧವನ್ನು ಕ್ಷಮಿಸಲಿ.

೮. ಜಗತ್ತಿನ ಸೃಷ್ಟಿ-ಸ್ಥಿತಿ-ಸಂಹಾರಗಳಲ್ಲಿ ಕಾರಣಳೆಂದು ಜನರಿಂದ ಯಾವ ರಾಧಾದೇವಿಯು ಅರ್ಚಿಸಲ್ಪಡುವಳೋ, ಪತಿಯ ಮುಖಕಮಲದಿಂದ ಹೊರಟ ಪ್ರೇಮಾಮೃತಾಸ್ವಾದವುಳ್ಳ ವಚನವನ್ನು ಯಾವ ರಾಧೆಯು ಪಾನಮಾಡುವಳೋ ಅಂತಹ ರಾಸಮಂಡಲೇಶ್ವರಿಯೂ, ರಸಿಕಜನರಿಗೆ ಪ್ರಭುವೂ, ಪತಿಹೃದಯದಲ್ಲಿ ವಾಸಿಸುವವಳೂ ಸ್ವಭಕ್ತರನ್ನು ಆನಂದಗೊಳಿಸುವವಳೂ ಮತ್ತು ಜಗನ್ನಾಯಕಳೂ ಆದ ಆ ರಾಧಾದೇವಿಯು ಪ್ರಣತನಾದ ನನ್ನನ್ನು ಪರಿಪಾಲಿಸಲಿ.

೯. ಯಾವ ದೇವಿಯ ಗರ್ಭದಲ್ಲಿ ಹುಟ್ಟಿ ವಿಷ್ಣುವು ಸ್ವಾಧಿಕಾರವನ್ನು ಮಾಡುತ್ತಲಿರುವನೋ, ಯಾವ ವಿಷ್ಣುವಿನ ಅಂಶದಿಂದ ವಿರಾಡ್‌ಬ್ರಹ್ಮನು ಜನಿಸಿರುವನೋ, ಯಾವ ವಿಷ್ಣುವಿನ ನಾಭಿ ಕಮಲದಲ್ಲಿ ಹುಟ್ಟಿ ಏಕಾಂತದಲ್ಲಿ ಉಪದೇಶವನ್ನು ಹೊಂದಿದ ಬ್ರಹ್ಮನಿಂದ ಚರಾಚರ ಪ್ರಪಂಚವು ಸೃಷ್ಟಿಸಲ್ಪಟ್ಟಿರುವುದೋ, ಯಾವ ವಿಷ್ಣುವಿನ ರೋಮಗಳಲ್ಲಿ ಬ್ರಹ್ಮಾಂಡಗಳು ಪ್ರಕಾಶಿಸುತ್ತಿವೆಯೋ ಅಂತಹ ವಿಷ್ಣು ಪರಮಾತ್ಮನ ಜನನಿಯು ಯಾವಾಗಲೂ ಪ್ರಸನ್ನಳಾಗಿರಲಿ.

ಪ್ರೇಯಾನ್ ಯಃ ಸಚರಾಚರಸ್ಯ ಜಗತೋಽವ್ಯಾಪೀ ವಿಭುಃ ಸಚ್ಚಿದಾ—
ನಂದಾಬ್ಧಿಃ ಪ್ರಕಟಸ್ಥಿತೋ ವಿಲಸತಿ ಪ್ರೇಮಾಂಧಯಾ ರಾಧಯಾ ।
ಕೃಷ್ಣಃ ಪೂರ್ಣತಮೋ ಮಮೋಪರಿ ದಯಾಕ್ಲಿನ್ನಾಂತರಃ ಸ್ಯಾತ್ಸದಾ
ಯೇನಾಹಂ ಸುಕೃತೀ ಭವಾಮಿ ಚ ಭವಾಮ್ಯಾನಂದಲೀನಾಂತರಃ
॥ ೧೦ ॥

ವಸಿಷ್ಠ ಉವಾಚ :—

ಸ್ತುತ್ವೈವಂ ಜಾಮದಗ್ನ್ಯಸ್ತು ವಿರರಾಮ ಹ ತತ್ಪರಮ್ ।
ವಿಜ್ಞಾತಾಖಿಲತತ್ತ್ವಾರ್ಥೋ ಹೃಷ್ಟರೋಮಾ ಕೃತಾರ್ಥವತ್ ॥ ೧೧ ॥

ಅಥೋವಾಚ ಪ್ರಸನ್ನಾತ್ಮಾ ಕೃಷ್ಣಃ ಕಮಲಲೋಚನಃ ।
ಭಾರ್ಗವಂ ಪ್ರಣತಂ ಭಕ್ತ್ಯಾ ಕೃಪಾಪಾತ್ರಂ ಪುರಃಸ್ಥಿತಮ್ ॥ ೧೨ ॥

ಕೃಷ್ಣ ಉವಾಚ :—

ಸಿದ್ಧೋಽಸಿ ಭಾರ್ಗವೇಂದ್ರ ತ್ವಂ ಪ್ರಸಾದಾನ್ಮಮ ಸಾಂಪ್ರತಮ್ ।
ಅದ್ಯಪ್ರಭೃತಿ ವತ್ಸಾಸ್ಮಿಂಲ್ಲೋಕೇ ಶ್ರೇಷ್ಠತಮೋ ಭವ ॥ ೧೩ ॥

---

೧೦. ಚರ–ಅಚರ ಪ್ರಪಂಚದ ಪ್ರೇಮಾಸ್ಪದನೂ, ವ್ಯಾಪಕನೂ, ಸರ್ವಶಕ್ತನೂ, ಸಚ್ಚಿದಾನಂದಗಳಿಗೆ ಸಮುದ್ರಪ್ರಾಯನೂ, ಪ್ರಕಾಶರೂಪಿಯೂ ಆಗಿ ಪ್ರೇಮಪರವಶಳಾದ ರಾಧಾದೇವಿಯೊಡನೆ ವಿಹರಿಸುತ್ತಿರುವ ಪರಿಪೂರ್ಣರೂಪಿಯಾದ ಶ್ರೀ ಕೃಷ್ಣನು ನನ್ನಲ್ಲಿ ದಯೆಯಿಂದ ಕೂಡಿದ ಅಂತರಂಗವುಳ್ಳವನಾಗಲಿ. ಅದರಿಂದ ನಾನು ಸುಕೃತಶಾಲಿಯೂ ಆನಂದಾನುಭವದಲ್ಲಿ ಮುಳುಗಿದ ಮಾನಸವುಳ್ಳವನೂ ಆಗಿರುವೆನು.

೧೧. ವಸಿಷ್ಠ ಮುನಿಯು ಇಂತೆಂದನು :—ತಿಳಿಯಲ್ಪಟ್ಟ ಸಕಲ ತತ್ತ್ವಾರ್ಥಗಳುಳ್ಳ ಜಮದಗ್ನಿ ಪುತ್ರನಾದ ಪರಶುರಾಮನು ಈ ರೀತಿಯಾಗಿ ಆ ಪರತತ್ತ್ವದೇವತೆಯನ್ನು ಸ್ತೋತ್ರಮಾಡಿ ಕೃತಕೃತ್ಯನಾಗಿರುವಂತೆ ರೋಮಾಂಚಿತವಾದ ದೇಹವುಳ್ಳವನಾಗಿ ಸುಮ್ಮನಾದನು.

೧೨. ಆಗ ಪ್ರಸನ್ನವಾದ ಮಾನಸವುಳ್ಳವನೂ ಕಮಲದಂತೆ ಸುಂದರವಾದ ನಯನವುಳ್ಳವನೂ ಆದ ಶ್ರೀ ಕೃಷ್ಣನು ಭಕ್ತಿಯಿಂದ ನಮಸ್ಕರಿಸಿ ಮುಂದುಗಡೆಯಲ್ಲಿರುವ ಮತ್ತು ಕೃಪಾಪಾತ್ರನಾದ ರಾಮನನ್ನು ಕುರಿತು ಮಾತನಾಡಿದನು.

೧೩. ಶ್ರೀ ಕೃಷ್ಣನು ಈ ರೀತಿಯಾಗಿ ಹೇಳಿದನು :—ಭಾರ್ಗವ ಮುನಿಗಳಲ್ಲಿ ಶ್ರೇಷ್ಠನಾಗಿರುವ ರಾಮನೆ ! ಈಗ ನೀನು ನನ್ನ ಪ್ರಸಾದದಿಂದ ಸಿದ್ಧಿಯನ್ನು ಹೊಂದಿರುವವನಾಗಿದ್ದಿ, ವತ್ಸನೆ ! ಈ ದಿನ ಮೊದಲಾಗಿ ನೀನು ಈ ಲೋಕದಲ್ಲಿ ಶಾಶ್ವತವಾಗಿ ವಾಸಿಸು. ಮತ್ತು ಶ್ರೇಷ್ಠನಾಗಿ ಬಾಳು.

ತುಭ್ಯಂ ವರೋ ಮಯಾ ದತ್ತಃ ಪುರಾ ವಿಷ್ಣುಪದಾಶ್ರಮೇ ।
ತತ್ಸರ್ವಂ ಕ್ರಮತೋ ಭಾವ್ಯಂ ಸಮಾ ಬಹ್ವೀಸ್ತ್ವಯಾ ವಿಭೋ ॥೧೪॥

ದಯಾ ವಿಧೇಯಾ ದೀನೇಷು ಶ್ರೇಯ ಉತ್ತಮಮಿಚ್ಛತಾ ।
ಯೋಗಶ್ಚ ಸಾಧನೀಯೋ ವೈ ಶತ್ರೂಣಾಂ ನಿಗ್ರಹಸ್ತಥಾ ॥ ೧೫ ॥

ತ್ವತ್ಸಮೋ ನಾಸ್ತಿ ಲೋಕೇಽಸ್ಮಿಂಸ್ತೇಜಸಾ ಚ ಬಲೇನ ಚ ।
ಜ್ಞಾನೇನ ಯಶಸಾ ವಾಪಿ ಸರ್ವಶ್ರೇಷ್ಠತಮೋ ಭವಾನ್ ॥ ೧೬ ॥

ಅಥ ಸ್ವಸ್ವಗೃಹಮಾಸಾದ್ಯ ಪಿತ್ರೋಃ ಶುಶ್ರೂಷಣಂ ಕುರು ।
ತಪಶ್ಚರ ಯಥಾಕಾಲಂ ತೇನ ಸಿದ್ಧಿಃ ಕರಸ್ಥಿತಾ ॥ ೧೭ ॥

ರಾಧೋತ್ಸಂಗಾತ್ ಸಮುತ್ಥಾಪ್ಯ ಗಣೇಶಂ ರಾಧಿಕೇಶ್ವರಃ ।
ಆಲಿಂಗ್ಯ ಗಾಢಂ ರಾಮೇಣ ಮೈತ್ರೀಂ ತಸ್ಯ ಚಕಾರ ಹ ॥ ೧೮ ॥

---

೧೪. ವಿಭುವಾದ ರಾಮನೆ! ಪೂರ್ವದಲ್ಲಿ ವಿಷ್ಣುಪಾದಾಶ್ರಮದಲ್ಲಿ ನನ್ನಿಂದ ನಿನಗೆ ವರವು ಕೊಡಲ್ಪಟ್ಟಿರುವುದು. ಅನೇಕ ವರ್ಷಗಳ ಕಾಲ ಪ್ರತಿಷ್ಠಿತನಾಗಿರುವ ನಿನ್ನಿಂದ ಅದೆಲ್ಲ ಕಾರ್ಯವು ಕ್ರಮವಾಗಿ ನಡೆಯುವುದಾಗಿದೆ

೧೫. ಉತ್ತಮವಾದ ಶ್ರೇಯಸ್ಸನ್ನು ಇಚ್ಛಿಸುವನಿಂದ ದೀನರಲ್ಲಿ ಕರುಣೆಯು ತೋರಿಸಲ್ಪಡಬೇಕು. ಹಾಗು ಯೋಗಾಭ್ಯಾಸವು ಸಾಧಿಸಲ್ಪಡಬೇಕು. ಮತ್ತು ಶತ್ರುಗಳ ನಿಗ್ರಹವೂ ಅವಶ್ಯಕರ್ತವ್ಯವಾಗಿರುವುದು.

೧೬. ಈ ಲೋಕದಲ್ಲೆಲ್ಲ ನನ್ನ ಅನುಗ್ರಹಕ್ಕೆ ಪಾತ್ರನಾಗಿರುವ ನಿನಗೆ ತೇಜಸ್ಸು ಬಲ, ಜ್ಞಾನ ಮತ್ತು ಕೀರ್ತಿ ಮುಂತಾದುವುಗಳಲ್ಲಿ ಸಮಾನನಾದವನು ಬೇರೊಬ್ಬ ನಿಲ್ಲ. ಆದುದರಿಂದ ನೀನು ಸರ್ವರಿಗೂ ಅತಿ ಶ್ರೇಷ್ಠನಾಗಿರುತ್ತೀ.

೧೭. ಅನಂತರದಲ್ಲಿ ನಿನ್ನ ಸ್ವಗೃಹಕ್ಕೆ ಬಂದು ಮಾತಾಪಿತೃಗಳ ಶುಶ್ರೂಷೆ ಯನ್ನು ಮಾಡು. ಆಯಾಯ ಯೋಗ್ಯಕಾಲವನ್ನು ಅನುಸರಿಸಿ ತಪಶ್ಚರ್ಯೆಯನ್ನು ಮಾಡು. ಇದರಿಂದ ನಿನ್ನ ಇಷ್ಟಸಿದ್ಧಿಯು ಕರಗತವಾಗುವುದು.

೧೮. ಆಗ ರಾಧಿಕೇಶ್ವರನಾದ ಶ್ರೀ ಕೃಷ್ಣನು ರಾಧೆಯ ತೊಡೆಯಿಂದ ಗಣೇಶ ನನ್ನು ಎಬ್ಬಿಸಿ ರಾಮನೊಡನೆ ಗಾಢವಾಗಿ ಆಲಿಂಗನಮಾಡಿಸಿ ಗಣೇಶನಿಗೂ ರಾಮ ನಿಗೂ ಪರಸ್ಪರ ಮೈತ್ರಿಯನ್ನು ಕಲ್ಪಿಸಿದನು.

ಅಥೋಭಾವಪಿ ಸಂಪ್ರೀತೌ ತದಾ ರಾಮಗಣೇಶ್ವರೌ ।
ಕೃಷ್ಣಾಜ್ಞಯಾ ಮಹಾಭಾಗೌ ಬಭೂವತುರರಿಂದಮ ॥ ೧೯ ॥

ಏತಸ್ಮಿನ್ನಂತರೇ ದೇವೀ ರಾಧಾ ಕೃಷ್ಣಪ್ರಿಯಾ ಸತೀ ।
ಉಭಾಭ್ಯಾಂ ಚ ವರಂ ಪ್ರಾದಾತ್ ಪ್ರಸನ್ನಾಸ್ಯಾ ಮುದಾನ್ವಿತಾ ॥ ೨೦ ॥

ರಾಧೋವಾಚ :—

ಸರ್ವಸ್ಯ ಜಗತೋ ವಂದ್ಯೌ ದುರಾಧರ್ಷೌ ಪ್ರಿಯಾವಹೌ ।
ಮದ್ಭಕ್ತೌ ಚ ವಿಶೇಷೇಣ ಭವಂತೌ ಭವತಾಂ ಸುತೌ ॥ ೨೧ ॥

ಭವತೋರ್ನಾಮ ಚೋಚ್ಚಾರ್ಯ ಯತ್ಕಾರ್ಯಂಯಃಸಮಾರಭೇತ್
ಸಿದ್ಧಿಂ ಪ್ರಯಾತು ತತ್ಸರ್ವಂ ಮತ್ಪ್ರಸಾದಾದ್ಧಿ ತಸ್ಯ ತು ॥ ೨೨ ॥

ಅಥೋವಾಚ ಜಗನ್ಮಾತಾ ಭವಾನೀ ಭವವಲ್ಲಭಾ ।
ವತ್ಸ ರಾಮ ಪ್ರಸನ್ನಾಹಂ ತುಭ್ಯಂ ಕಂ ಪ್ರದದೇ ವರಮ್ ॥ ೨೩ ॥

---

೧೯. ಶತ್ರುಂಜಯನಾದ ರಾಜನೆ! ಆಗ ಮಹಾತ್ಮರಾದ ರಾಮ–ಗಣೇಶರಿಬ್ಬರೂ ಶ್ರೀ ಕೃಷ್ಣನ ಆಜ್ಞೆಯಿಂದ ಪರಸ್ಪರ ಪ್ರೀತಿಹೊಂದಿದ ಮಾನಸವುಳ್ಳವರಾದರು.

೨೦. ಈ ಸಂದರ್ಭದಲ್ಲಿ ಶ್ರೀ ಕೃಷ್ಣನ ಪ್ರಿಯ ಸತಿಯಾದ ರಾಧಾದೇವಿಯು ಸಂತೋಷದಿಂದ ಕೂಡಿದವಳಾಗಿ ಪ್ರಸನ್ನವಾದ ಮುಖದಿಂದ ಈರ್ವರಿಗೆ ವರವನ್ನು ಪ್ರದಾನ ಮಾಡಿದಳು.

೨೧. ರಾಧಾದೇವಿಯು ಇಂತೆಂದಳು :— ನನ್ನಲ್ಲಿ ವಿಶೇಷವಾಗಿ ಭಕ್ತಿಯನ್ನು ಇಟ್ಟಿರುವ ಪುತ್ರಪ್ರಾಯರಾದ ನೀವಿಬ್ಬರು ಸಮಸ್ತ ಜಗತ್ತಿಗೆ ವಂದನಾರ್ಹರೂ, ತಿರಸ್ಕರಿಸಲು ಅಶಕ್ಯರೂ, ಮತ್ತು ಪ್ರೀತಿಯನ್ನು ಉಂಟುಮಾಡುವವರೂ ಆಗುತ್ತೀರಿ.

೨೨. ಯಾವ ಮಾನವನು ನಿಮ್ಮಿಬ್ಬರ ನಾಮವನ್ನು ಉಚ್ಚರಿಸಿ ಯಾವ ಕಾರ್ಯವನ್ನು ಆರಂಭಿಸುವನೋ ಅವನ ಆ ಎಲ್ಲ ಕಾರ್ಯವು ನನ್ನ ಅನುಗ್ರಹ ವಿಶೇಷದಿಂದ ಸಿದ್ಧಿಯನ್ನು ಹೊಂದಲಿ.

೨೩. ಅನಂತರದಲ್ಲಿ ಪ್ರಪಂಚಮಾತೆಯೂ, ಪರಮಶಿವನ ಪ್ರಿಯೆಯೂ ಆದ ಭವಾನೀದೇವಿಯು ವತ್ಸನಾದ ರಾಮನೆ! ನಿನ್ನಲ್ಲಿ ಪ್ರಸನ್ನಳಾದ ನಾನು ನಿನಗೆ ಯಾವ ವರವನ್ನು ಕೊಡಲಿ ಎಂದು ಕೇಳಿದಳು.

ತಂ ಪ್ರಬ್ರೂಹಿ ಮಹಾಭಾಗ ಭಯಂ ತ್ಯಕ್ತ್ವಾ ಸುದೂರತಃ ।

ರಾಮ ಉವಾಚ :—

ಜನ್ಮಾಂತರಸಹಸ್ರೇಷು ಯೇಷು ಯೇಷು ವ್ರಜಾಮ್ಯಹಮ್ ॥ ೨೪ ॥

ಕೃಷ್ಣಯೋ ರ್ಭವಯೋರ್ಭಕ್ತೋ ಭವಿಷ್ಯಾಮೀತಿ ದೇಹಿ ಮೇ ।
ಅಭೇದೇನ ಚ ಪಶ್ಯಾಮಿ ಕೃಷ್ಣೌ ಚಾಪಿ ಭವೌ ತಥಾ ॥ ೨೫ ॥

ಪಾರ್ವತ್ಯುವಾಚ :—

ಏವಮಸ್ತು ಮಹಾಭಾಗ ಭಕ್ತೋಽಸಿ ಭವಕೃಷ್ಣಯೋಃ ।
ಚಿರಂಜೀವೀ ಭವಾಶು ತ್ವಂ ಪ್ರಸಾದಾನ್ಮಮ ಸುವ್ರತ ॥ ೨೬ ॥

ಅಥೋವಾಚ ಧರಾಧೀಶಃ ಪ್ರಸನ್ನಸ್ತಮುಮಾಪತಿಃ ।
ಪ್ರಣತಂ ಭಾರ್ಗವೇಂದ್ರಂ ತಂ ವರಾರ್ಹಂ ಜಗದೀಶ್ವರಃ ॥ ೨೭ ॥

ಶಿವ ಉವಾಚ :—

ರಾಮ ಭಕ್ತೋಽಸಿ ಮೇ ವತ್ಸ ಯಸ್ತೇ ದತ್ತೋ ವರೋ ಮಯಾ ।
ಸ ಭವಿಷ್ಯತಿ ಕಾರ್ತ್ಸ್ನ್ಯೇನ ಸತ್ಯಮುಕ್ತಂ ನ ಚಾನ್ಯಥಾ ॥ ೨೮ ॥

---

೨೪-೨೫. ಮಹಾ ಭಾಗ್ಯಶಾಲಿಯಾದ ರಾಮನೇ! ಭಯವನ್ನು ದೂರವಾಗಿ ತ್ಯಜಿಸಿ ನಿನಗೆ ಇಷ್ಟವಾದ ವರವನ್ನು ಹೇಳು. ಇದನ್ನು ಕೇಳಿ ರಾಮನು ಈ ರೀತಿಯಾಗಿ ಹೇಳಿದನು :–ನಾನು ಮುಂದೆ ಯಾವ ಯಾವ ಸಾವಿರಾರು ಜನ್ಮಗಳನ್ನು ಹೊಂದುವೆನೋ ಅಲ್ಲೆಲ್ಲ ನಿಮ್ಮಲ್ಲಿ ಅಚಂಚಲವಾದ ಭಕ್ತಿಯನ್ನು ಹೊಂದಿರುವಂತೆ ಅನುಗ್ರಹಿಸಬೇಕು.

೨೬. ಪಾರ್ವತಿಯು ಇಂತೆಂದಳು :—ಮಹಾಮಹಿಮನೆ! ಹಾಗೆಯೆ ಆಗಲಿ ನೀನು ಶಿವ ಮತ್ತು ಕೃಷ್ಣರಿಬ್ಬರಲ್ಲಿಯೂ ಭಕ್ತನಾಗಿರುತ್ತಿ. ಉತ್ತಮ ವ್ರತಾನುಷ್ಠಾನ ಶೀಲನೆ! ನನ್ನ ಅನುಗ್ರಹದಿಂದ ನೀನು ಬೇಗ ಚಿರಂಜೀವಿಯಾಗಿ ಬಾಳು.

೨೭. ಅನಂತರದಲ್ಲಿ ಕೈಲಾಸಗಿರಿಗೆ ಅಧಿಪತಿಯೂ ಜಗತ್ತಿಗೆಲ್ಲ ಪ್ರಭುವೂ ಮತ್ತು ಪಾರ್ವತೀವಲ್ಲಭನೂ ಆದ ಶಿವನು ಪ್ರಸನ್ನನಾಗಿ ನಮಸ್ಕರಿಸಿರುವ ಮತ್ತು ವರದಾನಕ್ಕೆ ಅರ್ಹನಾದ ಭಾರ್ಗವ ರಾಮನನ್ನು ಕುರಿತು ಹೇಳಿದನು.

೨೮. ಶಿವನು ಈ ರೀತಿಯಾಗಿ ಹೇಳಿದನು :—ವತ್ಸಲನಾದ ರಾಮನೆ! ನೀನು ನನ್ನ ಪರಮಭಕ್ತನಾಗಿರುತ್ತೀ. ನನ್ನಿಂದ ನಿನಗೆ ಯಾವ ವರವು ಕೊಡಲ್ಪಟ್ಟಿರುವುದೊ ಅದು ಸಮಗ್ರವಾಗಿ ಲಭಿಸುವುದು. ನನ್ನ ವಚನವು ಸತ್ಯವಾಗಿರುವುದೇ ಹೊರತು ಎಂದಿಗೂ ವಿಪರೀತವಾಗುವುದಿಲ್ಲ.

ಅದ್ಯಪ್ರಭೃತಿ ಲೋಽಕೇಽಸ್ಮಿನ್ ಭವತೋ ಬಲವತ್ತರಃ ।
ನ ಕೋಽಪಿ ಭವತಾದ್ವತ್ಸ ತೇಜಸ್ವೀ ಚ ಭವತ್ಪರಃ ॥ ೨೯ ॥

ವಸಿಷ್ಠ ಉವಾಚ :—
ಅಥ ಕೃಷ್ಣೋಽಪ್ಯನುಜ್ಞಾಪ್ಯ ಶಿವಂ ಚ ನಗನಂದಿನೀಮ್ ।
ಗೋಲೋಕಂ ಪ್ರಯಯೌ ಯುಕ್ತಃ ಶ್ರೀದಾಮ್ನಾ ಚಾಪಿ ರಾಧಯಾ
॥ ೩೦ ॥

ಅಥ ರಾಮೋಽಪಿ ಧರ್ಮಾತ್ಮಾ ಭವಾನೀಂ ಚ ಭವಂ ತಥಾ ।
ಸಂಪೂಜ್ಯ ಚಾಭಿವಾದ್ಯಾಥ ಪ್ರದಕ್ಷಿಣಮುಪಾಕ್ರಮೀತ್ ॥ ೩೧ ॥

ಗಣೇಶಂ ಕಾರ್ತಿಕೇಯಂ ಚ ನತ್ವಾಪೃಚ್ಛ್ಯ ಚ ಭೂಪತೇ ।
ಅಕೃತವ್ರಣಸಂಯುಕ್ತೋ ನಿಶ್ಚಕ್ರಾಮ ಗೃಹಾಂತರಾತ್ ॥ ೩೨ ॥

---

೨೯. ಈ ದಿನದ ಮೊದಲುಗೊಂಡು ಈ ಸಮಸ್ತ ಲೋಕದಲ್ಲಿ ನಿನಗಿಂತಲೂ ಬಲಿಷ್ಠನಾಗಿ ಮತ್ತೊಬ್ಬನು ಇರುವುದಿಲ್ಲ. ವತ್ಸನೆ! ಮತ್ತು ನಿನ್ನನ್ನು ಮೀರಿಸುವಂತಹ ತೇಜಸ್ವಿ ಪುರುಷನು ಸಂಭವಿಸುವುದಿಲ್ಲ.

೩೦. ವಸಿಷ್ಠಮುನಿಯು ಇಂತೆಂದನು:—ಅನಂತರದಲ್ಲಿ ಶ್ರೀ ಕೃಷ್ಣನು ಶಿವನನ್ನೂ ಹಿಮಾಲಯ ಪುತ್ರಿಯಾದ ಪಾರ್ವತಿಯನ್ನೂ ಕೇಳಿಕೊಂಡು ಶ್ರೀದಾಮ ಮತ್ತು ರಾಧೆಯರಿಂದ ಸಹಿತನಾಗಿ ಗೋಕುಲಕ್ಕೆ ಪ್ರಯಾಣಮಾಡಿದನು.

೩೧. ತರುವಾಯ ಧರ್ಮಾತ್ಮನಾದ ಪರಶುರಾಮನು ಶಿವನನ್ನೂ ಭವಾನಿದೇವಿಯನ್ನೂ ಪುರಸ್ಕರಿಸಿ ನಮಸ್ಕಾರಮಾಡಿ ಹಾಗೆ ಪ್ರದಕ್ಷಿಣಾವೃತ್ತಿಯನ್ನು ಮಾಡಲು ಉಪಕ್ರಮಿಸಿದನು.

೩೨. ಭೂಮಿಪತಿಯೆ! ಗಣೇಶನನ್ನೂ ಕುಮಾರಸ್ವಾಮಿಯನ್ನೂ ವಂದಿಸಿ ಅವರಿಂದ ಅನುಜ್ಞೆಯನ್ನು ಪಡೆದು ತನ್ನ ಮಿತ್ರನಾದ ಅಕೃತವ್ರಣನಿಂದ ಕೂಡಿದವನಾಗಿ ಆ ಗೃಹದ ಮಧ್ಯದಿಂದ ಹೊರಟನು.

**ನಿಷ್ಕ್ರಮ್ಯಮಾಣೋ ರಾಮಸ್ತು ನಂದೀಶ್ವರಮುಖೈರ್ಗಣೈಃ ।**
**ನಮಸ್ಕೃತೋ ಯಯೌ ರಾಜನ್ ಸ್ವಗೃಹಂ ಪರಯಾ ಮುದಾ॥ ೩೩॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ತ್ರಿಚತ್ವಾರಿಂಶತ್ತಮೋಽಧ್ಯಾಯಃ.**

---

೩೩. ರಾಜನೆ! ಅಲ್ಲಿಂದ ಹೊರಡುತ್ತಲಿದ್ದ ರಾಮನು ನಂದಿಕೇಶ್ವರನು ಮೊದಲಾದ ಪ್ರಮಥಗಣಗಳಿಂದ ನಮಸ್ಕರಿಸಲ್ಪಟ್ಟವನಾಗಿ ಪರಮಾನಂದ ಭರಿತನಾಗಿ ಸ್ವಗೃಹವನ್ನು ಕುರಿತು ಪಯಣಬೆಳಸಿದನು.

ಬ್ರಹ್ಮಾಂಡ ಪುರಾಣದಲ್ಲಿ ಉತ್ತರಾರ್ಧದಲ್ಲಿ ನಲವತ್ತಮೂರನೆಯ ಅಧ್ಯಾಯವು ಸಮಾಪ್ತವು.

# ಚತುಶ್ಚತ್ವಾರಿಂಶತ್ತಮೋಽಧ್ಯಾಯಃ

**ವಸಿಷ್ಠ ಉವಾಚ :—**

**ರಾಜನ್ನೇವಂ ಭೃಗುರ್ವಿದ್ವಾನ್ ಪಶ್ಯನ್ ಜನಪದಾನ್ ಬಹೂನ್ ।**
**ಸಮಾಜಗಾಮ ಧರ್ಮಾತ್ಮಾ ಕೃತವ್ರಣಸಮನ್ವಿತಃ ॥ ೧ ॥**

**ನಿಲಿಲ್ಯುಃ ಕ್ಷತ್ರಿಯಾಃ ಸರ್ವೇ ಯತ್ರ ತತ್ರ ನಿರೀಕ್ಷ್ಯ ತಮ್ ।**
**ವ್ರಜಂತಂ ಭಾರ್ಗವಂ ಮಾರ್ಗೇ ಪ್ರಾಣರಕ್ಷಣತತ್ಪರಾಃ ॥ ೨ ॥**

**ಅಥಾಸಸಾದ ರಾಜೇಂದ್ರ ರಾಮಃ ಸ್ವಪಿತುರಾಶ್ರಮಮ್ ।**
**ಶಾಂತಸತ್ತ್ವಸಮಾಕೀರ್ಣಂ ವೇದಧ್ವನಿನಿನಾದಿತಮ್ ॥ ೩ ॥**

**ಯತ್ರ ಸಿಂಹಾ ಮೃಗಾ ಗಾವೋ ನಾಗಮಾರ್ಜಾರಮೂಷಕಾಃ ।**
**ಸಮಂ ಚರಂತಿ ಸಂಹೃಷ್ಟಾ ಭಯಂ ತ್ಯಕ್ತ್ವಾ ಸುದೂರತಃ ॥ ೪ ॥**

---

೧. ವಸಿಷ್ಠಮುನಿಯು ಇಂತೆಂದನು :—ರಾಜನೆ! ಧರ್ಮಾತ್ಮನೂ ಜ್ಞಾನಿಯೂ ಆದ ಭಾರ್ಗವ ರಾಮನು ಅಕೃತವ್ರಣ ಶಿಷ್ಯಸಮೇತನಾಗಿ ಈ ರೀತಿಯಾಗಿ ಅನೇಕ ದೇಶಗಳನ್ನು ನೋಡುತ್ತ ತನ್ನ ಆಶ್ರಮಕ್ಕೆ ಬಂದನು.

೨. ಮಾರ್ಗಮಧ್ಯದಲ್ಲಿ ನಡೆಯುತ್ತಲಿದ್ದ ಭಾರ್ಗವರಾಮನನ್ನು ಕಂಡಿರುವ ಎಲ್ಲ ಕ್ಷತ್ರಿಯರೂ ತಮ್ಮ ಪ್ರಾಣಗಳ ರಕ್ಷಣೆಯಲ್ಲಿ ತೊಡಗಿದವರಾಗಿ ಅಲ್ಲಲ್ಲಿಯೇ ಎದುರಾಗಿ ಬಾರದೇ ಅಡಗಿಕೊಂಡರು.

೩. ರಾಜೇಂದ್ರನೆ! ತರುವಾಯ ಶಾಂತಿಯಿಂದಿರುವ ಸಕಲ ಪ್ರಾಣಿಗಳಿಂದ ಕೂಡಿದ ಮತ್ತು ವೇದಭ್ಯಾಸ ಧ್ವನಿಯಿಂದ ಪೂರ್ಣವಾದ ತನ್ನ ಜನಕನ ಆಶ್ರಮವನ್ನು ಹೊಂದಿದನು.

೪. ಆ ಪವಿತ್ರಾಶ್ರಮದಲ್ಲಿ ಸಿಂಹ, ಜಿಂಕೆ, ಹಸು, ಆನೆ, ಬೆಕ್ಕು ಮತ್ತು ಇಲಿ ಮುಂತಾದ ಸಹಜ ವೈರವುಳ್ಳ ಪ್ರಾಣಿಜಾತಿಯೆಲ್ಲವು ಭಯವನ್ನು ದೂರಮಾಡಿ ಹರ್ಷದಿಂದ ಜೊತೆಯಲ್ಲಿ ಸಂಚರಿಸುತ್ತಿದ್ದಿತು.

ಯತ್ರ ಧೂಮಂ ಸಮೀಕ್ಷ್ಯೈವ ಹ್ಯಗ್ನಿಹೋತ್ರಸಮುದ್ಭವಮ್ ।
ಉನ್ನದಂತಿ ಮಯೂರಾಶ್ಚ ನೃತ್ಯಂತಿ ಚ ಮಹೀಪತೇ ॥ ೫ ॥

ಯತ್ರ ಸಾಯಂತನೇ ಕಾಲೇ ಸೂರ್ಯಸ್ಯಾಭಿಮುಖಂ ದ್ವಿಜೈಃ ।
ಜಲಾಂಜಲೀನ್ ಪ್ರಕ್ಷಿಪದ್ಭಿಃ ಕ್ರಿಯತೇ ಭೂರ್ಜಲಾವಿಲಾ ॥ ೬ ॥

ಯತ್ರಾಂತೇವಾಸಿಭಿರ್ನಿತ್ಯಂ ವೇದಾಃ ಶಾಸ್ತ್ರಾಣಿ ಸಂಹಿತಾಃ ।
ಅಭ್ಯಸ್ಯಂತೇ ಮುದಾ ಯುಕ್ತೈರ್ಬ್ರಹ್ಮಚರ್ಯವ್ರತೇ ಸ್ಥಿತೈಃ ॥ ೭ ॥

ಅಥ ರಾಮಃ ಪ್ರಸನ್ನಾತ್ಮಾ ಪಶ್ಯನ್ನಾಶ್ರಮಸಂಪದಮ್ ।
ಪ್ರವಿವೇಶ ಶನೈ ರಾಜನ್ನಕೃತವ್ರಣ ಸಂಯುತಃ ॥ ೮ ॥

ಜಯಶಬ್ದಂ ನಮಃಶಬ್ದಂ ಪ್ರೋಚ್ಚರದ್ಭಿರ್ದ್ವಿಜಾತ್ಮಜೈಃ ।
ದ್ವಿಜೈಶ್ಚ ಸತ್ಕೃತೋ ರಾಮಃ ಪರಂ ಹರ್ಷಮುಪಾಗತಃ ॥ ೯ ॥

---

೫. ಭೂಮಿಪತಿಯೆ! ಅಲ್ಲಿ ಅಗ್ನಿಹೋತ್ರಹೋಮಾಗ್ನಿಯಿಂದ ಹುಟ್ಟಿದ್ದ ಧೂಮರಾಶಿಯನ್ನು ಕಂಡು ಮೇಘಗಳೆಂಬ ಭ್ರಾಂತಿಯಿಂದ ನವಿಲುಗಳು ಕೇಕೆಹಾಕಿ ನರ್ತನವನ್ನು ಪ್ರಾರಂಭಿಸುತ್ತಿವೆ.

೬. ಮತ್ತು ಆಶ್ರಮದಲ್ಲಿ ಸಾಯಂಕಾಲದಲ್ಲಿ ದ್ವಿಜರಿಂದ ಸೂರ್ಯಮಂಡಲಕ್ಕೆ ಅಭಿಮುಖವಾಗಿ ಅರ್ಘ್ಯ ಪ್ರದಾನರೂಪವಾಗಿ ಜಲಾಂಜಲಿಯನ್ನು ಎಸೆದು ಆಶ್ರಮ ಭೂಮಿಯು ನೀರಿನಿಂದ ನೆನೆಸಲ್ಪಡುವುದು.

೭. ಆ ಆಶ್ರಮದಲ್ಲಿ ವಾಸಮಾಡುವ, ಬ್ರಹ್ಮಚರ್ಯ ವ್ರತವನ್ನು ಆಚರಿಸುವುದರಲ್ಲಿ ತತ್ಪರರಾದ ಶಿಷ್ಯಜನರಿಂದ ನಿತ್ಯವೂ ವೇದ, ಶಾಸ್ತ್ರ, ಸಂಹಿತೆ ಮುಂತಾದ ಗ್ರಂಥಗಳು ಅಧ್ಯಯನ ಮಾಡಲ್ಪಡುತ್ತವೆ.

೮. ರಾಜನೆ! ಅನಂತರದಲ್ಲಿ ಆ ಆಶ್ರಮದ ಭವ್ಯಸಂಪತ್ತನ್ನು ನೋಡುತ್ತ ಪ್ರಸನ್ನವಾದ ಅಂತಃಕರಣವುಳ್ಳವನಾಗಿ ಅಕೃತವ್ರಣನೊಡನೆ ಮೆಲ್ಲಗೆ ಆಶ್ರಮಕ್ಕೆ ಪ್ರವೇಶಮಾಡಿದನು.

೯. ಆಗ ಅಲ್ಲಿರುವ ದ್ವಿಜಪುತ್ರರಿಂದ ಜಯಕಾರ ಧ್ವನಿಯನ್ನೂ ನಮಃಶಬ್ದವನ್ನೂ ಉಚ್ಚರಿಸಿ ಪುರಸ್ಕರಿಸಲ್ಪಟ್ಟವನೂ ಮತ್ತು ದ್ವಿಜರಿಂದ ಸತ್ಕರಿಸಲ್ಪಟ್ಟವನೂ ಆದರಾಮನು ಪರಮಾನಂದವನ್ನು ಹೊಂದಿದನು.

ಆಶ್ರಮಾಭ್ಯಂತರೇ ತತ್ರ ಸಂಪ್ರವಿಶ್ಯ ನಿಜಂ ಗೃಹಮ್ ।
ದದರ್ಶ ಪಿತರಂ ರಾಮೋ ಜಮದಗ್ನಿಂ ತಪೋನಿಧಿಮ್ ॥ ೧೦ ॥

ಸಾಕ್ಷಾದ್ಭೃಗುಮಿವಾಸೀನಂ ನಿಗ್ರಹಾನುಗ್ರಹಕ್ಷಮಮ್ ।
ಪಪಾತ ಚರಣೋಪಾಂತೇ ಹೃಷ್ಟಾಂಗಾಲಿಂಗಿತಾವನಿಃ ॥ ೧೧ ॥

ರಾಮೋಽಹಂ ತವ ದಾಸೋಽಸ್ಮಿ ಪ್ರೋಚ್ಚರನ್ನಿತಿ ಭೂಪತೇ ।
ಜಗ್ರಾಹ ಚರಣೌ ಚಾಪಿ ವಿಧಿವತ್ ಸಜ್ಜನಾಗ್ರಣೀಃ ॥ ೧೨ ॥

ಅಥ ಮಾತುಶ್ಚ ಚರಣಾವಭಿವಾದ್ಯ ಕೃತಾಂಜಲಿಃ ।
ಉವಾಚ ಪ್ರಣತೋ ವಾಕ್ಯಂ ತಯೋಃ ಸಂಹರ್ಷಕಾರಣಮ್ ॥ ೧೩ ॥

ರಾಮ ಉವಾಚ :—

ಪಿತಸ್ತವ ಪ್ರಭಾವೇಣ ತಪಸೋಽತಿದುರಾಸದಃ ।
ಕಾರ್ತವೀರ್ಯೋ ಹತೋ ಯುದ್ಧೇ ಸಪುತ್ರಬಲವಾಹನಃ ॥ ೧೪ ॥

---

೧೦. ಆ ಆಶ್ರಮಶ್ರೇಣಿಯ ಅಂತರದಲ್ಲಿ ತನ್ನ ಮನೆಯನ್ನು ಪ್ರವೇಶಿಸಿ ಪರಶುರಾಮನು ತನ್ನ ಜನಕನೂ ಮಹಾತಪಸ್ವಿಯೂ ಆದ ಜಮದಗ್ನಿ ಮುನಿಯನ್ನು ಸಾಕ್ಷಾತ್ಕರಿಸಿದನು.

೧೧. ರಾಮನು ಪ್ರತ್ಯಕ್ಷವಾಗಿ ಭೃಗುಮುನಿಯಂತೆ ಕುಳಿತುಕೊಂಡಿರುವ, ನಿಗ್ರಹ–ಅನುಗ್ರಹಗಳಲ್ಲಿ ಸಮರ್ಥನಾದ ಜಮದಗ್ನಿ ಮುನಿಯನ್ನು ಕಂಡು ಹರ್ಷದಿಂದ ರೋಮಾಂಚಿತವಾದ ಶರೀರದಿಂದ ಭೂಮಿಯನ್ನು ಆಲಿಂಗಿಸುವಂತೆ ಮುನಿಯ ಚರಣಗಳನ್ನು ವಂದಿಸಿದನು.

೧೨. ಮಹಾರಾಜನೆ! ಸಾಧುಜನರಲ್ಲಿ ಅಗ್ರಗಣ್ಯನಾದ ರಾಮನು ಮುನಿ ಸನ್ನಿಧಿಯಲ್ಲಿ ನಾನು ನಿನ್ನ ದಾಸನಾದ ರಾಮನಾಗಿರುವೆನೆಂದು ಹೇಳುತ್ತ ಮುನಿಯ ಚರಣಗಳನ್ನು ಯಥಾವಿಧಿಯಾಗಿ ಗ್ರಹಿಸಿದನು.

೧೩. ತರುವಾಯ ತನ್ನ ಜನನಿಯ ಚರಣಗಳನ್ನು ವಂದಿಸಿ ಅಂಜಲಿಯನ್ನು ಕಟ್ಟಿಕೊಂಡು ನಮಸ್ಕಾರ ಮಾಡಿ ನಿಂತುಕೊಂಡಿರುವ ರಾಮನು ಅವರಿಗೆ ಆನಂದವನ್ನು ಉಂಟುಮಾಡುವ ವಚನವನ್ನು ಆಡಿದನು.

೧೪. ಪರಶುರಾಮನು ಹೀಗೆ ಹೇಳಿದನು :—ಜನಕನೆ! ನಿನ್ನ ತಪಸ್ಸಿನ ಅಪಾರಪ್ರಭಾವದಿಂದ ಎದುರಿಸಲು ಅಶಕ್ಯನಾದ ಕಾರ್ತವೀರ್ಯ ರಾಜನು ಪುತ್ರ ಬಲ–ವಾಹನದಿಂದ ಕೂಡಿ ಯುದ್ಧದಲ್ಲಿ ನನ್ನಿಂದ ಸಂಹರಿಸಲ್ಪಟ್ಟನು.

ಯಸ್ತ್ವೇಽಪರಾಧಂ ಕೃತವಾನ್ ದುಷ್ಟಮಂತ್ರಿಪ್ರಚೋದಿತಃ ।
ತಸ್ಯ ದಂಡೋ ಮಯಾ ದತ್ತಃ ಪ್ರಸಹ್ಯ ಮುನಿಪುಂಗವ ॥ ೧೫ ॥

ಭವಂತಂ ತು ನಮಸ್ಕೃತ್ಯ ಗತೋಽಹಂ ಬ್ರಹ್ಮಣೋಽಂತಿಕಮ್ ।
ತಂ ನಮಸ್ಕೃತ್ಯ ವಿಧಿವತ್ ಸ್ವಕಾರ್ಯಂ ಪ್ರತ್ಯವೇದಯಮ್ ॥ ೧೬ ॥

ಸ ಮಾಮುವಾಚ ಭಗವಾನ್ ಶ್ರುತ್ವಾ ವೃತ್ತಾಂತಮಾದಿತಃ ।
ವ್ರಜ ಸ್ವಕಾರ್ಯಸಿದ್ಧ್ಯರ್ಥಂ ಶಿವಲೋಕಂ ಸನಾತನಮ್ ॥ ೧೭ ॥

ಶ್ರುತ್ವಾಹಂ ತದ್ವಚಸ್ತಾತ ನಮಸ್ಕೃತ್ಯ ಪಿತಾಮಹಮ್ ।
ಗತವಾನ್ ಶಿವಲೋಕಂ ವೈ ಹರದರ್ಶನಕಾಂಕ್ಷಯಾ ॥ ೧೮ ॥

ಪ್ರವಿಶ್ಯ ತತ್ರ ಭಗವನ್ನುಮಯಾ ಸಹಿತಃ ಶಿವಃ ।
ನಮಸ್ಕೃತೋ ಮಯಾ ದೇವೋ ವಾಂಛಿತಾರ್ಥಪ್ರದಾಯಕಃ ॥ ೧೯ ॥

---

೧೫. ಮುನೀಂದ್ರನೆ! ದುಷ್ಟ ಮಂತ್ರಿಯ ವಚನದಿಂದ ಪ್ರೇರಿಸಲ್ಪಟ್ಟು ನಿನಗೆ ಅಪರಾಧವನ್ನು ಆಚರಿಸಿರುವ ಆ ಕಾರ್ತವೀರ್ಯ ರಾಜನಿಗೆ ಉಚಿತವಾದ ದಂಡವನ್ನು ನಾನು ಬಲಾತ್ಕರಿಸಿ ಕೊಟ್ಟಿರುವೆನು.

೧೬. ನಿನ್ನನ್ನು ನಮಸ್ಕರಿಸಿ ಇಲ್ಲಿಂದ ಹೊರಟುಹೋದ ನಾನು ಬ್ರಹ್ಮನ ಸನ್ನಿಧಿಯನ್ನು ಹೊಂದಿದೆನು. ಅಲ್ಲಿ ವಿಧಿವತ್ತಾಗಿ ಬ್ರಹ್ಮದೇವನನ್ನು ನಮಸ್ಕರಿಸಿ ನನ್ನ ಕಾರ್ಯವನ್ನು ವಿಜ್ಞಾಪಿಸಿಕೊಂಡೆನು.

೧೭. ಆಗ ಪೂಜ್ಯನಾದ ಬ್ರಹ್ಮದೇವನು ಆದಿಯಿಂದ ನನ್ನ ವೃತ್ತಾಂತವನ್ನು ಸಮಗ್ರವಾಗಿ ಕೇಳಿ "ನಿನ್ನ ಕಾರ್ಯವು ಸಿದ್ಧಿಸುವುದಕ್ಕೋಸ್ಕರ ಅನಾದಿಯಾದ ಶಿವಲೋಕವನ್ನು ಕುರಿತು ಹೋಗು" ಎಂದು ನನಗೆ ಹೇಳಿದನು.

೧೮. ಜನಕನೆ! ನಾನು ಆ ಬ್ರಹ್ಮದೇವನ ವಚನವನ್ನು ಕೇಳಿ ಬ್ರಹ್ಮದೇವನನ್ನು ನಮಸ್ಕಾರಮಾಡಿ ಶಂಕರನ ದರ್ಶನದ ಆಕಾಂಕ್ಷೆಯಿಂದ ಶಿವಲೋಕವನ್ನು ಕುರಿತು ಪ್ರಯಾಣಮಾಡಿದೆನು.

೧೯. ಭಗವಂತನೇ! ಅಲ್ಲಿಗೆ ಪ್ರವೇಶಮಾಡಿ ನನ್ನಿಂದ ಇಷ್ಟಾರ್ಥವನ್ನು ಅನುಗ್ರಹಿಸುವ ಪರಮಶಿವ ದೇವನು ಪಾರ್ವತಿ ಸಹಿತನಾಗಿ ನಮಸ್ಕರಿಸಲ್ಪಟ್ಟನು.

ತದಗ್ರೇ ನಿಖಿಲಃ ಸ್ವೀಯೋ ವೃತ್ತಾಂತೋ ವಿನಿವೇದಿತಃ ।
ಮಯಾ ಸಮಾಹಿತಧಿಯಾ ಸ ಸರ್ವಂ ಶ್ರುತವಾನಪಿ ॥ ೨೦ ॥

ಶ್ರುತ್ವಾ ವಿಚಾರ್ಯ ತತ್ ಸರ್ವಂ ದದೌ ಮಹ್ಯಂ ಕೃಪಾನ್ವಿತಃ ।
ತ್ರೈಲೋಕ್ಯವಿಜಯಂ ನಾಮ ಕವಚಂ ಸರ್ವಸಿದ್ಧಿದಮ್ ॥ ೨೧ ॥

ತಲ್ಲಬ್ಧ್ವಾ ತಂ ನಮಸ್ಕೃತ್ಯ ಪುಷ್ಕರಂ ಸಮುಪಾಗತಃ ।
ತತ್ರಾಹಂ ಸಾಧಯಿತ್ವಾ ತು ಕವಚಂ ಹೃಷ್ಟಮಾನಸಃ ॥ ೨೨ ॥

ಕಾರ್ತವೀರ್ಯಂ ನಿಹತ್ಯಾಜೌ ಶಿವಲೋಕಂ ಪುನರ್ಗತಃ ।
ತತ್ರ ತೌ ತು ಮಯಾ ದೃಷ್ಟೌ ದ್ವಾರೇ ಸ್ಕಂದವಿನಾಯಕೌ ॥ ೨೩ ॥

ತೌ ನಮಸ್ಕೃತ್ಯ ಧರ್ಮಜ್ಞಂ ಪ್ರವೇಷ್ಟುಂ ಚೋದ್ಯತೋಽಭವಮ್ ।
ಸ ಮಾಮವೇಕ್ಷ್ಯ ಗಣಪೋ ವಿಶಂತಂ ತ್ವರಯಾನ್ವಿತಮ್ ॥ ೨೪ ॥

---

೨೦. ಮತ್ತು ಅವನ ಮುಂದುಗಡೆಯಲ್ಲಿ ನನ್ನಿಂದ ನನ್ನ ನಿಖಿಲವೃತ್ತಾಂತವು ತಿಳಿಸಲ್ಪಟ್ಟಿತು. ಆಗ ಸ್ವಾಮಿಯು ಎಲ್ಲವನ್ನು ಸಮಾಧಾನ ಚಿತ್ತದಿಂದ ಕೇಳಿದನು.

೨೧. ಭಗವಂತನು ಅದೆಲ್ಲವನ್ನು ಕೇಳಿ ಮನದಲ್ಲಿ ವಿಚಾರಮಾಡಿ ಕರುಣೆಯಿಂದ ಕೂಡಿ ಸಕಲ ಇಷ್ಟಸಿದ್ಧಿಯನ್ನು ಕೊಡುವ ತ್ರೈಲೋಕ್ಯ ವಿಜಯವೆಂಬ ಕವಚವನ್ನು ನನಗೆ ಉಪದೇಶಿಸಿದನು.

೨೨. ನಾನು ಆ ಕವಚವನ್ನು ಹೊಂದಿ ಸ್ವಾಮಿಯನ್ನು ನಮಸ್ಕರಿಸಿ ಪುಷ್ಕರ ಕ್ಷೇತ್ರವನ್ನು ಹೊಂದಿ ಅಲ್ಲಿ ಆ ಕವಚದ ಸಿದ್ಧಿಯನ್ನು ಹೊಂದಿ ಸಂತುಷ್ಟವಾದ ಚಿತ್ತವುಳ್ಳವನಾದೆನು.

೨೩. ಆಗ ರಣದಲ್ಲಿ ಕಾರ್ತವೀರ್ಯ ರಾಜನನ್ನು ಕೊಂದು ಮತ್ತೆ ಶಿವಲೋಕಕ್ಕೆ ಹೋದೆನು. ಅಲ್ಲಿ ಶಿವಭವನದ ದ್ವಾರದಲ್ಲಿ ಕುಮಾರಸ್ವಾಮಿ, ಮತ್ತು ಗಣೇಶರು ನನ್ನಿಂದ ನೋಡಲ್ಪಟ್ಟರು.

೨೪. ಧರ್ಮಜ್ಞನೆ! ಆ ಸ್ಕಂದ-ಗಣೇಶ್ವರರನ್ನು ನಮಸ್ಕರಿಸಿ ಮುಂದೆ ಭವನದ ಒಳಗೆ ಪ್ರವೇಶಮಾಡಲು ಉದ್ಯುಕ್ತನಾದೆನು. ಆಗ ಗಣೇಶನು ತ್ವರೆಯಿಂದ ಕೂಡಿ ಪ್ರವೇಶಮಾಡುತ್ತಲಿದ್ದ ನನ್ನನ್ನು ನೋಡಿದನು.

ವಾರಯಾಮಾಸ ಸಹಸಾ ನಾದ್ಯಾವಸರ ಇತ್ಯಥ ।
ಮಮ ತೇನ ಪಿತಸ್ತತ್ರ ವಾಗ್ಯುದ್ಧಂ ಹಸ್ತಕರ್ಷಣವತ್ ॥ ೨೫ ॥

ಸಂಜಾತಪರಶುಕ್ಷೇಪಸಮಯೋಽಭೂದ್ಭೃಗುನಂದನ ।
ಸ ತಜ್ಜ್ಞಾತ್ವಾ ಸಮುದ್ಗೃಹ್ಯ ಮಾಮಧಶ್ಚೋರ್ಧ್ವಮೇವ ಚ ॥ ೨೬ ॥

ಕರೇಣ ಭ್ರಾಮಯಾಮಾಸ ಪುನಶ್ಚಾನೀತವಾಂಸ್ತತಃ ।
ತಂ ದೃಷ್ಟ್ವಾತಿಕ್ರುಧಾ ಕ್ಷಿಪ್ತಃ ಕುಠಾರೋ ಹಿ ಮಯಾ ತತಃ ॥ ೨೭ ॥

ದಂತೋ ನಿಪತಿತಸ್ತಸ್ಯ ತತೋ ದೇವ ಉಪಾಗತಃ ।
ಪಾರ್ವತೀ ತತ್ರ ರುಷ್ಟಾಭೂತ್ ತದಾ ಕೃಷ್ಣಃ ಸಮಾಗತಃ ॥ ೨೮ ॥

ರಾಧಯಾ ಸಹಿತಸ್ತೇನ ಸಾನುನೀತಾ ವರಂ ದದೌ ।
ಮಹ್ಯಂ ಕೃಷ್ಣೋ ಜಗಾಮಾಥ ತೇನ ಮೈತ್ರೀಂ ವಿಧಾಯ ಚ ॥ ೨೯ ॥

---

೨೫. ತರುವಾಯ ಈಗ ಅವಕಾಶವಿಲ್ಲವೆಂದು ಹೇಳಿ ಗಣೇಶನು ಬೇಗ ನನ್ನನ್ನು ತಡೆದನು. ತಂದೆಯೆ! ಆಗ ಕೈ ಕೈಯನ್ನು ಸೆಳೆದು ಅವನ ಸಂಗಡ ನನಗೆ ವಾಗ್ಯುದ್ಧವು ಜರುಗಿತು.

೨೬. ಭೃಗು ಪುತ್ರನೆ! ಆಗ ನನ್ನ ಪರಶು ಆಯುಧದ ಪ್ರಯೋಗ ಸಮಯವು ಒದಗಿರುವುದೆಂದು ಭಾವಿಸಿ ಆ ಪರಶು ಆಯುಧದ ಪ್ರಯೋಗಕ್ಕೆ ಪ್ರಸಂಗವನ್ನು ಮಾಡಿದೆನು. ಗಣೇಶನು ಅದನ್ನು ತಿಳಿದು ನನ್ನನ್ನು ಎತ್ತಿ ಮೇಲ್ಭಾಗ ಕೆಳಭಾಗಗಳಲ್ಲಿ ಸುತ್ತಿಸಿದನು.

೨೭. ಹಾಗೆಯೇ ಸೊಂಡಲಿನಿಂದ ಮತ್ತೆ ಮತ್ತೆ ಸುತ್ತಿಸಿ ಕೆಳಗೆ ತಂದಿರಿಸಿದನು. ಬಳಿಕ ಹಾಗೆ ಅವಮಾನವನ್ನು ಮಾಡಿರುವ ಆ ಗಣೇಶನನ್ನು ನೋಡಿ ಅತಿ ಕೋಪಗೊಂಡ ನನ್ನಿಂದ ಅವನ ಮೇಲೆ ಕುಠಾರವು ಪ್ರಯೋಗಿಸಲ್ಪಟ್ಟಿತು.

೨೮. ಆ ಕುಠಾರದ ಘಾತದಿಂದ ಗಣೇಶ್ವರನ ಒಂದು ದಂತವು ಬಿದ್ದು ಹೋಯಿತು. ಆಗ ಅಲ್ಲಿಗೆ ಪರಮೇಶ್ವರ ದೇವನು ಬಂದನು. ಮತ್ತು ಅಲ್ಲಿ ಪಾರ್ವತೀ ದೇವಿಯು ಅತ್ಯಂತ ಕುಪಿತಳಾಗಿದ್ದಳು. ಆಗ ಶ್ರೀ ಕೃಷ್ಣನು ಅಲ್ಲಿಗೆ ಬಂದು ಸೇರಿದನು.

೨೯. ಶ್ರೀಕೃಷ್ಣನ ಸಂಗಡ ರಾಧೆಯೂ ಬಂದಿದ್ದಳು. ರಾಧಾಸಹಿತನಾದ ಕೃಷ್ಣನಿಂದ ಸಮಾಧಾನಗೊಳಿಸಲ್ಪಟ್ಟ ಆ ಪಾರ್ವತಿಯು ನನಗೆ ವರವನ್ನು ಕೊಟ್ಟಳು. ಆಗ ಗಣೇಶನ ಸಂಗಡ ಮೈತ್ರಿಯನ್ನು ಕಲ್ಪಿಸಿ ಶ್ರೀ ಕೃಷ್ಣನು ಹೊರಟುಹೋದನು.

ತತಃ ಪ್ರಣಮ್ಯ ದೇವೇಶೌ ಪಾರ್ವತೀಪರಮೇಶ್ವರೌ ।
ಆಗತಸ್ತ್ವವ ಸಾನ್ನಿಧ್ಯಮಕೃತವ್ರಣಸಂಯುತಃ ॥ ೩೦ ॥

ವಸಿಷ್ಠ ಉವಾಚ :—

ಇತ್ಯುಕ್ತ್ವಾ ಭಾರ್ಗವೋ ರಾಮೋ ವಿರರಾಮ ಚ ಭೂಪತೇ ।
ಜಮದಗ್ನಿರುವಾಚೇದಂ ರಾಮಂ ಶತ್ರುನಿಬರ್ಹಣಮ್ ॥ ೩೧ ॥

ಜಮದಗ್ನಿರುವಾಚ :—

ಕ್ಷತ್ರಹತ್ಯಾಭಿಭೂತಸ್ತ್ವಂ ತಾವದ್ದೋಷೋಪಶಾಂತಯೇ ।
ಪ್ರಾಯಶ್ಚಿತ್ತಂ ತತಸ್ತಾವದ್ಯಥಾವತ್ಕರ್ತುಮರ್ಹಸಿ ॥ ೩೨ ॥

ಇತ್ಯುಕ್ತಃ ಪ್ರಾಹ ಪಿತರಂ ರಾಮೋ ಮತಿಮತಾಂ ವರಃ ।
ಪ್ರಾಯಶ್ಚಿತ್ತಂ ತು ತದ್ಯೋಗ್ಯಂ ತ್ವಂ ಮೇ ನಿರ್ದೇಷ್ಟುಮರ್ಹಸಿ ॥ ೩೩ ॥

ಜಮದಗ್ನಿರುವಾಚ :—

ವ್ರತೈಶ್ಚ ನಿಯಮೈಶ್ಚೈವ ಕರ್ಷಯನ್ ದೇಹಮಾತ್ಮನಃ ।
ಶಾಕಮೂಲಫಲಾಹಾರೋ ದ್ವಾದಶಾಬ್ದಂ ತಪಶ್ಚರ ॥ ೩೪ ॥

---

೩೦. ಆ ತರುವಾಯ ದೇವತಾಧೀಶ್ವರರಾದ ಪಾರ್ವತೀ ಪರಮೇಶ್ವರರನ್ನು ವಂದಿಸಿ ಈ ಅಕೃತವ್ರಣನೆಂಬ ಶಿಷ್ಯನಿಂದ ಸಹಿತನಾಗಿ ನಿನ್ನ ಸನ್ನಿಧಿಗೆ ಬಂದಿರುವೆನು.

೩೧. ವಸಿಷ್ಠ ಮುನಿಯು ಇಂತೆಂದನು :—ರಾಜನೆ! ಭೃಗುಮುನಿವಂಶ ಸಂಭೂತನಾದ ಪರಶುರಾಮನು ಈ ರೀತಿಯಾಗಿ ಹೇಳಿ ಸುಮ್ಮನಾದನು. ಆಗ ಜಮದಗ್ನಿ ಮುನಿಯು ಶತ್ರುಗಳನ್ನು ಜಯಿಸಿರುವ ರಾಮನನ್ನು ಕುರಿತು ಈ ವಚನವನ್ನು ಹೇಳಿದನು.

೩೨. ಜಮದಗ್ನಿ ಮುನಿಯು ಈ ರೀತಿಯಾಗಿ ಹೇಳಿದನು :—ರಾಮನೆ! ನೀನು ಸಮಸ್ತ ಕ್ಷತ್ರಿಯರನ್ನು ಸಂಹರಿಸಿ ಕ್ಷತ್ರಹತ್ಯಾ ಪಾತಕದಿಂದ ಕಳಂಕಿಯಾಗಿದ್ದೀ. ಆದ್ದರಿಂದ ಆ ದೋಷದ ಶಾಂತಿಗೆ ಯಥಾವಿಧಿಯಾಗಿ ಪ್ರಾಯಶ್ಚಿತ್ತವನ್ನು ಈಗ ಮಾಡಲು ಅರ್ಹನಾಗಿದ್ದೀಯೆ.

೩೩. ಹೀಗೆಂದು ತಂದೆಯಿಂದ ಬೋಧಿಸಲ್ಪಟ್ಟ ಮೇಧಾವಿಗಳಲ್ಲಿ ಅಗ್ರಗಣ್ಯನಾದ ರಾಮನು "ಈ ಕ್ಷತ್ರಹತ್ಯಾಪಾತಕಕ್ಕೆ ಯೋಗ್ಯವಾದ ಪ್ರಾಯಶ್ಚಿತ್ತವನ್ನು ನಿರ್ದೇಶಿಸಲು ನೀನು ಅರ್ಹನಾಗಿರುತ್ತಿ" ಎಂದು ತಂದೆಯನ್ನು ಕೇಳಿದನು.

೩೪. ಆಗ ಜಮದಗ್ನಿಯು ಇಂತೆಂದನು :–ಶಾಕ-ಮೂಲ-ಫಲಗಳನ್ನು ಮಾತ್ರ ಆಹಾರವಾಗಿ ಭುಂಜಿಸಿ ಕಷ್ಟಸಾಧ್ಯವಾದ ಅನೇಕ ವ್ರತ-ನಿಯಮಗಳ ಅನುಷ್ಠಾನದಿಂದ ಶರೀರಕ್ಕೆ ಕ್ಲೇಶವನ್ನು ಉಂಟುಮಾಡುತ್ತ ಹನ್ನೆರಡು ವರ್ಷಗಳವರೆಗೆ ತಪವನ್ನು ಆಚರಿಸು.

ವಸಿಷ್ಠ ಉವಾಚ :—

ಇತ್ಯುಕ್ತಃ ಪ್ರಣಿಪತ್ಯೈನಂ ಮಾತರಂ ಚ ಭೃಗೂದ್ವಹಃ ।
ಪ್ರಯಯೌ ತಪಸೇ ರಾಜನ್ ಅಕೃತವ್ರಣಸಂಯುತಃ ॥ ೩೫ ॥

ಸ ಗತ್ವಾ ಪರ್ವತವರಂ ಮಹೇಂದ್ರಮರಿಕರ್ಷಣಃ ।
ಕೃತ್ವಾಶ್ರಮಪದಂ ತಸ್ಮಿಂಸ್ತಪಸ್ತೇಪೇ ಸುದುಶ್ಚರಮ್ ॥ ೩೬ ॥

ವ್ರತೈಸ್ತಪೋಭಿರ್ನಿಯಮೈರ್ದೇವತಾರಾಧನೈರಪಿ ।
ನಿನ್ಯೇ ವರ್ಷಾಣಿ ಕತಿಚಿದ್ರಾಮಸ್ತಸ್ಮಿನ್ ಮಹಾಮನಾಃ ॥ ೩೭ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ
ಚತುಶ್ಚತ್ವಾರಿಂಶತ್ತಮೋಽಧ್ಯಾಯಃ

---

೩೫. ವಸಿಷ್ಠಮುನಿಯು ಈ ರೀತಿಯಾಗಿ ಮುಂದುವರಿಸಿ ಹೇಳಿದನು :— ರಾಜನೆ! ಈ ರೀತಿಯಾಗಿ ತಂದೆಯಿಂದ ಬೋಧಿಸಲ್ಪಟ್ಟ ಭೃಗುವಂಶ ತಿಲಕನಾದ ರಾಮನು ತಂದೆ-ತಾಯಿಗಳನ್ನು ವಂದಿಸಿ ಅಕೃತವ್ರಣನಿಂದ ಸಹಿತನಾಗಿ ತಪಸ್ಸಿಗೋಸ್ಕರ ಪರ್ವತಕ್ಕೆ ಪ್ರಯಾಣಮಾಡಿದನು.

೩೬. ಶತ್ರುಂಜಯನಾದ ಆ ರಾಮನು ಪರ್ವತೋತ್ತಮವಾದ ಮಹೇಂದ್ರಾಚಲಕ್ಕೆ ಹೋಗಿ ಅಲ್ಲಿ ಒಂದು ಆಶ್ರಮಸ್ಥಾನವನ್ನು ಕಲ್ಪಿಸಿಕೊಂಡು ಅಲ್ಲಿ ಇತರರಿಗೆ ಅಸಾಧ್ಯವಾದ ತೀವ್ರ ತಪಶ್ಚರ್ಯೆಯನ್ನು ಕೈಗೊಂಡನು.

೩೭. ಆ ಆಶ್ರಮದಲ್ಲಿ ಹೀಗೆಯೇ ವಾಸಮಾಡುತ್ತಿದ್ದ ಮಹಾಮನಸ್ವಿಯಾದ ರಾಮನು ವ್ರತ, ತಪಸ್ಸು, ನಿಯಮ, ಮತ್ತು ದೇವತಾರಾಧನೆ ಇವುಗಳನ್ನು ಆಚರಿಸುತ್ತ ಕೆಲವು ವರ್ಷಗಳನ್ನು ಕಳೆದನು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ನಲವತ್ತನಾಲ್ಕನೆಯ
ಅಧ್ಯಾಯವು ಮುಗಿದುದು.

---

# ಪಂಚಚತ್ವಾರಿಂಶತ್ತಮೋಽಧ್ಯಾಯಃ

ವಸಿಷ್ಠ ಉವಾಚ :—

ತತಃ ಕದಾಚಿದ್ವಿಪಿನೇ ಚತುರಂಗಬಲಾನ್ವಿತಃ ।
ಮೃಗಯಾಮಗಮಚ್ಛೂರಃ ಶೂರಸೇನಾದಿಭಿಃ ಸಹ ॥ ೧ ॥

ತೇ ಪ್ರವಿಶ್ಯ ಮಹಾರಣ್ಯಂ ಹತ್ವಾ ಬಹುವಿಧಾನ್ ಮೃಗಾನ್ ।
ಜಗ್ಮುಸ್ತೃಷಾರ್ತಾ ಮಧ್ಯಾಹ್ನೇ ಸರಿತಂ ನರ್ಮದಾಮನು ॥ ೨ ॥

ತತ್ರ ಸ್ನಾತ್ವಾ ಚ ಪೀತ್ವಾ ಚ ವಾರಿ ನದ್ಯಾ ಗತಶ್ರಮಾಃ ।
ಗಚ್ಛಂತೋ ದದೃಶುರ್ಮಾರ್ಗೇ ಜಮದಗ್ನೇರಥಾಶ್ರಮಮ್ । ॥ ೩ ॥

ದೃಷ್ಟ್ವಾಶ್ರಮಪದಂ ರಮ್ಯಂ ಮುನೀನಾಗಚ್ಛತಃ ಪಥಿ ।
ಕಸ್ಯೇದಮಿತಿ ಪಪ್ರಚ್ಛುರ್ಭಾವಿಕರ್ಮಪ್ರಚೋದಿತಾಃ ॥ ೪ ॥

---

೧. ವಸಿಷ್ಠಮುನಿಯು ಈ ರೀತಿಯಾಗಿ ಹೇಳಿದನು :—ತರುವಾಯ ಒಂದು ಸಮಯದಲ್ಲಿ ಶೂರರಾಜನು ಚತುರಂಗ ಬಲದಿಂದ ಸಹಿತನಾಗಿ ಶೂರಸೇನ ಮುಂತಾದವರ ಸಂಗಡ ಅರಣ್ಯದಲ್ಲಿ ಮೃಗಬೇಟೆಯನ್ನು ಆಡಿದನು.

೨. ಅವರು ಮಹತ್ತಾದ ವನವನ್ನು ಪ್ರವೇಶಮಾಡಿ ಅನೇಕ ವಿಧವಾದ ಮೃಗಗಳನ್ನು ಕೊಂದು ಮಧ್ಯಾಹ್ನದ ಸಮಯದಲ್ಲಿ ನೀರಡಿಕೆಯಿಂದ ಬಳಲಿದವರಾಗಿ ನರ್ಮದಾ ನದಿಯ ತೀರಕ್ಕೆ ಬಂದರು.

೩. ಅವರು ನರ್ಮದಾ ನದಿಯ ನೀರಿನಲ್ಲಿ ಸ್ನಾನ-ಪಾನಗಳನ್ನು ಮಾಡಿ ಶ್ರಮವನ್ನು ಕಳೆದುಕೊಂಡವರಾಗಿ ಮುಂದೆ ಪ್ರಯಾಣ ಮಾಡುತ್ತ ಮಾರ್ಗದಲ್ಲಿ ಜಮದಗ್ನಿ ಮುನಿಯ ಆಶ್ರಮವನ್ನು ಕಂಡನು.

೪. ಆಗ ಅವರೆಲ್ಲರು ರಮ್ಯವಾದ ಆ ಆಶ್ರಮ ಭೂಮಿಯನ್ನು ನೋಡಿ ದಾರಿಯಲ್ಲಿ ಎದುರಾಗಿ ಬರುತ್ತಲಿದ್ದ ಅನೇಕ ಮುನಿಗಳನ್ನು ಕಂಡು ಅವಶ್ಯ ಭಾವಿಯಾದ ಕರ್ಮಬಲದಿಂದ ಪ್ರೇರೇಪಿಸಲ್ಪಟ್ಟವರಾಗಿ ಈ ಆಶ್ರಮವು ಯಾರದು ? ಎಂದು ಪ್ರಶ್ನಿಸಿದರು.

**ತೇ ಪ್ರೋಚುರತಿಶಾಂತಾತ್ಮಾ ಜಮದಗ್ನಿರ್ಮಹಾತಪಾಃ ।**
**ವಸತ್ಯಸ್ಮಿನ್ ಸುತೋ ಯಸ್ಯ ರಾಮಃ ಶಸ್ತ್ರಭೃತಾಂ ವರಃ ॥ ೫ ॥**

**ತಚ್ಛ್ರುತ್ವಾ ಭೀರಭೂತ್ತೇಷಾಂ ರಾಮನಾಮಾನುಕೀರ್ತನಾತ್ ।**
**ಕ್ರೋಧಂ ಪ್ರಸಹ್ಯಾನೃಶಂಸ್ಯಂ ಪೂರ್ವವೈರಮನುಸ್ಮರನ್ ॥ ೬ ॥**

**ಅಥ ತೇ ಪ್ರೋಚುರನ್ಯೋನ್ಯಂ ಪಿತೃಹಂತುರ್ವಧಾತ್ಪಿತುಃ ।**
**ವೈರನಿರ್ಯಾತನಂ ಕಿಂತು ಕರಿಷ್ಯಾಮೋ ದಿಶಾಧುನಾ ॥ ೭ ॥**

**ಇತ್ಯುಕ್ತ್ವಾ ಖಡ್ಗಹಸ್ತಾಸ್ತೇ ಸಂಪ್ರವಿಶ್ಯ ತದಾಶ್ರಮಮ್ ।**
**ಪ್ರಜಘ್ನಿರೇ ಪ್ರಯಾತೇಷು ಮುನಿವೀರೇಷು ಸರ್ವತಃ ॥ ೮ ॥**

**ತಂ ಹತ್ವಾಸ್ಯ ಶಿರೋ ಹೃತ್ವಾ ನಿಷಾದಾ ಇವ ನಿರ್ದಯಾಃ ।**
**ಪ್ರಯಯುಸ್ತೇ ದುರಾತ್ಮಾನಃ ಸಬಲಾಃ ಸ್ವಪುರೀಂ ಪ್ರತಿ ॥ ೯ ॥**

---

೫. ಅದಕ್ಕೆ ಮುನಿಗಳು ಅತ್ಯಂತ ಶಾಂತವಾದ ಚಿತ್ತವುಳ್ಳ ಮತ್ತು ಮಹಾ ತಪಸ್ವಿಯಾದ ಜಮದಗ್ನಿ ಮುನಿಯು ಈ ಆಶ್ರಮದಲ್ಲಿ ವಾಸಮಾಡಿಕೊಂಡಿರುವನು. ಶಸ್ತ್ರಧಾರಿಗಳಲ್ಲಿ ಉತ್ತಮನಾದ ಪರಶುರಾಮನು ಈ ಮಹಾತ್ಮನ ಪುತ್ರನು ಹೀಗೆಂದು ಉತ್ತರವನ್ನು ಕೊಟ್ಟರು.

೬. ಪರಶುರಾಮನನ್ನು ಕೀರ್ತನ ಮಾಡಿರುವ ಆ ಮುನಿಗಳ ವಚನವನ್ನು ಕೇಳಿ ಅವರಿಗೆ ಹೆಚ್ಚಾಗಿ ಭಯವುಂಟಾಯಿತು. ಆಗ ಅವರು ಕೋಪ, ಬಲಾತ್ಕಾರವಾದ ಹಿಂಸಾವೃತ್ತಿ, ಮತ್ತು ಪೂರ್ವ ವೈರಸ್ಮರಣಗಳನ್ನು ಹೊಂದಿದರು.

೭. ಆಗ ಅವರು ನಮ್ಮ ಪಿತೃವನ್ನು ಕೊಂದ ಶತ್ರುವಾದ ರಾಮನ ತಂದೆ ಯಾದ ಈ ಜಮದಗ್ನಿ ಮುನಿಯನ್ನು ವಧಿಸಿ ಪ್ರತೀಕಾರಮಾಡಿ ಸೇಡನ್ನು ತೀರಿ ಕೊಳ್ಳೋಣ, ಈ ಮಾರ್ಗದಿಂದ ಆದರೂ ವೈರಪ್ರತೀಕಾರವನ್ನು ಮಾಡೋಣವೆಂದು ಪರಸ್ಪರವಾಗಿ ಮಾತನಾಡಿಕೊಂಡರು.

೮. ಈ ರೀತಿಯಾಗಿ ಮಾತನಾಡಿಕೊಂಡು ಅಲ್ಲಿದ್ದ ಎಲ್ಲ ಮುನಿವರರು ಹೊರಟು ಹೋದ ಬಳಿಕ ಹಸ್ತದಲ್ಲಿ ಖಡ್ಗವನ್ನು ಧರಿಸಿ ಮುನಿಯ ಆಶ್ರಮವನ್ನು ಪ್ರವೇಶ ಮಾಡಿ ಮುನಿಯನ್ನು ಕೊಂದರು.

೯. ಹೀಗೆ ಸೈನ್ಯಸಮೇತರಾದ ಆ ದುರಾತ್ಮರು ಬೇಡರಂತೆ ನಿರ್ದಯರಾಗಿ ಜಮದಗ್ನಿ ಮುನಿಯನ್ನು ಕೊಂದು ಅವನ ಶಿರವನ್ನು ಅಪಹರಿಸಿಕೊಂಡು ತಮ್ಮ ನಗರಕ್ಕೆ ಹೊರಟು ಹೋದರು.

ಪುತ್ರಾಸ್ತಸ್ಯ ಮಹಾತ್ಮಾನೋ ದೃಷ್ಟ್ವಾ ಸ್ವಪಿತರಂ ಹತಮ್ ।
ಪರಿವಾರ್ಯ ಮಹಾರಾಜ ರುರುದುಃ ಶೋಕಕರ್ಶಿತಾಃ ॥ ೧೦ ॥

ಭರ್ತಾರಂ ನಿಹತಂ ಭೂಮೌ ಪತಿತಂ ವೀಕ್ಷ್ಯ ರೇಣುಕಾ ।
ಪಪಾತ ಮೂರ್ಛಿತಾ ಸದ್ಯೋ ಲತೇವಾಶನಿತಾಡಿತಾ ॥ ೧೧ ॥

ಸಾ ಸ್ವಚೇತಸಿ ಸಂಮೂರ್ಛ್ಯ ಶೋಕಪಾವಕದೀಪಿತಾ ।
ದೂರಪ್ರಣಷ್ಟಸಂಜ್ಞೇವ ಸದ್ಯಃ ಪ್ರಾಣೈರ್ವ್ಯಯುಜ್ಯತ ॥ ೧೨ ॥

ಅನಾಲಪಂತ್ಯಾಂ ತಸ್ಯಾಂ ತು ಸಂಜ್ಞಾಂ ಯಾತಾ ಹಿ ತೇ ಪುನಃ ।
ನ್ಯಪತನ್ ಮೂರ್ಛಿತಾ ಭೂಮೌ ನಿಮಗ್ನಾಃ ಶೋಕಸಾಗರೇ ॥ ೧೩ ॥

ತತಸ್ತಪೋಧನಾ ಯೇಽನ್ಯೇ ತತ್ತಪೋವನವಾಸಿನಃ ।
ಸಮೇತ್ಯಾಶ್ವಾಸಯಾಮಾಸುಸ್ತುಲ್ಯದುಃಖಾಃ ಸುತಾನ್ಮುನೇಃ ॥ ೧೪ ॥

---

೧೦. ಮಹಾರಾಜನೇ! ಅನಂತರದಲ್ಲಿ ಆ ಮುನಿಯ ಮಹಾತ್ಮರಾದ ಪುತ್ರರು ಪಿತನು ಕೊಲ್ಲಲ್ಪಟ್ಟಿರುವುದನ್ನು ನೋಡಿ ಪಿತೃಶೋಕದಿಂದ ಕೂಡಿದವರಾಗಿ ಮುನಿಯನ್ನು ಸುತ್ತುವರಿದು ಅಳುತ್ತ ನಿಂತರು.

೧೧. ಜಮದಗ್ನಿ ಮುನಿಯ ಪತ್ನಿಯಾದ ರೇಣುಕಾದೇವಿಯು ಸಂಹರಿಸಲ್ಪಟ್ಟು ಪತಿಯು ನೆಲದಲ್ಲಿ ಬಿದ್ದಿರುವುದನ್ನು ಕಂಡು ಸಿಡಿಲು ಬಡಿದಿರುವ ಬಳ್ಳಿಯಂತೆ ಆಕ್ಷಣದಲ್ಲಿ ಮೂರ್ಛಿತಳಾಗಿ ನೆಲದಲ್ಲಿ ಬಿದ್ದಳು.

೧೨. ಭರ್ತೃ ಶೋಕವೆಂಬ ಅಗ್ನಿಯಿಂದ ಉರಿದು ಹೋದ ಆ ರೇಣುಕೆಯು ಮನಸ್ಸಿನಲ್ಲಿ ಮೂರ್ಛೆ ಹೊಂದಿ ಬಹು ದೂರ ಹೊರಟು ಹೋದ ಪ್ರಜ್ಞೆ ಇರುವವಳಂತೆ ಕೂಡಲೆ ಪ್ರಾಣಗಳಿಂದ ತ್ಯಜಿಸಲ್ಪಟ್ಟಳು.

೧೩. ಕೊಂಚ ಕಾಲದಲ್ಲಿ ಮತ್ತೆ ವಿವೇಕವನ್ನು ಹೊಂದಿದ ಆ ಪುತ್ರರು ತಾಯಿಯಾದ ರೇಣುಕೆಯು ವಚನವನ್ನೀಯದಿರಲಾಗಿ ಶೋಕಸಮುದ್ರದಲ್ಲಿ ಮುಳುಗಿದವರಾಗಿ ಮೂರ್ಛೆಯನ್ನು ಹೊಂದಿ ಭೂಮಿಯಲ್ಲಿ ಬಿದ್ದರು.

೧೪. ತರುವಾಯ ಆ ತಪೋವನದಲ್ಲಿ ವಾಸಮಾಡುತ್ತಲಿರುವ ಇತರ ತಪಸ್ವಿಮುನಿಗಳು ಸೇರಿ ಬಂದು ತಾವೂ ಜಮದಗ್ನಿ ಮುನಿಪುತ್ರರಿಗೆ ಸಮಾನವಾದ ದುಃಖವುಳ್ಳವರಾಗಿ ಆ ಮುನಿಪುತ್ರರನ್ನು ಸಮಾಧಾನ ಮಾಡಿದರು.

ಸಾಂತ್ವ್ಯಮಾನಾ ಮುನಿಗಣೈರ್ಜಾಮದಗ್ನ್ಯಾ ಯಥಾವಿಧಿ ।
ಅಥಕ್ರುರ್ವಚಸಾ ತೇಷಾಮಗ್ನೌ ಪಿತ್ರೋಃ ಕಲೇವರೇ ॥ ೧೫ ॥

ಚಕ್ರುರೇವ ತದೂರ್ಧ್ವಂ ವೈ ಯತ್ಕರ್ತವ್ಯಮನಂತರಮ್ ।
ಪಿತ್ರೋರ್ಮರಣದುಃಖೇನ ಪೀಡ್ಯಮಾನಾ ದಿವಾನಿಶಮ್ ॥ ೧೬ ॥

ತತಃ ಕಾಲೇ ಗತೇ ರಾಮಃ ಸಮಾನಾಂ ದ್ವಾದಶಾವಧೌ ।
ನಿವೃತ್ತಸ್ತಪಸಃ ಸಖ್ಯಾ ಸಹಾಗಾದಾಶ್ರಮಂ ಪಿತುಃ ॥ ೧೭ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ
ಪಂಚ ಚತ್ವಾರಿಂಶತ್ತಮೋಽಧ್ಯಾಯಃ

---

೧೫. ಹೀಗೆ ಮಹರ್ಷಿಗಳ ಗುಂಪಿನಿಂದ ಸಂತೈಸಲ್ಪಡುತ್ತಲಿರುವ ಜಮದಗ್ನಿ ಮುನಿಪುತ್ರರು ಆ ಮುನಿಗಳ ಆಜ್ಞಾವಚನದಿಂದ ಜನನೀ-ಜನಕರ ದೇಹಗಳನ್ನು ಯಥಾವಿಧಿಯಾಗಿ ಅಗ್ನಿಯಲ್ಲಿಟ್ಟು ದಹನ ಸಂಸ್ಕಾರ ಮಾಡಿದರು.

೧೬. ಮತ್ತು ದಹನಾನಂತರದಲ್ಲಿ ತಂದೆ-ತಾಯಿಗಳ ಮರಣದ ದುಃಖದಿಂದ ಹಗಲು ರಾತ್ರಿ-ಸರ್ವಕಾಲದಲ್ಲಿಯೂ ಪೀಡಿಸಲ್ಪಟ್ಟವರಾಗಿ ದಹನಾನಂತರದಲ್ಲಿ ಮಾಡಬೇಕಾದ ಔರ್ಧ್ವದೇಹಿಕ ಕ್ರಿಯೆಯನ್ನು ಮಾಡಿದರು.

೧೭. ಅನಂತರದಲ್ಲಿ ಹಾಗೆಯೇ ಮತ್ತೆ ಕೆಲವು ಕಾಲ ಕಳೆದು ತಪಶ್ಚರ್ಯೆಯ ಅವಧಿಯಾದ ಹನ್ನೆರಡು ವರ್ಷಗಳು ಪೂರ್ತಿಯಾಗಲಾಗಿ ಪರಶುರಾಮನು ಅಕೃತವ್ರಣ ಮಿತ್ರನೊಂದಿಗೆ ತಂದೆಯ ಆಶ್ರಮಕ್ಕೆ ಬಂದನು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ನಲವತ್ತೈದನೆಯ ಅಧ್ಯಾಯವು ಮುಗಿದುದು.

---

## ಷಟ್ಚತ್ವಾರಿಂಶತ್ತಮೋಽಧ್ಯಾಯಃ

ವಸಿಷ್ಠ ಉವಾಚ :—

ಸ ಗಚ್ಛನ್ ಪಥಿ ಶುಶ್ರಾವ ಮುನಿಭ್ಯಸ್ತತ್ತ್ವಮಾದಿತಃ ।
ರಾಜಪುತ್ರವ್ಯವಸಿತಂ ಪಿತ್ರೋಃ ಸ್ವರ್ಗತಿಮೇವ ಚ ॥ ೧ ॥

ಪಿತುಸ್ತು ಜೀವಹರಣಂ ಶಿರೋಹರಣಮೇವ ಚ ।
ತನ್ಮೃತೇರೇವ ಮರಣಂ ಶ್ರುತ್ವಾ ಮಾತುಶ್ಚ ಕೇವಲಮ್ ॥ ೨ ॥

ವಿಲಲಾಪ ಮಹಾಬಾಹುರ್ದುಃಖಶೋಕಸಮನ್ವಿತಃ ।
ತಮಥಾಶ್ವಾಸಯಾಮಾಸ ತುಲ್ಯದುಃಖೋಽಕೃತವ್ರಣಃ ॥ ೩ ॥

ಹೇತುಭಿಃ ಶಾಸ್ತ್ರನಿರ್ದಿಷ್ಟೈರ್ವೀರ್ಯಸಾಮರ್ಥ್ಯಸೂಚಕೈಃ ।
ಯುಕ್ತಿಲೌಕಿಕದೃಷ್ಟಾಂತೈಸ್ತಚ್ಛೋಕಂ ಸಂವ್ಯಶಾಮಯತ್ ॥ ೪ ॥

---

೧. ವಸಿಷ್ಠ ಮುನಿಯು ಇಂತೆಂದನು:—ಆ ಪರಶುರಾಮನು ಪ್ರಯಾಣ ಮಾಡುತ್ತಲಿರುವಾಗ ಮಾರ್ಗದಲ್ಲಿ ಮುನಿಗಳ ಮೂಲಕ ರಾಜಪುತ್ರರು ಮಾಡಿರುವ ಹಾವಳಿ, ಮಾತಾಪಿತೃಗಳ ಸ್ವರ್ಗಲೋಕ ಯಾತ್ರೆ–ಇವುಗಳ ವಿಷಯದಲ್ಲಿ ಆದಿಯಿಂದ ನಡೆದ ತತ್ತ್ವವನ್ನು ತಿಳಿದನು.

೨. ಬೇಡರಂತೆ ಬಂದಿದ್ದ ರಾಜಪುತ್ರರಿಂದ ಜನಕನ ಪ್ರಾಣಾಪಹಾರವನ್ನೂ ಶಿರಸ್ಸಿನ ಅಪಹಾರವನ್ನೂ ಮತ್ತು ಪತಿಯ ಮರಣದಿಂದಲೇ ಪತಿ ಶೋಕಪೀಡೆಯನ್ನು ಸಹಿಸಲಾರದ ತಾಯಿಯು ಪ್ರಾಣಪರಿತ್ಯಾಗ ಮಾಡಿರುವುದನ್ನೂ ಕೇಳಿದನು.

೩. ಮತ್ತು ದುಃಖ-ಶೋಕಗಳಿಂದ ಅತಿಯಾಗಿ ಪೀಡಿತನಾಗಿ ಮಹಾಬಾಹು ಬಲಶಾಲಿಯಾದ ರಾಮನು ವಿಲಾಪಮಾಡಿದನು. ಆಗ ರಾಮನಿಗೆ ಸಮಾನ ದುಃಖವನ್ನು ಅನುಭವಿಸುತ್ತಿದ್ದ ಅಕೃತವ್ರಣನು ರಾಮನನ್ನು ಸಮಾಧಾನ ಮಾಡಿದನು.

೪. ಮತ್ತು ಆ ಅಕೃತವ್ರಣನು ಶಾಸ್ತ್ರಾಧಾರದಿಂದ ಲಭ್ಯವಾದ ಶಕ್ತಿ-ಪರಾಕ್ರಮಗಳನ್ನು ಸೂಚಿಸುವ ಅನೇಕ ಯುಕ್ತಿವಾದಗಳಿಂದಲೂ ಆ ಯುಕ್ತಿಗಳಿಗೆ ಸರಿಹೋಗುವ ಲೌಕಿಕ ದೃಷ್ಟಾಂತಗಳಿಂದಲೂ ಅವನ ಶೋಕವನ್ನು ಶಾಂತಿಗೊಳಿಸಿದನು.

ಸಾಂತ್ವಿತಸ್ತೇನ ಮೇಧಾವೀ ಧೃತಿಮಾಲಂಬ್ಯ ಭಾರ್ಗವಃ ।
ಪ್ರಯಯೌ ಸಹಿತಃ ಸಖ್ಯಾ ಭ್ರಾತೄಣಾಂ ತು ದಿದೃಕ್ಷಯಾ ॥ ೫ ॥

ಸ ತಾನ್ ದೃಷ್ಟ್ವಾಽಭಿವಾದ್ಯೈತಾನ್ ದುಃಖಿತಾನ್ ದುಃಖಕರ್ಶಿತಃ ।
ಶೋಕಾಮರ್ಷಯುತಸ್ತೈಶ್ಚ ಸಹ ತಸ್ಥೌ ದಿನತ್ರಯಮ್ ॥ ೬ ॥

ತತೋಽಸ್ಯ ಸುಮಹಾನ್ ಕ್ರೋಧಃ ಸ್ಮರತೋ ನಿಧನಂ ಪಿತುಃ ।
ಬಭೂವ ಸಹಸಾ ಸರ್ವಲೋಕಸಂಹರಣಕ್ಷಮಃ ॥ ೭ ॥

ಮಾತುರರ್ಥೇ ಕೃತಾಂ ಪೂರ್ವಂ ಪ್ರತಿಜ್ಞಾಂ ಸತ್ಯಸಂಗರಃ ।
ದೃಢೀಚಕಾರ ಹೃದಯೇ ಸರ್ವಕ್ಷತ್ರವಧೋದ್ಯತಃ ॥ ೮ ॥

ಕ್ಷತ್ರವಂಶ್ಯಾನಶೇಷೇಣ ಹತ್ವಾ ತದ್ದೇಹಲೋಹಿತೈಃ ।
ಕರಿಷ್ಯೇ ತರ್ಪಣಂ ಪಿತ್ರೋರಿತಿ ನಿಶ್ಚಿತ್ಯ ಭಾರ್ಗವಃ ॥ ೯ ॥

---

೫. ಅಕೃತವ್ರಣನಿಂದ ಸಮಾಧಾನಗೊಳಿಸಲ್ಪಟ್ಟ ಮೇಧಾವಿಯಾದ ಭಾರ್ಗವ ರಾಮನು ಧೈರ್ಯವನ್ನು ಹೊಂದಿ ಮಿತ್ರನೊಡಗೂಡಿ ಸಹೋದರರನ್ನು ನೋಡ ಬೇಕೆಂಬ ಕುತೂಹಲದಿಂದ ಪ್ರಯಾಣ ಮಾಡಿದನು.

೬. ಆ ಆಶ್ರಮಕ್ಕೆ ಬಂದು ಭ್ರಾತೃವರ್ಗವನ್ನು ಕಂಡು ದುಃಖಗೊಂಡಿರುವ ಅವರೆಲ್ಲರನ್ನೂ ನಮಸ್ಕರಿಸಿ ತಾನೂ ಕೂಡ ದುಃಖ-ಶೋಕ ಮತ್ತು ಅಸಹನೆಗಳಿಂದ ಕೂಡಿದವನಾಗಿ ಅವರೊಂದಿಗೆ ಮೂರು ದಿನ ವಾಸಮಾಡಿದನು.

೭. ತರುವಾಯ ಪಿತೃವಿನ ಮರಣವನ್ನು ಸ್ಮರಿಸುತ್ತಲಿರುವ ಈ ಪರಶುರಾಮ ನಿಗೆ ಸರ್ವ ಲೋಕಗಳನ್ನು ಸಂಹರಿಸಲು ಶಕ್ತವಾಗುವಂತೆ ಮಹತ್ತರವಾದ ಕೋಪವು ಕೂಡಲೇ ಉಂಟಾಯಿತು.

೮. ಆಗ ಸತ್ಯಪ್ರತಿಜ್ಞನಾದ ರಾಮನು ಎಲ್ಲ ಕ್ಷತ್ರಿಯರ ಸಂಹಾರದಲ್ಲಿ ಉದ್ಯುಕ್ತ ನಾಗಿ ಜನನಿಗೋಸ್ಕರ ಹಿಂದೆ ಮಾಡಲ್ಪಟ್ಟಿರುವ ಪ್ರತಿಜ್ಞೆಯನ್ನು ಮನಸ್ಸಿನಲ್ಲಿ ದೃಢ ಪಡಿಸಿಕೊಂಡನು.

೯. ಭಾರ್ಗವರಾಮನು ಕ್ಷತ್ರಿಯ ಜಾತಿಯ ವಂಶದಲ್ಲಿ ಹುಟ್ಟಿದ ಎಲ್ಲ ವ್ಯಕ್ತಿ ಗಳನ್ನು ಸಂಪೂರ್ಣವಾಗಿ ಕೊಂದು ಅವರ ರಕ್ತದಿಂದ ಮಾತಾ-ಪಿತೃಗಳಿಗೆ ತರ್ಪಣ ವನ್ನು ಕೊಡುವೆನೆಂದು ಮನಸ್ಸಿನಲ್ಲಿ ನಿಶ್ಚಯ ಮಾಡಿಕೊಂಡನು.

ಭ್ರಾತೄಣಾಂ ಚೈವ ಸರ್ವೇಷಾಮಾಖ್ಯಾಯಾತ್ಮಸಮೀಹಿತಮ್ ।
ಪ್ರಯಯೌ ತದನುಜ್ಞಾತಃ ಕೃತ್ವಾ ಸಂಸ್ಥಾಂ ಪಿತುಃ ಕ್ರಿಯಾಮ್ ॥ ೧೦ ॥

ಅಕೃತವ್ರಣಸಂಯುಕ್ತಃ ಪ್ರಾಪ್ಯ ಮಾಹಿಷ್ಮತೀಂ ತತಃ ।
ತದ್ಬಾಹ್ಯೋಪವನೇ ಸ್ಥಿತ್ವಾ ಸಸ್ಮಾರ ಸ ಮಹೋದರಮ್ ॥ ೧೧ ॥

ಸ ತಸ್ಮೈ ರಥಚಾಪಾದ್ಯಂ ಸಹಸಾಶ್ವಸಮನ್ವಿತಮ್ ।
ಪ್ರೇಷಯಾಮಾಸ ರಾಮಾಯ ಸರ್ವಸಂಹನನಾನಿ ಚ ॥ ೧೨ ॥

ರಾಮೋಽಪಿ ರಥಮಾರುಹ್ಯ ಸನ್ನದ್ಧಃ ಸಶರಂ ಧನುಃ ।
ಗೃಹೀತ್ವಾಪೂರಯುಚ್ಛಂಖಂ ರುದ್ರದತ್ತಮಮಿತ್ರಜಿತ್ ॥ ೧೩ ॥

ಜ್ಯಾಘೋಷಂ ಚ ಚಕಾರೋಚ್ಚೈ ರೋದಸೀ ಕಂಪಯನ್ನಿವ ।
ಸಹಸಾಹೋಽಥ ಸಾರಥ್ಯಂ ಚಕ್ರೇ ಸಾರಥಿನಾಂ ವರಃ ॥ ೧೪ ॥

---

೧೦. ತನ್ನ ಎಲ್ಲ ಸಹೋದರರಿಗೆ ಸರ್ವ ಕ್ಷತ್ರಿಯಾಂತಕವಾದ ತನ್ನ ಇಷ್ಟವಾದ ವ್ಯವಸಾಯವನ್ನು ತಿಳಿಸಿ ಅವರಿಂದ ಅನುಜ್ಞೆಯನ್ನು ಹೊಂದಿ ಪಿತೃವಿನ ಉತ್ತರಕ್ರಿಯಾ ವಿಧಿಯನ್ನು ಸಮಾಪ್ತಿಗೊಳಿಸಿ ಮುಂದೆ ಪ್ರಯಾಣ ಮಾಡಿದನು.

೧೧. ಆಮೇಲೆ ಅಕೃತವ್ರಣನಿಂದ ಸಹಿತನಾಗಿ ಆ ರಾಮನು ಮಾಹಿಷ್ಮತಿ ನಗರವನ್ನು ಹೊಂದಿ ಅದರ ಹೊರ ಭಾಗದಲ್ಲಿರುವ ಉಪವನದಲ್ಲಿ ನಿಂತು ಮಹೋದರನನ್ನು ಸ್ಮರಿಸಿಕೊಂಡನು.

೧೨. ಆಗ ಮಹೋದರನು ಅಶ್ವಗಳಿಂದ ಕೂಡಿದ ರಥ-ಚಾಪ ಮುಂತಾದ ಯುದ್ಧದ ಉಪಕರಣಗಳನ್ನೂ ಸಕಲ ಯುದ್ಧಾಂಗಗಳನ್ನೂ ರಾಮನಿಗೆ ಕಳುಹಿಸಿದನು.

೧೩. ಆಗ ಶತ್ರುಗಳನ್ನು ಜಯಿಸಿರುವ ಭಾರ್ಗವರಾಮನು ಯುದ್ಧಕ್ಕೆ ಸಿದ್ಧನಾಗಿ ರಥವನ್ನು ಏರಿಕೊಂಡು ಬಿಲ್ಲು-ಬಾಣಗಳನ್ನು ಪಾಣಿಯಲ್ಲಿ ಧರಿಸಿ ರುದ್ರದೇವನಿಂದ ಕೊಡಲ್ಪಟ್ಟ ಶಂಖವನ್ನು ಊದಿದನು.

೧೪. ಮತ್ತು ದ್ಯಾವಾ ಪೃಥಿವಿಗಳನ್ನು ನಡುಗಿಸುವವನಂತೆ ಗಟ್ಟಿಯಾಗಿ ಧನುಷ್ಟಂಕಾರನಾದವನ್ನು ಮಾಡಿದನು. ಆಗ ರಾಮನಿಗೆ ಸಾರಥಿಗಳಲ್ಲಿ ಉತ್ತಮನಾದ ಸಹಸಾಹನೆಂಬುವನು ಸಾರಥ್ಯವನ್ನು ಮಾಡಿದನು.

ರಥಜ್ಯಾಶಂಖನಾದೈಸ್ತು ವಧಾತ್ಪಿತ್ರೋರಮರ್ಷಿಣಃ ।
ತಸ್ಯಾಭೂನ್ನಗರೀ ಸರ್ವಾ ಸಂಕ್ಷುಬ್ಧಾಥ ನರದ್ವಿಪಾಃ ॥ ೧೫ ॥

ರಾಮಂ ತ್ವಾಗತಮಾಜ್ಞಾಯ ಸರ್ವಕ್ಷತ್ರಕುಲಾಂತಕಮ್ ।
ಸಂಕ್ಷುಬ್ಧಾಶ್ಚಕ್ರುರುದ್ಯೋಗಂ ಸಂಗ್ರಾಮಾಯ ನೃಪಾತ್ಮಜಾಃ ॥ ೧೬ ॥

ಅಥ ಪಂಚರಥಾಃ ಶೂರಾಃ ಶೂರಸೇನಾದಯೋ ನೃಪ ।
ರಾಮೇಣ ಯೋದ್ಧುಂ ಸಹಿತಾ ರಾಜಭಿಶ್ಚಕ್ರುರುದ್ಯಮಮ್ ॥ ೧೭ ॥

ಚತುರಂಗಬಲೋಪೇತಾಸ್ತತಸ್ತೇ ಕ್ಷತ್ರಿಯರ್ಷಭಾಃ ।
ರಾಮಮಾಸಾದಯಾಮಾಸುಃ ಪತಂಗಾ ಇವ ಪಾವಕಮ್ ॥ ೧೮ ॥

ನಿವಾರ್ಯ ತಾನಾಪತತೋ ರಥೇನೈಕೇನ ಭಾರ್ಗವಃ ।
ಯುಯುಧೇ ಪಾರ್ಥಿವೈಃ ಸರ್ವೈಃ ಸಮರೇಽಮಿತವಿಕ್ರಮಃ ॥ ೧೯ ॥

---

೧೫. ಮಾತಾಪಿತೃಗಳ ವಧೆದಿಂದ ಕುಪಿತನಾಗಿ ಬಂದ ರಾಮನ ರಥ-ಮೌರ್ವೀ ಮತ್ತು ಶಂಖಗಳ ಧ್ವನಿಗಳಿಂದ ಮನುಜರು, ಗಜಗಳು ಆದಿಯಾಗಿ ಸಂಪೂರ್ಣ ನಗರಿಯು ಕ್ಷೋಭಗೊಂಡಿತು.

೧೬. ಆಗ ರಾಜಪುತ್ರರು ಸಮಸ್ತ ಕ್ಷತ್ರಿಯರ ಕುಲಕ್ಕೆ ಅಂತಕನಾದ ರಾಮನು ಬಂದಿರುವುದನ್ನು ತಿಳಿದು ಬಹಳ ಕ್ಷೋಭಗೊಂಡ ಮಾನಸವುಳ್ಳವರಾಗಿ ಸಂಗ್ರಾಮಕ್ಕೆ ಸಿದ್ಧರಾಗುವ ಉದ್ಯೋಗವನ್ನು ಪ್ರಾರಂಭಿಸಿದರು.

೧೭. ರಾಜನೆ! ತರುವಾಯ ರಥಿಕರೂ, ಶೂರರೂ ಆದ ಶೂರಸೇನ ಮುಂತಾದ ಐದು ಮಂದಿ ರಾಜಪುತ್ರರು ಸೇರಿ ರಾಮನೊಡನೆ ಯುದ್ಧವನ್ನು ಮಾಡಲು ಉದ್ಯಮವನ್ನು ಮಾಡಿದರು.

೧೮. ಅನಂತರದಲ್ಲಿ ಕ್ಷತ್ರಿಯ ಶ್ರೇಷ್ಠರಾದ ಆ ರಾಜಪುತ್ರರು ಚತುರಂಗಬಲದಿಂದ ಕೂಡಿದವರಾಗಿ ಪತಂಗಹುಳುಗಳು ಅಗ್ನಿಗೆ ಅಭಿಮುಖವಾಗಿ ಬಂದಂತೆ ರಾಮನಿಗೆ ಅಭಿಮುಖರಾಗಿ ಬಂದರು.

೧೯. ಅನಂತವಾದ ವಿಕ್ರಮದಿಂದ ರಾಜಿಸುವ ಭಾರ್ಗವರಾಮನು ತನ್ನ ಒಂದು ರಥದಿಂದ ಎದುರಾಗಿ ಬರುತ್ತಿದ್ದ ಶೂರಸೇನಾದಿಗಳನ್ನು ತಡೆಗಟ್ಟಿ ಎಲ್ಲ ಪಾರ್ಥಿವರೊಂದಿಗೆ ರಣರಂಗದಲ್ಲಿ ಯುದ್ಧಮಾಡಿದನು.

ತತಃ ಪುನರಭೂದ್ಯುದ್ಧಂ ರಾಮಸ್ಯ ಸಹ ರಾಜಭಿಃ ।
ಜಘಾನ ಯತ್ರ ಸಂಕ್ರುದ್ಧೋ ರಾಜ್ಞಾಂ ಶತಮುದಾರಧೀಃ ॥ ೨೦ ॥

ತತಃ ಸ ಶೂರಸೇನಾದೀನ್ ಹತ್ವಾ ಸಬಲವಾಹನಾನ್ ।
ಕ್ಷಣೇನ ಪಾತಯಾಮಾಸ ಕ್ಷಿತೌ ಕ್ಷತ್ರಿಯಮಂಡಲಮ್ ॥ ೨೧ ॥

ತತಸ್ತೇ ಭಗ್ನಸಂಕಲ್ಪಾ ಹತಸ್ವಬಲವಾಹನಾಃ ।
ಹತಶಿಷ್ಟಾ ನೃಪತಯೋ ದುದ್ರುವುಃ ಸರ್ವತೋದಿಶಮ್ ॥ ೨೨ ॥

ಏವಂ ವಿದ್ರಾವ್ಯ ಸೈನ್ಯಾನಿ ಹತ್ವಾ ಜಿತ್ವಾಥ ಸಂಯುಗೇ ।
ಜಘಾನ ಶತಶೋ ರಾಜ್ಞಃ ಶೂರಾಂಚ್ಛರವರಾಗ್ನಿನಾ ॥ ೨೩ ॥

ತತಃ ಕ್ರೋಧಪರೀತಾತ್ಮಾ ದಗ್ಧುಕಾಮೋಽಖಿಲಾಂ ಪುರೀಮ್ ।
ಉದೈರಯದ್ಭಾರ್ಗವೋಽಸ್ತ್ರಂ ಕಾಲಾಗ್ನಿಸದೃಶಪ್ರಭಮ್ ॥ ೨೪ ॥

---

೨೦. ಆಗ ರಾಮನಿಗೆ ಅಲ್ಲಿ ಸಿದ್ಧರಾಗಿ ಬಂದ ಅನೇಕ ರಾಜರೊಡನೆ ಮತ್ತೆ ಯುದ್ಧವು ಸಂಭವಿಸಿತು. ಆ ಯುದ್ಧದಲ್ಲಿ ಕುಪಿತನೂ, ಉದಾರವಾದ ಬುದ್ಧಿಯುಳ್ಳವನೂ ಆದ ರಾಮನು ನೂರಾರು ಶತ್ರು ರಾಜರನ್ನು ಸಂಹರಿಸಿದನು.

೨೧. ಅನಂತರದಲ್ಲಿ ಆ ರಾಮನು ಬಲ-ವಾಹನಗಳಿಂದ ಸಹಿತರಾದ ಶೂರಸೇನ ಮುಂತಾದವರನ್ನು ಕೊಂದುಹಾಕಿ ಒಂದು ಕ್ಷಣದಲ್ಲಿ ಅನೇಕ ಕ್ಷತ್ರಿಯ ವೃಂದವನ್ನು ನೆಲಕ್ಕೆ ಉರುಳಿಸಿದನು.

೨೨. ಆಮೇಲೆ ಭಂಗಹೊಂದಿದ ಜಯ ಸಂಕಲ್ಪವುಳ್ಳವರೂ ವಧಿಸಲ್ಪಟ್ಟ ಬಲ-ವಾಹನವುಳ್ಳವರೂ ಆದ ಹತಶಿಷ್ಟರಾದ ಕೆಲವು ಮಂದಿ ರಾಜರು ಭಯದಿಂದ ದಿಕ್ಕು ದಿಕ್ಕಿಗೆ ಪಲಾಯನ ಮಾಡಿದರು.

೨೩. ರಾಮನು ಈ ರೀತಿಯಾಗಿ ಸೈನ್ಯವನ್ನು ಕೊಂದು ಹತ ಶಿಷ್ಟರನ್ನು ದೂರ ಓಡಿಸಿ ಯುದ್ಧದಲ್ಲಿ ಜಯಶಾಲಿಯಾದನು. ಆಗ ತನ್ನ ತೀಕ್ಷ್ಣವಾದ ಬಾಣಾಗ್ನಿಯಿಂದ ನೂರಾರು ಶೂರ ರಾಜರನ್ನು ಸಂಹರಿಸಿದನು.

೨೪. ತರುವಾಯ ಕೋಪದಿಂದ ಮುತ್ತಿಕೊಂಡ ಮಾನಸವುಳ್ಳ ಭಾರ್ಗವ ರಾಮನು ಸಂಪೂರ್ಣ ನಗರಿಯನ್ನು ಸುಡಬೇಕೆಂಬ ಸಂಕಲ್ಪವುಳ್ಳವನಾಗಿ ಪ್ರಳಯಾಗ್ನಿಗೆ ಸಮಾನವಾದ ತೇಜಃಪುಂಜವುಳ್ಳ ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು.

ಜ್ವಾಲಾಕವಲಿತಾಶೇಷಪುರಪ್ರಾಕಾರಮಾಲಿನೀಮ್ ।
ಪುರೀಂ ಸಹಸ್ತ್ಯಶ್ವನರಾಂ ಸ ದದಾಹಾಸ್ತ್ರಪಾವಕಃ ॥ ೨೫ ॥

ದಹ್ಯಮಾನಾಂ ಪುರೀಂ ದೃಷ್ಟ್ವಾ ಪ್ರಾಣತ್ರಾಣಪರಾಯಣಃ ।
ಜವೇನಾಥ ಜಗಾಮಾಶು ವೀತಿಹೋತ್ರೋ ಭಯಾತುರಃ ॥ ೨೬ ॥

ಅಸ್ತ್ರಾಗ್ನಿನಾ ಪುರೀಂ ಸರ್ವಾಂ ದಗ್ಧ್ವಾ ಹತ್ವಾ ಚ ಶಾತ್ರವಾನ್ ।
ಪ್ರಾಶಯಾನೋಽಖಿಲಾನ್ ಲೋಕಾನ್ ಸಾಕ್ಷಾತ್ಕಾಲ ಇವಾಂತಕಃ ॥ ೨೭ ॥

ಅಕೃತವ್ರಣಸಂಯುಕ್ತಃ ಸಹಸಾಹೇನ ಚಾನ್ವಿತಃ ।
ಜಗಾಮ ರಥಘೋಷೇಣ ಕಂಪಯನ್ನಿವ ಮೇದಿನೀಮ್ ॥ ೨೮ ॥

ವಿನಿಘ್ನನ್ ಕ್ಷತ್ರಿಯಾನ್ ಸರ್ವಾನ್ ಸಂಶಾಮ್ಯ ಪೃಥಿವೀತಲೇ ।
ಮಹೇಂದ್ರಾದ್ರಿಂ ಯಯೌ ರಾಮಸ್ತಪಸೇ ಧೃತಮಾನಸಃ ॥ ೨೯ ॥

---

೨೫. ಆಗ ಆ ಅಸ್ತ್ರಾಗ್ನಿಯು ಜ್ವಾಲಾಮಾಲೆಯಿಂದ ಆನೆ, ಕುದುರೆ, ಮತ್ತು ಮಾನವರಿಂದ ಸಹಿತವಾದ ನಿಶ್ಶೇಷ ಪ್ರಾಕಾರ ಶ್ರೇಣಿಯಿಂದ ಕೂಡಿದ ಪುರವನ್ನು ವ್ಯಾಪಿಸಿ ಭಸ್ಮಮಾಡಿತು.

೨೬. ವೀತಿಹೋತ್ರನೆಂಬ ರಾಜಕುಮಾರನು ಭಯದಿಂದ ವ್ಯಾಪ್ತನಾಗಿ ನಗರವು ಸುಡುತ್ತಲಿದ್ದುದನ್ನು ಕಂಡು ಪ್ರಾಣತ್ರಾಣದಲ್ಲಿ ಆಸಕ್ತನಾಗಿ ಜೀವಸಹಿತನಾಗಿ ವೇಗದಿಂದ ಓಡಿ ಹೋದನು.

೨೭. ಅಖಿಲ ಲೋಕಗಳನ್ನು ಕವಲನ ಮಾಡುತ್ತಲಿರುವ, ಸಾಕ್ಷಾತ್ತಾಗಿ ಸಂಹಾರಕನಾದ ಯಮನಂತೆ ರಾಮನು ಅಸ್ತ್ರಾಗ್ನಿ ಜ್ವಾಲೆಯಿಂದ ಸಮಸ್ತ ಪುರವನ್ನು ದಹಿಸಿ ಸಮಸ್ತ ಶತ್ರುಗಳನ್ನು ಸಂಹಾರ ಮಾಡಿದನು.

೨೮. ಅನಂತರದಲ್ಲಿ ಅಕೃತವ್ರಣಮಿತ್ರ ಮತ್ತು ಸಹಸಾಹನೆಂಬ ಸಾರಥಿ–ಇವರಿಂದ ಕೂಡಿ ರಾಮನು ರಥಘೋಷದಿಂದ ಭೂಮಿಯನ್ನು ಕಂಪನ ಮಾಡುವವನಂತೆ ಪ್ರಯಾಣ ಮಾಡಿದನು.

೨೯. ಹಾಗೆ ಸರ್ವ ಕ್ಷತ್ರಿಯರನ್ನು ಸಂಹರಿಸಿ ಭೂಮಿಯ ಮೇಲೆ ಉರುಳಿಸಿ ಅನಂತರ ರಾಮನು ತಪಸ್ಸಿಗೋಸ್ಕರ ಸ್ಥಿರ ಮಾಡಿದ ಮಾನಸವುಳ್ಳವನಾಗಿ ಮಹೇಂದ್ರ ಪರ್ವತಕ್ಕೆ ಹೋದನು.

ತಸ್ಮಿನ್ನಷ್ಟಚತುಷ್ಕಂ ಚ ಯಾವತ್ಕ್ಷತ್ರಸಮುದ್ಗಮಮ್ ।
ಪ್ರತ್ಯೇತ್ಯ ಭೂಯಸ್ತದ್ಧತ್ಯೈ ಬದ್ಧದೀಕ್ಷೋ ಧೃತವ್ರತಃ ॥ ೩೦ ॥

ಕ್ಷತ್ರಕ್ಷೇತ್ರೇಷು ಭೂಯಶ್ಚ ಕ್ಷತ್ರಮುತ್ಪಾದಿತಂ ದ್ವಿಜೈಃ ।
ನಿಜಘಾನ ಪುನರ್ಭೂಮೌ ರಾಜ್ಞಃ ಶತಸಹಸ್ರಶಃ ॥ ೩೧ ॥

ವರ್ಷದ್ವಯೇನ ಭೂಯೋಽಪಿ ಕೃತ್ವಾ ನಿಃಕ್ಷತ್ರಿಯಾಂ ಮಹೀಮ್ ।
ಷಟ್ಚತುಷ್ಟಯವರ್ಷಾಂತಂ ತಪಸ್ತೇಪೇ ಪುನಶ್ಚ ಸಃ ॥ ೩೨ ॥

ಭೂಯೋಽಪಿ ರಾಜನ್ ಸಂಬುದ್ಧಂ ಕ್ಷತ್ರಮುತ್ಪಾದಿತಂ ದ್ವಿಜೈಃ ।
ಜಘಾನ ಭೂಮೌ ನಿಃಶೇಷಂ ಸಾಕ್ಷಾತ್ ಕಾಲ ಇವಾಂತಕಃ ॥ ೩೩ ॥

ಕಾಲೇನ ತಾವತಾ ಭೂಯಃ ಸಮುತ್ಪನ್ನಂ ನೃಪಾನ್ವಯಮ್ ।
ನಿಘ್ನಂಶ್ಚಚಾರ ಪೃಥಿವೀಂ ವರ್ಷದ್ವಯಮನಾರತಮ್ ॥ ೩೪ ॥

---

೩೦. ಆ ಮಹೇಂದ್ರಾದ್ರಿಯಲ್ಲಿ ನಾಲ್ಕೆಂಟು ಕ್ಷತ್ರಿಯಾಂಕುರಗಳು ಹುಟ್ಟುವವರೆಗೆ ತಪಶ್ಚರ್ಯೆಯಲ್ಲಿ ನಿರತನಾಗಿದ್ದು ಮತ್ತೆ ಕ್ಷತ್ರಿಯ ಜಾತಿಯ ಉತ್ಪತ್ತಿಯಾದುದನ್ನು ತಿಳಿದು ಅದರ ಸಂಹಾರಕ್ಕೆ ದೃಢವಾದ ಪ್ರತಿಜ್ಞೆಯಿಂದ ದೀಕ್ಷಾಬದ್ಧನಾದನು.

೩೧. ಹೀಗಿರಲು ಸಂಹರಿಸಲ್ಪಟ್ಟ ಕ್ಷತ್ರಿಯರ ಅಂಗನೆಯರಲ್ಲಿ ದ್ವಿಜರಿಂದ ಕ್ಷತ್ರಿಯ ಜಾತಿಯು ಹುಟ್ಟಿಸಲ್ಪಟ್ಟಿತು. ಆಗ ರಾಮನು ಭೂಮಿಯಲ್ಲಿ ನೂರು-ಸಾವಿರ ಮುಂತಾದ ಅಧಿಕ ಸಂಖ್ಯೆಯಲ್ಲಿ ಕ್ಷತ್ರಿಯ ರಾಜರನ್ನು ಕೊಂದನು.

೩೨. ಮತ್ತೆರಡು ವರ್ಷಗಳ ಕಾಲದಿಂದ ಭೂಮಿಯನ್ನು ಕ್ಷತ್ರಿಯ ಜಾತಿ ಶೂನ್ಯವನ್ನಾಗಿಮಾಡಿ ಆ ರಾಮನು ನಾಲ್ಕಾರು ವರ್ಷಗಳು ಪೂರ್ತಿಯಾಗಿ ಕಳೆಯುವವರೆಗೆ ಮತ್ತೆ ತಪವನ್ನು ಆಚರಿಸಿದನು.

೩೩. ರಾಜನೆ! ಮತ್ತೆ ದ್ವಿಜರಿಂದ ಕ್ಷತ್ರಿಯ ಜಾತಿಯು ಜನ್ಮವೆತ್ತಿರುವುದು ರಾಮನಿಂದ ತಿಳಿಯಲ್ಪಟ್ಟಿತು, ಆಗ ಪುನಃ ಭೂಮಿಯಲ್ಲಿ ಸಂಹಾರಕಾರಿಯಾದ ಯಮನಂತೆ ನಿಶ್ಶೇಷವಾಗಿ ಕ್ಷತ್ರಿಯರನ್ನು ವಧಿಸಿದನು.

೩೪. ಮತ್ತೆ ನಾಲ್ಕಾರು ವರ್ಷಗಳೆಂಬ ಅಲ್ಪಕಾಲದಲ್ಲಿ ಜನಿಸಿರುವ ರಾಜವಂಶವನ್ನು ಸಂಹರಿಸುತ್ತ ಭೂಮಿಯಲ್ಲಿ ಎರಡು ವರ್ಷಗಳವರೆಗೆ ಸಂತತವಾಗಿ ಸಂಚರಿಸಿದನು.

ಅಲಂ ರಾಮೇಣ ರಾಜೇಂದ್ರ ಸ್ಮರತಾ ನಿಧನಂ ಪಿತುಃ ।
ತ್ರಿಃಸಪ್ತಕೃತ್ವಃ ಪೃಥಿವೀ ತೇನ ನಿಃಕ್ಷತ್ರಿಯಾ ಕೃತಾ ॥ ೩೫ ॥

ತ್ರಿಃಸಪ್ತಕೃತ್ವಸ್ತನ್ಮಾತಾ ಯದುರಃ ಸ್ವಮತಾಡಯತ್ ।
ತಾವದ್ರಾಮೇಣ ತಸ್ಮಾತ್ತು ಕ್ಷತ್ರಮುತ್ಸಾದಿತಂ ಭುವಿ ॥ ೩೬ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ
ಷಟ್ಚತ್ವಾರಿಂಶತ್ತಮೋಽಧ್ಯಾಯಃ.

---

೩೫. ರಾಜೇಂದ್ರನೆ! ಇದೇ ಕ್ರಮದಲ್ಲಿ ತನ್ನ ಪಿತೃ ಮರಣವನ್ನು ಸ್ಮರಿಸಿ ಕೊಳ್ಳುತ್ತ ರಾಮನಿಂದ ಇಪ್ಪತ್ತೊಂದು ಸಲ ಪೃಥಿವಿಯು ನಿಶ್ಶೇಷವಾಗಿ ಕ್ಷತ್ರಿಯ ಶೂನ್ಯವಾಗಿ ಮಾಡಲ್ಪಟ್ಟಿತು.

೩೬. ರಾಮನ ತಾಯಿಯು ಪತಿಶೋಕ ಪ್ರಸಂಗದಲ್ಲಿ ಇಪ್ಪತ್ತೊಂದು ಸಲ ತನ್ನ ಹೃದಯವನ್ನು ಹೊಡೆದುಕೊಂಡಿದ್ದಳು. ಆದ್ದರಿಂದ ರಾಮನಿಂದ ಅಷ್ಟುಸಲ ಭೂಮಿಯಲ್ಲಿ ಕ್ಷತ್ರಿಯ ವಧವು ಆಚರಿಸಲ್ಪಟ್ಟಿತು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ನಲವತ್ತಾರನೆಯ ಅಧ್ಯಾಯವು
ಮುಗಿದುದು.

## ಸಪ್ತ ಚತ್ವಾರಿಂಶತ್ತಮೋಽಧ್ಯಾಯಃ

**ವಸಿಷ್ಠ ಉವಾಚ:—**

**ತತೋ ಮೂರ್ಧಾಭಿಷಿಕ್ತಾನಾಂ ರಾಜ್ಞಾಮಮಿತತೇಜಸಾಮ್ ।**
**ಷಟ್ಸಹಸ್ರದ್ವಯಂ ರಾಮೋ ಜೀವಗ್ರಾಹಂ ಗೃಹೀತವಾನ್ ॥ ೧ ॥**

**ತತೋ ರಾಜಸಹಸ್ರಾಣಿ ಗೃಹೀತ್ವಾ ಮುನಿಭಿಃ ಸಹ ।**
**ಸ ಜಗಾಮ ಮಹಾತೇಜಾಃ ಕುರುಕ್ಷೇತ್ರಂ ತಪೋಮಯಮ್ ॥ ೨ ॥**

**ಸರಸಾಂ ಪಂಚಕಂ ತತ್ರ ಖಾನಯಿತ್ವಾ ಭೃಗೂದ್ವಹಃ ।**
**ಸುಖಾವಗಾಹತೀರ್ಥಾನಿ ತಾನಿ ಚಕ್ರೇ ಸಮಂತತಃ ॥ ೩ ॥**

**ಜಘಾನ ತತ್ರ ವೈ ರಾಜ್ಞಃ ಶರೀರಪ್ರಭವಾಸೃಜಾ ।**
**ಸರಾಂಸಿ ತಾನಿ ವೈ ಪಂಚ ಪೂರಯಾಮಾಸ ಭಾರ್ಗವಃ ॥ ೪ ॥**

---

೧. ವಸಿಷ್ಠ ಮುನಿಯು ಇಂತೆಂದನು :—ಅನಂತರದಲ್ಲಿ ರಾಮನು ಪಟ್ಟಾಭಿಷಿಕ್ತರೂ, ಅಪರಿಮಿತವಾದ ತೇಜಸ್ಸಿನಿಂದ ಕೂಡಿದವರೂ ಆದ ಹನ್ನೆರಡು ಸಾವಿರ ಕ್ಷತ್ರಿಯ ರಾಜರನ್ನು ಜೀವಸಹಿತವಾಗಿ ಬಂದಿಯಾಗಿ ಹಿಡಿದನು.

೨. ತರುವಾಯ ಸಾವಿರಾರು ರಾಜರನ್ನು ಬಂಧಿಸಿ ಮಹಾ ತೇಜಸ್ವಿಯಾದ ಪರಶುರಾಮನು ಅನೇಕ ಮುನಿಗಳ ಸಂಗಡ ಅನೇಕ ತಪಸ್ವಿಗಳ ವಾಸದಿಂದ ತಪೋಮಯವಾದ ಕುರುಕ್ಷೇತ್ರವನ್ನು ಕುರಿತು ಪ್ರಯಾಣ ಮಾಡಿದನು.

೩. ಭೃಗುಕುಲೋತ್ತಮನಾದ ರಾಮನು ಕುರುಕ್ಷೇತ್ರದಲ್ಲಿ ಐದು ಸರೋವರಗಳನ್ನು ತೋಡಿಸಿ ಅವುಗಳನ್ನು ಕ್ಷೇತ್ರದ ಸುತ್ತಲೂ ಸುಖವಾಗಿ ಅವಗಾಹನ ಸ್ನಾನೋಚಿತವಾದ ತೀರ್ಥಗಳನ್ನಾಗಿ ಮಾಡಿದನು.

೪. ಭಾರ್ಗವನು ಅಲ್ಲಿ ಬಂಧಿಸಿ ಸೆಳೆದುಕೊಂಡು ಹೋಗಿದ್ದ ರಾಜರನ್ನು ಕೊಂದು ಅವರ ದೇಹದಿಂದ ಸುರಿದ ರಕ್ತಪಾತದಿಂದ ಆ ಐದು ಸರೋವರಗಳನ್ನು ತುಂಬಿದನು.

ಸ್ನಾತ್ವಾ ತೇಷು ಯಥಾನ್ಯಾಯಂ ಜಾಮದಗ್ನ್ಯಃ ಪ್ರತಾಪವಾನ್ ।
ಪಿತೄನ್ ಸಂತರ್ಪಯಾಮಾಸ ಯಥಾಶಾಸ್ತ್ರಮತಂದ್ರಿತಃ ॥ ೫ ॥

ಪಿತುಃ ಪ್ರೇತಸ್ಯ ರಾಜೇಂದ್ರ ಶ್ರಾದ್ಧಾದಿಕಮಶೇಷತಃ ।
ಬ್ರಾಹ್ಮಣೈಃ ಸಹ ಮಾತುಶ್ಚ ತತ್ರ ಚಕ್ರೇ ಯಥೋದಿತಮ್ ॥ ೬ ॥

ಏವಂ ತೀರ್ಣಪ್ರತಿಜ್ಞಃ ಸ ಕುರುಕ್ಷೇತ್ರೇ ತಪೋಮಯೇ ।
ಉವಾಸಾತಂದ್ರಿತಃ ಸಮ್ಯಕ್ ಪಿತೃಪೂಜಾಪರಾಯಣಃ ॥ ೭ ॥

ತತಃ ಪ್ರಭೃತ್ಯಭೂದ್ರಾಜಂಸ್ತೀರ್ಥಾನಾಮುತ್ತಮೋತ್ತಮಮ್ ।
ವಿಹಿತಂ ಜಾಮದಗ್ನ್ಯೇನ ಕುರುಕ್ಷೇತ್ರೇ ತಪೋವನೇ ॥ ೮ ॥

ಸ್ಯಮಂತಪಂಚಕಮಿತಿ ಸ್ಥಾನಂ ತ್ರೈಲೋಕ್ಯ ವಿಶ್ರುತಮ್ ।
ಯತ್ರ ಚಕ್ರೇ ಭೃಗುಶ್ರೇಷ್ಠಃ ಪಿತೄಣಾಂ ತೃಪ್ತಿಮಕ್ಷಯಾಮ್ ॥ ೯ ॥

---

೫. ಪ್ರತಾಪಶಾಲಿಯಾದ ಭಾರ್ಗವರಾಮನು ಆ ಸರೋವರಗಳಲ್ಲಿ ಯಥಾವಿಧಿಯಾಗಿ ಸ್ನಾನಮಾಡಿ ಆಲಸ್ಯವಿಲ್ಲದಂತೆ ಉತ್ಸಾಹಶಾಲಿಯಾಗಿ ಶಾಸ್ತ್ರವಿಧಾನವನ್ನು ಅನುಸರಿಸಿ ಪಿತೃಗಳಿಗೆ ತರ್ಪಣಾಂಜಲಿಯನ್ನು ಕೊಟ್ಟನು.

೬. ರಾಜೇಂದ್ರನೆ! ಮೃತರಾದ ತಂದೆ-ತಾಯಿಗಳ ಶ್ರಾದ್ಧ ಮೊದಲಾದ ಅಶೇಷ ಕರ್ಮಗಳನ್ನು ಶಾಸ್ತ್ರಗಳಲ್ಲಿ ವಿಧಿಸಿದಂತೆ ಅನೇಕ ಬ್ರಾಹ್ಮಣರಿಂದ ಸೇರಿ ಆ ಕ್ಷೇತ್ರದಲ್ಲಿ ಆಚರಿಸಿದನು.

೭. ಹೀಗೆ ಪ್ರತಿಜ್ಞೆಯನ್ನು ಪೂರ್ತಿಗೊಳಿಸಿದ ರಾಮನು ಆದರದಿಂದ ಪಿತೃ ಪೂಜೆಯಲ್ಲಿ ಆಸಕ್ತನಾಗಿ ಸ್ವಲ್ಪವೂ ಪ್ರಮಾದವಿಲ್ಲದೆ ತಪೋಮಯವಾದ ಆ ಕುರುಕ್ಷೇತ್ರದಲ್ಲಿ ವಾಸಮಾಡಿದನು.

೮. ರಾಜನೆ! ಆ ಮೊದಲುಗೊಂಡು ತಪೋಮಯವಾದ ಕುರುಕ್ಷೇತ್ರದಲ್ಲಿ ಜಾಮದಗ್ನ್ಯ ರಾಮನಿಂದ ನಿರ್ಮಿಸಲ್ಪಟ್ಟ ಆ ತೀರ್ಥವು ಸಮಸ್ತ ತೀರ್ಥಗಳಲ್ಲಿ ಉತ್ತಮವಾಯಿತು.

೯. ಭೃಗುವಂಶ ಶ್ರೇಷ್ಠನಾದ ರಾಮನು ತನ್ನ ಪಿತೃಗಳಿಗೆ ಅಕ್ಷಯವಾದ ತೃಪ್ತಿಯನ್ನು ಉಂಟುಮಾಡಿರುವ ಆ ತೀರ್ಥವು ಸ್ಯಮಂತ ಪಂಚಕವೆಂದು ಮೂರು ಲೋಕಗಳಲ್ಲಿ ಪ್ರಸಿದ್ಧಿಯನ್ನು ಹೊಂದಿದ ಸ್ಥಾನವಾಯಿತು.

ಸ್ನಾನದಾನತಪೋಹೋಮದ್ವಿಜಭೋಜನತರ್ಪಣೈಃ ।
ಭೃಶಮಾಪ್ಯಾಯಿತಾಸ್ತೇನ ಯತ್ರ ತೇ ಪಿತರೋಽಖಿಲಾಃ ॥ ೧೦ ॥

ಅವಾಪುರಕ್ಷಯಾಂ ತೃಪ್ತಿಂ ಪಿತೃಲೋಕಂ ಚ ಶಾಶ್ವತಮ್ ।
ಸ್ಯಮಂತಪಂಚಕಂ ನಾಮ ತೀರ್ಥಂ ಲೋಕೇ ಪರಿಶ್ರುತಮ್ ॥ ೧೧ ॥

ಸರ್ವಪಾಪಕ್ಷಯಕರಂ ಮಹಾಪುಣ್ಯೋಪಬೃಂಹಿತಮ್ ।
ಮರ್ತ್ಯಾನಾಂ ಯತ್ರ ಯಾತಾನಾಮೇನಾಂಸಿ ನಿಖಿಲಾನಿ ತು ॥ ೧೨ ॥

ದೂರಾದೇವಾಪಯಾಸ್ಯಂತಿ ಪ್ರವಾತೇ ಶುಷ್ಕಪರ್ಣವತ್ ।
ತತ್ಕ್ಷೇತ್ರಚರ್ಯಾಗಮನಂ ಮರ್ತ್ಯಾನಾಮಸತಾಮಿಹ ॥ ೧೩ ॥

ನ ಲಭ್ಯತೇ ಮಹಾರಾಜ ಜಾತು ಜನ್ಮಶತೈರಪಿ ।
ಸ್ಯಮಂತಪಂಚಕಂ ತೀರ್ಥಂ ಕುರುಕ್ಷೇತ್ರೇಽತಿಪಾವನಮ್ ॥ ೧೪ ॥

---

೧೦. ರಾಮನು ಆ ಕ್ಷೇತ್ರದಲ್ಲಿ ತನ್ನ ಸಮಸ್ತ ಪಿತೃಗಳನ್ನು ಉದ್ದೇಶಿಸಿ ಸ್ನಾನ, ದಾನ, ತಪಸ್ಸು, ಹೋಮ, ಬ್ರಾಹ್ಮಣ ಭೋಜನ ಮತ್ತು ತರ್ಪಣ ಕ್ರಿಯೆಗಳನ್ನು ಆಚರಿಸಿ ಪಿತೃಗಳಿಗೆ ತೃಪ್ತಿಯನ್ನು ಸಂಪಾದಿಸಿದನು.

೧೧. ಆಗ ಪಿತೃಗಳು ಅಕ್ಷಯವಾದ ತೃಪ್ತಿಯನ್ನೂ ಶಾಶ್ವತವಾದ ಪಿತೃಲೋಕವನ್ನೂ ಹೊಂದಿದರು. ಆದರಿಂದ ಸ್ಯಮಂತ ಪಂಚಕ ಎಂಬ ತೀರ್ಥವು ಲೋಕಗಳಲ್ಲಿ ಪ್ರಸಿದ್ಧಿಗೊಂಡಿತು.

೧೨. ಆ ತೀರ್ಥವು ಸಮಸ್ತ ಪಾಪಗಳನ್ನು ನಾಶಮಾಡುವುದೂ, ಮಹಾಪುಣ್ಯಗಳನ್ನು ಆರ್ಜನಮಾಡುವುದೂ ಆಗಿದೆ. ಆ ತೀರ್ಥವನ್ನು ಸೇವಿಸಿದ ಮಾನವರ ಸಮಸ್ತ ಪಾಪಗಳು ದೂರವಾಗುವುವು.

೧೩. ಆ ತೀರ್ಥಸೇವಿಗಳ ಮಹಾಪಾತಕಗಳು ಬಿರುಗಾಳಿಯಿಂದ ಒಣಗಿದ ಎಲೆಯು ಹಾರಿಹೋಗುವಂತೆ ದೂರ ಓಡುವುವು. ಅಂತಹ ಪುಣ್ಯಕ್ಷೇತ್ರಾಟನವು ದುಷ್ಟರಾದ ಮಾನವರಿಗೆ ಲಭ್ಯವಾಗುವುದಿಲ್ಲ.

೧೪. ಮಹಾರಾಜನೆ! ಪಾಪಿ ಜನಗಳಿಗೆ ನೂರಾರು ಜನ್ಮಗಳನ್ನು ಕಳೆದರೂ ಕುರುಕ್ಷೇತ್ರದಲ್ಲಿದ್ದ ಅತ್ಯಂತ ಪಾವನವಾದ ಸ್ಯಮಂತ ಪಂಚಕವೆಂಬ ತೀರ್ಥವು ಲಭ್ಯವಾಗಲಾರದು.

ಯತ್ರ ಸ್ನಾತಃ ಸರ್ವತೀರ್ಥೈಃ ಸ್ನಾತೋ ಭವತಿ ಮಾನವಃ ।
ಕೃತಕೃತ್ಯಸ್ತತೋ ರಾಮಃ ಸಮ್ಯಕ್ ಪೂರ್ಣಮನೋರಥಃ ॥ ೧೫ ॥

ಉವಾಸ ತತ್ರ ನಿಯತಃ ಕಂಚಿತ್ಕಾಲಂ ಮಹಾಮತಿಃ ।
ತತಃ ಸಂವತ್ಸರಸ್ಯಾಂತೇ ಬ್ರಾಹ್ಮಣೈಃ ಸಹಿತೋ ವಶೀ ॥ ೧೬ ॥

ಪಿತೃಪಿಂಡಪ್ರದಾನಾಯ ಜಾಮದಗ್ನ್ಯೋಽಗಮದ್ಗಯಾಮ್ ।
ತತೋ ಗತ್ವಾ ತತಃ ಶ್ರಾದ್ಧೇ ಯಥಾಶಾಸ್ತ್ರಮರಿಂದಮಃ ॥ ೧೭ ॥

ಬ್ರಾಹ್ಮಣಾಂಸ್ತರ್ಪಯಾಮಾಸ ಪಿತೄನುದ್ದಿಶ್ಯ ಸತ್ಕೃತಾನ್ ।
ಶೈವಂ ತತ್ರ ಪರಂ ಸ್ಥಾನಂ ಚಂದ್ರಪಾದಮಿತಿ ಸ್ಮೃತಮ್ ॥ ೧೮ ॥

ಪಿತೃತೃಪ್ತಿಕರಂ ಕ್ಷೇತ್ರಂ ತಾದೃಗ್ಲೋಕೇ ನ ವಿದ್ಯತೇ ।
ಯತ್ರಾರ್ಚಿತಾಃ ಸ್ವಕುಲಜೈರ್ಯಥಾಶಕ್ತಿ ಮನಾಗಪಿ ॥ ೧೯ ॥

---

೧೫. ಆ ತೀರ್ಥದಲ್ಲಿ ಸ್ನಾನಮಾಡಿದ ಮನುಜನು ಸಮಸ್ತ ತೀರ್ಥಸ್ನಾನದ ಫಲಗಳಿಗೆ ಭಾಗಿಯಾಗುವನು, ಮತ್ತು ಕೃತಕೃತ್ಯನಾಗುವನು. ಆಮೇಲೆ ರಾಮನು ಚನ್ನಾಗಿ ಪೂರ್ಣವಾದ ಇಷ್ಟಾರ್ಥವುಳ್ಳವನಾದನು.

೧೬. ಮಹಾಬುದ್ಧಿಶಾಲಿಯಾದ ರಾಮನು ಆ ತೀರ್ಥದಲ್ಲಿ ಜಿತೇಂದ್ರಿಯನಾಗಿ ಸ್ವಲ್ಪ ಕಾಲ ವಾಸಮಾಡಿದನು. ಅನಂತರದಲ್ಲಿ ಸರ್ವ ಸ್ವತಂತ್ರನಾದ ರಾಮನು ಒಂದು ಸಂವತ್ಸರದ ಕಡೆಯಲ್ಲಿ ಅನೇಕ ಬ್ರಾಹ್ಮಣರಿಂದೊಡಗೂಡಿ ಮಾತಾಪಿತೃಗಳ ಆಬ್ದಿಕ ಕರ್ಮವನ್ನು ಆಚರಿಸಿದನು.

೧೭. ಆಗ ಜಾಮದಗ್ನ್ಯ ರಾಮನು ಪಿತೃಗಳಿಗೆ ಪಿಂಡದಾನಮಾಡಲು ಉತ್ತಮವಾದ ಗಯಾ ಕ್ಷೇತ್ರಕ್ಕೆ ಹೋದನು. ಶತ್ರುಂಜಯನಾದ ರಾಮನು ಆ ಗಯಾ ಕ್ಷೇತ್ರದಲ್ಲಿ ಯಥಾ ಶಾಸ್ತ್ರವಾಗಿ ಪಿತೃಶ್ರಾದ್ಧವನ್ನು ಆಚರಿಸಿದನು.

೧೮. ಆ ಪ್ರಸಂಗದಲ್ಲಿ ಮೊದಲು ಸತ್ಕರಿಸಲ್ಪಟ್ಟ ಪಿತೃಗಳನ್ನು ಉದ್ದೇಶಮಾಡಿ ಬ್ರಾಹ್ಮಣರಿಗೆ ಸಂತರ್ಪಣ ಮಾಡಿಸಿದನು. ಆ ಸ್ಥಳದಲ್ಲಿ "ಚಂದ್ರಪಾದ" ಎಂದು ಸ್ಮರಿಸಲ್ಪಟ್ಟಿರುವ ಶಿವನ ಸಂಬಂಧವಾದ ಪೂಜ್ಯಸ್ಥಾನವು ಇರುವುದು.

೧೯. ಪಿತೃಗಳಿಗೆ ತೃಪ್ತಿಯನ್ನು ಉಂಟುಮಾಡುವ ಅಂತಹ ಉತ್ತಮ ಕ್ಷೇತ್ರವು ಲೋಕದಲ್ಲಿ ಬೇರೊಂದು ಇಲ್ಲ. ಪುಣ್ಯಾತ್ಮರಾದ ವಂಶಪುರುಷರಿಂದ ಯಥಾಶಕ್ತಿಯಾಗಿ ಕಿಂಚಿತ್ತಾದರೂ ಅಲ್ಲಿ ಪಿತೃಗಳು ಪೂಜಿಸಲ್ಪಡಬೇಕು.

ಪಿತರಃ ಪಿಂಡದಾನಾದ್ಯೈಃ ಪ್ರಾಪ್ಸ್ಯಂತಿ ಗತಿಮಕ್ಷಯಾಮ್ ।
ಪಿತೄನುದ್ದಿಶ್ಯ ತತ್ರಾಸೌ ತರ್ಪಿತೇಷು ದ್ವಿಜಾತಿಷು ॥ ೨೦ ॥

ದದೌ ಚ ವಿಧಿವತ್ಪಿಂಡಂ ಪಿತೃಭಕ್ತಿಸಮನ್ವಿತಃ ।
ತತಸ್ತತ್ಪಿತರಃ ಸರ್ವೇ ಪಿತೃಲೋಕಾದುಪಾಗತಾಃ ॥ ೨೧ ॥

ಜಗೃಹುಸ್ತತ್ಕೃತಾಂ ಪೂಜಾಂ ಜಮದಗ್ನಿಪುರೋಗಮಾಃ ।
ಅಥ ಸಂಪ್ರೀತಮನಸಃ ಸಮೇತ್ಯ ಭೃಗುನಂದನಮ್ ॥ ೨೨ ॥

ಊಚುಸ್ತತ್ಪಿತರಃ ಸರ್ವೇ ದೃಶ್ಯಾ ಭೂತ್ವಾಂತರಿಕ್ಷಗಾಃ ।
ಪಿತರ ಊಚುಃ :—
ಮಹತ್ಕರ್ಮ ಕೃತಂ ವೀರ ಭವತಾನ್ಯೈಃ ಸುದುಷ್ಕರಮ್ ॥ ೨೩ ॥

ಅಸ್ಮಾನಪಿ ಯಥಾನ್ಯಾಯಂ ಸಮ್ಯಕ್ ತರ್ಪಿತವಾನಸಿ ।
ಅಸ್ಮಾಕಮಕ್ಷಯಾಂ ಪ್ರೀತಿಂ ತಥಾಪಿ ತ್ವಂ ನ ಯಚ್ಛಸಿ ॥ ೨೪ ॥

---

೨೦. ಆ ಕ್ಷೇತ್ರದಲ್ಲಿ ಪಿಂಡದಾನಾದಿಕರ್ಮಗಳಿಂದ ಪಿತೃಗಳು ಶಾಶ್ವತವಾದ ಉತ್ತಮ ಗತಿಯನ್ನು ಹೊಂದುತ್ತಾರೆ. ಅಲ್ಲಿ ಈ ರಾಮನು ಪಿತೃಗಳನ್ನು ಉದ್ದೇಶಿಸಿ ಮೊದಲು ಬ್ರಾಹ್ಮಣರ ಸಂತರ್ಪಣವನ್ನು ಮಾಡಿದನು.

೨೧. ಅನಂತರದಲ್ಲಿ ಅತಿಶಯವಾದ ಪಿತೃಭಕ್ತಿಯಿಂದ ಕೂಡಿದವನಾಗಿ ವಿಧಿವತ್ತಾಗಿ ಪಿಂಡದಾನವನ್ನು ಮಾಡಿದನು. ಆಗ ಪಿತೃಲೋಕದಿಂದ ರಾಮನ ಎಲ್ಲ ಪಿತೃಗಳು ಅಲ್ಲಿಗೆ ಬಂದರು.

೨೨. ಮತ್ತು ಜಮದಗ್ನಿ ಮುಂತಾದ ಎಲ್ಲ ಪಿತೃಗಳು ರಾಮನಿಂದ ಮಾಡಲ್ಪಟ್ಟ ಪೂಜೆಯನ್ನು ಸ್ವೀಕರಿಸಿ ಪ್ರೀತಿಗೊಂಡ ಮಾನಸವುಳ್ಳವರಾಗಿ ಭೃಗು ನಂದನನಾದ ರಾಮನನ್ನು ಕುರಿತು ಎಲ್ಲರೂ ಸೇರಿ ಮಾತನಾಡಿದರು.

೨೩. ಆ ಪಿತೃಗಳು ಎಲ್ಲರೂ ಅಂತರಿಕ್ಷದಲ್ಲಿ ಪ್ರತ್ಯಕ್ಷರಾಗಿ ನಿಂತು ಈ ವಚನವನ್ನು ಹೇಳಿದರು. ಪಿತೃಗಳು ಹೀಗೆ ಹೇಳಿದರು:—ವೀರನೆ! ಮತ್ತಾರಿಂದಲೂ ಮಾಡಲಾಗದ ಮಹತ್ತಾದ ಕರ್ಮವು ನಿನ್ನಿಂದ ಮಾಡಲ್ಪಟ್ಟಿತು.

೨೪. ನ್ಯಾಯಸಮ್ಮತವಾಗಿ ನಮ್ಮನ್ನು ಚೆನ್ನಾಗಿ ತೃಪ್ತಿಗೊಳಿಸಿದವನಾಗಿರುತ್ತೀ. ಆದರೂ ಕೂಡ ನೀನು ನಮಗೆ ಅಕ್ಷಯವಾದ ಪ್ರೀತಿಯನ್ನು ದೊರಕಿಸಿದವನಾಗಿರುವುದಿಲ್ಲ.

ಕ್ಷತ್ರಹತ್ಯಾಂ ಹಿ ಕೃತ್ವಾ ತು ಕೃತಂ ಕರ್ಮಾರ್ಭವದ್ಯತಃ ।
ಕ್ಷೇತ್ರಸ್ಯಾಸ್ಯ ಪ್ರಭಾವೇಣ ಭಕ್ತ್ಯಾ ಚ ತವ ದರ್ಶನಮ್ ॥ ೨೫ ॥

ಪ್ರಾಪ್ತಾಃ ಸ್ಮ ಪೂಜಿತಾಃ ಕಿಂ ತು ನಾಕ್ಷಯ್ಯಫಲಭಾಗಿನಃ ।
ತಸ್ಮಾತ್ತ್ವಂ ವೀರಹತ್ಯಾದಿಪಾಪಪ್ರಶಮನಾಯ ಹಿ ॥ ೨೬ ॥

ಪ್ರಾಯಶ್ಚಿತಂ ಯಥಾನ್ಯಾಯಂ ಕುರು ಧರ್ಮಂ ಚ ಶಾಶ್ವತಮ್ ।
ವಧಾಚ್ಚ ವಿನಿವರ್ತಸ್ವ ಕ್ಷತ್ರಿಯಾಣಾಮತಃ ಪರಮ್ ॥ ೨೭ ॥

ಪಿತುರ್ನ ತೇಽಪರಾಧ್ಯಂತೇ ನ ಸ್ವತಂತ್ರಂ ಯತೋ ಜಗತ್ ।
ತನ್ನಿಮಿತ್ತಂ ತು ಮರಣಂ ಪಿತುಸ್ತೇ ವಿಹಿತಂ ಪುರಾ ॥ ೨೮ ॥

ಹಂತುಂ ಕಃ ಕಂ ಸಮರ್ಥಃ ಸ್ಯಾಲ್ಲೋಕೇ ರಕ್ಷಿತುಮೇವ ವಾ ।
ನಿಮಿತ್ತಮಾತ್ರಮೇವೇಹ ಸರ್ವಃ ಸರ್ವಸ್ಯ ಚೈತಯೋಃ ॥ ೨೯ ॥

---

೨೫. ಕ್ರೂರವಾದ ಕ್ಷತ್ರಹತ್ಯಾಪಾತಕ ಪೂರ್ವಕವಾಗಿ ಈ ಶ್ರಾದ್ಧ ಕರ್ಮವು ನಿನ್ನಿಂದ ಆಚರಿಸಲ್ಪಟ್ಟಿರುವುದು. ಈ ಕ್ಷೇತ್ರದ ಮಾಹಾತ್ಮ್ಯದಿಂದಲೂ ನಿನ್ನ ಭಕ್ತಿ ವಿಶೇಷದಿಂದಲೂ ನಿನಗೆ ದರ್ಶನವನ್ನು ಕೊಟ್ಟಿರುತ್ತೇವೆ.

೨೬. ಮತ್ತು ನಿನ್ನಿಂದ ಪೂಜಿಸಲ್ಪಟ್ಟಿರುತ್ತೇವೆ. ಆದರೆ ಕ್ರೂರಮಹಾಪಾತಕ ಸಂಪರ್ಕದಿಂದ ಅಕ್ಷಯ ಫಲಕ್ಕೆ ಮಾತ್ರ ಭಾಗಿಗಳಾಗಲಿಲ್ಲ, ಆದ್ದರಿಂದ ನೀನು ವೀರ ಹತ್ಯಾ ಮಹಾಪಾಪವನ್ನು ಶಾಂತಿ ಮಾಡಿಕೊಳ್ಳಬೇಕು.

೨೭. ಆದಕ್ಕೋಸ್ಕರ ನ್ಯಾಯಸಮ್ಮತವಾಗಿ ಪ್ರಾಯಶ್ಚಿತ್ತ ಕರ್ಮವನ್ನೂ ಶಾಶ್ವತವಾದ ಧರ್ಮ ಕಾರ್ಯವನ್ನೂ ಆಚರಿಸು. ಮತ್ತು ಇನ್ನು ಮುಂದೆ ವೀರ ಕ್ಷತ್ರಿಯರ ವಧದಿಂದ ನಿವೃತ್ತನಾಗು

೨೮. ಆ ರಾಜಪುತ್ರರು ನಿನ್ನ ಪಿತೃಗಳ ವಿಷಯದಲ್ಲಿ ಅಪರಾಧವನ್ನು ಮಾಡಿಲ್ಲ. ಈ ಜಗತ್ತು ಎಂದಿಗೂ ಸ್ವತಂತ್ರವಾದುದಲ್ಲ. ಪೂರ್ವದಲ್ಲಿ ನಿನ್ನ ತಂದೆಗೆ ಆ ರಾಜ ಪುತ್ರರ ನಿಮಿತ್ತವಾಗಿ ಮರಣಪ್ರಾಪ್ತಿಯು ವಿಹಿತವಾಗಿತ್ತು.

೨೯. ಲೋಕದಲ್ಲಿ ಯಾರು ಯಾರನ್ನು ಸಂಹರಿಸಲು ಅಥವಾ ರಕ್ಷಿಸಲು ಸಮರ್ಥರಾಗುವರು? ಎಲ್ಲರೂ ಎಲ್ಲರ ವಿಷಯದಲ್ಲಿಯೂ ಆಗುವ ಪಾಲನ-ಸಂಹಾರಗಳಿಗೆ ನಿಮಿತ್ತ ಮಾತ್ರರಾಗುವರು, ಸ್ವತಂತ್ರರಲ್ಲ.

ಧ್ರುವಂ ಕರ್ಮಾನುರೂಪಂ ತೇ ಚೇಷ್ಟಂತೇ ಸರ್ವ ಏವ ಹಿ ।
ಕಾಲಾನುವೃತ್ತ್ಯಾ ಬಲವಾನ್ ಸ್ವಲೋಕೋ ನಾತ್ರ ಸಂಶಯಃ ॥ ೩೦ ॥

ಬಾಧಿತುಂ ಭುವಿ ಭೂತಾನಿ ಭೂತಾನಾಂ ನ ವಿಧಿಂ ವಿನಾ ।
ಶಕ್ಯತೇ ವತ್ಸ ಸರ್ವೋಽಪಿ ಯತಃ ಶಕ್ತ್ಯಾ ಸ್ವಕರ್ಮಕೃತ್ ॥ ೩೧ ॥

ಕ್ಷತ್ರಂ ಪ್ರತಿ ತತೋ ರೋಷಂ ವಿಮುಚ್ಯಾಸ್ಮತ್ಪ್ರಿಯೇಪ್ಸಯಾ ।
ಶಮಮಾಪ್ನುಹಿ ಭದ್ರಂ ತೇ ಸ ಹ್ಯಸ್ಮಾಕಂ ಪರಂ ಬಲಮ್ ॥ ೩೨ ॥

ವಸಿಷ್ಠ ಉವಾಚ :—

ಇತ್ಯುಕ್ತ್ವಾಂತರ್ದಧುಃ ಸರ್ವೇ ಪಿತರೋ ಭೃಗುನಂದನಮ್ ।
ಸ ಚಾಪಿ ತದ್ವಚಃ ಸರ್ವಂ ಪ್ರತಿಜಗ್ರಾಹ ಸಾದರಮ್ ॥ ೩೩ ॥

ಅಕೃತವ್ರಣಸಂಯುಕ್ತೋ ಮುದಾ ಪರಮಯಾ ಯುತಃ ।
ಪ್ರಯಯೌ ಚ ತದಾ ರಾಮಸ್ತಸ್ಮಾತ್ಸಿದ್ಧವನಾಶ್ರಮಮ್ ॥ ೩೪ ॥

---

೩೦. ಲೋಕದಲ್ಲಿ ಇರುವ ಪ್ರಜೆಗಳೆಲ್ಲರೂ ಕಾಲ-ಮತ್ತು ಕರ್ಮಗಳನ್ನು ಅನುಸರಿಸಿ ಅವುಗಳಿಗೆ ಅನುರೂಪವಾಗಿ ಯತ್ನಿಸುತ್ತಿರುವರು. ಕಾಲದ ಹೊಂದಿಕೆಯಿಂದ ಲೋಕವು ಪ್ರಬಲವಾಗುವುದು, ಇದರಲ್ಲಿ ಸಂಶಯವಿಲ್ಲ.

೩೧. ವತ್ಸನೆ! ಭೂತಗಳು ಇತರ ಭೂತಗಳನ್ನು ಬಾಧಿಸಲು ಭೂಮಿಯಲ್ಲಿ ವಿಧಿಶಕ್ತಿಯನ್ನು ಬಿಟ್ಟು ಸ್ವತಂತ್ರವಾಗಿ ಶಕ್ತಿಹೊಂದಿಲ್ಲ. ಈ ನ್ಯಾಯದಿಂದ ಸರ್ವರೂ ವಿಧಿಶಕ್ತಿಯನ್ನು ಅನುಸರಿಸಿ ಸ್ವಕರ್ಮವನ್ನು ಆಚರಿಸುವರು.

೩೨. ಆದುದರಿಂದ ನೀನು ನಮ್ಮ ಪ್ರಿಯವನ್ನು ರಕ್ಷಿಸುವುದಕ್ಕೋಸ್ಕರ ಕ್ಷತ್ರಿಯ ಜಾತಿಯಲ್ಲಿ ವಿರೋಧವನ್ನು ಬಿಟ್ಟು ಶಾಂತಿಯನ್ನು ಹೊಂದು, ಇದರಿಂದ ನಿನಗೆ ಕಲ್ಯಾಣವಾಗಲಿ. ಶಮವೆಂಬುದು ನಮಗೆ ಹೆಚ್ಚಿನ ಧನವು.

೩೩. ವಸಿಷ್ಠ ಮುನಿಯು ಇಂತೆಂದನು :—ಎಲ್ಲ ಪಿತೃಗಳು ಭೃಗುವಂಶೋತ್ಪನ್ನನಾದ ರಾಮನನ್ನು ಕುರಿತು ಈ ರೀತಿಯಾಗಿ ಹೇಳಿ ಅದೃಶ್ಯರಾದರು. ರಾಮನು ಕೂಡ ಆ ಎಲ್ಲ ಪಿತೃವಚನವನ್ನು ಆದರದಿಂದ ಅಂಗೀಕರಿಸಿದನು.

೩೪. ಆದುದರಿಂದ ಆಗ ರಾಮನು ಅಕೃತವ್ರಣಮಿತ್ರನೊಂದಿಗೆ ಅಮಿತವಾದ ಆನಂದದಿಂದ ಸಿದ್ಧವನದಲ್ಲಿರುವ ಆಶ್ರಮವನ್ನು ಕುರಿತು ಪ್ರಯಾಣ ಮಾಡಿದನು.

ತಸ್ಮಿನ್ ಸ್ಥಿತ್ವಾ ಭೃಗುಶ್ರೇಷ್ಠೋ ಬ್ರಾಹ್ಮಣೈಃ ಸಹಿತೋ ನೃಪ ।
ತಪಸೇ ಧೃತಸಂಕಲ್ಪೋ ಬಭೂವ ಸ ಮಹಾಮನಾಃ ॥ ೩೫ ॥

ಸರಥಂ ಸಹಸಾಹಂ ಚ ಧನುಃಸಂಹನನಾನಿ ಚ
ಪುನರಾಗಮಸಂಕೇತಂ ಕೃತ್ವಾ ಪ್ರಾಸ್ಥಾಪಯತ್ತದಾ ॥ ೩೬ ॥

ತತಃ ಸ ಸರ್ವತೀರ್ಥೇಷು ಚಕ್ರೇ ಸ್ನಾನಮತಂದ್ರಿತಃ ।
ಪರೀತ್ಯ ಪೃಥಿವೀಂ ಸರ್ವಾಂ ಪಿತೃದೇವಾದಿಪೂಜಕಃ ॥ ೩೭ ॥

ಏವಂ ಕ್ರಮೇಣ ಪೃಥಿವೀಂ ತ್ರಿವಾರಂ ಭೃಗುನಂದನಃ ।
ಪರಿಚಕ್ರಾಮ ರಾಜೇಂದ್ರ ಲೋಕವೃತ್ತಮನುವ್ರತಃ ॥ ೩೮ ॥

ತತಃ ಸ ಪರ್ವತಶ್ರೇಷ್ಠಂ ಮಹೇಂದ್ರಂ ಪುನರಪ್ಯಥ ।
ಜಗಾಮ ತಪಸೇ ರಾಜನ್ ಬ್ರಾಹ್ಮಣೈರಭಿಸಂವೃತಃ ॥ ೩೯ ॥

---

೩೫. ರಾಜನೆ! ಸ್ಥಿರವಾದ ಮಾನಸವುಳ್ಳವನೂ ಭೃಗುವಂಶ ಶ್ರೇಷ್ಠನೂ ಆದ ರಾಮನು ಬ್ರಾಹ್ಮಣರೊಡನೆ ಸಿದ್ಧವನಾಶ್ರಮದಲ್ಲಿ ನಿಂತು ತಪಸ್ಸನ್ನು ಆಚರಿಸಲು ಸ್ಥಿರವಾದ ಸಂಕಲ್ಪವುಳ್ಳವನಾದನು.

೩೬. ಆಗ ಯುದ್ಧದಲ್ಲಿ ಉಪಯೋಗವನ್ನು ಹೊಂದಿದ ರಥ, ಸಹಸಾಹನೆಂಬ ಸಾರಥಿ, ಮತ್ತು ಬಿಲ್ಲು-ಕವಚ ಮುಂತಾದ ಇತರ ಉಪಕರಣಗಳನ್ನು ಅವಶ್ಯವಾಗುವ ಸಮಯದಲ್ಲಿ ಮತ್ತೆ ಬಂದು ಸೇರುವ ಸಂಕೇತದಿಂದ ಕಳುಹಿಸಿಬಿಟ್ಟನು.

೩೭. ಅನಂತರದಲ್ಲಿ ಆ ರಾಮನು ಪಿತೃ-ದೇವತಾ ಪೂಜನದಲ್ಲಿ ಆಸಕ್ತಿಯಿಂದ ಸ್ವಲ್ಪವೂ ಪ್ರಮಾದವಿಲ್ಲದೆ ಸಕಲ ಪೃಥಿವಿಯನ್ನು ಸಂಚರಿಸುತ್ತ ಅಲ್ಲಲ್ಲಿರುವ ಸರ್ವ ತೀರ್ಥಗಳಲ್ಲಿ ಸ್ನಾನವನ್ನು ಮಾಡಿದನು.

೩೮. ರಾಜೇಂದ್ರನೆ! ಈ ಕ್ರಮದಿಂದ ಭೃಗುವಂಶನಂದನನಾದ ರಾಮನು ಲೋಕವೃತ್ತವನ್ನು ಅನುಸರಿಸುವ ದೃಢವಾದ ವ್ರತವನ್ನು ಕೈಗೊಂಡವನಾಗಿ ಸಮಸ್ತ ಪೃಥಿವಿಯನ್ನು ಸಂಚರಿಸಿದನು.

೩೯. ರಾಜನೆ! ತರುವಾಯ ಆ ರಾಮನು ಅನೇಕ ಬ್ರಾಹ್ಮಣರೊಡಗೂಡಿ ತಪವನ್ನು ಆಚರಿಸಲು ಮತ್ತೆ ಪರ್ವತೋತ್ತಮವಾದ ಮಹೇಂದ್ರಗಿರಿಗೆ ಪ್ರಯಾಣ ಮಾಡಿದನು.

ಸ ತಸ್ಮಿಂಶ್ಚಿರರಾತ್ರಾಯ ಮುನಿಸಿದ್ಧನಿಷೇವಿತೇ ।
ನಿವಾಸಮಾತ್ಮನೋ ರಾಜನ್ ಕಲ್ಪಯಾಮಾಸ ಧರ್ಮವಿತ್ ॥ ೪೦ ॥

ಮುನಯಸ್ತಂ ತಪಸ್ಯಂತಂ ಸರ್ವಕ್ಷೇತ್ರನಿವಾಸಿನಃ ।
ದ್ರಷ್ಟುಕಾಮಾಃ ಸಮಾಜಗ್ಮುರ್ನಿಯತಾ ಬ್ರಹ್ಮವಾದಿನಃ ॥ ೪೧ ॥

ದದೃಶುಸ್ತೇ ಮುನಿಗಣಾಸ್ತಪಸ್ಯಾಸಕ್ತಮಾನಸಮ್ ।
ಕ್ಷಾತ್ರಂ ಕಕ್ಷಮಶೇಷೇಣ ದಗ್ಧ್ವಾ ಶಾಂತಮಿವಾನಲಮ್ ॥ ೪೨ ॥

ಅಥ ತಾನಾಗತಾನ್ ದೃಷ್ಟ್ವಾ ಮುನೀನ್ ದಿವ್ಯಾಂಸ್ತಪೋಮಯಾನ್ ।
ಅರ್ಘ್ಯಾದಿಸಮುದಾಚಾರೈಃ ಪೂಜಯಾಮಾಸ ಭಾರ್ಗವಃ ॥ ೪೩ ॥

ಕೃತಕೌಶಲಸಂಪ್ರಶ್ನಪೂರ್ವಕಾಃ ಸುಮಹೋದಯಾಃ ।
ತೇಷಾಂ ತಸ್ಯ ಚ ಸಂವೃತ್ತಾಃ ಕಥಾಃ ಪುಣ್ಯಾ ಮನೋಹರಾಃ ॥ ೪೪ ॥

---

೪೦. ರಾಜನೆ! ಧರ್ಮಜ್ಞನಾದ ಆ ಪರಶುರಾಮನು ಮುನಿಗಳಿಂದಲೂ ಸಿದ್ಧರಿಂದಲೂ ಸೇವಿಸಲ್ಪಟ್ಟ ಆ ಮಹೇಂದ್ರಗಿರಿಯಲ್ಲಿ ಬಹುಕಾಲ ತನ್ನ ವಸತಿಯನ್ನು ಕಲ್ಪಿಸಿಕೊಂಡನು.

೪೧. ನಿಯಮವಂತರೂ ಬ್ರಹ್ಮವಾದಿಗಳೂ ಮತ್ತು ಆಯಾಯ ಪವಿತ್ರ ಕ್ಷೇತ್ರಗಳಲ್ಲಿ ವಾಸಮಾಡುವವರೂ ಆದ ಸಮಸ್ತ ಮುನಿಗಳು ತಪಶ್ಚರ್ಯೆಯಲ್ಲಿದ್ದ ಆ ರಾಮನನ್ನು ನೋಡಬೇಕೆಂಬ ಕಾಮದಿಂದ ಅಲ್ಲಿಗೆ ಬಂದರು.

೪೨. ಆ ಮುನಿಗಳ ವೃಂದಗಳು ಕ್ಷತ್ರಿಯ ಜಾತಿಯೆಂಬ ಹುಲ್ಲಿನ ರಾಶಿಯನ್ನು ಅಶೇಷವಾಗಿ ಸುಟ್ಟು ಶಾಂತವಾದ ಅಗ್ನಿಯಂತೆ ಇರುವ ತಪಶ್ಚರಣದಲ್ಲಿ ಆಸಕ್ತಿ ಹೊಂದಿದ ಮಾನಸವುಳ್ಳ ಪರಶುರಾಮನನ್ನು ಸಂದರ್ಶಿಸಿದರು.

೪೩. ತರುವಾಯ ಭಾರ್ಗವರಾಮನು ದಿವ್ಯರೂ ತಪೋಮಯರೂ ಆದ ಮುನಿಗಳು ಬಂದಿರುವುದನ್ನು ನೋಡಿ ಅರ್ಘ್ಯ ಮುಂತಾದ ಸಂಪ್ರದಾಯಾಚಾರಗಳಿಂದ ಅವರನ್ನು ಪೂಜಿಸಿದನು.

೪೪. ಅನಂತರದಲ್ಲಿ ರಾಮುನಿಗೂ ಅಲ್ಲಿಗೆ ಬಂದಿದ್ದ ಮುನಿಜನರಿಗೂ ಮೊದಲು ಕುಶಲ ಪ್ರಶ್ನ ಪ್ರಸಂಗಪೂರ್ವಕವಾಗಿ ಅತ್ಯಂತ ಶ್ರೇಯಸ್ಕರವೂ ಪವಿತ್ರವೂ ಮತ್ತು ರಮಣೀಯವೂ ಆದ ಕಥಾ ಪ್ರವಚನಗೋಷ್ಠಿಯು ಜರುಗಿತು.

ತತಸ್ತೇಷಾಮನುಮತೇ ಮುನೀನಾಂ ಭಾವಿತಾತ್ಮನಾಮ್ ।
ಹಯಮೇಧಂ ಮಹಾಯಜ್ಞಮಾಹರ್ತುಮುಪಚಕ್ರಮೇ ॥ ೪೫ ॥

ಸಂಭೃತ್ಯ ಸರ್ವಸಂಭಾರಾನೌರ್ವಾದ್ಯೈಃ ಸಹಿತೋ ನೃಪ ।
ವಿಶ್ವಾಮಿತ್ರಭರದ್ವಾಜಮಾರ್ಕಂಡೇಯಾದಿಭಿಸ್ತಥಾ ॥ ೪೬ ॥

ತೇಷಾಮನುಮತೇ ಕೃತ್ವಾ ಕಾಶ್ಯಪಂ ಗುರುಮಾತ್ಮನಃ ।
ವಾಜಿಮೇಧಂ ತತೋ ರಾಜನ್ ಆಜಹಾರ ಮಹಾಕ್ರತುಮ್ ॥ ೪೭ ॥

ತಸ್ಯಾಭೂತ್ ಕಾಶ್ಯಪೋಽಧ್ವರ್ಯುರುದ್ಗಾತಾ ಗೌತಮೋ ಮುನಿಃ ।
ವಿಶ್ವಾಮಿತ್ರೋಽಭವದ್ಧೋತಾ ರಾಮಸ್ಯ ವಿದಿತಾತ್ಮನಃ ॥ ೪೮ ॥

ಬ್ರಹ್ಮತ್ವಮಕರೋತ್ತಸ್ಯ ಮಾರ್ಕಂಡೇಯೋ ಮಹಾಮುನಿಃ ।
ಭರಧ್ವಾಜಾಗ್ನಿವೇಶ್ಯಾದ್ಯಾ ವೇದವೇದಾಂಗಪಾರಗಾಃ ॥ ೪೯ ॥

---

೫೪. ಅನಂತರದಲ್ಲಿ ಸಂಸ್ಕಾರದಿಂದ ಪವಿತ್ರವಾದ ಅಂತಃಕರಣವುಳ್ಳ ಆ ಮಹರ್ಷಿಗಳ ಅನುಜ್ಞೆಯಂತೆ ರಾಮನು ಅಶ್ವಮೇಧ ಮಹಾ ಯಜ್ಞವನ್ನು ಆಚರಿಸಲು ಉಪಕ್ರಮಿಸಿದನು.

೪೬. ಮಹಾರಾಜನೆ! ರಾಮನು ಅಶ್ವಮೇಧ ಮಹಾ ಯಜ್ಞದ ಸಂಭಾರಗಳನ್ನು ಸಿದ್ಧಮಾಡಿಕೊಂಡು ಔರ್ವ ಮುನಿ ಮುಂತಾದ ಬ್ರಹ್ಮರ್ಷಿಗಳಿಂದಲೂ ವಿಶ್ವಾಮಿತ್ರ, ಭರದ್ವಾಜ, ಮಾರ್ಕಂಡೇಯ ಮುಂತಾದ ಮಹಾ ಮುನಿಪ್ರವರರಿಂದಲೂ ಸಹಿತನಾಗಿ ಸಿದ್ಧನಾದನು.

೪೭. ರಾಜನೆ! ಅಲ್ಲಿ ಸೇರಿದ ಸಮಸ್ತ ಮುನಿಜನರ ಅನುಮತಿಯಂತೆ ಕಾಶ್ಯಪ ಮುನಿಯನ್ನು ತನ್ನ ಗುರುವನ್ನಾಗಿ ಮಾಡಿಕೊಂಡು ಅಶ್ವಮೇಧ ಮಹಾ ಯಜ್ಞವನ್ನು ಮಾಡಲು ಆರಂಭಿಸಿದನು.

೪೮. ಆತ್ಮಸ್ವರೂಪ ಜ್ಞಾನಿಯಾದ ರಾಮನ ಆ ಅಶ್ವಮೇಧ ಮಹಾ ಯಜ್ಞ ಸಮಾರಂಭದಲ್ಲಿ ಕಾಶ್ಯಪ ಮುನಿಯು ಅಧ್ವರ್ಯು ಋತ್ವಿಜನೂ, ಗೌತಮ ಮುನಿಯು ಉದ್ಗಾತೃ ಋತ್ವಿಜನೂ, ಮತ್ತು ವಿಶ್ವಾಮಿತ್ರ ಮುನಿಯು ಹೋತೃ ಋತ್ವಿಜನೂ ಆಗಿದ್ದರು.

೪೯. ಅಲ್ಲದೆ ಮಾರ್ಕಂಡೇಯ ಮಹಾಮುನಿಯು ಆ ಯಜ್ಞದಲ್ಲಿ ಬ್ರಹ್ಮತ್ವವೆಂಬ ಆರ್ತ್ವಿಜ್ಯವನ್ನು ಆಚರಿಸಿದನು, ಇತರ ಅಸಂಖ್ಯ ಕರ್ಮಗಳನ್ನು ಆಚರಿಸಲು ಭರದ್ವಾಜ, ಅಗ್ನಿವೇಶ್ಯ ಮುಂತಾದ ಮುನಿವರ್ಯರು ಸಿದ್ಧರಾಗಿದ್ದರು.

ಮುನಯಶ್ಚಕ್ರುರನ್ಯಾನಿ ಕರ್ಮಾಣ್ಯನ್ಯೇ ಯಥಾಕ್ರಮಮ್ ।
ಪುತ್ರೈಃ ಶಿಷ್ಯೈಃ ಪ್ರಶಿಷ್ಯೈಶ್ಚ ಸಹಿತೋ ಭಗವಾನ್ ಭೃಗುಃ ॥ ೫೦ ॥

ಸಾದಸ್ಯಮಕರೋದ್ರಾಜನ್ ಅನ್ಯೈಶ್ಚ ಮುನಿಭಿಃ ಸಹ ।
ಸ ತೈಃ ಸಹಾಖಿಲಂ ಕರ್ಮ ಸಮಾಪ್ಯ ಭೃಗುಪುಂಗವಃ ॥ ೫೧ ॥

ಬ್ರಹ್ಮಾಣಂ ಪೂಜಯಾಮಾಸ ಯಥಾವದ್ಗುರುಣಾ ಸಹ ।
ಅಲಂಕೃತ್ಯ ಯಥಾನ್ಯಾಯ್ಯಂ ಕನ್ಯಾಂ ರೂಪವತೀಂ ಮಹೀಮ್ ॥೫೨॥

ಪುರಗ್ರಾಮಶತೋಪೇತಾಂ ಸಮುದ್ರಾಂಬರಮಾಲಿನೀಮ್ ।
ಆಹೂಯ ಭೃಗುಶಾರ್ದೂಲಃ ಸಶೈಲವನಕಾನನಾಮ್ ॥ ೫೩ ॥

ಕಾಶ್ಯಪಾಯ ದದೌ ಸರ್ವಾಮೃತೇ ತಂ ಶೈಲಮುತ್ತಮಮ್ ।
ಆತ್ಮನಃ ಸನ್ನಿವಾಸಾರ್ಥಂ ತಂ ರಾಮಃ ಪರ್ಯಕಲ್ಪಯತ್ ॥ ೫೪ ॥

---

೫೦. ಹೀಗೆ ಇತರ ಮುನಿಗಳು ಅನ್ಯಯಜ್ಞಾಂಗ ಕರ್ಮಗಳನ್ನು ಯಥಾಕ್ರಮವಾಗಿ ಮಾಡಿದರು. ಆಗ ಪೂಜ್ಯನಾದ ಭೃಗು ಮುನಿಯು ತನ್ನ ಪುತ್ರ, ಶಿಷ್ಯ, ಪ್ರಶಿಷ್ಯಗಣದಿಂದ ಸೇರಿ ಭಾಗವನ್ನು ವಹಿಸಿದನು.

೫೧. ರಾಜನೆ! ಅಲ್ಲಿ ಭೃಗು ಮುನಿಯು ಸದಸ್ಯತ್ವವನ್ನು ಮಾಡಿದನು, ಹೀಗೆ ಭೃಗುವಂಶ ತಿಲಕನಾದ ರಾಮನು ಆ ಎಲ್ಲ ಮಹರ್ಷಿಗಳೊಡನೆ ಮಹಾ ಯಜ್ಞದ ಅಖಿಲ ಕರ್ಮಗಳನ್ನು ಸಮಾಪ್ತಿಗೊಳಿಸಿದನು.

೫೨. ಆಗ ರಾಮನು ಗುರುವಿನ ಸಂಗಡ ಬ್ರಹ್ಮಋತ್ವಿಜನನ್ನು ಯಥಾವಿಧಿಯಾಗಿ ಪೂಜಿಸಿ ಸತ್ಕರಿಸಿದನು. ಮತ್ತು ಭೂದೇವಿಯೆಂಬ ಮೂರ್ತಿಮತ್ತಾದ, ರೂಪವತಿಯಾದ ಕನ್ಯೆಯನ್ನು ಯಥಾನ್ಯಾಯವಾಗಿ ಅಲಂಕರಿಸಿದನು.

೫೩. ಅನೇಕ ನಗರ-ಗ್ರಾಮಗಳಿಂದಲೂ ಸಮುದ್ರ ಆಕಾಶಗಳ ಶ್ರೇಣಿಯಿಂದಲೂ ಮತ್ತು ಪರ್ವತ-ದುರ್ಗ-ಅರಣ್ಯಗಳಿಂದಲೂ ಸಹಿತವಾದ ಕನ್ಯಾರೂಪಿಣಿಯಾದ ಭೂಮಿಯನ್ನು ಅಲಂಕರಿಸಿ ಕಾಶ್ಯಪ ಮುನಿಯನ್ನು ಕರೆದನು.

೫೪. ಮತ್ತು ತನ್ನ ವಾಸಕ್ಕೋಸ್ಕರ ಕಲ್ಪಿಸಲ್ಪಟ್ಟಿರುವ ಆ ಮಹೇಂದ್ರ ಪರ್ವತವನ್ನು ಮಾತ್ರ ಬಿಟ್ಟು ಮಿಕ್ಕ ಸಂಪೂರ್ಣ ಭೂಮಿಯನ್ನು ಆಹ್ವಾನದಿಂದ ಸತ್ಕರಿಸಿದ ಕಾಶ್ಯಪ ಮುನಿಗೆ ದಾನ ಕೊಟ್ಟನು.

ತತಃ ಪ್ರಭೃತಿ ರಾಜೇಂದ್ರ ಪೂಜಯಾಮಾಸ ಶಾಸ್ತ್ರತಃ ।
ಹಿರಣ್ಯರತ್ನವಸ್ತ್ರಾಶ್ವಗೋಗಜಾನ್ನಾದಿಭಿಸ್ತಥಾ ॥ ೫೫ ॥

ಪುರಾ ಸಮಾಪ್ಯ ಯಜ್ಞಾಂತೇ ತಥಾ ಚಾವಭೃಥಾಪ್ಲುತಃ ।
ಚಕ್ರೇ ದ್ರವ್ಯಪರಿತ್ಯಾಗಂ ತೇಷಾಮನುಮತೇ ತದಾ ॥ ೫೬ ॥

ದತ್ವಾ ಚ ಸರ್ವಭೂತಾನಾಮಭಯಂ ಭೃಗುನಂದನಃ ।
ತತ್ರಾಪಿ ಪರ್ವತವರೇ ತಪಶ್ಚರ್ತುಂ ಸಮಾರಭತ್ ॥ ೫೭ ॥

ತತಸ್ತಂ ಸಮನುಜ್ಞಾಯ ಸದಸ್ಯಾ ಋತ್ವಿಜಸ್ತಥಾ ।
ಯಯುರ್ಯಥಾಗತಂ ಸರ್ವೇ ಮುನಯಃ ಶಂಸಿತವ್ರತಾಃ ॥ ೫೮ ॥

ಗತೇಷು ತೇಷು ಭಗವಾನಕೃತವ್ರಣಸಂಯುತಃ ।
ತಪೋ ಮಹತ್ ಸಮಾಸ್ಥಾಯ ತತ್ರೈವ ನ್ಯವಸತ್ ಸುಖೀ ॥ ೫೯ ॥

---

೫೫. ರಾಜೇಂದ್ರನೆ! ಆ ಮೊದಲುಗೊಂಡು ಹಿರಣ್ಯ, ರತ್ನ, ವಸ್ತ್ರ, ಅಶ್ವ, ಗೋವು, ಗಜ, ಮತ್ತು ಅನ್ನ ಮುಂತಾದ ವಿವಿಧ ಪರಿವಾರ ಸಾಮಗ್ರಿಯಿಂದ ಯಥಾ ಶಾಸ್ತ್ರವಾಗಿ ಮುನಿಗಳಿಗೆ ಅತಿಥಿ ಪೂಜೆಯನ್ನು ಮಾಡಿದನು.

೫೬. ಪೂರ್ವದಲ್ಲಿ-ರಾಮನು ಹೀಗೆ ಯಜ್ಞವನ್ನು ಸಮಾಪ್ತಿಗೊಳಿಸಿ ಅಂತದಲ್ಲಿ ಅವಭೃಥ ಸ್ನಾನವನ್ನು ಮಾಡಿ ಆ ಋತ್ವಿಜರಾದ ಮುನಿಗಳ ಇಷ್ಟದಂತೆ ಆಗ ಸರ್ವ ದ್ರವ್ಯಪರಿತ್ಯಾಗವನ್ನು ಮಾಡಿದನು.

೫೭. ಭೃಗುವಂಶೋತ್ಪನ್ನನಾದ ರಾಮನು ಆಗ ಸರ್ವ ಪ್ರಾಣಿಗಳಿಗೆ ಅಹಿಂಸೆ ಎಂಬ ಅಭಯ ದಕ್ಷಿಣೆಯನ್ನು ಕೊಟ್ಟು ಆ ಶ್ರೇಷ್ಠ ಪರ್ವತದಲ್ಲಿ ಮತ್ತೆ ತಪಸ್ಸನ್ನು ಆಚರಿಸಲು ಆರಂಭಿಸಿದನು.

೫೮. ಅನಂತರದಲ್ಲಿ ಶ್ಲಾಘನೀಯವಾದ ವ್ರತಾಚರಣ ಶೀಲರಾದ ಋತ್ವಿಜರಾಗಿದ್ದ ಆ ಎಲ್ಲ ಮುನಿಗಳು ಆ ಪರಶುರಾಮನನ್ನು ಅನುಜ್ಞೆ ಕೇಳಿ ಹಿಂದೆ ಬಂದಂತೆ ಹಿಂತಿರುಗಿ ತಮ್ಮ ಗಂತವ್ಯ ಸ್ಥಾನಕ್ಕೆ ತೆರಳಿದರು.

೫೯. ಅವರೆಲ್ಲರೂ ಹಿಂತಿರುಗಿ ಹೋದ ಬಳಿಕ ಪೂಜ್ಯನಾದ ರಾಮನು ಅಕೃತವ್ರಣನೊಡನೆ ಸುಖವಾಗಿ ವಾಸಿಸುತ್ತ ಮಹಾ ತಪಸ್ಸನ್ನು ಅವಲಂಬಿಸಿ ಅಲ್ಲಿಯೇ ವಾಸಮಾಡಿದನು.

ಕಾಶ್ಯಪೀ ತು ತತೋ ಭೂಮಿರ್ಜನನಾಥಾ ಹ್ಯನೇಕಶಃ ।
ಸರ್ವದುಃಖಪ್ರಶಾಂತ್ಯರ್ಥಂ ಮಾರೀಚಾನುಮತೇನ ತು ॥ ೭೦ ॥

ತತ್ರ ದೀಪಪ್ರತಿಷ್ಠಾಖ್ಯವ್ರತಂ ವಿಷ್ಣುಮುಖೋದಿತಮ್ ।
ಚಚಾರ ಧರಣೀ ಸಮ್ಯಗ್ ದುಃಖೈರ್ಮುಕ್ತಾಭವಚ್ಚ ಸಾ ॥ ೭೧ ॥

ಇತ್ಯೇಷ ಜಾಮದಗ್ನ್ಯಸ್ಯ ಪ್ರಾದುರ್ಭಾವ ಉದಾಹೃತಃ ।
ಯಸ್ಮಿನ್ ಶ್ರುತೇ ನರಃ ಸರ್ವಪಾತಕೈರ್ವಿಪ್ರಮುಚ್ಯತೇ ॥ ೭೨ ॥

ಪ್ರಭಾವಃ ಕಾರ್ತವೀರ್ಯಸ್ಯ ಲೋಕೇ ಪ್ರಥಿತತೇಜಸಃ ।
ಪ್ರಸಂಗಾತ್ಕಥಿತಃ ಸಮ್ಯಜ್ಞಾತಿಸಂಕ್ಷೇಪವಿಸ್ತರಃ ॥ ೭೩ ॥

ಏವಂಪ್ರಭಾವಃ ಸ ನೃಪಃ ಕಾರ್ತವೀರ್ಯೋಽಭವದ್ಭುವಿ ।
ನ ತಾದೃಶಃ ಪುಮಾನ್ಕಶ್ಚಿದ್ಭಾವೀ ಭೂತೋಽಥವಾ ಶ್ರುತಃ ॥ ೭೪ ॥

---

೭೦. ಭೂಮಿಯನ್ನು ಕಶ್ಯಪ ಮುನಿಯು ಪರಿಗ್ರಹಿಸಿರುವುದರಿಂದ "ಕಾಶ್ಯಪಿ" ಎಂಬ ಅನ್ವರ್ಥನಾಮಾಂಕಿತವಾಯಿತು. ಇದನ್ನು ಅನೇಕ ರಾಜರು ಆಳುವವರಾದರು. ಭೂಮಿಯು ತನಗೆ ಒದಗಿದ ಸಕಲ ದುಃಖ ಶಾಂತಿಗೋಸ್ಕರ ಮಾರೀಚ ಮುನಿಯ ಅನುಮತಿಯಂತೆ ಒಂದು ಸತ್ಕರ್ಮವನ್ನು ಮಾಡಿದಳು.

೭೧. ಭೂಮಿದೇವಿಯು ವಿಷ್ಣುವಿನ ಮುಖವಾಣಿಯಿಂದ ಉಪದೇಶಿಸಲ್ಪಟ್ಟ ದೀಪಪ್ರತಿಷ್ಠಾ ಎಂಬ ಹೆಸರುಳ್ಳ ವ್ರತವನ್ನು ಚನ್ನಾಗಿ ಆಚರಿಸಿದಳು. ಅದರ ಪ್ರಭಾವದಿಂದ ದುಃಖದಿಂದ ಬಿಡುಗಡೆಯನ್ನು ಹೊಂದಿದಳು.

೭೨. ಈ ರೀತಿಯಾಗಿ ಜಾಮದಗ್ನ್ಯ ರಾಮನ ಪ್ರಾದುರ್ಭಾವ ಕಥೆಯು ಹೇಳಲ್ಪಟ್ಟಿತು. ಮಾನವನು ಈ ಪವಿತ್ರ ಕಥಾನಕವನ್ನು ಶ್ರವಣಮಾಡಿ ಸಮಸ್ತ ಪಾತಕಗಳಿಂದ ಬಿಡುಗಡೆಯನ್ನು ಹೊಂದುವನು.

೭೩. ಪರಶುರಾಮನ ಕಥಾವರ್ಣನ ಪ್ರಸಂಗದಿಂದ ಲೋಕದಲ್ಲಿ ಪ್ರಸಿದ್ಧವಾದ ಮಹಿಮೆಯುಳ್ಳ ಕಾರ್ತವೀರ್ಯ ರಾಜನ ಪ್ರಭಾವವು ಹೆಚ್ಚು ಸಂಕ್ಷೇಪ-ವಿಸ್ತಾರಗಳಿಲ್ಲದಂತೆ ವರ್ಣಿಸಲ್ಪಟ್ಟಿದೆ.

೭೪. ಕಾರ್ತವೀರ್ಯನೆಂಬ ರಾಜನು ಭೂಮಿಯಲ್ಲಿ ಇಂತಹ ಉತ್ತಮ ಪ್ರಭಾವವುಳ್ಳ ಮಹಾಪುರುಷನಾಗಿದ್ದನು, ಅಂತಹ ಬೇರೊಬ್ಬ ಪುರುಷನು ಲೋಕದಲ್ಲಿ ಹಿಂದೆ ಇದ್ದವನಾಗಲಿ ಮುಂದೆ ಹುಟ್ಟುವನಾಗಲಿ ಶ್ರವಣ ವಿಷಯನಾಗಿರುವುದಿಲ್ಲ.

**ದತ್ತಾತ್ರೇಯಾದ್ವರಂ ವವ್ರೇ ಮೃತಿಮುತ್ತಮಪೂರುಷಾತ್ ।**
**ಯತ್ಪುರಾ ಸೋಽಗಮನ್ಮುಕ್ತಿಂ ರಣೇ ರಾಮೇಣ ಘಾತಿತಃ ॥ ೬೫ ॥**

**ತಸ್ಯಾಸೀತ್ಪಂಚಮಃ ಪುತ್ರಃ ಪ್ರಖ್ಯಾತೋ ಯೋ ಜಯಧ್ವಜಃ ।**
**ಪುತ್ರಸ್ತಸ್ಯ ಮಹಾಬಾಹುಸ್ತಾಲಜಂಘೋಽಭವನ್ನೃಪ ॥ ೬೬ ॥**

**ಅಭೂತ್ತಸ್ಯಾಪಿ ಪುತ್ರಾಣಾಂ ಶತಮುತ್ತಮಧನ್ವಿನಾಮ್ ।**
**ತಾಲಜಂಘಾಭಿಧಾ ಯೇಷಾಂ ವೀತಿಹೋತ್ರೋಽಗ್ರಜೋಽಭವತ್॥೬೭॥**

**ಪುತ್ರೈಃ ಸ ವೀತಿಹೋತ್ರಾದ್ಯೈರ್ಹೈಹಯಾದ್ಯೈಶ್ಚ ರಾಜಭಿಃ ।**
**ಕಾಲಂ ಮಹಾಂತಮವಸದ್ಧಿಮಾದ್ರಿವನಗಹ್ವರೇ ॥ ೬೮ ॥**

**ಯಃ ಪೂರ್ವಂ ರಾಮಬಾಣೇನ ದ್ರವನ್ ಪೃಷ್ಠೇಽಭಿತಾಡಿತಃ ।**
**ತಾಲಜಂಘೋಽಪತದ್ಭೂಮೌ ಮೂರ್ಛಿತೋ ಗಾಢವೇದನಃ ॥ ೬೯ ॥**

---

೬೫. ಆ ರಾಜನು ದತ್ತಾತ್ರೇಯ ಮುನಿ ಎಂಬ ಗುರುವಿನಿಂದ ಉತ್ತಮ ಪುರುಷನಿಂದ ಲಭ್ಯವಾದ ಮರಣವನ್ನು ವರವನ್ನಾಗಿ ಹೊಂದಿದನು, ಅದರಿಂದ ಪರಶುರಾಮನಿಂದ ರಣದಲ್ಲಿ ಸಂಹರಿಸಲ್ಪಟ್ಟವನಾಗಿ ಆ ರಾಜನು ಪೂರ್ವದಲ್ಲಿ ಮುಕ್ತಿಯನ್ನು ಹೊಂದಿದನು.

೬೬. ರಾಜನೆ! ಕಾರ್ತವೀರ್ಯರಾಜನಿಗೆ ಜಯಧ್ವಜನೆಂಬ ಪ್ರಖ್ಯಾತಿಯುಳ್ಳವನು ಐದನೆಯ ಪುತ್ರನಾಗಿದ್ದನು. ಅವನಿಗೆ ಮಹಾಬಾಹು ಬಲಶಾಲಿಯಾದ ತಾಲಜಂಘನು ಪುತ್ರನಾಗಿದ್ದನು.

೬೭. ಆ ತಾಲಜಂಘನಿಗೂ ಧನುರ್ಧಾರಿಗಳಲ್ಲಿ ಉತ್ತಮರಾದ ನೂರು ಮಂದಿ ಪುತ್ರರು ಇದ್ದರು. ತಾಲಜಂಘ ಎಂಬ ವಂಶನಾಮಾಂಕಿತರಾದ ಆ ಪುತ್ರರಲ್ಲಿ ವೀತಿಹೋತ್ರನು ಅಗ್ರಜನಾಗಿದ್ದನು.

೬೮. ತಾಲಜಂಘನು ವೀತಿಹೋತ್ರ ಮುಂತಾದ ತನ್ನ ಪುತ್ರರಿಂದಲೂ ಹೈಹಯ ಮುಂತಾದ ರಾಜರಿಂದಲೂ ಸಹಿತನಾಗಿ ಹಿಮಾಲಯ ಪರ್ವತದ ಅರಣ್ಯದ ದುರ್ಗ ಭೂಮಿಯಲ್ಲಿ ಬಹಳ ಕಾಲ ವಾಸಮಾಡಿದನು.

೬೯. ಈ ತಾಲಜಂಘನು ಪಲಾಯನಮಾಡುತ್ತಿರುವಾಗ ರಾಮನ ಬಾಣದಿಂದ ಹಿಂಭಾಗದಲ್ಲಿ ಹೊಡೆಯಲ್ಪಟ್ಟು ಪ್ರಬಲವಾದ ವೇದನೆಯುಳ್ಳವನಾಗಿ ಮೂರ್ಛೆಯನ್ನು ಹೊಂದಿ ನೆಲದ ಮೇಲೆ ಬಿದ್ದನು.

18

ದದರ್ಶ ವೀತಿಹೋತ್ರಸ್ತಂ ದ್ರವನ್ ದೈವವಶಾದಿವ ।
ರಥಮಾರೋಪ್ಯ ವೇಗೇನ ಪಲಾಯನಪರೋಽಭವತ್ ॥ ೭೦ ॥

ತೇ ತತ್ರ ನ್ಯವಸನ್ ಸರ್ವೇ ಹಿಮಾದ್ರೌ ಭಯಪೀಡಿತಾಃ ।
ಕೃಚ್ಛ್ರಂ ಮಹಾಂತಮಾಸಾದ್ಯ ಶಾಕಮೂಲಫಲಾಶಿನಃ ॥ ೭೧ ॥

ತತಃ ಶಾಂತಿಂ ಗತೇ ರಾಮೇ ತಪಸ್ಯಾಸಕ್ತಮಾನಸೇ ।
ತಾಲಜಂಘಾಃ ಸ್ವಕಂ ರಾಜ್ಯಂ ಸಪುತ್ರಾಃ ಪ್ರತ್ಯಪದ್ಯತ ॥ ೭೨ ॥

ಸನ್ನಿವೇಶ್ಯ ಪುರೀಂ ಭೂಯಃ ಪೂರ್ವವನ್ನೃಪಸತ್ತಮಃ ।
ವಸಂಸ್ತದಾ ನಿಜಂ ರಾಜ್ಯಮಪಾಲಯದರಿಂದಮಃ ॥ ೭೩ ॥

ಸಪುತ್ರಃ ಸಾನುಗಬಲಃ ಪೂರ್ವವೈರಮನುಸ್ಮರನ್ ।
ಅಭ್ಯಾಯಯೌ ಮಹಾರಾಜ ತಾಲಜಂಘಃ ಪುರಂ ತವ ॥ ೭೪ ॥

---

೭೦. ಆ ಸಮಯದಲ್ಲಿ ಧಾವಿಸುತ್ತಲಿದ್ದ ವೀತಿಹೋತ್ರನು ಸುದೈವಬಲದಿಂದ ಮೂರ್ಛೆಗೊಂಡು ಬಿದ್ದ ತಂದೆಯನ್ನು ನೋಡಿ ರಥದಲ್ಲಿ ಕುಳ್ಳಿರಿಸಿ ವೇಗದಿಂದ ಪಲಾಯನಮಾಡಿ ಬಂದನು.

೭೧. ಆಗ ಹಿಮಾಲಯದ ಪರ್ವತದಲ್ಲಿ ಅವರೆಲ್ಲರೂ ರಾಮನ ಭಯದಿಂದ ಪೀಡಿತರಾಗಿ ಆ ಮಹಾ ಕಷ್ಟಕ್ಕೆ ಒಳಗಾಗಿ ಶಾಕ-ಮೂಲ-ಫಲಗಳ ಆಹಾರವನ್ನು ಭುಂಜಿಸುತ್ತ ವಾಸಮಾಡಿದರು.

೭೨. ಅನಂತರದಲ್ಲಿ ಪರಶುರಾಮನು ಶಾಂತಿಯನ್ನು ಹೊಂದಿ ತಪಸ್ಸಿನಲ್ಲಿ ಆಸಕ್ತಿಯುಳ್ಳ ಮಾನಸವುಳ್ಳವನಾಗಿರಲು ತಾಲಜಂಘನು ತನ್ನ ಪುತ್ರರೊಂದಿಗೆ ತನ್ನ ರಾಜ್ಯವನ್ನು ಮತ್ತೆ ಹೊಂದಿದನು.

೭೩. ಶತ್ರುನಿಗ್ರಹ ತತ್ಪರನಾದ ಆ ತಾಲಜಂಘನೆಂಬ ರಾಜಶ್ರೇಷ್ಠನು ಮತ್ತೆ ತನ್ನ ನಗರಿಯನ್ನು ಮೊದಲಿನ ಸನ್ನಿವೇಶದಿಂದಿರಿಸಿ ಅಲ್ಲಿ ವಾಸಮಾಡುತ್ತ ಆಗ ತನ್ನ ರಾಜ್ಯವನ್ನು ಪರಿಪಾಲಿಸಿದನು.

೭೪. ಮಹಾರಾಜನೆ! ಆ ತಾಲಜಂಘನು ಪುತ್ರ-ಸೈನ್ಯ-ಸೇವಕ ಮುಂತಾದ ಸಕಲ ಪರಿವಾರದೊಡನೆ ನಿನ್ನಲ್ಲಿ ಪೂರ್ವದ ವೈರವನ್ನು ನೆನಸಿಕೊಂಡು ನಿನ್ನ ಪಟ್ಟಣಕ್ಕೆ ಬಂದು ಮುತ್ತಿಗೆಯನ್ನು ಹಾಕಿದನು.

ಚತುರಂಗಬಲೋಪೇತಃ ಕಂಪಯನ್ನಿವ ಮೇದಿನೀಮ್ ।
ರುರೋಧಾಭ್ಯೇತ್ಯ ನಗರೀಮಯೋಧ್ಯಾಂ ಸ ಮಹೀಪತಿಃ ॥ ೭೫ ॥

ತತೋ ನಿಷ್ಕ್ರಮ್ಯ ನಗರಾತ್ ಫಲ್ಗುತಂತ್ರೋಽಪಿ ತೇ ಪಿತಾ ।
ಯುಯುಧೇ ತೈರ್ನೃಪೈಃ ಸರ್ವೈರ್ವೃದ್ಧೋಽಪಿ ತರುಣೋ ಯಥಾ ॥ ೭೬ ॥

ನಿಹತಾನೇಕಮಾತಂಗತುರಂಗರಥಸೈನಿಕಃ ।
ಶತ್ರುಭಿರ್ನಿರ್ಜಿತೋ ವೃದ್ಧಃ ಪಲಾಯನಪರೋಽಭವತ್ ॥ ೭೭ ॥

ತ್ಯಕ್ತ್ವಾ ಸ ನಗರಂ ರಾಜ್ಯಂ ಸಕೋಶಬಲವಾಹನಮ್ ।
ಅಂತರ್ವತ್ನ್ಯಾ ಚ ತೇ ಮಾತ್ರಾ ಸಹಿತೋ ವನಮಾವಿಶತ್ ॥ ೭೮ ॥

ತತ್ರ ಚೌರ್ವಾಶ್ರಮೋಪಾಂತೇ ನಿವಸನ್ನಚಿರಾದಿವ ।
ಶೋಕಾಮರ್ಷಸಮಾವಿಷ್ಟೋ ವೃದ್ಧಭಾವೇನ ಚ ಸ್ವಯಮ್ ॥ ೭೯ ॥

---

೭೫. ಆ ರಾಜನು ಗಜ-ತುರಗ-ರಥ-ಪದಾತಿಯೆಂಬ ಚತುರಂಗ ಸೈನ್ಯ ಸಮೇತನಾಗಿ ಭೂಮಿಯನ್ನು ನಡುಗಿಸುವವನಂತೆ ಎದುರಾಗಿ ಬಂದು ಅಯೋಧ್ಯಾನಗರಿಯನ್ನು ಮುತ್ತಿದನು.

೭೬. ಆಗ ನಿನ್ನ ತಂದೆಯು ಅಲ್ಪವಾದ ಯುದ್ಧತಂತ್ರಗಳುಳ್ಳವನಾದರೂ ತನ್ನ ನಗರದಿಂದ ಹೊರಟು ವಯಸ್ಸಿನಲ್ಲಿ ತಾನು ವೃದ್ಧನಾಗಿದ್ದರೂ ತರುಣ ಪುರುಷನಂತೆ ಆ ರಾಜರ ಸಂಗಡ ಯುದ್ಧಮಾಡಿದನು.

೭೭. ಆಗ ಕೊಲ್ಲಲ್ಪಟ್ಟ ಅನೇಕ ಗಜ-ತುರಗ-ರಥ-ಸೈನಿಕಾದಿ ಪರಿವಾರವುಳ್ಳ ವೃದ್ಧನಾದ ನಿನ್ನ ತಂದೆಯು ಶತ್ರುಗಳಿಂದ ಪರಾಜಯವನ್ನು ಹೊಂದಿ ನಿಲ್ಲಲಾರದೆ ಪಲಾಯನ ಮಾಡುವವನಾದನು.

೭೮. ಆಗ ಅವನು ನಗರವನ್ನೂ ಕೋಶ-ಬಲ-ವಾಹನಗಳಿಂದ ಕೂಡಿದ ರಾಜ್ಯವನ್ನೂ ಪರಿತ್ಯಾಗಮಾಡಿ ಗರ್ಭಿಣಿಯಾಗಿದ್ದ ನಿನ್ನ ತಾಯಿಯ ಸಂಗಡ ಅರಣ್ಯವನ್ನು ಪ್ರವೇಶಿಸಿದನು.

೭೯. ಆ ಅರಣ್ಯದಲ್ಲಿ ಔರ್ವಮುನಿಯ ಆಶ್ರಮ ಸಮೀಪದಲ್ಲಿ ವಾಸಮಾಡುತ್ತಲಿರುವ ನಿನ್ನ ತಂದೆಯು ಬಹಳ ಬೇಗ ಶೋಕ ಮತ್ತು ಕೋಪಗಳಿಂದಲೂ ವಾರ್ಧಕ್ಯದಿಂದಲೂ ಪೀಡಿತನಾದನು.

ವಿಲೋಕ್ಯಮಾನೋ ಮಾತ್ರಾ ತೇ ಬಾಷ್ಪಗದ್ಗದಕಂಠಯಾ ।
ಅನಾಥ ಇವ ರಾಜೇಂದ್ರ ಸ್ವರ್ಗಲೋಕಮಿತೋ ಗತಃ ॥ ೮೦ ॥

ತತಸ್ತೇ ಜನನೀ ರಾಜನ್ ದುಃಖಶೋಕಸಮನ್ವಿತಾ ।
ಚಿತಾಮಾರೋಪಯದ್ಭರ್ತೂ ರುದತೀ ಸಾ ಕಲೇವರಮ್ ॥ ೮೧ ॥

ಅನಶನಾದಿದುಃಖೇನ ಭರ್ತುರ್ವ್ಯಸನಕರ್ಶಿತಾ ।
ಚಕಾರಾಗ್ನಿಪ್ರವೇಶಾಯ ಸುದೃಢಾಂ ಮತಿಮಾತ್ಮನಃ ॥ ೮೨ ॥

ಔರ್ವಸ್ತದಖಿಲಂ ಶ್ರುತ್ವಾ ಸ್ವಯಮೇವ ಮಹಾಮುನಿಃ ।
ನಿರ್ಗತ್ಯ ಚಾಶ್ರಮಾತ್ತಾಂ ಚ ವಾರಯನ್ನಿದಮಬ್ರವೀತ್ ॥ ೮೩ ॥

ನ ಮರ್ತವ್ಯಂ ತ್ವಯಾ ರಾಜ್ಞಿ ಸಾಂಪ್ರತಂ ಜಠರೇ ತವ ।
ಪುತ್ರಸ್ತಿಷ್ಠತಿ ಸರ್ವೇಷಾಂ ಪ್ರವರಶ್ಚಕ್ರವರ್ತಿನಾಮ್ ॥ ೮೪ ॥

---

೮೦. ರಾಜನೆ! ಆದರಿಂದ ಕಣ್ಣೀರು-ಗದ್ಗದ ಸ್ವರಗಳಿಂದ ಕೂಡಿದ ನಿನ್ನ ತಾಯಿಯಿಂದ ನೋಡಲ್ಪಡುತ್ತಿದ್ದ ಪತಿಯು ಆ ಶೋಕ ಪೀಡೆಯಿಂದ ಅನಾಥನಂತೆ ಈ ಭೂಮಿಯನ್ನು ಬಿಟ್ಟು ಸ್ವರ್ಗಲೋಕಕ್ಕೆ ಹೋದನು.

೮೧. ರಾಜನೆ! ಅನಂತರದಲ್ಲಿ ದುಃಖಶೋಕಗಳಿಂದ ಕೂಡಿರುವ ನಿನ್ನ ತಾಯಿಯು ಭರ್ತೃಶೋಕದಿಂದ ರೋದನ ಮಾಡುತ್ತ ಪತಿಯ ಚಿತೆಯಲ್ಲಿ ತನ್ನ ದೇಹ ವನ್ನು ಅರ್ಪಿಸಿದಳು.

೮೨. ಮತ್ತು ಪತಿವಿಯೋಗದಿಂದ ಉಂಟಾದ ಶೋಕದಲ್ಲಿ ಉಪವಾಸಾದಿಗಳ ಅನುಷ್ಠಾನದಿಂದ ಅತಿಶಯವಾಗಿ ಕೃಶಳಾಗಿ ಅಗ್ನಿಪ್ರವೇಶವನ್ನು ಮಾಡಲು ತಾನು ನಿಶ್ಚಯವನ್ನು ಸ್ಥಿರಮಾಡಿಕೊಂಡಳು.

೮೩. ಔರ್ವಮಹಾಮುನಿಯು ಆ ಎಲ್ಲ ವೃತ್ತಾಂತವನ್ನು ಕೇಳಿ ತಾನಾಗಿ ಆಶ್ರಮದಿಂದ ಹೊರಗೆ ಹೊರಟು ಬಂದು ಅವಳನ್ನು ಅಗ್ನಿಪ್ರವೇಶದಿಂದ ಹಿಂತಿರುಗಿ ಸುತ್ತ ಈ ವಚನವನ್ನು ಹೇಳಿದನು.

೮೪. ರಾಣಿಯೆ! ಈಗ ನೀನು ಸಾಯುವುದು ಉಚಿತವಲ್ಲ. ಈಗ ನಿನ್ನ ಉದರದಲ್ಲಿ ಎಲ್ಲ ಚಕ್ರವರ್ತಿಗಳಲ್ಲಿ ಶ್ರೇಷ್ಠನಾಗುವ ಪುತ್ರನು ಗರ್ಭರೂಪದಿಂದ ವಾಸ ವಾಗಿರುವನು.

ಇತಿ ತದ್ವಚನಂ ಶ್ರುತ್ವಾ ಮಾತಾ ತವ ಮನಸ್ವಿನೀ ।
ವಿರರಾಮ ಮೃತೇಸ್ತಾಂ ತು ಮುನಿಃ ಸ್ವಾಶ್ರಮಮಾನಯತ್ ।
ತತಃ ಸಾ ಸರ್ವದುಃಖಾನಿ ನಿಯಮ್ಯ ತ್ವನ್ಮುಖಾಂಬುಜಮ್ ॥ ೮೫ ॥

ದಿದೃಕ್ಷುರಾಶ್ರಮೋಪಾಂತೇ ತಸ್ಯೈವ ನ್ಯವಸತ್ ಸುಖಮ್ ।
ಸುಷಾವ ಚ ತತಃ ಕಾಲೇ ಸಾ ತ್ವಾಮೌರ್ವಾಶ್ರಮೇ ತದಾ ॥ ೮೬ ॥

ಜಾತಕರ್ಮಾದಿಕಂ ಸರ್ವಂ ಭವತಃ ಸೋಽಕರೋನ್ಮುನಿಃ ।
ಔರ್ವಾಶ್ರಮೇ ವಿವೃದ್ಧಶ್ಚ ಭವಾಂಸ್ತೇನಾನುಕಂಪಿತಃ ॥ ೮೭ ॥

ತ್ವಯ್ಯೈವ ವಿದಿತಂ ಸರ್ವಮತಃ ಪರಮರಿಂದಮ ।
ಏವಂಪ್ರಭಾವೋ ನೃಪತಿಃ ಕಾರ್ತವೀರ್ಯೋಽಭವದ್ಭುವಿ ॥ ೮೮ ॥

ವ್ರತಸ್ಯಾಸ್ಯ ಪ್ರಭಾವೇಣ ಸರ್ವಲೋಕೇಷು ವಿಶ್ರುತಃ ।
ಯದ್ವಂಶಜೈರ್ಜಿತೋ ಯುದ್ಧೇ ಪಿತಾ ತೇ ವನಮಾವಿಶತ್ ॥ ೮೯ ॥

---

೮೫. ಸ್ಥಿರವಾದ ಮನೋವೃತ್ತಿಯುಳ್ಳ ನಿನ್ನ ತಾಯಿಯು ಆ ಮಹಾಮುನಿಯ ವಚನವನ್ನು ಕೇಳಿ ಮರಣೋದ್ಯೋಗದಿಂದ ಹಿಂತಿರುಗಿದಳು. ಆಗ ಮುನಿಯು ಆಕೆಯನ್ನು ತನ್ನ ಆಶ್ರಮಕ್ಕೆ ಕರೆದೊಯ್ದನು. ತರುವಾಯ ಅವಳು ನಿನ್ನ ಮುಖಕಮಲವನ್ನು ನೋಡುವ ಶುಭಾಕಾಂಕ್ಷೆಯಿಂದ ಸಕಲ ದುಃಖಗಳ ಭೋಗವನ್ನು ಸಹಿಸಿದಳು.

೮೬. ಆಗ ಆ ಮಹಾಮುನಿಯ ಆಶ್ರಮ ಸಮೀಪದಲ್ಲಿ ಪುತ್ರನಾದ ನಿನ್ನ ದರ್ಶನ ಕುತೂಹಲದಿಂದ ಸುಖವಾಗಿ ವಾಸಮಾಡಿದಳು. ಕೆಲವು ಕಾಲ ಕಳೆದ ತರುವಾಯ ಆ ಔರ್ವ ಮುನಿಯ ಆಶ್ರಮದಲ್ಲಿ ಅವಳು ನಿನ್ನನ್ನು ಪ್ರಸವಿಸಿದಳು.

೮೭. ಆಗ ನಿನಗೆ ನಡೆಯಬೇಕಾದ ಜಾತಕರ್ಮ ಮುಂತಾದ ಎಲ್ಲ ಸಂಸ್ಕಾರಗಳನ್ನು ಮುನಿಯು ನಡೆಯಿಸಿದನು. ಆಗ ನೀನು ಆ ಮುನಿಯಿಂದ ಕೃಪಾಪಾತ್ರನಾಗಿ ಮಾಡಲ್ಪಟ್ಟು ಆ ಆಶ್ರಮದಲ್ಲಿ ಬೆಳೆದವನಾದೆ.

೮೮. ಶತ್ರುಂಜಯನಾದ ರಾಜನೆ! ಅಲ್ಲಿಂದ ಮುಂದಿನ ಸಕಲ ಸಮಾಚಾರಗಳು ನಿನ್ನಿಂದ ತಿಳಿಯಲ್ಪಟ್ಟವೆ. ಭೂಮಿಯಲ್ಲಿ ಕಾರ್ತವೀರ್ಯಾರ್ಜುನನೆಂಬ ರಾಜನು ಹೀಗೆ ಅದ್ಭುತವಾದ ಮಹಿಮೆಯುಳ್ಳವನಾಗಿದ್ದನು.

೮೯. ಈ ವ್ರತದ ಮಹಾಪ್ರಭಾವದಿಂದ ಸಕಲ ಲೋಕಗಳಲ್ಲಿ ಪ್ರಖ್ಯಾತನಾದ ರಾಜನಾಗಿದ್ದನು. ಅವನ ವಂಶದ ರಾಜರಿಂದ ಯುದ್ಧದಲ್ಲಿ ಅಪಜಯವನ್ನು ಹೊಂದಿದ ನಿನ್ನ ತಂದೆಯು ವನವನ್ನು ಪ್ರವೇಶಿಸಿದನು.

ತದ್ವೃತ್ತಾಂತಮಶೇಷೇಣ ಮಯಾ ತೇ ಸಮುದೀರಿತಮ್ ।
ಏತಚ್ಚ ಸರ್ವಮಾಖ್ಯಾತಂ ವ್ರತಾನಾಮುತ್ತಮಂ ತವ ॥ ೯೦ ॥

ಸಮಂತ್ರತಂತ್ರಂ ಲೋಕೇಷು ಸರ್ವಲೋಕಫಲಪ್ರದಮ್ ।
ನ ಹ್ಯಸ್ಯ ಕರ್ತುರ್ನೃಪತೇಃ ಪುರುಷಾರ್ಥಚತುಷ್ಟಯೇ ॥ ೯೧ ॥

ಭವತ್ಯಭೀಪ್ಸಿತಂ ಕಿಂಚಿದ್ದುರ್ಲಭಂ ಭುವನತ್ರಯೇ ।
ಸಂಕ್ಷೇಪೇಣ ಮಯಾಖ್ಯಾತಂ ವ್ರತಂ ಹೈಹಯಭೂಭುಜಃ ।
ಜಾಮದಗ್ನ್ಯಸ್ಯ ಚ ಮುನೇಃ ಕಿಮನ್ಯತ್ ಕಥಯಾಮಿ ತೇ ॥ ೯೨ ॥

ಜೈಮಿನಿರುವಾಚ :—
ತತಃ ಸ ಸಗರೋ ರಾಜಾ ಕೃತಾಂಜಲಿಪುಟೋ ಮುನಿಮ್ ॥ ೯೩ ॥

ಉವಾಚ ಭಗವನ್ನೇತತ್ ಕರ್ತುಮಿಚ್ಛಾಮ್ಯಹಂ ವ್ರತಮ್ ।
ಸಮ್ಯಕ್ ತಮುಪದೇಶೇನ ತತ್ರಾನುಜ್ಞಾಂ ಪ್ರಯಚ್ಛ ಮೇ ॥ ೯೪ ॥

---

೯೦. ಅನಂತರದಲ್ಲಿ ನಡೆದ ಅವನ ವೃತ್ತಾಂತವು ಸಂಪೂರ್ಣವಾಗಿ ನನ್ನಿಂದ ನಿನಗೆ ವರ್ಣಿಸಲ್ಪಟ್ಟಿದೆ. ಹಾಗು ವ್ರತಗಳಲ್ಲಿ ಉತ್ತಮವಾದ ಈ ವ್ರತವು ಸಮಗ್ರವಾಗಿ ನಿನಗೆ ಉಪದೇಶಿಸಲ್ಪಟ್ಟಿದೆ.

೯೧. ಈ ವ್ರತವು ಅನೇಕ ಮಂತ್ರ-ಕ್ರಿಯಾತಂತ್ರಗಳಿಂದ ಕೂಡಿರುವುದೂ ಸಮಸ್ತ ಲೋಕಗಳ ಇಷ್ಟಫಲಗಳನ್ನು ಕೊಡುವುದೂ ಆಗಿದೆ. ಇದನ್ನು ಅನುಷ್ಠಾನ ಮಾಡಿದ ಕ್ಷತ್ರಿಯರಾಜನು ಧರ್ಮ-ಅರ್ಥ ಮೊದಲಾದ ನಾಲ್ಕು ಪುರುಷಾರ್ಥಗಳಲ್ಲಿ ಯಾವುದನ್ನು ಬೇಕಾದರೂ ಆಶಿಸಬಹುದು.

೯೨. ಮೂರು ಲೋಕಗಳಲ್ಲಿ ಯಾವ ವಸ್ತುವು ಇಷ್ಟವಾಗಿದ್ದರೂ ಈ ಮಹಾವ್ರತವನ್ನು ಆಚರಿಸಿದವನಿಗೆ ಅದು ದುರ್ಲಭವಾಗುವುದಿಲ್ಲ. ಈ ರೀತಿಯಾಗಿ ಹೈಹಯ ರಾಜನು ಆಚರಿಸಿದ ವ್ರತ ವಿಶೇಷವೂ ಜಾಮದಗ್ನ್ಯ ರಾಮನ ಚರಿತ್ರವೂ ಸಂಕ್ಷೇಪವಾಗಿ ನನ್ನಿಂದ ಹೇಳಲ್ಪಟ್ಟಿತು. ಈಗ ನಿನಗೆ ಮತ್ತೇನು ಹೇಳಲಿ ?

೯೩. ಜೈಮಿನಿ ಮುನಿಯು ಇಂತೆಂದನು :—ತರುವಾಯ ಆ ಸಗರ ರಾಜನು ಭಕ್ತಿಯಿಂದ ಅಂಜಲಿಯನ್ನು ಕಟ್ಟಿಕೊಂಡವನಾಗಿ ಮುನಿಯನ್ನು ಪ್ರಾರ್ಥಿಸಿದನು.

೯೪. ಭಗವಂತನೆ ! ಈ ಮಹಾವ್ರತವನ್ನು ನಾನು ಆಚರಿಸಲು ಇಷ್ಟವುಳ್ಳವನಾಗಿದ್ದೇನೆ. ಅದನ್ನು ನನಗೆ ಚನ್ನಾಗಿ ಉಪದೇಶಿಸಿ ಆ ವ್ರತಾಚರಣೆಯಲ್ಲಿ ನನಗೆ ಅನುಜ್ಞೆಯನ್ನು ಕೊಡು.

ಕರ್ಮಣಾನೇನ ವಿಪ್ರರ್ಷೇ ಕೃತಾರ್ಥೋಽಸ್ಮಿ ನ ಸಂಶಯಃ ।
ಇತ್ಯುಕ್ತಸ್ತೇನ ರಾಜ್ಞಾ ತು ತಥೇತ್ಯುಕ್ತ್ವಾ ಮಹಾಮುನಿಃ ॥ ೯೫ ॥

ದೀಕ್ಷಯಾಮಾಸ ರಾಜಾನಂ ಶಾಸ್ತ್ರೋಕ್ತೇನೈವ ವರ್ತ್ಮನಾ ।
ಸ ದೀಕ್ಷಿತೋ ವಸಿಷ್ಠೇನ ಸಗರೋ ರಾಜಸತ್ತಮಃ ॥ ೯೬ ॥

ದ್ರವ್ಯಾಣ್ಯಾನೀಯ ವಿಧಿವತ್ ಪ್ರಚಚಾರ ಶುಭವ್ರತಮ್ ।
ಪೂಜಯಿತ್ವಾ ಜಗನ್ನಾಥಂ ವಿಧಿನಾ ತೇನ ಪಾರ್ಥಿವಃ ॥ ೯೭ ॥

ಸಮಾಪ್ಯ ಚ ಯಥಾಯೋಗ್ಯಮನುಜ್ಞಾಪ್ಯ ಗುರುಂ ತತಃ ।
ಪ್ರತಿಜ್ಞಾಮಕರೋದ್ರಾಜಾ ವ್ರತಮೇತದನುತ್ತಮಮ್ ॥ ೯೮ ॥

ಆಜೀವಾಂತಂ ಧರಿಷ್ಯಾಮಿ ಯತ್ನೇನೇತಿ ಮಹಾಮತಿಃ ।
ಅಥಾನುಜ್ಞಾಪ್ಯ ರಾಜಾನಂ ವಸಿಷ್ಠೋ ಭಗವಾನೃಷಿಃ ॥ ೯೯ ॥

---

೯೫. ಬ್ರಹ್ಮರ್ಷಿಯೆ! ಮಹತ್ತಾದ ಈ ಕರ್ಮವನ್ನು ಆಚರಿಸುವುದರಿಂದ ನಾನು ಕೃತಾರ್ಥನಾಗಿರುವೆನು. ಇದರಲ್ಲಿ ಸಂಶಯವಿಲ್ಲ, ಹೀಗೆಂದು ಆ ಸಗರ ರಾಜನಿಂದ ಪ್ರಾರ್ಥಿಸಲ್ಪಟ್ಟ ಮಹಾ ಮುನಿಯು ಹಾಗೆಯೇ ಆಗಲಿ ಎಂದು ಹೇಳಿದನು.

೯೬. ಮತ್ತು ಶಾಸ್ತ್ರದಲ್ಲಿ ವಿಧಿಸಿರುವ ಕ್ರಮದಿಂದ ಮಹಾಮುನಿಯು ರಾಜನಿಗೆ ದೀಕ್ಷೆಯನ್ನು ಕೊಟ್ಟನು. ಹೀಗೆ ವಸಿಷ್ಠ ಮಹಾಮುನಿಯಿಂದ ರಾಜಶ್ರೇಷ್ಠನಾದ ಸಗರ ಚಕ್ರವರ್ತಿಯು ವ್ರತಾಚರಣಕ್ಕೆ ದೀಕ್ಷೆಯನ್ನು ಕೈಗೊಂಡನು.

೯೭. ಮತ್ತು ಉಚಿತವಾದ ಸಾಮಗ್ರಿಯನ್ನು ಸಿದ್ಧಪಡಿಸಿಕೊಂಡು ಶಾಸ್ತ್ರವಿಧಿಯಂತೆ ಶುಭಕರವಾದ ವ್ರತವನ್ನು ಆಚರಿಸಿದನು. ಆ ವ್ರತಾಚರಣದಿಂದ ರಾಜನು ಜಗದೀಶ್ವರನನ್ನು ಆರಾಧಿಸಿದನು.

೯೮. ತರುವಾಯ ಯೋಗ್ಯವಾಗಿ ಪ್ರಾರಂಭಿಸಿದ ವ್ರತವನ್ನು ಪೂರ್ತಿಗೊಳಿಸಿ ಗುರುವಿನ ಅನುಜ್ಞೆಯನ್ನು ಪಡೆದು ರಾಜನು ಉತ್ತಮೋತ್ತಮವಾದ ಈ ವ್ರತದ ವಿಷಯದಲ್ಲಿ ಮುಂದೆ ಹೇಳುವಂತೆ ಒಂದು ಪ್ರತಿಜ್ಞೆಯನ್ನು ಮಾಡಿದನು.

೯೯. ಮಹಾ ಪ್ರಜ್ಞಾಶಾಲಿಯಾದ ರಾಜನು "ಈ ವ್ರತವನ್ನು ಪ್ರಯತ್ನಪೂರ್ವಕವಾಗಿ ಆಜೀವಾಂತವಾಗಿ ಧರಿಸಿರುವೆನು" ಎಂಬುದಾಗಿ ಪ್ರತಿಜ್ಞೆಯನ್ನು ಮಾಡಿದನು. ತರುವಾಯ ಷಡ್ಗುಣೈಶ್ವರ್ಯ ಸಂಪನ್ನನಾದ ವಸಿಷ್ಠ ಮುನಿಯು ರಾಜನನ್ನು ಕೇಳಿಕೊಂಡು ತಮ್ಮ ಕರ್ತವ್ಯದ ಗಮನವನ್ನು ಹೊಂದಿದನು.

ಸನ್ನಿವರ್ತ್ಯಾನುಗಚ್ಛಂತಂ ಪ್ರಜಗಾಮ ನಿಜಾಶ್ರಮಮ್ ॥ ೧೦೦ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ಸಪ್ತಚತ್ವಾರಿಂ
ಶತ್ತಮೋಽಧ್ಯಾಯಃ

---

೧೦೦. ಮತ್ತು ಅಲ್ಲಿಂದ ಹೊರಟು ಹಿಂಬಾಲಿಸಿಕೊಂಡು ಬರುತ್ತಲಿದ್ದ ರಾಜನನ್ನು ಹಿಂದಕ್ಕೆ ಕಳುಹಿಸಿಕೊಟ್ಟು ತಾನು ತನ್ನ ಆಶ್ರಮಕ್ಕೆ ತೆರಳಿದನು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ನಲವತ್ತೇಳನೆಯ ಅಧ್ಯಾಯವು
ಮುಗಿದುದು.

---

# ಅಷ್ಟಾಚತ್ವಾರಿಂಶತ್ತಮೋಽಧ್ಯಾಯಃ

**ಜೈಮಿನಿರುವಾಚ :—**

**ಗತೇ ತಸ್ಮಿನ್ ಮುನಿವರೇ ಸಗರೋ ರಾಜಸತ್ತಮಃ**
**ಅಯೋಧ್ಯಾಯಾಮಧಿವಸನ್ ಪಾಲಯಾಮಾಸ ಮೇದಿನೀಮ್ ॥ ೧ ॥**

**ಸರ್ವಸಂಪದ್ಗಣೋಪೇತಃ ಸರ್ವಧರ್ಮಾರ್ಥತತ್ತ್ವವಿತ್ ।**
**ವಯಸ್ಯೈವ ಸ ಬಾಲೋಽಭೂತ್ ಕರ್ಮಣಾ ವೃದ್ಧಸಮ್ಮತಃ ॥ ೨ ॥**

**ತಥಾಪಿ ನ ದಿವಾ ಭುಂಕ್ತೇ ಶೇತೇ ವಾ ನಿಶಿ ಸಂಸ್ಮರನ್ ।**
**ಸುದೀರ್ಘಂ ನಿಶ್ವಸಿತ್ಯುಷ್ಣಮುದ್ವಿಗ್ನಹೃದಯೋಽನಿಶಮ್ ॥ ೩ ॥**

**ಶ್ರುತ್ವಾ ರಾಜಾ ಸ್ವರಾಜ್ಯಂ ನಿಜಗುರುಮುವಜಿತ್ಯಾರಿಭಿಃ ಸಂಗೃಹೀತಂ**
**ಮಾತ್ರಾ ಸಾರ್ಧಂ ಪ್ರಯಾಂತಂ ವನಮತಿಗಹನಂ ಸ್ವರ್ಗತಂ ತಂ ಚ ತಸ್ಮಿನ್ ।**
**ಶೋಕಾವಿಷ್ಟಃ ಸರೋಷಂ ಸಕಲರಿಪುಕುಲೋಚ್ಛಿತ್ತಯೇ ತತ್ಪ್ರತಿಜ್ಞಾ-**
**ಶ್ಚಕ್ರೇ ಸದ್ಯಃ ಪ್ರತಿಜ್ಞಾಂ ಪರಿಭವಮಸಲಂ ಸೋಢುಮಿಕ್ಷ್ವಾಕುವಂಶ್ಯಃ ॥ ೪ ॥**

---

೧. ಜೈಮಿನಿಯು ಇಂತೆಂದನು :—ಹೀಗೆ ಮುನಿವರ್ಯನಾದ ವಸಿಷ್ಠ ಮಹರ್ಷಿಯು ಹೊರಟು ಹೋಗಲಾಗಿ ರಾಜಶ್ರೇಷ್ಠನಾದ ಸಗರ ಚಕ್ರವರ್ತಿಯು ಅಯೋಧ್ಯಾ ನಗರದಲ್ಲಿ ವಾಸಿಸುತ್ತ ಭೂಮಿಯನ್ನು ರಕ್ಷಿಸಿದನು.

೨. ಆಗ ಸಗರ ರಾಜನು ಎಲ್ಲ ವಿಧವಾದ ಐಶ್ವರ್ಯ ರಾಶಿಯಿಂದ ಕೂಡಿದವನೂ ಸಮಸ್ತ ಧರ್ಮ ಮತ್ತು ಅರ್ಥಗಳ ತತ್ತ್ವವನ್ನು ತಿಳಿದವನೂ ಆಗಿ ವಯೋಮಾತ್ರದಿಂದ ಬಾಲಕನಂತೆ ಇದ್ದರೂ ಅವನ ಸಮುಚಿತ ಕರ್ಮದಿಂದ ವೃದ್ಧರ ಗೋಷ್ಠಿಗೆ ಸಮ್ಮತನಾಗಿದ್ದನು.

೩. ಹಾಗಿದ್ದರೂ ಆ ರಾಜನು ಯಾವುದೋ ಚಿಂತಾಕ್ರಾಂತನಾಗಿ ಹಗಲು ಹೊತ್ತಿನಲ್ಲಿ ಭೋಜನವನ್ನು ಮಾಡದೆ ರಾತ್ರಿ ವೇಳೆಯಲ್ಲಿ ನಿದ್ರಾಸುಖವನ್ನು ಅನುಭವಿಸದೇ ಕಳವಳಗೊಂಡ ಹೃದಯವುಳ್ಳವನಾಗಿ ದಿವಾರಾತ್ರಿಗಳಲ್ಲಿ ದೀರ್ಘವಾಗಿಯೂ ಉಷ್ಣವಾಗಿಯೂ ಉಸಿರುಬಿಡುತ್ತಿದ್ದನು.

೪. ಇಕ್ಷ್ವಾಕು ವಂಶದಲ್ಲಿ ಹುಟ್ಟಿರುವವನೂ, ದೃಢಪ್ರತಿಜ್ಞೆಯುಳ್ಳವನೂ ಆದ ರಾಜನು ತನ್ನ ತಂದೆಯನ್ನು ಗೆದ್ದು ಶತ್ರುಗಳಿಂದ ರಾಜ್ಯವು ಸಂಗ್ರಹಿಸಲ್ಪಟ್ಟಿರು

ಸ ಕದಾಚಿನ್ಮಹೀಪಾಲಃ ಕೃತಕೌತುಕಮಂಗಲಃ ।
ರಿಪುಂ ಜೇತುಂ ಮನಶ್ಚಕ್ರೇ ದಿಶಶ್ಚ ಸಕಲಾಃ ಕ್ರಮಾತ್ ॥ ೫ ॥

ಅನೇಕರಥಸಾಹಸ್ರೈರ್ಗಜಾಶ್ವರಥಸೈನಿಕೈಃ ।
ಸರ್ವತಃ ಸಂವೃತೋ ರಾಜಾ ನಿಶ್ಚಕ್ರಾಮ ಪುರೋತ್ತಮಾತ್ ॥ ೬ ॥

ಶತ್ರೂನ್ ಹಂತುಂ ಪ್ರತಸ್ಥೇ ನಿಜಬಲನಿವಹೇನೋತ್ಪತದ್ಭಿಸ್ತುರಂಗೈ—
ರ್ನಾನಾಸತ್ತ್ವೋರ್ಮಿಜಾಲಾಕುಲಜಲಧಿನಿಭೇನಾಥ ಷಾಡಂಗಿಕೇನ ।
ಮತ್ತೈರ್ಮಾತಂಗಯೂಥೈಃ ಸಕುಲಗಿರಿಕುಲೇನೇವ ಭೂಮಂಡಲೇನ
ಶ್ವೇತಚ್ಛತ್ರಧ್ವಜೌಘೈರಪಿ ಶಶಿಸುಕರಾಭಾತಖೇನೈವ ಸಾರ್ಧಮ್ ॥ ೭ ॥

---

ವುದನ್ನೂ ಆಗ ತಂದೆಯು ಪತ್ನಿಯೊಡನೆ ಗಹನವಾದ ವನವನ್ನು ಪ್ರವೇಶಿಸುತ್ತಿರಲು ಅಲ್ಲಿಯೆ ಸ್ವರ್ಗಕ್ಕೆ ಹೋಗಿರುವುದನ್ನೂ ಕೇಳಿ ಅತಿ ಶೋಕದಿಂದ ಆವಿಷ್ಟನಾಗಿ ಆ ಅವಮಾನವನ್ನು ಸಹಿಸಲಾರದವನಾಗಿ ಕೂಡಲೆ ಸಮಸ್ತ ರಿಪುಗಳ ಸಂಘವನ್ನು ನಿರ್ಮೂಲ ಮಾಡುವ ವೀರ ಪ್ರತಿಜ್ಞೆಯನ್ನು ಮಾಡಿದನು.

೫. ಒಂದು ಸಮಯದಲ್ಲಿ ಆ ಸಗರ ಭೂಪಾಲನು ಕೌತುಕ ಬಂಧನ (ಕಂಕಣ ಬಂಧ) ವೆಂಬ ಮಂಗಳ ಕರ್ಮವನ್ನು ಆಚರಿಸಿಕೊಂಡು ಶತ್ರುವನ್ನು ನಿಗ್ರಹಿಸಿ ಕ್ರಮವಾಗಿ ಸಕಲ ದಿಕ್ಕುಗಳಲ್ಲಿ ವಿಜಯವನ್ನು ಸಂಪಾದಿಸಲು ಮನಸ್ಸಿನಲ್ಲಿ ಆಲೋಚಿಸಿದನು.

೬. ಆಗ ಅನೇಕ ಸಹಸ್ರ ಸಂಖ್ಯೆಯಿಂದ ಕೂಡಿದ ಗಜ-ಅಶ್ವ-ರಥ-ಸೈನಿಕರೆಂಬ ಚತುರಂಗಬಲದಿಂದ ಸುತ್ತಲೂ ಆವರಿಸಲ್ಪಟ್ಟವನಾಗಿ ತನ್ನ ಶ್ರೇಷ್ಠವಾದ ನಗರದಿಂದ ಜೈತ್ರಯಾತ್ರಾರ್ಥಿಯಾಗಿ ಹೊರಟನು.

೭. ಜಯಾರ್ಥಿಯಾದ ರಾಜನು ಮೇಲಕ್ಕೆದ್ದು ಕುಣಿದಾಡುತ್ತಲಿರುವ ಅಶ್ವ ಸೈನ್ಯದಿಂದ ನಾನಾ ವಿಧವಾದ ಜಲಚರ ಪ್ರಾಣಿ-ತರಂಗಮಾಲೆಗಳಿಂದ ಕ್ಷೋಭಗೊಂಡಿರುವ ಸಮುದ್ರದಂತೆ ತೋರುತ್ತಲಿರುವ, ಸಂಧಿ-ವಿಗ್ರಹ ಮುಂತಾದ ಆರು ಅಂಗಗಳಿಂದ ಕೂಡಿರುವ ತನ್ನ ಸೈನ್ಯದಿಂದ ಸಮೇತನಾಗಿ ಶತ್ರುಗಳನ್ನು ಗೆಲ್ಲಲು ಪ್ರಯಾಣ ಮಾಡಿದನು. ಆಗ ಸೈನ್ಯದಲ್ಲಿದ್ದ ಮಹಾ ಗಜಗಳಿಂದ ಕುಲಾಚಲಗಳಿಂದ ತುಂಬಿದ ಭೂಮಂಡಲವು ಸೇರಿದಂತೆಯೂ ಶ್ವೇತಚ್ಛತ್ರ-ಧ್ವಜಪಟಗಳಿಂದ ಚಂದ್ರನ ಶುಭ್ರ ಕಿರಣಗಳಿಂದ ಪ್ರಕಾಶಿಸುತ್ತಿರುವ ಗಗನಮಂಡಲವು ಸೇರಿದಂತೆಯೂ ತೋರುತ್ತಲಿತ್ತು.

ತಸ್ಯಾಗ್ರೇಸರಸೈನ್ಯಯೂಥಚರಣಪ್ರಕ್ಷುಣ್ಣಶೈಲೋಚ್ಚಯ—
ಕ್ಷೋದಾಪೂರಿತನಿಮ್ನಭಾಗಮವನೀಪಾಲಸ್ಯ ಸಂಯಾಸ್ಯತಃ ।
ಪ್ರತ್ಯೇಕಂ ಚತುರಂಗಸೈನ್ಯನಿಕರಪ್ರಕ್ಷೋದಸಂಭೂತಭೂ—
ರೇಣುಪ್ರಾವೃತಿರುತ್ಸ್ಥಲೀ ಸಮಭವದ್ಭೂಮಿಸ್ತು ತತ್ರಾನಿಶಮ್ ॥ ೮ ॥

ನಿಘ್ನನ್ ದೃಪ್ತಾನನೇಕಾನ್ ದ್ವಿಪತುರಗರಥವ್ಯೂಹಸಂಭಿನ್ನವೀರಾನ್
ಸದ್ಯಃ ಶೋಭಾಂ ದಧಾನೋಽಸುರನಿಕರಚಮೂರ್ನಿಘ್ನತಶ್ಚಂದ್ರಮೌಳೇಃ।
ದೂರಾದೇವಾಭಿಶಂಸನ್ನರಿನಗರನಿರೋಧೇಷು ಕರ್ಮಾಭಿಷಂಗೇ
ತೇಷಾಂ ಶೀಘ್ರಾಪಯಾನವ್ರತಮಭಿದಿಶತಿ ಪ್ರಾಣಿಧೈರ್ಯಂ ವಿಧತ್ತೇ ॥ ೯ ॥
ವಿಜಿಗೀಷುರ್ದಿಶೋ ರಾಜಾ ರಾಜ್ಞೋ ಯಸ್ಯಾಭಿಯಾಸ್ಯತಿ ॥ ೧೦ ॥

ವಿಷಯಂ ಸ ನೃಪಸ್ತಸ್ಯ ಸದ್ಯಃ ಪ್ರಣತಿಮೇಷ್ಯತಿ ।
ವಿಜಿತ್ಯ ನೃಪತೀನ್ ಸರ್ವಾನ್ ಕೃತ್ವಾ ಚ ಸ್ವಪದಾನುಗಾನ್ ॥ ೧೧ ॥

---

೮. ಆ ರಾಜನು ಜೈತ್ರಯಾತ್ರೆಯನ್ನು ಮಾಡುತ್ತಿರಲು ಮುಂದೆ ಪ್ರಯಾಣ ಮಾಡುತ್ತಲಿರುವ ಪದಾತಿದಳದ ಪಾದನ್ಯಾಸದಿಂದ ಚೂರ್ಣವಾದ ಪರ್ವತಗಳ ಧೂಳಿಯಿಂದ ಭೂಮಿಯಲ್ಲಿರುವ ಹಳ್ಳ ಭಾಗಗಳು ಮುಚ್ಚಿ ಹೋಗುತ್ತಲಿದ್ದುವು, ಹಾಗು ಗಜಾದಿ ಚತುರಂಗಗಳ ಪ್ರತ್ಯೇಕ ಪಾದಘಾತದಿಂದ ಮೇಲಕ್ಕೆ ಎದ್ದಿರುವ ಧೂಳಿಯ ಆವರಣದಿಂದ ಭೂಮಿಯು ಹಗಲು ಮತ್ತು ರಾತ್ರಿ ವೇಳೆಗಳಲ್ಲಿ ಊರ್ಧ್ವ ಭಾಗಕ್ಕೆ ಬಂದ ಪ್ರದೇಶಗಳಿಂದ ಕೂಡಿರುವಂತೆ ಆಯಿತು.

೯. ರಣರಂಗದಲ್ಲಿ ಕೊಬ್ಬಿರುವ ಅನೇಕ ಗಜ-ಅಶ್ವ-ರಥ ಮತ್ತು ವೀರ ಪದಾತಿಗಳ ತಂಡಗಳನ್ನು ಸಂಹರಿಸುತ್ತ ಆ ವೀರ ಕರ್ಮದಿಂದ ರಾಕ್ಷಸ ಸೈನ್ಯದಳಗಳನ್ನು ಸಂಹರಿಸುವ ಈಶ್ವರನಂತೆ ಶೋಭೆಯನ್ನು ಧರಿಸಿರುವ ರಾಜನು ಶತ್ರು ನಗರಗಳ ಆಕ್ರಮಣವನ್ನು ಘೋಷಿಸುತ್ತ ಶತ್ರುಗಳಿಗೆ ಬೇಗ ಪಲಾಯನ ವ್ರತವನ್ನು ಉಪದೇಶಿಸುವನಾದರೂ ಶತ್ರುಗಳಿಗೆ ಪ್ರಾಣದಲ್ಲಿ ಮಾತ್ರ ಧೈರ್ಯವನ್ನು ಕೊಡುವವನಾದನು.

೧೦. ಈ ರೀತಿಯಲ್ಲಿ ವಿಜಯೇಚ್ಛೆಯಿಂದ ಕೂಡಿದ ರಾಜನು ಮುಂದೆ ಮುಂದೆ ಆಯಾಯ ರಾಜನ ಮೇಲೆ ಯುದ್ಧಕ್ಕೆ ಸಿದ್ಧನಾಗಿ ಹೋಗುತ್ತಿದ್ದನು.

೧೧. ಜಿಗೀಷುವಾದ ರಾಜನು ಯಾವ ರಾಜನ ದೇಶದ ಮೇಲೆ ದಂಡೆತ್ತಿ ಹೋಗುವನೋ ಆ ರಾಜನು ಕೂಡಲೆ ಅವನಿಗೆ ಶರಣಾಗತನಾಗುತ್ತಲಿದ್ದನು, ಹೀಗೆ ಅವನು ಸಮಸ್ತ ರಾಜರನ್ನೂ ಗೆದ್ದು ಎಲ್ಲರನ್ನೂ ತನ್ನ ಅನುಯಾಯಿಗಳನ್ನಾಗಿ ಮಾಡಿಕೊಂಡನು.

ಸಂಕೇತಗಾಮಿನಃ ಕಾಂಶ್ಚಿತ್ ಕೃತ್ವಾ ರಾಜ್ಯೇ ನ್ಯವರ್ತತ ।
ಏವಂ ಸ ವಿಸರನ್ ದಿಕ್ಷು ದಕ್ಷಿಣಾಭಿಮುಖೋ ನೃಪಃ ॥ ೧೨ ॥

ಸ್ಮರನ್ ಪೂರ್ವಕೃತಂ ವೈರಂ ಹೈಹಯಾನಭ್ಯವರ್ತತ ।
ತತಸ್ತಸ್ಯ ನೃಪೈಃ ಸಾರ್ಧಂ ಸಮಗ್ರರಥಕುಂಜರೈಃ ॥ ೧೩ ॥

ಬಭೂವ ಹೈಹಯೈರ್ವೀರೈಃ ಸಂಗ್ರಾಮೋ ರೋಮಹರ್ಷಣಃ ।
ರಾಜ್ಞಾಂ ಯತ್ರ ಸಹಸ್ರಾಣಿ ಸಬಲಾನಿ ಮಹಾಹವೇ ॥ ೧೪ ॥

ನಿಜಘಾನ ಮಹಾಬಾಹುಃ ಸಂಕ್ರುದ್ಧಃ ಕೋಸಲೇಶ್ವರಃ ।
ಜಿತ್ವಾ ಹೈಹಯಭೂಪಾಲಾನ್ ಭಂಕ್ತ್ವಾ ದಗ್ಧ್ವಾ ಚ ತತ್ಪುರೀಮ್ ॥ ೧೫ ॥

ನಿಃಶೇಷಶೂನ್ಯಾಮಕರೋದ್ವೈರಾಂತಕರಣೋ ನೃಪಃ ।
ಸಮಗ್ರಬಲಸಮ್ಮರ್ದಪ್ರಮೃಷ್ಟಾಶೇಷಭೂತಲಃ ॥ ೧೬ ॥

---

೧೨. ಮತ್ತೆ ಕೆಲವರನ್ನು ತನ್ನ ಅಧೀನರೆಂಬ ಸಂಕೇತದಿಂದ ಅವರನ್ನು ಅವರ ವರ ರಾಜ್ಯದಲ್ಲಿ ಇರಿಸಿ ಹಿಂದಕ್ಕೆ ತಿರುಗಿದನು. ಹೀಗೆಯೇ ಮುಂದೆ ಮುಂದೆ ಎಲ್ಲ ದಿಕ್ಕುಗಳಲ್ಲಿಯೂ ಪ್ರಸರಿಸಿ ದಕ್ಷಿಣ ದಿಕ್ಕಿಗೆ ಅಭಿಮುಖನಾಗಿ ಹೋದನು.

೧೩. ಆಗ ಪೂರ್ವದಲ್ಲಿ ಹೈಹಯರಾಜರು ತೋರಿಸಿದ ವೈರವನ್ನು ಸ್ಮರಿಸಿ ಕೊಂಡು ಆ ದೇಶಕ್ಕೆ ಎದುರಾಗಿ ಬಂದನು. ಅಲ್ಲಿ ಸಂಪೂರ್ಣವಾದ ರಥ-ಗಜಾದಿ ಸೈನ್ಯ ಸಿದ್ಧತೆಯಿಂದ ಕೂಡಿದ ಆ ರಾಜರೊಡನೆ ಯುದ್ಧವು ಜರುಗಿತು.

೧೪. ಹೈಹಯ ದೇಶದ ವೀರ ರಾಜರೊಡನೆ ಪ್ರೇಕ್ಷಕರಿಗೆ ರೋಮಾಂಚವನ್ನು ಉಂಟುಮಾಡುವಂತಹ ಘೋರವಾದ ಸಂಗ್ರಾಮವು ನಡೆಯಿತು. ಆ ಮಹಾ ಸಂಗ್ರಾಮದಲ್ಲಿ ತಮ್ಮ ತಮ್ಮ ಸೈನ್ಯಸಹಿತರಾದ ಅನೇಕ ರಾಜರ ವಧವು ನಡೆ ಯುತ್ತಿತ್ತು.

೧೫. ಮಹಾಬಾಹು ಬಲಶಾಲಿಯಾದ ಕೋಶಲ ದೇಶಾಧಿಪತಿಯು ಕೋಪ ದಿಂದ ಅತ್ಯುಗ್ರನಾಗಿ ಹೈಹಯ ರಾಜರನ್ನು ಗೆದ್ದು ಅವರ ರಾಜ್ಯ-ಪಟ್ಟಣಗಳನ್ನು ದಹನ-ಭಂಜನಗಳಿಂದ ನಾಶಪಡಿಸಿದನು.

೧೬. ಪೂರ್ವ ವೈರಕ್ಕೆ ಪ್ರತೀಕಾರವನ್ನು ಕೈಗೊಂಡಿರುವ ರಾಜನು ಹೈಹಯ ನಗರಿಯನ್ನು ನಿಶ್ಶೇಷವಾಗಿ ನಾಶಮಾಡಿದನು. ಮತ್ತು ತನ್ನ ಸಂಪೂರ್ಣ ಸೈನ್ಯದ ಸಮ್ಮರ್ದದಿಂದ ಎಲ್ಲ ಭೂಮಿಯನ್ನು ಚೂರ್ಣಮಾಡಿಬಿಟ್ಟನು.

ಹೈಹಯಾನಾಮಶೇಷಂ ತು ಚಕ್ರೇ ರಾಜ್ಯಂ ರಜಃಸಮಮ್ ।
ರಾಜ್ಯಂ ಪುರೀಂ ಚಾಪಹಾಯ ಭ್ರಷ್ಟೈಶ್ವರ್ಯಾ ಹತತ್ವಿಷಃ ॥ ೧೭ ॥

ರಾಜಾನೋ ಹತಭೂಯಿಷ್ಠಾ ವ್ಯದ್ರವಂತ ಸಮಂತತಃ ।
ಅಭಿದ್ರುತ್ಯ ನೃಪಾಂಸ್ತಾಂಸ್ತು ದ್ರವಮಾಣಾನ್ಮಹೀಪತಿಃ ॥ ೧೮ ॥

ಜಘಾನ ಸಾನುಗಾನ್ಮತ್ತಃ ಪ್ರಜಾಃ ಕ್ರುದ್ಧ ಇವಾಂತಕಃ ।
ತತಸ್ತಾನ್ ಪ್ರತಿ ಸಕ್ರೋಧಃ ಸಗರಃ ಸಮರೇಽರಿಹಾ ॥ ೧೯ ॥

ಮುಮೋಚಾಸ್ತ್ರಂ ಮಹಾರೌದ್ರಂ ಭಾರ್ಗವಂ ರಿಪುಭೀಷಣಮ್ ।
ತೇನೋತ್ಸೃಷ್ಟಾತಿರೌದ್ರ ತ್ರಿಭುವನಭಯದಪ್ರಸ್ಫುರದ್ಭಾರ್ಗವಾಸ್ತ್ರ-
ಜ್ವಾಲಾದಂದಹ್ಯಮಾನಾವಶತನುತತಯಸ್ತೇ ನೃಪಾಃ ಸದ್ಯ ಏವ ।
ವಾಯವ್ಯಾಸ್ತ್ರಾವೃತ್ತಧೂಮೋದ್ಗಮಪಟಲತಮೋಮುಷ್ಟದೃಷ್ಟಿಪ್ರಸಾರಾ
ಭ್ರೇಮುರ್ಭೂಪೃಷ್ಠಲೋಕದ್ಬಹುಲತಮರಜೋಗೂಢಮಾತ್ರಾ
ಮುಹೂರ್ತಮ್ ॥ ೨೦ ॥

---

೧೭. ಹೈಹಯ ರಾಜರ ನಿಃಶೇಷ ರಾಜ್ಯವನ್ನು ಧೂಳಿ ಸಮವನ್ನಾಗಿ ಮಾಡಿದನು. ಆಗ ಆ ರಾಜರು ರಾಜ್ಯವನ್ನೂ ನಗರವನ್ನೂ ಕಳೆದುಕೊಂಡು ಐಶ್ವರ್ಯ ಭ್ರಷ್ಟರೂ ಮತ್ತು ನಿಸ್ತೇಜಸ್ಕರೂ ಆದರು.

೧೮. ಹೆಚ್ಚಾಗಿ ಸಂಹಾರವಾಗಿ ಮಿಕ್ಕಿರುವ ರಾಜರು ಸುತ್ತಮುತ್ತಲೂ ಪಲಾಯನ ಮಾಡಿದರು. ಆಗ ರಾಜನು ಪಲಾಯನ ಮಾಡುತ್ತಲಿದ್ದ ಆ ರಾಜರನ್ನು ಹಿಂದಟ್ಟಿಕೊಂಡು ಹೋಗಿ ಸಂಹಾರ ಮಾಡಿದನು.

೧೯. ಮದಿಸಿದ ಸಗರನು ಅನುಚರರಿಂದ ಕೂಡಿದ ಸಕಲ ರಾಜರನ್ನು ಕೋಪಗೊಂಡಿರುವ ಯಮನು ಪ್ರಜೆಗಳನ್ನು ಸಂಹರಿಸಿದಂತೆ ಸಂಹಾರ ಮಾಡಿದನು. ತರುವಾಯ ಯುದ್ಧದಲ್ಲಿ ಶತ್ರುಂಜಯನಾದ ಸಗರ ರಾಜನು ಆ ರಾಜ ಸಂಘದ ಮೇಲೆ ಅತಿಶಯವಾದ ಕೋಪವುಳ್ಳವನಾದನು.

೨೦. ಮತ್ತು ಶತ್ರುಗಳಿಗೆ ಭೀತಿಯನ್ನು ಉಂಟುಮಾಡುವ ಅತಿ ರೌದ್ರವಾದ ಭಾರ್ಗವಾಸ್ತ್ರವನ್ನು ಪ್ರಯೋಗಿಸಿದನು. ಅವನಿಂದ ಪ್ರಯೋಗಿಸಲ್ಪಟ್ಟ ಅತ್ಯಂತ ರೌದ್ರವೂ ಮೂರು ಲೋಕಗಳಿಗೆ ಭಯಂಕರವೂ ಆಗಿ ಸ್ಫುರಿಸುತ್ತಲಿದ್ದ ಆ ಭಾರ್ಗವಾಸ್ತ್ರದ ಜ್ವಾಲೆಗಳಿಂದ ಸುಟ್ಟು ಹೋಗುತ್ತಲಿದ್ದ ಪರವಶವಾದ ದೇಹಗಳುಳ್ಳ ಆ ಸಮಸ್ತ ರಾಜರು ಕೂಡಲೆ ವಾಯವ್ಯಾಸ್ತ್ರದಿಂದ ತುಂಬಿ ಹೋದ ಹೊಗೆಯಿಂದ ತಡೆಗಟ್ಟಿದ

ಆಗ್ನೇಯಾಸ್ತ್ರಪ್ರತಾಪಪ್ರತಿಹತಗತಯೋ ಭ್ರಷ್ಟಮಾರ್ಗಾಃ ಸಮಂತಾ-
ದ್ಧೂಳಿಜಾಲಾ ನಷ್ಟಸಂಘಾಃ ಪರವಶತನವೋ ವ್ಯಾಕುಲೀಭೂತಚಿತ್ತಾಃ ।
ಭೀತಾಃ ಸಂತ್ಯಕ್ತವಸ್ತ್ರಾಯುಧಕವಚವಿಭೂಷಾದಿಕಾ ಮುಕ್ತಕೇಶಾ
ವಿಸ್ಪಷ್ಟೋನ್ಮತ್ತಭಾವಾನ್ ಭೃಶತರಮನುಕುರ್ವಂತ್ಯಗ್ರತಃ
ಶಾತ್ರವಾಣಾಮ್ ॥ ೨೧ ॥

ವಿಜಿತ್ಯ ಹೈಹಯಾನ್ ಸರ್ವಾನ್ ಸಮರೇ ಸಗರೋ ಬಲೀ ।
ಸಂಕ್ಷುಬ್ಧಸಾಗರಾಕಾರಃ ಕಾಂಭೋಜಾನಭ್ಯವರ್ತತ ॥ ೨೨ ॥

ನಾನಾವಾದಿತ್ರಘೋಷಾಹತಪಟಹರವಾಕರ್ಣನಧ್ವಸ್ತಧೈರ್ಯಾಃ
ಸದ್ಯಃ ಸಂತ್ಯಕ್ತರಾಜ್ಯಸ್ವಬಲಪುರಪುರಂಧ್ರೀಸಮೂಹಾ ವಿಮೂಢಾಃ ।
ಕಾಂಭೋಜಾಸ್ತಾಲಜಂಘಾಃ ಶಕಯವನಕಿರಾತಾದಯಃ ಸಾಕಮೇತೇ
ಭ್ರೇಮುರ್ಭೂರ್ಯಸ್ತ್ರಭೀತ್ಯಾ ದಿಶಿ ದಿಶಿ ರಿಪವೋ ಯಸ್ಯ ಪೂರ್ವಾ
ಪರಾಧಾಃ ॥ ೨೩ ॥

---

ದೃಷ್ಟಿ ಪ್ರಸರವುಳ್ಳವರೂ ಮತ್ತು ಭೂಮಿಯಲ್ಲಿ ಬಿದ್ದು ಹೊರಳಾಡುವುದರಿಂದ ಧೂಳಿಯು ವ್ಯಾಪಿಸಿ ಮಲಿನ ಅವಯವವುಳ್ಳವರೂ ಆಗಿ ಸ್ವಲ್ಪ ಕಾಲ ಭ್ರಮಿಸಿದರು.

೨೧. ಆಗ ಆಗ್ನೇಯಾಸ್ತ್ರದ ಪ್ರತಾಪದಿಂದ ನಿರೋಧಿಸಲ್ಪಟ್ಟ ಗಮನವುಳ್ಳ ಶತ್ರು ರಾಜರು ಕಾಣದಿರುವ ದಾರಿಯುಳ್ಳವರೂ, ಕ್ಷುತ್ತಲೂ ನಾಶ ಹೊಂದಿದ ಸಂಘವುಳ್ಳವರೂ, ಪರಾಧೀನವಾದ ದೇಹವುಳ್ಳವರೂ ವಿಷಾದದಿಂದ ವ್ಯಾಕುಲವಾದ ಮಾನಸವುಳ್ಳವರೂ, ಭಯಚಕಿತರೂ, ತ್ಯಜಿಸಿದ ವಸ್ತ್ರ-ಆಯುಧ-ಕವಚ-ಆಭರಣ ಮುಂತಾದ ಉಪಕರಣವುಳ್ಳವರೂ, ಮತ್ತು ಚೆದುರಿ ಹೋದ ಕೂದಲು ಉಳ್ಳವರೂ ಆಗಿ ಉನ್ಮತ್ತ ಪುರುಷರನ್ನು ಅನುಕರಿಸುತ್ತಿದ್ದರು.

೨೨. ಬಲಿಷ್ಠನಾದ ಸಗರ ರಾಜನು ಯುದ್ಧದಲ್ಲಿ ಎಲ್ಲ ಹೈಹಯ ರಾಜರನ್ನು ಗೆದ್ದು ಕ್ಷೋಭಗೊಂಡಿರುವ ಸಾಗರದಂತೆ ಭೀಷಣವಾದ ಆಕಾರವುಳ್ಳವನಾಗಿ ಕಾಂಭೋಜ ದೇಶಾಧಿಪತಿಗಳನ್ನು ಸುತ್ತುವರಿದನು.

೨೩. ಆಗ ಪೂರ್ವದಲ್ಲಿ ವೈರಾಪರಾಧವನ್ನು ಮಾಡಿರುವ ಕಾಂಭೋಜ, ತಾಲಜಂಘ, ಶಕ, ಯವನ, ಕಿರಾತ ಮುಂತಾದ ಸಕಲ ಶತ್ರು ರಾಜರು ಅನೇಕ ಜಯವಾದ್ಯ ಘೋಷ, ಪಟಹಧ್ವನಿಗಳನ್ನು ಕೇಳುವುದರಿಂದ ಧ್ವಂಸ ಹೊಂದಿದ ಧೈರ್ಯವುಳ್ಳವರೂ ಮತ್ತು ಕೂಡಲೆ ರಾಜ್ಯ-ಸೈನ್ಯ-ನಗರ-ನಾರಿಯರನ್ನು ತ್ಯಜಿಸಿದವರೂ ಮತ್ತು ದಿಗ್ಭ್ರಮೆಗೊಂಡವರೂ ಆಗಿ ಸಗರ ರಾಜನ ಅಸ್ತ್ರ ಭೀತಿಯಿಂದ ದಿಕ್ಕು ದಿಕ್ಕುಗಳಲ್ಲಿ ಸಂಘರೂಪವಾಗಿ ಭ್ರಮಿಸಿದರು.

ಭೀತಾಸ್ತಸ್ಯ ನರೇಶ್ವರಸ್ಯ ರಿಪವಃ ಕೇಚಿತ್ ಪ್ರತಾಪಾನಲ-
ಜ್ವಾಲಾಮುಷ್ಟದೃಶೋ ವಿಸೃಜ್ಯ ವಸತಿಂ ರಾಜ್ಯಂ ಚ ಪುತ್ರಾದಿಭಿಃ ।
ದ್ವಿಟ್‌ಸೈನ್ಯೈಃ ಸಮಭಿದ್ರುತಾ ವನಭುವಂ ಸಂಪ್ರಾಪ್ಯ ತತ್ರಾಪಿ ತೇs-
ಸ್ಥೈರ್ಯಮಿತ್ಥಂ ಸಮುಪಾಗತಾ ಗಿರಿಗುಹಾಸುಪ್ತೋತ್ಥಿತೇನ ದ್ವಿಷಃ॥ ೨೪ ॥

ತಾಲಜಂಘಾನ್ನಿಹತ್ಯಾಜೌ ರಾಜಾ ಸಬಲವಾಹನಾನ್ ।
ಕ್ರಮೇಣ ನಾಶಯಾಮಾಸ ತದ್ರಾಜ್ಯಮರಿಕರ್ಷಣಃ ॥ ೨೫ ॥

ತತೋ ಯವನಕಾಂಭೋಜಕಿರಾತಾದೀನನೇಕಶಃ ।
ನಿಜಘಾನ ರುಷಾವಿಷ್ಟಃ ಪಹ್ಲವಾನ್ ಪಾರದಾನಪಿ ॥ ೨೬ ॥

ಹನ್ಯಮಾನಾಸ್ತು ತೇ ಸರ್ವೇ ರಾಜಾನಸ್ತೇನ ಸಂಯುಗೇ ।
ದುದ್ರುವುಃ ಸಂಘಶೋ ಭೀತಾ ಹತಶಿಷ್ಟಾಃ ಸಮಂತತಃ ॥ ೨೭ ॥

---

೨೪. ಮತ್ತು ಆ ಸಗರ ರಾಜನ ಶತ್ರು ರಾಜರಲ್ಲಿ ಕೆಲವರು ಪ್ರತಾಪಾಗ್ನಿ ಜ್ವಾಲೆಯಿಂದ ಲೋಪವಾದ ದೃಷ್ಟಿಯುಳ್ಳವರಾಗಿ ಪುತ್ರಾದಿಗಳೊಂದಿಗೆ ವಾಸಭೂಮಿ-ರಾಜ್ಯ ಮುಂತಾದುವುಗಳನ್ನು ತ್ಯಜಿಸಿ ಶತ್ರು ಸೈನ್ಯಗಳಿಂದ ಹಿಂದಟ್ಟಿ ಓಡಿಸಲ್ಪಟ್ಟವರಾಗಿ ವನಭೂಮಿಗೆ ಹೋಗಿ ಗಿರಿ-ಗುಹೆಗಳಲ್ಲಿ ಶಯನಮಾಡಿ ಎಚ್ಚರವನ್ನು ಹೊಂದುವವರಾದಾಗ್ಯೂ ಮನಸ್ಸಿನಲ್ಲಿ ಸ್ಥೈರ್ಯವನ್ನು ಹೊಂದಲಿಲ್ಲ.

೨೫. ಶತ್ರುಗಳನ್ನು ನಿರ್ಮೂಲ ಮಾಡುವ ವ್ರತಪರನಾದ ಸಗರ ರಾಜನು ಸಂಗ್ರಾಮದಲ್ಲಿ ತಾಲಜಂಘ ರಾಜರನ್ನು ಧ್ವಂಸಮಾಡಿ ಕ್ರಮವಾಗಿ ಅವರ ಅಧೀನದಲ್ಲಿದ್ದ ಸಕಲ ರಾಜ್ಯವನ್ನೂ ನಾಶಮಾಡಿದನು.

೨೬. ತರುವಾಯ ಹಾಗೆ ಅತಿ ತೀವ್ರವಾದ ಕೋಪಾವೇಶವುಳ್ಳವನಾಗಿ ಯವನ-ಕಾಂಭೋಜ-ಕಿರಾತ-ಪಹ್ಲವ-ಪಾರದ ಮುಂತಾದ ಅನೇಕ ದೇಶೀಯ ರಾಜರನ್ನು ಸಂಹರಿಸಿದನು.

೨೭. ಈ ರೀತಿಯಾಗಿ ಎಲ್ಲ ಶತ್ರು ರಾಜರು ಸಗರನಿಂದ ರಣರಂಗದಲ್ಲಿ ಕೊಲ್ಲಲ್ಪಡುತ್ತಲಿರಲು ಹತಾವಶಿಷ್ಟರಾದ ಕೆಲವು ರಾಜರು ಸಂಘರೂಪವಾಗಿ ಭಯದಿಂದ ಸುತ್ತಮುತ್ತಲೂ ಧಾವಿಸಿದರು.

ಯುಷ್ಮಾಭಿರ್ಯಸ್ಯ ರಾಜ್ಯಂ ಬಹುಭಿರಪಹೃತಂ ತಸ್ಯ ಪುತ್ರೋಽಧುನಾಹಂ
ಹಂತುಂ ವಃ ಸಪ್ರತಿಜ್ಞಂ ಪ್ರಸಭಮುಪಗತೋ ವೈರನಿರ್ಯಾತನೈಷೀ ।
ಇತ್ಯುಚ್ಚೈಃ ಶ್ರಾವಯಾಣೋ ಯುಧಿ ನಿಜಚರಿತಂ ವೈರಿಭಿರ್ನಾಗವೀರ್ಯಃ
ಕ್ಷತ್ರೈರ್ವಿಧ್ವಂಸಿತೇಜಾಃ ಸಗರನರಪತಿಃ ಸ್ಮಾರಯಾಮಾಸ ಭೂಪಃ॥೨೮॥

ತಂ ದೃಷ್ಟ್ವಾ ರಾಜವರ್ಯಂ ಸಕಲರಿಪುಕುಲಪ್ರಕ್ಷಯೋಽಸಾತ್ತದೀಕ್ಷಂ
ಭೀತಾಃ ಸ್ತ್ರೀಬಾಲಪೂರ್ವಂ ಶರಣಮಭಿಯಯುಃ ಸ್ವಾಸುಸಂರಕ್ಷಣಾಯ ।
ಇಕ್ಷ್ವಾಕೂಣಾಂ ವಸಿಷ್ಠಂ ಕುಲಗುರುಮಭಿತಃ ಸಪ್ತರಾಜ್ಞಾಂ ಕುಲೇಷು
ಪ್ರಖ್ಯಾತಾಃ ಸಂಪ್ರಸೂತಾ ನೃಪವರರಿಪವಃ ಪಾರದಾಃ ಪಹ್ಲವಾದ್ಯಾಃ ॥ ೨೯ ॥

ವಸಿಷ್ಠಮಾಶ್ರಮೋಪಾಂತೇ ವಸಂತಮೃಷಿಭಿರ್ವೃತಮ್ ।
ಉಪಗಮ್ಯಾಬ್ರುವನ್ ಸರ್ವೇ ಕೃತಾಂಜಲಿಪುಟಾ ನೃಪಾಃ ॥ ೩೦ ॥

---

೨೮. ಆಗ ಶತ್ರುರಾಜರನ್ನು ಧ್ವಂಸ ಮಾಡಲು ದಕ್ಷನಾದ ತೇಜಸ್ಸುಳ್ಳ ಆನೆಯ ಮಹಾ ವೀರ್ಯವುಳ್ಳ ಮತ್ತು ಭೂಪತಿಯಾದ ಸಗರ ರಾಜನು, "ನಿಮ್ಮೆಲ್ಲರಿಂದ ಯಾವ ರಾಜನ ರಾಜ್ಯವು ಬಲಾತ್ಕಾರದಿಂದ ಅಪಹರಿಸಲ್ಪಟ್ಟಿರುವುದೊ ಆ ರಾಜನ ವೀರಪುತ್ರನಾದ ನಾನು ಪ್ರತಿಜ್ಞೆಯನ್ನು ತೊಟ್ಟು ಬಲಾತ್ಕಾರದಿಂದ ವೈರಪ್ರತೀಕಾರ ಮಾಡಬೇಕೆಂಬ ಕೌತುಕವುಳ್ಳವನಾಗಿ ನಿಮ್ಮನ್ನು ಕೊಲ್ಲಲು ಬಂದಿರುವೆನು" ಹೀಗೆಂದು ತನ್ನ ಚರಿತ್ರೆಯನ್ನು ಶತ್ರುರಾಜರು ಕೇಳುವಂತೆ ಗಟ್ಟಿಯಾಗಿ ಘೋಷಿಸಿದನು.

೨೯. ಈ ರೀತಿಯಾಗಿ ಸಕಲ ರಿಪುವಂಶ ಸಂಹಾರ ಕರ್ಮದಲ್ಲಿ ದೀಕ್ಷಾಬದ್ಧನಾದ ಆ ಸಗರ ರಾಜವರ್ಯನನ್ನು ನೋಡಿ ಭೀತರಾದ, ಮಹತ್ತಾದ ರಾಜವಂಶದಲ್ಲಿ ಪ್ರಖ್ಯಾತಿಯನ್ನು ಹೊಂದಿದ ಪಾರದ-ಪಹ್ಲವ ಮುಂತಾದ ಏಳು ಮಂದಿ ಶತ್ರುರಾಜರು ಇಕ್ಷ್ವಾಕುವಂಶದ ರಾಜರಿಗೆ ಕುಲ ಗುರುಗಳಾದ ವಸಿಷ್ಠ ಮುನಿಯ ಸನ್ನಿಧಿಗೆ ತಮ್ಮ ಪ್ರಾಣರಕ್ಷಣೆಗೋಸ್ಕರ ಸ್ತ್ರೀ-ಬಾಲಪೂರ್ವಕವಾಗಿ ಶರಣ ಹೊಂದಿದರು.

೩೦. ಅನೇಕ ಮಹರ್ಷಿಗಳಿಂದ ಸುತ್ತುವರಿಯಲ್ಪಟ್ಟು ತಮ್ಮ ಆಶ್ರಮ ಸನ್ನಿಧಿಯಲ್ಲಿ ವಾಸಮಾಡುತ್ತಲಿದ್ದ ವಸಿಷ್ಠ ಮುನಿಯ ಸಮೀಪಕ್ಕೆ ಬಂದು ಸಮಸ್ತ ರಾಜರು ಅಂಜಲಿಬಂಧದಿಂದ ಸಹಿತರಾಗಿ ನಿಂತುಕೊಂಡರು.

ಶರಣಂ ಭವ ನೋ ಬ್ರಹ್ಮನ್ನಾರ್ತಾನಾಮಭಯೈಷಿಣಾಮ್ ।
ಸಗರಾಸ್ತ್ರಾಗ್ನಿನಿರ್ದಗ್ಧಶರೀರಾಣಾಂ ಮುಮೂರ್ಷತಾಮ್ ॥ ೩೧ ॥

ಸ ಹಂತ್ಯಸ್ಮಾನಶೇಷೇಣ ವೈರಾಂತಕರಣೋನ್ಮುಖಃ ।
ತಸ್ಮಾದ್ಭಯಾದ್ಧಿ ನಿಷ್ಕ್ರಾಂತಾ ವಯಂ ಜೀವಿತಕಾಂಕ್ಷಿಣಃ ॥ ೩೨ ॥

ವಿಭಿನ್ನರಾಜ್ಯಭೋಗರ್ಧಿಸ್ವದಾರಾಪತ್ಯಬಾಂಧವಾಃ ।
ಕೇವಲಂ ಪ್ರಾಣರಕ್ಷಾರ್ಥಂ ತ್ವಾಂ ವಯಂ ಶರಣಂ ಗತಾಃ ॥ ೩೩ ॥

ನ ಹ್ಯನ್ಯೋಽಸ್ತಿ ಪುಮಾನ್ ಲೋಕೇ ಸೌಹೃದೇನ ಬಲೇನ ವಾ ।
ಯಸ್ತಂ ನಿವರ್ತಯಿತ್ವಾಸ್ಮಾನ್ ಪಾಲಯೇನ್ಮಹತೋ ಭಯಾತ್ ॥ ೩೪ ॥

ತ್ವಂ ಕಿಲಾರ್ಕಾನ್ವಯಭುವಾಂ ರಾಜ್ಞಾಂ ಕುಲಗುರುರ್ವೃತಃ ।
ತದ್ವಂಶಪೂರ್ವಜೈರ್ಭೂಪೈಸ್ತ್ವತ್ಪ್ರಭಾವಶ್ಚ ತಾದೃಶಃ ॥ ೩೫ ॥

---

೩೧. ಮತ್ತು ವಸಿಷ್ಠ ಮುನಿಯಲ್ಲಿ ಈ ರೀತಿ ವಿಜ್ಞಾಪಿಸಿಕೊಂಡರು :— ಬ್ರಹ್ಮರ್ಷಿಯೆ ! ಸಗರ ಭೂಪಾಲನ ಅಸ್ತ್ರ ಜ್ವಾಲೆಯಿಂದ ದಗ್ಧವಾದ ದೇಹವುಳ್ಳ, ಮರಣೋನ್ಮುಖರಾಗಿರುವ, ಮತ್ತು ಪೀಡಾಗ್ರಸ್ತರಾದ ನಾವು ಅಭಯಾರ್ಥಿಗಳಾಗಿರುವೆವು. ದೀನರಾದ ನಮಗೆ ನೀನು ಶರಣದಾನ ಮಾಡಬೇಕು.

೩೨. ಆ ರಾಜನು ವೈರಕ್ಕೆ ಪ್ರತೀಕಾರ ಮಾಡುವ ದೃಢ ಸಂಕಲ್ಪವುಳ್ಳವನಾಗಿ ಸಂಪೂರ್ಣವಾಗಿ ನಮ್ಮೆಲ್ಲರನ್ನೂ ಸಂಹರಿಸುತ್ತಾನೆ. ಆ ಭಯದಿಂದ ಪ್ರಾಣರಕ್ಷಣೆಯಲ್ಲಿ ಆಕಾಂಕ್ಷೆಯುಳ್ಳ ನಾವು ಹೊರಟು ಬಂದಿರುವೆವು.

೩೩. ನಾವು ರಾಜ್ಯ-ಭೋಗ-ಸಂಪತ್ತು-ಪತ್ನೀ-ಪುತ್ರ-ಬಂಧು ಮುಂತಾದ ಸಕಲ ಪರಿವಾರವನ್ನೂ ತ್ಯಜಿಸಿ ಕೇವಲ ಪ್ರಾಣವನ್ನು ಉಳಿಸಿಕೊಳ್ಳುವ ಉದ್ದೇಶದಿಂದ ನಿನ್ನಲ್ಲಿ ಶರಣಾಗತರಾಗಿರುವೆವು.

೩೪. ಲೋಕದಲ್ಲಿ ಸ್ನೇಹದಿಂದಾಗಲಿ, ಬಲದಿಂದಾಗಲಿ ಆ ರಾಜನನ್ನು ಹಿಂದಕ್ಕೆ ತಿರುಗಿಸಿ ಮಹಾ ಸಂಕಟದಿಂದ ನಮ್ಮನ್ನು ರಕ್ಷಿಸುವ ದಕ್ಷತೆಯುಳ್ಳ ಬೇರೊಬ್ಬ ವೀರ ಪುರುಷನು ಯಾರೂ ಇಲ್ಲ.

೩೫. ಸೂರ್ಯನ ವಂಶದಲ್ಲಿ ಪೂರ್ವದಲ್ಲಿ ಹುಟ್ಟಿದ ರಾಜರಿಂದ ಆ ವಂಶದ ಸಮಸ್ತ ರಾಜರಿಗೆ ಕುಲಗುರುವಾಗಿ ನೀನು ವರಿಸಲ್ಪಟ್ಟಿರುವೆಯಲ್ಲವೆ ! ಅಂತಹ ನಿನ್ನ ಮಹಿಮೆಯು ಅತ್ಯದ್ಭುತವಾದುದು.

19

ತೇನಾಯಂ ಸಗರೋಽಪ್ಯದ್ಯ ಗುರುಗೌರವಯಂತ್ರಿತಃ ।
ಭವನ್ನಿದೇಶಂ ನಾತ್ಯೇತಿ ವೇಲಾಮಿವ ಮಹೋದಧಿಃ ॥ ೩೬ ॥

ತ್ವಂ ನಃ ಸುಹೃತ್ಪಿತಾ ಮಾತಾ ಲೋಕಾನಾಂ ಚ ಗುರುರ್ವಿಭೋ ।
ತಸ್ಮಾದಸ್ಮಾನ್ಮಹಾಭಾಗ ಪರಿತ್ರಾತುಂ ತ್ವಮರ್ಹಸಿ ॥ ೩೭ ॥

ಜೈಮಿನಿರುವಾಚ :—
ಇತಿ ತೇಷಾಂ ವಚಃ ಶ್ರುತ್ವಾ ವಸಿಷ್ಠೋ ಭಗವಾನೃಷಿಃ ।
ಶನೈರ್ವಿಲೋಕಯಾಮಾಸ ಶರಣಂ ಸಮುಪಾಗತಾನ್ ॥ ೩೮ ॥

ವೃದ್ಧಸ್ತ್ರೀಬಾಲಭೂಯಿಷ್ಠಾನ್ ಹತಶೇಷಾನ್ ನೃಪಾನ್ವಯಾನ್ ।
ದೃಷ್ಟ್ವಾ ತ್ವತಪ್ಯದ್ಭಗವಾನ್ ಸರ್ವಭೂತಾನುಕಂಪಕಃ ॥ ೩೯ ॥

ಚಿರಂ ನಿರೂಪ್ಯ ಮನಸಾ ತಾನ್ ವಿಲೋಕ್ಯ ಚ ಸಾದರಮ್ ।
ಉಜ್ಜೀವಯನ್ ಶನೈರ್ವಾಚಾ ಮಾಭೈಷ್ಟೇತಿ ಮಹಾಮತಿಃ ॥ ೪೦ ॥

---

೩೬. ಆದ್ದರಿಂದ ಈ ಸಗರ ರಾಜನು ಗುರುವಾದ ನಿನ್ನಲ್ಲಿ ಗೌರವ ಬುದ್ಧಿಗೆ ಅಧೀನನಾಗಿರುವುದರಿಂದ ಮಹೋದಧಿಯು ತನ್ನ ಮೇರೆಯನ್ನು ಮೀರಿ ಬರದಂತೆ ನಿನ್ನ ಆಜ್ಞೆಯನ್ನು ಸ್ವಲ್ಪವೂ ಉಲ್ಲಂಘಿಸುವುದಿಲ್ಲ.

೩೭. ಸರ್ವ ಶಕ್ತನೇ! ನೀನು ನಮಗೂ ಸಮಸ್ತ ಲೋಕಕ್ಕೂ ಮಿತ್ರನು, ತಂದೆಯು, ತಾಯಿಯು, ಮತ್ತು ಗುರುವು. ಸರ್ವ ವಿಧದಿಂದಲೂ ನಮಗೆ ಹಿತಾಕಾಂಕ್ಷಿಯಾಗಿರುತ್ತೀ. ಮಹಾಭಾಗನೆ! ನೀನು ನಮ್ಮನ್ನು ರಕ್ಷಿಸಲು ಅರ್ಹನಾಗಿದ್ದೀ.

೩೮. ಜೈಮಿನಿ ಮುನಿಯು ಇಂತೆಂದನು :— ಪೂಜ್ಯನಾದ ವಸಿಷ್ಠ ಮುನಿಯು ಈ ವಿಧವಾಗಿ ನುಡಿದಿರುವ ಆ ರಾಜರ ವಚನಗಳನ್ನು ಲಾಲಿಸಿ ಶರಣಾರ್ಥಿಗಳಾಗಿ ಬಂದಿರುವ ಆ ಸಮಸ್ತ ರಾಜರನ್ನು ಮೆಲ್ಲಗೆ ನೋಡಿದನು.

೩೯. ಸರ್ವ ಭೂತಗಳಲ್ಲಿ ಕರುಣಾಳುವಾದ, ಮತ್ತು ಪೂಜ್ಯನಾದ ಆ ವಸಿಷ್ಠ ಮುನಿಯು ವೃದ್ಧರು, ಸ್ತ್ರೀಯರು, ಬಾಲಕರು ಮಾತ್ರ ಹೆಚ್ಚಾಗಿ ಹತಾವಶಿಷ್ಟರಾಗಿ ನಿಂತಿರುವ ರಾಜವಂಶದವರನ್ನು ನೋಡಿ ಮನದಲ್ಲಿ ಸಂತಪಿಸಿದನು.

೪೦. ಮಹಾ ಪ್ರಜ್ಞಾವಂತನಾದ ಮುನಿಯು ಬಹಳ ಹೊತ್ತು ಮನಸ್ಸಿನಿಂದ ವಿಮರ್ಶೆಮಾಡಿ ಆದರದಿಂದ ಅವರನ್ನು ನೋಡಿ “ಹೆದರಬೇಡಿ” ಎಂಬ ಅಭಯ ವಚನದಿಂದ ಅವರನ್ನು ಸಂಜೀವನಗೊಳಿಸುವ ಹಾಗೆ ಮಾತನಾಡಿದನು.

ಅಥಾವ್ರೋಚನ್ಮಹಾಭಾಗಃ ಕೃಪಯಾ ಪರಯಾನ್ವಿತಃ ।
ಸಮಯೇ ಸ್ಥಾಪಯಾಮಾಸ ರಾಜ್ಞಸ್ತಾನ್ ಜೀವಿತಾರ್ಥಿನಃ ॥ ೪೧ ॥

ಭೂಪವ್ಯಾಕೋಪದಗ್ಧಂ ನೃಪಕುಲವಿಹಿತಾಶೇಷಧರ್ಮಾದಪೇತಂ
ಕೃತ್ವಾ ತೇಷಾಂ ವಸಿಷ್ಠಃ ಸಮಯಮವನೀಪಾಲಪ್ರತಿಜ್ಞಾನಿವೃತ್ತ್ಯೈ।
ಗತ್ವಾ ತಂ ರಾಜವರ್ಯಂ ಸ್ವಯಮಥ ಶನಕೈಃ ಸಾಂತಯಿತ್ವಾ ಯಥಾ
ವತ್ ।
ಸಪ್ರಾಣಾನಾಮರೀಣಾಮುಪಗಮನವಿಧಾವಭ್ಯನುಜ್ಞಾಂ ಯಯಾಚೇ
॥ ೪೨ ॥

ಸಕ್ರೋಧೋಽಪಿ ಮಹೀಪತಿರ್ಗುರುವಚಃ ಸಂಭಾವಯಂಸ್ತಾನರೀನ್
ಧರ್ಮಸ್ಯ ಸ್ವಕುಲೋಚಿತಸ್ಯ ಚ ತಥಾ ವೇಷಸ್ಯ ಸಂತ್ಯಾಗತಃ ।
ಶ್ರೌತಸ್ಮಾರ್ತವಿಭಿನ್ನಕರ್ಮನಿರತಾನ್ ವಿಪ್ರೈಶ್ಚ ದೂರೋಜ್ಝಿತಾನ್
ಸಾಸೂನ್ ಕೇವಲಮತ್ಯಜನ್ಮೃತಸಮಾನೇಕೈಕಶಃ ಪಾರ್ಥಿವಾನ್॥೪೩॥

---

೪೧. ತರುವಾಯ ಮಹಾಭಾಗ್ಯಶಾಲಿಯಾದ ವಸಿಷ್ಠ ಮುನಿಯು ಅತಿಶಯವಾದ ದಯೆಯಿಂದ ಕೂಡಿದವನಾಗಿ ಪ್ರಾಣತ್ರಾಣಾರ್ಥಿಗಳಾದ ಆ ರಾಜರನ್ನು ಒಂದು ಬಗೆಯ ವ್ಯವಸ್ಥೆಯಲ್ಲಿ ಇರುವಂತೆ ಹೇಳಿ ನಿರ್ಧರಿಸಿದನು.

೪೨. ಆಗ ಮುನಿಯು ರಾಜನ ಕೋಪದಿಂದ ದಗ್ಧವೂ, ರಾಜವಂಶಕ್ಕೆ ವಿಹಿತವಾದ ಶ್ರೇಯಸ್ಕರ ಧರ್ಮಗಳಿಂದ ಬಾಹ್ಯವೂ ಆದ ಸಮಯ ನಿರ್ಬಂಧವನ್ನು ಆ ರಾಜರಿಗೆ ವಿಧಿಸಿ ಸಗರ ರಾಜನ ಪ್ರತಿಜ್ಞೆಯು ಪೂರ್ತಿಯಾಗಲು ತಾನು ರಾಜನ ಸನ್ನಿಧಿಗೆ ಹೋಗಿ ಮೆಲ್ಲನೆ ಅವನನ್ನು ಸಮಾಧಾನ ಮಾಡಿ ಶತ್ರುಗಳು ಪ್ರಾಣ ಸಹಿತರಾಗಿ ನಿರ್ಭಯರಾಗಿ ಹೋಗುವಂತೆ ಅನುಜ್ಞೆಯನ್ನು ಕೊಡಲು ಪ್ರಾರ್ಥಿಸಿಕೊಂಡನು.

೪೩. ಆಗ ರಾಜನು ಕುಪಿತನಾಗಿದ್ದರೂ ಗುರುವಚನಕ್ಕೆ ಗೌರವವನ್ನು ಕೊಟ್ಟು ಆ ಶತ್ರು ರಾಜರು ತಮ್ಮ ಕುಲಧರ್ಮ-ವೇಷ.ಭೂಷಣಗಳನ್ನು ಬಿಟ್ಟು ಶ್ರೌತ-ಸ್ಮಾರ್ತ ಸತ್ಕರ್ಮಗಳಲ್ಲಿ ಭ್ರಷ್ಟರೂ ವಿಪ್ರರಿಂದ ತ್ಯಜಿಸಲ್ಪಟ್ಟವರೂ ಆಗಿ ಕೇವಲ ಮೃತ ಮಾನವರಂತೆ ನಿಸ್ತೇಜಸ್ಕರಾಗಿ ಕೇವಲ ಪ್ರಾಣಗಳನ್ನು ಮಾತ್ರ ಧರಿಸಿಕೊಂಡಿರುವಂತೆ ಮಾಡಿ ಒಬ್ಬೊಬ್ಬರನ್ನಾಗಿ ಬಿಟ್ಟುಕೊಟ್ಟನು.

ಅರ್ಧಮುಂಡಾನ್ ಶಕಾಂಶ್ಚಕ್ರೇ ಪಹ್ಲವಾನ್ ಶ್ಮಶ್ರುಧಾರಿಣಃ ।
ಯವನಾನ್ ವಿಗತಶ್ಮಶ್ರೂನ್ ಕಾಂಭೋಜಾನ್ ಚಿಬುಕಾನ್ವಿತಾನ್
॥ ೪೪ ॥

ಏವಂ ವಿರೂಪಾನನ್ಯಾಂಶ್ಚ ಸ ಚಕಾರ ನೃಪಾನ್ವಯಾನ್ ।
ವೇದೋಕ್ತಕರ್ಮನಿರ್ಮುಕ್ತಾನ್ ವಿಪ್ರೈಶ್ಚ ಪರಿವರ್ಜಿತಾನ್ ॥ ೪೫ ॥

ಕೃತ್ವಾ ಸಂಸ್ಥಾಪ್ಯ ಸಮಯೇ ಜೀವತಸ್ತಾನ್ ವ್ಯಸರ್ಜಯತ್ ।
ತತಸ್ತೇ ರಿಪವಸ್ತಸ್ಯ ತ್ಯಕ್ತಸ್ವಾಚಾರಲಕ್ಷಣಾಃ ॥ ೪೬ ॥

ವ್ರಾತ್ಯತಾಂ ಸಮನುಪ್ರಾಪ್ತಾಃ ಸರ್ವವರ್ಣವಿನಿಂದಿತಾಃ ।
ಧಿಕ್ಕೃತಾಃ ಸತತಂ ಸರ್ವೇ ನೃಶಂಸಾ ನಿರಪತ್ರಪಾಃ ॥ ೪೭ ॥

ಕ್ರೂರಾಶ್ಚ ಸಂಘಶೋ ಲೋಕೇ ಬಭೂವುರ್ಮ್ಲೇಚ್ಛಜಾತಯಃ ॥೪೮॥

---

೪೪. ಮತ್ತು ಪರಾಜಯವನ್ನು ಹೊಂದಿದ ರಾಜರಲ್ಲಿ ಶಕರನ್ನು ಅರ್ಧ ಮುಂಡನವುಳ್ಳವರನ್ನಾಗಿಯೂ ಪಹ್ಲವ ರಾಜರನ್ನು ಶ್ಮಶ್ರು ಮಾತ್ರವನ್ನು ಧರಿಸಿರುವರನ್ನಾಗಿಯೂ ಯವನರನ್ನು ಶ್ಮಶ್ರು ರಹಿತರನ್ನಾಗಿಯೂ, ಕಾಂಭೋಜರನ್ನು ದಾಡಿಯನ್ನು ಧರಿಸಿರುವರನ್ನಾಗಿಯೂ ಮಾಡಿ ವಿರೂಪರನ್ನಾಗಿ ಮಾಡಿದನು.

೪೫. ಇದೇ ರೀತಿಯಾಗಿ ಮಿಕ್ಕ ಕ್ಷತ್ರಿಯ ವಂಶೀಕರನ್ನು ವಿರೂಪರನ್ನಾಗಿ ಮಾಡಿದನು, ಮತ್ತು ಅವರನ್ನು ವೇದೋಕ್ತ ಕರ್ಮ ಬಾಹ್ಯರನ್ನಾಗಿಯೂ ವಿಪ್ರರಿಂದ ತ್ಯಜಿಸಲ್ಪಟ್ಟವರನ್ನಾಗಿಯೂ ಮಾಡಿ ಇರಿಸಿದನು.

೪೬. ಈ ರೀತಿಯಾಗಿ ವಿರೂಪರನ್ನಾಗಿ ಮಾಡಿ ಅವರನ್ನು ಒಂದು ಸಮಯ ನಿರ್ಬಂಧದಲ್ಲಿಟ್ಟು ಜೀವಂತರನ್ನಾಗಿ ಬಿಟ್ಟನು. ತರುವಾಯ ಅವನ ಶತ್ರು ರಾಜರು ಸ್ವಧರ್ಮಾಚರಣವನ್ನು ಬಿಟ್ಟವರಾದರು.

೪೭. ಆಗ ಅವರು ಪತಿತಭಾವವನ್ನು ಹೊಂದಿದವರೂ, ಸರ್ವ ವರ್ಣಗಳಿಂದ ನಿಂದಿಸಲ್ಪಟ್ಟವರೂ, ಯಾವಾಗಲೂ ಪ್ರಜೆಗಳ ಧಿಕ್ಕಾರಕ್ಕೆ ಪಾತ್ರರೂ, ಲಜ್ಜಾವಿಹೀನರೂ ಮತ್ತು ಅತಿ ನಿರ್ದಯಘಾತುಕ ಶೀಲವುಳ್ಳವರೂ ಆದರು.

೪೮. ಮತ್ತು ಲೋಕದಲ್ಲಿ ಅತ್ಯಂತ ಕ್ರೂರಸ್ವಭಾವವುಳ್ಳ ಮ್ಲೇಚ್ಛಜಾತಿಯನ್ನು ಹೊಂದಿದವರಾಗಿ ಹೀನವಾದ ಸಂಘರೂಪವಾಗಿ ಸಂಭವಿಸಿದರು.

ಮುಕ್ತಾಸ್ತೇನಾಥ ರಾಜ್ಞಾ ಶಕಯವನಕಿರಾತಾದಯಃ ಸದ್ಯ ಏವ
ತ್ಯಕ್ತಸ್ವಾಚಾರವೇಷಾ ಗಿರಿಗಹನಗುಹಾದ್ಯಾಶ್ರಯಾಃ ಸಂಬಭೂವುಃ ।
ಏತಾ ಅದ್ಯಾಪಿ ಸದ್ಭಿಃ ಸತತಮವಮತಾ ಜಾತಯೋಽಸತ್ಪ್ರವೃತ್ತ್ಯಾ
ವರ್ತಂತೇ ದುಷ್ಟಚೇಷ್ಟಾ ಜಗತಿ ನರಪತೇಃ ಪಾಲಯಂತಃ ಪ್ರತಿಜ್ಞಾಮ್
|| ೪೯ ||

ಇತಿ ಶ್ರೀ ಬ್ರಹಾಂಡಪುರಾಣೇ ಉತ್ತರಾರ್ಧೇ
ಅಷ್ಟಾಚತ್ವಾರಿಂಶತ್ತಮೋಽಧ್ಯಾಯಃ

---

೪೯. ಹೀಗೆ ಆ ಸಗರ ರಾಜನಿಂದ ಮೂಡಲ್ಪಟ್ಟ ಶಕ, ಯವನ ಕಿರಾತ, ಮುಂತಾದ ಶತ್ರು ರಾಜರು ಕೂಡಲೆ ತಮ್ಮ ಆಚಾರವನ್ನೂ ವೇಷವನ್ನೂ ತ್ಯಜಿಸಿದವರಾಗಿ ಗಿರಿ-ಅರಣ್ಯ-ಗುಹಾ ಮುಂತಾದುವುಗಳನ್ನು ಆಶ್ರಯಿಸಿದರು, ಆಗ ಜನಿಸಿದ ಆ ಹೀನ ಜಾತಿಯವರು ಜಗತ್ತಿನಲ್ಲಿ ಈಗಲೂ ಆ ರಾಜನ ಪ್ರತಿಜ್ಞೆಯನ್ನು ಪಾಲಿಸಿ ದುಷ್ಟವಾದ ವ್ಯಾಪಾರವುಳ್ಳವರೂ, ದುರ್ಮಾರ್ಗದಲ್ಲಿ ಪ್ರವೃತ್ತಿಯಿಂದ ಸಾಧುಗಳಿಂದ ಸರ್ವಕಾಲದಲ್ಲಿಯೂ ತಿಸ್ಕರಿಸಲ್ಪಟ್ಟವರೂ ಆಗಿ ಇರುವರು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ನಲವತ್ತೆಂಟನೆಯ ಅಧ್ಯಾಯವು
ಸಮಾಪ್ತವು.

# ಏಕೋನಪಂಚಾಶತ್ತಮೋಽಧ್ಯಾಯಃ

ಜೈಮಿನಿರುವಾಚ :—

ಅಥಾನುಜ್ಞಾಯ ಸಗರೋ ವಸಿಷ್ಠಮೃಷಿಸತ್ತಮಮ್ ।
ಬಲೇನ ಮಹತಾ ಯುಕ್ತೋ ವಿದರ್ಭಾನಭ್ಯವರ್ತತ ॥ ೧ ॥

ತತೋ ವಿದರ್ಭರಾಟ್ ತಸ್ಮೈ ಸ್ವಸುತಾಂ ಪ್ರೀತಿಪೂರ್ವಕಮ್ ।
ಕೇಶಿನ್ಯಾಖ್ಯಾಮನುಪಮಾಮನುರೂಪಾಂ ನ್ಯವೇದಯತ್ ॥ ೨ ॥

ಸ ತಸ್ಯಾ ರಾಜಶಾರ್ದೂಲೋ ವಿಧಿವದ್ವಹ್ನಿಸಾಕ್ಷಿಕಮ್ ।
ಶುಭೇ ಮುಹೂರ್ತೇ ಕೇಶಿನ್ಯಾಃ ಪಾಣಿಂ ಜಗ್ರಾಹ ಭೂಮಿಪಃ ॥ ೩ ॥

ಸ್ಥಿತ್ವಾ ದಿನಾನಿ ಕತಿಚಿದ್ಗೃಹೇ ತಸ್ಯಾತಿಸತ್ಕೃತಃ ।
ವಿದರ್ಭರಾಜ್ಞಾ ಸಂಮಂತ್ರ್ಯ ತತೋ ಗಂತುಂ ಪ್ರಚಕ್ರಮೇ ॥ ೪ ॥

---

೧. ಜೈಮಿನಿ ಮುನಿಯು ಮತ್ತೆ ಇಂತೆಂದನು :—ಅನಂತರದಲ್ಲಿ ಸಗರ ರಾಜನು ಮುನಿವರ್ಯನಾದ ವಸಿಷ್ಠ ಮಹರ್ಷಿಯಿಂದ ಅನುಜ್ಞೆ ಪಡೆದು ತನ್ನ ಮಹಾ ಸೈನ್ಯ ದಿಂದ ಕೂಡಿ ವಿದರ್ಭ ದೇಶಕ್ಕೆ ಬಂದನು.

೨. ಅನಂತರದಲ್ಲಿ ವಿಧರ್ಭಾಧಿಪತಿಯು ಆ ಸಗರ ರಾಜನಿಗೆ ಕೇಶಿನೀ ಎಂಬ ಹೆಸರುಳ್ಳ ನಿರುಪಮೆಯೂ ಅನುರೂಪಳೂ ಆದ ತನ್ನ ಪುತ್ರಿಯನ್ನು ಪ್ರೀತಿಪೂರ್ವಕ ವಾಗಿ ಕೊಟ್ಟನು.

೩. ನರಪತಿಗಳಲ್ಲಿ ಗಣ್ಯನಾದ ಆ ಸಗರ ರಾಜನು ಶುಭ ಮುಹೂರ್ತದಲ್ಲಿ ಆ ಕೇಶಿನೀ ಎಂಬ ಕನ್ಯೆಯನ್ನು ಶಾಸ್ತ್ರವಿಧಾನದಂತೆ ಅಗ್ನಿಸಾಕ್ಷಿಯಾಗಿ ಪಾಣಿಗ್ರಹಣ ಮಾಡಿದನು.

೪. ತರುವಾಯ ವಿದರ್ಭ ರಾಜನಿಂದ ಸತ್ಕರಿಸಲ್ಪಟ್ಟವನಾಗಿ ಕೆಲವು ದಿನಗಳ ವರೆಗೆ ಅವರ ಗೃಹದಲ್ಲಿ ವಾಸಮಾಡಿ ಅವನನ್ನು ಕೇಳಿಕೊಂಡು ಅಲ್ಲಿಂದ ಮುಂದಕ್ಕೆ ಪ್ರಯಾಣವನ್ನು ಮಾಡಲಾರಂಭಿಸಿದನು.

ಅನುಜ್ಞಾತಸ್ತತಸ್ತೇನ ಪಾರಿಬರ್ಹೈಶ್ಚ ಸತ್ಕೃತಃ ।
ನಿಷ್ಕ್ರಮ್ಯ ತತ್ಪುರಾದ್ರಾಜಾ ಶೂರಸೇನಾನುಪೇಯಿವಾನ್ ॥ ೫ ॥

ಸಂಭಾವಿತಸ್ತತಶ್ಚೈವ ಯಾದವೈರ್ಮಾತೃಸೋದರೈಃ ।
ಧನೌಘೈಸ್ತರ್ಪಿತಸ್ತೈಶ್ಚ ಮಧುರಾಯಾ ವಿನಿರ್ಯಯೌ ॥ ೬ ॥

ಏವಂ ಸ ಸಗರೋ ರಾಜಾ ವಿಜಿತ್ಯ ವಸುಧಾಮಿಮಾಮ್ ।
ಕರೈಶ್ಚ ಸ ನೃಪಾನ್ ಸರ್ವಾಂಶ್ಚಕ್ರೇ ಸಂಕೇತಗಾನಪಿ ॥ ೭ ॥

ತತೋಽನುಮಾನ್ಯ ನೃಪತೀನ್ ನಿಜರಾಜ್ಯಾಯ ಸಾನುಗಾನ್ ।
ಅನುಜಜ್ಞೇ ನರಪತಿಃ ಸಮಸ್ತಾನನುಯಾಯಿನಃ ॥ ೮ ॥

ತತೋ ಬಲೇನ ಮಹತಾ ಸ್ಕಂಧಾವಾರಸಮನ್ವಿತಃ ।
ಶನೈರಪೀಡಯನ್ ದೇಶಾನ್ ಸ್ವರಾಜ್ಯಮುಪಜಗ್ಮಿವಾನ್ ॥ ೯ ॥

---

೫. ಆಗ ಸಗರ ರಾಜನು ವಿದರ್ಭ ರಾಜನಿಂದ ಸಮ್ಮತಿಸಲ್ಪಟ್ಟವನೂ ಭೂಷಣಾದಿಸಹಿತ ಉಡಿಗೆ-ಉಪಚಾರಗಳಿಂದ ಸತ್ಕರಿಸಲ್ಪಟ್ಟವನೂ ಆಗಿ ಆ ನಗರದಿಂದ ಹೊರಟು ಶೂರಸೇನ ದೇಶಕ್ಕೆ ಬಂದನು.

೬. ಅಲ್ಲಿ ತನ್ನ ತಾಯಿಯ ಸಹೋದರ ಬಾಂಧವ್ಯವುಳ್ಳ ಆ ಯಾದವ ಜನಾಂಗದಿಂದ ಸನ್ಮಾನಿತನಾಗಿ ಅನೇಕ ಧನರಾಶಿಗಳಿಂದ ತೃಪ್ತಿಯನ್ನು ಹೊಂದಿ ಮಧುರಾ ನಗರದಿಂದ ಮುಂದಕ್ಕೆ ಹೊರಟನು.

೭. ಈ ರೀತಿಯಾಗಿ ಆ ಸಗರ ರಾಜನು ಸಂಪೂರ್ಣವಾಗಿ ಈ ಭೂಮಿಯನ್ನು ಜಯಿಸಿ ಎಲ್ಲ ರಾಜರನ್ನು ಪೊಗದಿಯನ್ನು ಕೊಡುವ, ತನ್ನ ಸಂಕೇತದಂತೆ ಇರುವ ವಶ್ಯ ರಾಜರನ್ನಾಗಿ ಮಾಡಿದನು.

೮. ಅನಂತರದಲ್ಲಿ ಸಗರ ಭೂಪತಿಯು ತನ್ನ ಅನುಯಾಯಿಗಳಾಗಿ ಬಂದ ಎಲ್ಲ ರಾಜರನ್ನೂ ಪರಿವಾರ ಸಮೇತವಾಗಿ ಸತ್ಕರಿಸಿ ಎಲ್ಲರನ್ನೂ ತಮ್ಮ ತಮ್ಮ ರಾಜ್ಯಗಳಿಗೆ ಹಿಂದಕ್ಕೆ ಹೋಗುವಂತೆ ಆಜ್ಞೆಯನ್ನಿತ್ತನು.

೯. ತರುವಾಯ ತಾನು ಅನೇಕ ಸೈನ್ಯದಿಂದ ಪೂರ್ಣವಾದ ವಿವಿಧ ಸೈನ್ಯ ಶಿಬಿರಗಳಿಂದ ಕೂಡಿದವನಾಗಿ ಅಯಾಯ ದೇಶಗಳನ್ನು ಪೀಡಿಸದೆ ಮೆಲ್ಲಗೆ ತನ್ನ ರಾಜ್ಯಕ್ಕೆ ಬಂದು ಸೇರಿದನು.

ಸಂಭಾವ್ಯಮಾನಶ್ಚ ಮುಹುರುಪದಾಭಿರನೇಕಶಃ ।
ನಾನಾಜನಪದೈಸ್ತೂರ್ಣಮಯೋಧ್ಯಾಂ ಸಮುಪಾಗಮತ್ ॥ ೧೦ ॥

ತದಾಗಮನಮಾಜ್ಞಾಯ ನಾಗರಃ ಸಕಲೋ ಜನಃ ।
ನಗರೀಂ ತಾಮಲಂಚಕ್ರೇ ಮಹೋತ್ಸವಸಮುತ್ಸುಕಃ ॥ ೧೧ ॥

ತತಃ ಸಾ ನಗರೀ ಸರ್ವಾ ಕೃತಕೌತುಕಮಂಗಲಾ ।
ಸಿಕ್ತಸಮ್ಮೃಷ್ಟಭೂಭಾಗಾ ಪೂರ್ಣಕುಂಭಶತಾವೃತಾ ॥ ೧೨ ॥

ಸಮುಚ್ಛ್ರಿತಧ್ವಜಶತಾ ಪತಾಕಾಭಿರಲಂಕೃತಾ ।
ಸರ್ವತ್ರಾಗರುಧೂಪಾಢ್ಯಾ ವಿಚಿತ್ರಕುಸುಮೋಜ್ಜ್ವಲಾ ॥ ೧೩ ॥

ಸದ್ರತ್ನತೋರಣೋತ್ತುಂಗಗೋಪುರಾಟ್ಟಾಲಭೂಷಿತಾ ।
ಪ್ರಸೂನಲಾಜವರ್ಷೈಶ್ಚ ಸ್ವಲಂಕೃತಮಹಾಪಥಾ ॥ ೧೪ ॥

---

೧೦. ಮಧ್ಯದಲ್ಲಿ ಅನೇಕ ದೇಶೀಯರಿಂದ ಮತ್ತೆ ಮತ್ತೆ ವಿವಿಧವಾದ ಕಪ್ಪ-ಕಾಣಿಕೆಗಳಿಂದ ಗೌರವಿಸಲ್ಪಡುತ್ತ ಆ ನರಪತಿಯು ಶೀಘ್ರವಾಗಿ ಅಯೋಧ್ಯಾ ನಗರಿಯನ್ನು ಹೊಂದಿದನು.

೧೧. ಆ ರಾಜನ ಆಗಮನವನ್ನು ಅರಿತು ಮಹೋತ್ಸವವನ್ನು ಆಚರಿಸುವುದರಲ್ಲಿ ಕುತೂಹಲ ಹೊಂದಿದ ಆ ನಗರದ ಸಮಸ್ತ ಜನರು ಆ ನಗರವನ್ನು ಸುಂದರವಾಗಿ ಅಲಂಕರಿಸಿದರು.

೧೨. ಆಗ ಆ ಸಂಪೂರ್ಣ ನಗರಿಯು ಎಲ್ಲ ಕಡೆಯಲ್ಲಿಯೂ ಅಂಕುರಾರ್ಪಣಾದಿ ವಿವಿಧ ಮಂಗಳಕರವಾದ ಕೌತುಕ ಕರ್ಮವುಳ್ಳದ್ದೂ ನೀರೆರಚಿ ಶುದ್ಧಿ-ಅಲಂಕಾರಗಳನ್ನು ಮಾಡಿದ ಭೂಮಿಯುಳ್ಳದ್ದೂ ಅನೇಕ ಪೂರ್ಣ ಕುಂಭಗಳಿಂದ ಪೂರ್ಣವಾದುದೂ ಆಗಿತ್ತು.

೧೩. ಮತ್ತು ಉನ್ನತವಾದ ನೂರಾರು ಧ್ವಜಸ್ತಂಭಗಳಿಂದಲೂ ಪತಾಕೆಗಳಿಂದಲೂ ಅಲಂಕರಿಸಲ್ಪಟ್ಟಿರುವುದೂ ಎಲ್ಲ ಕಡೆ ವ್ಯಾಪಿಸಿರುವ ಕೃಷ್ಣಾಗುರುಧೂಪದಿಂದ ತುಂಬಿರುವುದೂ ಮತ್ತು ವಿಚಿತ್ರವಾದ ಪುಷ್ಪಮಾಲ್ಯಗಳಿಂದ ಉಜ್ಜ್ವಲವೂ ಆಗಿತ್ತು.

೧೪. ಉತ್ತಮವಾದ ರತ್ನಗಳಿಂದ ನಿರ್ಮಿಸಿದ ತೋರಣಗಳುಳ್ಳ ಉನ್ನತವಾದ ಗೋಪುರಗಳಿಂದಲೂ ಮೇಲುಛಾವಣಿಗಳಿಂದಲೂ ಶೃಂಗರಿಸಲ್ಪಟ್ಟಿರುವುದೂ ಮತ್ತು ಅರಳು-ಹೂಗಳ ವೃಷ್ಟಿಯಿಂದ ಸುಂದರವಾಗಿ ಅಲಂಕರಿಸಿದ ರಾಜವೀಥಿಗಳುಳ್ಳದ್ದೂ ಆಗಿತ್ತು.

ಮಹೋತ್ಸವಸಮಾಯುಕ್ತಾ ಪ್ರತಿಗೇಹಮಭೂತ್ಪುರೀ ।
ಸಂಪೂಜಿತಾಶೇಷವಾಸ್ತುದೇವತಾಗೃಹಮಾಲಿನೀ ॥ ೧೫ ॥

ದಿಕ್ಚಕ್ರಜಯಿನೋ ರಾಜ್ಞಃ ಸಂದರ್ಶನಮುದಾನ್ವಿತೈಃ ।
ಪೌರಜಾನಪದೈರ್ಹೃಷ್ಟೈಃ ಸರ್ವತಃ ಸಮಲಂಕೃತಾ ॥ ೧೬ ॥

ತತಃ ಪ್ರಕೃತಯಃ ಸರ್ವೇ ತಥಾಂತಃಪುರವಾಸಿನಃ ।
ವಾರಕಾಂತಾಕದಂಬೈಶ್ಚ ನಗರೀಭಿಶ್ಚ ಸಂವೃತಾಃ ॥ ೧೭ ॥

ಅಭ್ಯಾಯಯುಸ್ತತಃ ಸರ್ವೇ ಸಮೇತ್ಯ ಪುರವಾಸಿನಃ ।
ಸ ತೈಃ ಸಮೇತ್ಯ ನೃಪತಿರ್ಲಬ್ಧಾಶೀರ್ವಾದಸತ್ಕ್ರಿಯಃ ॥ ೧೮ ॥

ಬಧಿರೀಕೃತದಿಕ್ಚಕ್ರೋ ಜಯಶಬ್ದೇನ ಭೂರಿಣಾ ।
ನಾನಾವಾದಿತ್ರಸಂಘೋಷಮಿಶ್ರೇಣ ಮಧುರೇಣ ಚ ॥ ೧೯ ॥

---

೧೫. ಹೀಗೆ ಆ ಎಲ್ಲ ನಗರಿಯು ಪೂಜಿಸಲ್ಪಟ್ಟ ಸಮಗ್ರವಾಸ್ತುದೇವತೆಗಳುಳ್ಳ ಗೃಹಶ್ರೇಣಿಯಿಂದ ರಾಜಿಸುತ್ತ ಪ್ರತಿಯೊಂದು ಮನೆಯಲ್ಲಿಯೂ ಮಹತ್ತಾದ ಉತ್ಸವಾಚರಣೆಯಲ್ಲಿ ಪ್ರವರ್ತಿಸಿತು.

೧೬. ದಿಗಂತ ಮಂಡಲವನ್ನು ಜಯಿಸಿ ಬಂದಿರುವ ಜಯಲಕ್ಷ್ಮೀ ಸಹಿತನಾದ ರಾಜನನ್ನು ಸಂದರ್ಶಿಸಲು ಪ್ರೀತಿಯಿಂದ ಕೂಡಿ ಹರ್ಷೋದ್ರೇಕದಿಂದ ಬಂದ ಪೌರ-ಜಾನಪದ ಪ್ರಜೆಗಳಿಂದ ಅಲಂಕರಿಸಲ್ಪಟ್ಟಿತ್ತು.

೧೭. ತರುವಾಯ ಅಂತಃ ಪುರವಾಸಿಗಳಾದ ಸಮಸ್ತ ಜನಗಳು ವಾರನಾರಿಯರ ವೃಂದಗಳಿಂದಲೂ ನಗರದ ಪ್ರಜೆಗಳಿಂದಲೂ ಉತ್ಸವ ಸಂತೋಷ ಸಮಾರಂಭದಲ್ಲಿ ಸುತ್ತುವರಿಯಲ್ಪಟ್ಟಿರುವರಾದರು.

೧೮. ಅನಂತರದಲ್ಲಿ ಆ ನಗರವಾಸಿ ಜನರೆಲ್ಲರೂ ಸೇರಿ ರಾಜನ ಬಳಿಗೆ ಬಂದರು. ಮತ್ತು ಸಂಘವಾಗಿ ಬಂದ ಆ ಜನರಿಂದ ರಾಜನು ಹೊಂದಿದ ಆಶೀರ್ವಾದ ಸತ್ಕಾರವುಳ್ಳವನಾದನು.

೧೯. ಆ ಸಮಯದಲ್ಲಿ ಮಧುರವಾದ ಅನೇಕ ವಿಧವಾದ ವಾದ್ಯಗಳ ಘೋಷದಿಂದ ಮಿಶ್ರವಾಗಿರುವ ಅತಿಶಯವಾದ ಜಯಘೋಷದಿಂದ ದಿಙ್ಮಂಡಲವು ಕಿವುಡಾಗುವಂತೆ ಶಬ್ದಮಯವಾಯಿತು.

ಸತ್ಕೃತ್ಯ ತಾನ್ ಯಥಾಯೋಗಂ ಸಹಿತಸ್ತೈರ್ಮುದಾನ್ವಿತೈಃ ।
ಆನಂದಯನ್ ಪ್ರಜಾಃ ಸರ್ವಾಃ ಪ್ರವಿವೇಶ ಪುರೋತ್ತಮಮ್ ॥ ೨೦ ॥

ವೇದಘೋಷೈಃ ಸುಮಧುರೈರ್ಬ್ರಾಹ್ಮಣೈರಭಿನಂದಿತಃ ।
ಸಂಸ್ತೂಯಮಾನಃ ಸುಭೃಶಂ ಸೂತಮಾಗಧವಂದಿಭಿಃ ॥ ೨೧ ॥

ಜಯಶಬ್ದೈಶ್ಚ ಪರಿತೋ ನಾನಾಜನಪದೇರಿತೈಃ ।
ಕಲತಾಲರವೋನ್ಮಿಶ್ರವೀಣಾವೇಣುತಲಸ್ವನೈಃ ॥ ೨೨ ॥

ಗಾಯದ್ಭಿರ್ಗಾಯಕಜನೈರ್ನೃತ್ಯದ್ಭಿರ್ಗಣಿಕಾಜನೈಃ ।
ಅನ್ವೀಯಮಾನೋ ವಿಲಸಚ್ಛ್ವೇತಚ್ಛತ್ರವಿರಾಜಿತಃ ॥ ೨೩ ॥

ವಿಕೀರ್ಯಮಾಣಃ ಪರಿತಃ ಸಲಾಜಕುಸುಮೋತ್ಕರೈಃ ।
ಪುರೀಮಯೋಧ್ಯಾಮವಿಶತ್ ಸ್ವಪುರೀಮಿವ ವಾಸವಃ ॥ ೨೪ ॥

---

೨೦. ಆಗ ರಾಜನು ಸಕಲ ಪ್ರಜೆಗಳನ್ನೂ ಯೋಗ್ಯ ರೀತಿಯಿಂದ ಸತ್ಕರಿಸಿ ಸಂತೋಷದಿಂದ ಕೂಡಿದ ಆ ಪ್ರಜೆಗಳೊಂದಿಗೆ ಅವರಿಗೆ ಆನಂದವನ್ನು ಉಂಟು ಮಾಡುತ್ತ ತನ್ನ ಉತ್ತಮ ನಗರವನ್ನು ಪ್ರವೇಶಿಸಿದನು.

೨೧. ಆಗ ದ್ವಿಜರಿಂದ ಮಧುರವಾದ ವೇದಘೋಷದಿಂದ ಅಭಿನಂದಿಸಲ್ಪಟ್ಟವನೂ ಸೂತ-ಮಾಗಧ-ವಂದಿಜನರಿಂದ ಪುನಃ ಪುನಃ ಸ್ತುತಿಸಲ್ಪಟ್ಟವನೂ ಆಗಿ ಪುರವನ್ನು ಪ್ರವೇಶಮಾಡಿದನು.

೨೨. ಅನೇಕ ದೇಶದ ಜನರಿಂದ ಘೋಷಿಸಲ್ಪಟ್ಟ ಜಯಕಾರ ಧ್ವನಿಯಿಂದಲೂ ಮಧುರವಾದ ತಾಲ ಧ್ವನಿಯಿಂದ ಮಿಶ್ರವಾದ ವೀಣೆ, ಕೊಳಲು ಮುಂತಾದ ವಾದ್ಯ ಧ್ವನಿಗಳಿಂದಲೂ ನಗರವು ಸುತ್ತಲೂ ವ್ಯಾಪ್ತವಾಯಿತು.

೨೩. ತನ್ನ ಪಾರ್ಶ್ವಗಳಲ್ಲಿ ಗಾನ ಮಾಡುತ್ತಲಿದ್ದ ಗಾಯಕ ಜನರಿಂದಲೂ ನರ್ತನ ಮಾಡುತ್ತಲಿದ್ದ ಗಣಿಕೆಯರಿಂದಲೂ ಹಿಂಬಾಲಿಸಲ್ಪಟ್ಟವನಾಗಿ ಮತ್ತು ಮಧ್ಯದಲ್ಲಿ ಶೋಭಿಸುವ ಶ್ವೇತಚ್ಛತ್ರದಿಂದ ಭೂಷಿಸಲ್ಪಟ್ಟವನಾಗಿ ನಗರ ಪ್ರವೇಶ ಮಾಡಿದನು.

೨೪. ಮತ್ತು ತನ್ನ ಸುತ್ತಲೂ ಅರಳು-ಪುಷ್ಪಗಳ ರಾಶಿಯಿಂದ ಮಂಗಲಾರ್ಥವಾಗಿ ಎರಚಲ್ಪಟ್ಟವನಾಗಿ ಇಂದ್ರನು ಅಮರಾವತಿಯನ್ನು ಪ್ರವೇಶಿಸಿದಂತೆ ತನ್ನ ಅಯೋಧ್ಯಾ ನಗರವನ್ನು ಪ್ರವೇಶ ಮಾಡಿದನು.

**ದೃಷ್ಟಿಪೂತೇನ ಗಂಧೇನ ಬ್ರಾಹ್ಮಣಾನಾಂ ಚ ವರ್ತ್ಮನಾ ।**
**ಜಗಾಮ ಮಧ್ಯೇನಗರಂ ಗೃಹಂ ಶ್ರೀಮದಲಂಕೃತಮ್ ॥ ೨೫ ॥**

**ಅವರುಹ್ಯ ತತೋ ಯಾನಾದ್ಭಾರ್ಯಾಭ್ಯಾಂ ಸಹಿತೋ ಮುದಾ ।**
**ಪ್ರವಿವೇಶ ಗೃಹಂ ಮಾತುರ್ಹೃಷ್ಟಪುಷ್ಟಜನಾಯುತಮ್ ॥ ೨೬ ॥**

**ಪರ್ಯಂಕಸ್ಥಾಮುಪಾಗಮ್ಯ ಮಾತರಂ ವಿನಯಾನ್ವಿತಃ ।**
**ತತ್ಪಾದೌ ಸಂಸ್ಪೃಶನ್ ಮೂರ್ಧ್ನಾ ಪ್ರಣಾಮಮಕರೋತ್ತದಾ ॥ ೨೭ ॥**

**ಸಾಭಿನಂದ್ಯ ತಮಾಶೀರ್ಭಿರ್ಹರ್ಷಗದ್ಗದಯಾ ಗಿರಾ ।**
**ಸಸಂಭ್ರಮಂ ಸಮುತ್ಥಾಯ ಪರ್ಯಷ್ವಜತ ಚಾತ್ಮಜಮ್ ॥ ೨೮ ॥**

**ಸಹರ್ಷಂ ಬಹುಧಾಶೀರ್ಭಿರಭ್ಯನಂದದುಭೇ ಸ್ನುಷೇ ।**
**ಸ ತಾಂ ಸಂಭಾವ್ಯ ಕಥಯಾ ತತ್ರ ಸ್ಥಿತ್ವಾ ಚಿರಾದಿವ ॥ ೨೯ ॥**

---

೨೫. ಅಲ್ಲಿ ದೃಷ್ಟಿಯಿಂದ ಪವಿತ್ರವೂ, ಸುಗಂಧಮಯವೂ, ಬ್ರಾಹ್ಮಣಶ್ರೇಣಿಯಿಂದ ಕೂಡಿರುವುದೂ ಆದ ಮಾರ್ಗದಿಂದ ನಗರ ಮಧ್ಯದಲ್ಲಿರುವ ಅಲಂಕಾರಗಳಿಂದ ಶೋಭಿಸುತ್ತಿರುವ ತನ್ನ ಗೃಹಕ್ಕೆ ಬಂದನು.

೨೬. ಅಲ್ಲಿ ತನ್ನ ಭಾರ್ಯೆಯರಿಂದ ಸಹಿತನಾಗಿ ಸಂತೋಷದಿಂದ ವಾಹನದಿಂದ ಕೆಳಕ್ಕೆ ಇಳಿದು ಹೃಷ್ಟ ಮತ್ತು ಪುಷ್ಟರಾದ ಜನರ ಸಂದಣಿಯಿಂದ ತುಂಬಿದ ಜನನಿಯ ಗೃಹವನ್ನು ಪ್ರವೇಶ ಮಾಡಿದನು.

೨೭. ಆಗ ಮಂಚದಲ್ಲಿ ಕುಳಿತಿರುವ ತನ್ನ ತಾಯಿಯ ಬಳಿಗೆ ವಿನಯದಿಂದ ಕೂಡಿ ಬಂದು ತಲೆಯಿಟ್ಟು ಅವಳ ಪಾದಗಳನ್ನು ಸ್ಪರ್ಶಮಾಡಿ ಪ್ರಣಾಮವನ್ನು ಮಾಡಿದನು.

೨೮. ಆಗ ತಾಯಿಯು ಹರ್ಷೋದ್ರೇಕದಿಂದ ಉಂಟಾದ ಗದ್ಗದ ಧ್ವನಿಯಿಂದ ಆಶೀರ್ವಾದ ವಚನವನ್ನಿತ್ತು ಪುತ್ರನನ್ನು ಅಭಿನಂದಿಸಿ ಸಂಭ್ರಮದಿಂದ ಕೂಡಿ ಮೇಲಕ್ಕೆ ಎದ್ದು ಪುತ್ರನನ್ನು ವಾತ್ಸಲ್ಯದಿಂದ ಆಲಿಂಗಿಸಿದಳು.

೨೯. ಮತ್ತು ತನ್ನ ಇಬ್ಬರು ಸ್ನುಷೆಯರನ್ನು ಹರ್ಷಪೂರ್ವಕವಾಗಿ ಅನೇಕ ವಿಧವಾಗಿ ಆಶೀರ್ವಚನಗಳಿಂದ ಅಭಿನಂದಿಸಿದಳು, ರಾಜನು ತಾಯಿಯನ್ನು ಈ ರೀತಿಯಾಗಿ ಗೌರವಿಸಿ ಕಥಾಗೋಷ್ಠಿಯಿಂದ ಅಲ್ಲಿಯೇ ಬಹಳ ಹೊತ್ತು ಇದ್ದನು.

ಅನುಜ್ಞಾತಸ್ತಯಾ ರಾಜಾ ನಿಶ್ಚಕ್ರಾಮ ತದಾಲಯಾತ್ ।
ತತಃ ಸಾನುಚರೋ ರಾಜಾ ಶ್ವೇತವ್ಯಜನವೀಜಿತಃ ॥ ೩೦ ॥

ಸುರರಾಜ ಇವ ಶ್ರೀಮಾನ್ ಸಭಾಂ ಸಮುಗಮಚ್ಛನೈಃ ।
ಸಂಪ್ರವಿಶ್ಯ ಸಭಾಂ ದಿವ್ಯಾಮನೇಕನೃಪಸೇವಿತಾಮ್ ॥ ೩೧ ॥

ನತ್ವಾ ಗುರುಜನಂ ಸರ್ವಮಾಶೀರ್ಭಿಶ್ಚಾಭಿನಂದಿತಃ ।
ಸಿಹ್ಮಾಸನೇ ಶುಭೇ ದಿವ್ಯೇ ನಿಷಸಾದ ನರೇಶ್ವರಃ ॥ ೩೨ ॥

ಸಂಸೇವ್ಯಮಾನಶ್ಚ ನೃಪೈರ್ನಾನಾಜನಪದೇಶ್ವರೈಃ ।
ನಾನಾವಿಧಾಃ ಕಥಾಃ ಕುರ್ವನ್ ಸ ತತ್ರ ನೃಪಸತ್ತಮಃ ॥ ೩೩ ॥

ಸಂಪ್ರೀಯಮಾಣಃ ಸುತರಾಮುವಾಸ ಸಹ ಬಂಧುಭಿಃ ।
ಪ್ರತಿಜ್ಞಾಂ ಪಾಲಯಿತ್ವೈವಂ ಜಿತದಿಙ್ಮಂಡಲೋ ನೃಪಃ ॥ ೩೪ ॥

---

೩೦. ಅನಂತರದಲ್ಲಿ ತಾಯಿಯಿಂದ ಸಮ್ಮತಿಸಲ್ಪಟ್ಟವನಾಗಿ ಅನೇಕ ಮಂದಿ ಅನುಚರರಿಂದ ಸಮೇತನೂ ಶುಭ್ರವರ್ಣದ ಬೀಸಣಿಗೆಯಿಂದ ಗಾಳಿ ಬೀಸಿ ಸೇವಿಸಲ್ಪಟ್ಟವನೂ ಆಗಿ ರಾಜನು ತಾಯಿಯ ಮನೆಯಿಂದ ಹೊರಟನು.

೩೧. ಅಲ್ಲಿಂದ ಮುಂದೆ ದೇವೇಂದ್ರನು ತನ್ನ ದಿವ್ಯವಾದ ಸುಧರ್ಮಾ ಎಂಬ ಸಭೆಗೆ ಬಂದಂತೆ ಮೆಲ್ಲಗೆ ಕಾಂತಿಯಿಂದ ಸುಂದರನಾದ ರಾಜನು ತನ್ನ ಆಸ್ಥಾನ ಸಭೆಯನ್ನು ಹೊಂದಿದನು, ಅಲ್ಲಿ ಅನೇಕ ರಾಜರಿಂದ ಸೇವಿಸಲ್ಪಟ್ಟಿರುವ ದಿವ್ಯವಾದ ಸಭೆಯನ್ನು ಪ್ರವೇಶಿಸಿದನು.

೩೨. ಪ್ರಜಾನಾಥನಾದ ರಾಜನು ಅಲ್ಲಿ ಎಲ್ಲ ಗುರು ಜನರನ್ನು ನಮಸ್ಕರಿಸಿ ಅವರಿಂದ ಆಶೀರ್ವಾದವನ್ನಿತ್ತು ಅಭಿನಂದಿಸಲ್ಪಟ್ಟವನಾಗಿ ದಿವ್ಯವಾದ ಮಂಗಲ ಸಿಹ್ಮಾಸನದಲ್ಲಿ ಕುಳಿತುಕೊಂಡನು.

೩೩. ರಾಜವಂಶಶ್ರೇಷ್ಠನಾದ ಸಗರ ಭೂಪತಿಯು ಆ ಆಸ್ಥಾನ ಸಭೆಯಲ್ಲಿ ಅನೇಕ ದೇಶಾಧಿಪತಿಗಳಾದ ರಾಜರಿಂದ ಸೇವಿಸಲ್ಪಟ್ಟವನಾಗಿ ಬಹು ವಿಧವಾದ ಕಥಾ ಸಲ್ಲಾಪಗೋಷ್ಠಿಗಳನ್ನು ನಡೆಸಿದನು.

೩೪. ಸಗರ ರಾಜನು ದಿಙ್ಮಂಡಲವನ್ನು ಜಯಿಸಿ ಈ ರೀತಿಯಾಗಿ ತನ್ನ ಪ್ರತಿಜ್ಞೆಯನ್ನು ಪೂರ್ತಿಯಾಗಿ ನೆರವೇರಿಸಿ ತನ್ನ ಬಂಧು ಜನಗಳೊಡನೆ ಅತಿಯಾದ ಪ್ರೇಮರಸವನ್ನು ಅನುಭವಿಸುತ್ತ ವಾಸಮಾಡಿದನು.

ಅನ್ವತಿಷ್ಠದ್ಯಥಾನ್ಯಾಯಮರ್ಥತ್ರಯಮುದಾರಧೀಃ ।
ಸ್ವಪ್ರಭಾವಜಿತಾಶೇಷವೈರಿರ್ದಿಙ್ಮಂಡಲಾಧಿಪಃ ॥ ೩೫ ॥

ಏಕಾತಪತ್ರಾಂ ಪೃಥಿವೀಮನ್ವಶಾಸದ್ವೃಷೋ ಯಥಾ ।
ಸ್ವರ್ಯಾತಸ್ಯ ಪಿತುಃ ಪೂರ್ವಂ ಪರಿಭಾವಮನುಸ್ಮೃತಃ ॥ ೩೬ ॥

ಸ ಯಾಂ ಪ್ರತಿಜ್ಞಾಮಾರೂಢಸ್ತಾಂ ಸಮ್ಯಕ್ ಪರಿಪೂರ್ಯ ಚ ।
ಸಪ್ತದ್ವೀಪಾಬ್ಧಿನಗರಗ್ರಾಮಾಯತನಮಾಲಿನೀಮ್ ॥ ೩೭ ॥

ಜಿತ್ವಾ ಶತ್ರೂನಶೇಷೇಣ ಪಾಲಯಾಮಾಸ ಮೇದಿನೀಮ್ ।
ಏವಂ ಗಚ್ಛತಿ ಕಾಲೇ ಚ ವಸಿಷ್ಠೋ ಭಗವಾನೃಷಿಃ ॥ ೩೮ ॥

ಅಭ್ಯಾಜಗಾಮ ತಂ ಭೂಯೋ ದ್ರಷ್ಟುಕಾಮೋ ಜನೇಶ್ವರಮ್ ।
ತಮಾಯಾಂತಮಭಿಪ್ರೇಕ್ಷ್ಯ ಮುನಿವರ್ಯಂ ಸಸಂಭ್ರಮಃ ॥ ೩೯ ॥

---

೩೫. ಮತ್ತು ಉದಾರವಾದ ಬುದ್ಧಿವರ್ತನೆಯುಳ್ಳವನೂ, ಸ್ವಪ್ರಭಾವದಿಂದ ಜಯಿಸಿದ ಅಶೇಷ ವೈರಿ ಜನರುಳ್ಳವನೂ, ಮತ್ತು ದಿಙ್ಮಂಡಲಕ್ಕೆ ಅಧಿಪತಿಯೂ ಆದ ರಾಜನು ನ್ಯಾಯಸಮ್ಮತವಾಗಿ ಧರ್ಮ-ಅರ್ಥ-ಕಾಮಗಳೆಂಬ ತ್ರಿವರ್ಗವನ್ನು ಆಚರಿಸಿದನು.

೩೬. ಮತ್ತು ದೇವೇಂದ್ರನಂತೆ ಏಕಚ್ಛತ್ರಾಧಿಪತ್ಯದಿಂದ ಕೂಡಿದ ಪೃಥಿವಿಯನ್ನು ಆಳಿದನು, ಅವನು ಸ್ವರ್ಗಲೋಕವನ್ನು ಹೊಂದಿದ ತಂದೆಗೆ ಪೂರ್ವದಲ್ಲಿ ಉಂಟಾದ ತಿರಸ್ಕಾರವನ್ನು ಮಾತ್ರ ಸಹಿಸಲಾರದವನಾದನು.

೩೭. ಅದಕ್ಕಾಗಿ ಯಾವ ತೀವ್ರ ಪ್ರತಿಜ್ಞೆಯನ್ನು ಮಾಡಿದ್ದನೋ ಅದನ್ನು ಸಾಂಗವಾಗಿ ತೀರಿಸಿಕೊಂಡು ಸಪ್ತದ್ವೀಪ, ಸಾಗರ, ನಗರ, ಗ್ರಾಮ, ಮತ್ತು ಗೃಹಗಳ ಶ್ರೇಣಿಯಿಂದ ವಿರಾಜಿಸಲ್ಪಟ್ಟ ಭೂಮಿಯನ್ನು ಜಯಿಸಿದನು.

೩೮. ಮತ್ತು ನಿಶ್ಶೇಷವಾಗಿ ಶತ್ರುಗಳನ್ನು ಗೆದ್ದು ಭೂಮಿಯನ್ನು ಪರಿಪಾಲನ ಮಾಡಿದನು, ಹೀಗೆಯೆ ಕೆಲವು ಕಾಲವು ಕಳೆಯಲಾಗಿ ಪೂಜ್ಯನಾದ ವಸಿಷ್ಠ ಮಹಾಮುನಿಯು ರಾಜನ ಸಮೀಪಕ್ಕೆ ಬಂದನು.

೩೯. ಋಷಿವರ್ಯನಾದ ವಸಿಷ್ಠ ಮುನಿಯು ಮತ್ತೆ ಆ ರಾಜನನ್ನು ನೋಡಬೇಕೆಂಬ ಸಂಕಲ್ಪದಿಂದ ರಾಜನ ಸಮೀಪಕ್ಕೆ ಬರುತ್ತಿರುವುದನ್ನು ಕಂಡು ಆ ರಾಜನು ಅತ್ಯಂತ ಸಂಭ್ರಮದಿಂದ ಕೂಡಿದವನಾದನು.

ಪ್ರತ್ಯುಜ್ಜಗಾಮಾರ್ಘಹಸ್ತಃ ಸಹಿತಸ್ತೈರ್ನೃಪೈರ್ನೃಪಃ ।
ಅರ್ಘ್ಯಪಾದ್ಯಾದಿಭಿಃ ಸಮ್ಯಕ್ ಪೂಜಯಿತ್ವಾ ಮಹಾಮತಿಃ ॥ ೪೦ ॥

ಪ್ರಣಾಮಮಕರೋತ್ತಸ್ಮೈ ಗುರುಭಕ್ತಿಸಮನ್ವಿತಃ ।
ಆಶೀರ್ಭಿರ್ವರ್ಧಯಿತ್ವಾ ತಂ ವಸಿಷ್ಠಃ ಸಗರಂ ತದಾ ॥ ೪೧ ॥

ಆಸ್ಯತಾಮಿತಿ ಹೋವಾಚ ಸಹ ಸರ್ವೈರ್ನರೇಶ್ವರೈಃ ।
ಉಪಾವಿಶತ್ತತೋ ರಾಜಾ ಕಾಂಚನೇ ಪರಮಾಸನೇ ॥ ೪೨ ॥

ಮುನಿನಾ ಸಮನುಜ್ಞಾತಃ ಸಭಾರ್ಯಃ ಸಹ ರಾಜಭಿಃ ।
ಅಪ ವಕ್ತುಂ ನೃಪಶ್ರೇಷ್ಠಮುಪಾಸೀನಮುಪಹ್ವರೇ ॥ ೪೩ ॥

ಉವಾಚ ಶೃಣ್ವತಾಂ ರಾಜ್ಞಾಂ ಶನೈರ್ಮೃದ್ವಕ್ಷರಂ ವಚಃ ।
ವಸಿಷ್ಠ ಉವಾಚ :—
ಕುಶಲಂ ನನು ತೇ ರಾಜನ್ ಬಾಹ್ಯೇಷ್ವಾಭ್ಯಂತರೇಷು ಚ ॥ ೪೪ ॥

---

೪೦. ಆಗ ಮಹಾ ಬುದ್ಧಿಶಾಲಿಯಾದ ರಾಜನು ಸಕಲ ರಾಜರಿಂದ ಒಡಗೂಡಿ ಪೂಜಾಸಾಮಗ್ರಿಯನ್ನು ಕೈಗಳಲ್ಲಿ ಧರಿಸಿ ಮುನಿಯನ್ನು ಎದುರುಗೊಂಡು ಅರ್ಘ್ಯ ಪಾದ್ಯ ಮುಂತಾದ ಸತ್ಕಾರಗಳಿಂದ ಮುನಿಯನ್ನು ಚನ್ನಾಗಿ ಪೂಜಿಸಿದನು.

೪೧. ಪೂಜಾನಂತರದಲ್ಲಿ ಗುರುಭಕ್ತಿಯಿಂದ ಕೂಡಿದವನಾಗಿ ಗುರುವಿಗೆ ಪ್ರಣಾಮವನ್ನು ಮಾಡಿದನು. ಆಗ ವಸಿಷ್ಠ ಮುನಿಯು ಸಗರ ರಾಜನಿಗೆ ಆಶೀರ್ವಾದಗಳಿಂದ ಅಭಿವೃದ್ಧಿಯನ್ನು ಹಾರೈಸಿದನು.

೪೨. ಮತ್ತು ಸಮಸ್ತ ರಾಜರೊಡಗೂಡಿ ಕುಳಿತುಕೊಳ್ಳೋಣವಾಗಲಿ ಎಂದು ಮುನಿಯು ರಾಜನಿಗೆ ಹೇಳಿದನು. ಆಗ ರಾಜನು ಸುವರ್ಣಮಯವಾದ ವರಾಸನದಲ್ಲಿ ಕುಳಿತುಕೊಂಡನು.

೪೩. ಹೀಗೆ ಮಹರ್ಷಿಯಿಂದ ಅನುಜ್ಞೆ ಹೊಂದಿದ ರಾಜನು ರಾಜರಿಂದೊಡಗೂಡಿ ಪತ್ನೀಸಮೇತನಾಗಿ ಆಸನಾರೂಢನಾಗಿರಲು ಏಕಾಂತದಲ್ಲಿ ಕುಳಿತಿರುವ ರಾಜನನ್ನು ಕುರಿತು ಮಾತನಾಡಲು ಮುನಿಯು ಸಮೀಪಕ್ಕೆ ಬಂದನು.

೪೪. ಆಗ ಸಮಸ್ತ ರಾಜರು ಶ್ರವಣಮಾಡುತ್ತಿರುವಾಗ ಮುನಿಯು ಮೃದುವಾದ ಅಕ್ಷರಗಳಿಂದ ಕೂಡಿದ ವಚನವನ್ನು ಮೆಲ್ಲಗೆ ಮಾತನಾಡಲಾರಂಭಿಸಿದನು. ಮುನಿಯು ಇಂತೆಂದನು :—ರಾಜನೆ ! ಬಾಹ್ಯ-ಅಭ್ಯಂತರಗಳೆಂಬ ಸಕಲ ರಾಜ್ಯಾಂಗಗಳಲ್ಲಿಯೂ ಕುಶಲವೆ ?

ಮಂತ್ರಿಷ್ವಮಾತ್ಯವರ್ಗೇಷು ರಾಜ್ಯೇ ವಾ ಸಕಲೇಽಧುನಾ ।
ದಿಷ್ಟ್ಯಾ ಚ ವಿಜಿತಾಃ ಸರ್ವೇ ಸಮಗ್ರಬಲವಾಹನಾಃ ॥ ೪೫ ॥

ಅಯತ್ನೇನೈವ ಯುದ್ಧೇಷು ಭವತಾ ರಿಪವೋ ಹಿ ಯತ್ ।
ದಿಷ್ಟ್ಯಾ ರೂಢಪ್ರತಿಜ್ಞೇನ ಮಮ ಮಾನಯತಾ ವಚಃ ॥ ೪೬ ॥

ಅರಯಸ್ತ್ಯಕ್ತಧರ್ಮಾಣಸ್ತ್ವಯಾ ಜೀವವಿಸರ್ಜಿತಾಃ ।
ತಾನ್ ವಿಜಿತ್ಯೇತರಾನ್ ಜೇತುಂ ಪುನರ್ದಿಗ್ವಿಜಯೇಚ್ಛಯಾ ॥ ೪೭ ॥

ಗತಃ ಸವಾಹನಬಲಸ್ತ್ವಮಿತ್ಯಶೃಣವಂ ವಚಃ ।
ಜಿತದಿಙ್ಮಂಡಲಂ ಭೂಯಃ ಶ್ರುತ್ವಾ ತ್ವಾಂ ನಗರಸ್ಥಿತಮ್ ॥ ೪೮ ॥

ಪ್ರೀತ್ಯಾಹಮಾಗತೋ ದ್ರಷ್ಟುಮಿದಾನೀಂ ರಾಜಸತ್ತಮ ।
ಜೈಮಿನಿರುವಾಚ :—
ವಸಿಷ್ಠೇನೈವಮುಕ್ತಸ್ತು ಸಗರಸ್ತಾಲಜಂಘಜಿತ್ ॥ ೪೯ ॥

---

೪೫. ಮಂತ್ರಿ, ಸಚಿವ–ಮುಂತಾದ ಪರಿವಾರದಲ್ಲಿಯೂ ಸಕಲ ರಾಜ್ಯದಲ್ಲಿಯೂ ಈಗ ಕ್ಷೇಮವಿರುವುದಲ್ಲವೆ ? ಬಲ-ವಾಹನ ಮುಂತಾದ ಆಯಾಯ ಪರಿವಾರ ಸಮೇತರಾದ ಶತ್ರು ರಾಜರನ್ನು ನೀನು ಜಯಿಸಿರುವಿಯಲ್ಲವೆ ? ಬಹಳ ಸಂತೋಷವು.

೪೬. ನಿನ್ನಿಂದ ಯತ್ನವಿಲ್ಲದೆ ಸಮಸ್ತ ಶತ್ರು ರಾಜರು ಯುದ್ಧಗಳಲ್ಲಿ ಜಯಿಸಲ್ಪಟ್ಟಿರುವರು. ಇದು ಪರಮಾನಂದಕರವು. ಮತ್ತು ಪ್ರತಿಜ್ಞೆಯನ್ನು ನೆರವೇರಿಸಿದ ನೀನು ನನ್ನ ವಚನವನ್ನು ಮಾನಿಸಿದೆ.

೪೭. ಅದರಂತೆ ಶತ್ರುಗಳನ್ನು ಧರ್ಮವರ್ಜಿತರನ್ನಾಗಿ ಮಾಡಿ ಜೀವಸಹಿತವಾಗಿ ವಿಸರ್ಜಿಸಿರುತ್ತಿ. ಈಗ ಅವರನ್ನು ಜಯಿಸಿ ಮತ್ತೆ ದಿಗ್ವಿಜಯವನ್ನು ಗಳಿಸುವ ಇಚ್ಛೆಯಿಂದ ಜೈತ್ರಯಾತ್ರೆಯ ಸಿದ್ಧತೆಯಿಂದ ನೀನಿದ್ದೆ.

೪೮. ಅದಕ್ಕೋಸ್ಕರ ವಾಹನ-ಬಲಗಳಿಂದ ಸಮೇತನಾಗಿ, ಹೊರಟು ಹೋದೆ, ಎಂಬುದಾಗಿಯೂ ದಿಙ್ಮಂಡಲವನ್ನು ಸಮಗ್ರವಾಗಿ ಜಯಿಸಿ ಮತ್ತೆ ಈಗ ನಿನ್ನ ನಗರವನ್ನು ಸೇರಿರುತ್ತೀ ಎಂದೂ ಮಾತನ್ನು ಕೇಳಿದನು.

೪೯. ರಾಜಶ್ರೇಷ್ಠನೆ! ಅಂತಹ ನಿನ್ನನ್ನು ಪ್ರೀತಿಯಿಂದ ನೋಡಬೇಕೆಂಬ ಕುತೂಹಲದಿಂದ ನಾನು ಈಗ ಇಲ್ಲಿಗೆ ಬಂದಿರುವೆನು, ಜೈಮಿನಿ ಮುನಿಯು ಮುಂದೆ ಈ ರೀತಿಯಾಗಿ ಹೇಳಿದನು :— ತಾಲಜಂಘರನ್ನು ಜಯಿಸಿದ ಸಗರ ರಾಜನು ವಸಿಷ್ಠ ಮುನಿಯಿಂದ ಈ ರೀತಿಯಾಗಿ ಹೇಳಲ್ಪಟ್ಟನು.

ಕೃತಾಂಜಲಿಪುಟೋ ಭೂತ್ವಾ ಪ್ರತ್ಯುವಾಚ ಮಹಾಮುನಿವ್ ।
ಸಗರ ಉವಾಚ :—
ಕುಶಲಂ ನನು ಸರ್ವತ್ರ ಮಹರ್ಷೇ ನಾತ್ರ ಸಂಶಯಃ ॥ ೫೦ ॥

ಕಲ್ಯಾಣಾಭಿಮುಖಾಃ ಸರ್ವೇ ದೇವತಾಶ್ಚ ಮುನೇಽನಿಶಮ್ ।
ಭವಾನ್ ಧ್ಯಾಯತಿ ಕಲ್ಯಾಣಂ ಮನಸಾ ಯಸ್ಯ ಸಂತತಮ್ ॥ ೫೧ ॥

ತಸ್ಯ ಮೇ ಚೋಪಸರ್ಗಾಶ್ಚ ಸಂಭವಂತಿ ಕಥಂ ಮುನೇ ।
ಭವತಾನುಗೃಹೀತೋಽಸ್ಮಿ ಕೃತಾರ್ಥಶ್ಚಾಧುನಾ ಕೃತಃ ॥ ೫೨ ॥

ಯನ್ಮಾಂ ದ್ರಷ್ಟುಮಿಹಾಯಾತಃ ಸ್ವಯಮೇವ ಭವಾನ್ ಗುರೋ ।
ಯನ್ಮಹ್ಯಮಾಹ ಭಗವಾನ್ ವಿಪಕ್ಷವಿಜಯಾದಿಕಮ್ ॥ ೫೩ ॥

ತತ್ತಥಾನುಷ್ಠಿತಂ ಕಿಂ ತು ಸರ್ವಂ ಭವದನುಗ್ರಹಾತ್ ।
ಭವತ್ಪ್ರಸಾದತಃ ಸರ್ವಂ ಮನ್ಯೇ ಪ್ರಾಪ್ತಂ ಮಹೀಕ್ಷಿತಾಮ್ ॥ ೫೪ ॥

---

೫೦. ಆಗ ರಾಜನು ವಿನಯದಿಂದ ಅಂಜಲಿಯನ್ನು ಕಟ್ಟಿಕೊಂಡು ಮಹಾಮುನಿಯನ್ನು ಕುರಿತು ಪ್ರತ್ಯುತ್ತರವನ್ನು ಹೇಳಿದನು. ಸಗರ ರಾಜನು ಇಂತೆಂದನು :—ಮಹರ್ಷಿಯೆ ! ಸರ್ವಾಂಗಗಳಲ್ಲಿಯೂ ನನಗೆ ಕುಶಲವಿರುವುದು, ಇದರಲ್ಲಿ ಸಂದೇಹವಿಲ್ಲ.

೫೧. ಮುನಿಯೆ ! ಪೂಜ್ಯನಾದ ನೀನು ಮನಸ್ಸಿನಿಂದ ಸಂತತವಾಗಿ ನನ ಕಲ್ಯಾಣವನ್ನು ಧ್ಯಾನಿಸುತ್ತಿರುವುದರಿಂದ ಸಕಲ ದೇವತೆಗಳೂ ಸರ್ವ ಕಾಲದಲ್ಲಿಯೂ ನನಗೆ ಕಲ್ಯಾಣವನ್ನುಂಟುಮಾಡುವುದರಲ್ಲಿ ಅಭಿಮುಖರಾಗಿರುವರು.

೫೨. ಮುನಿಯೆ ! ನಿನ್ನ ಕೃಪಾಪಾತ್ರನಾದ ನನಗೆ ಉಪಸರ್ಗ ಪೀಡೆಗಳು ಹೇಗೆ ಸಂಭವಿಸುವುವು, ನಿನ್ನಿಂದ ಅನುಗ್ರಹಿಸಲ್ಪಟ್ಟ ನಾನು ಕೃತಾರ್ಥನಾಗಿ ಮಾಡಲ್ಪಟ್ಟಿರುವೆನು.

೫೩. ಗುರುವೆ ! ನನ್ನನ್ನು ನೋಡಲು ನೀನಾಗಿಯೆ ಇಲ್ಲಿಗೆ ಬಂದು ನನ್ನನ್ನು ಕೃತಾರ್ಥನನ್ನಾಗಿ ಮಾಡಿರುತ್ತೀ, ಮತ್ತು ನನ್ನ ಶತ್ರು ವಿಜಯ ಮುಂತಾದ ಉದ್ಯಮವನ್ನು ಪೂಜ್ಯನಾದ ನೀನು ಪ್ರಸ್ತಾಪಮಾಡಿರುತ್ತೀ.

೫೪. ಅದೆಲ್ಲವೂ ನನ್ನಿಂದ ಆಚರಿಸಲ್ಪಟ್ಟಿರುವುದು ನಿಜ, ಆದರೆ ಎಲ್ಲವೂ ನಿನ್ನ ಅನುಗ್ರಹದಿಂದ ನಡೆದಿರುವುದು. ನಮ್ಮ ಪೂರ್ವ ರಾಜರಿಗೆ ನಿನ್ನ ಅನುಗ್ರಹದಿಂದ ಸಕಲೇಷ್ಟಗಳೂ ಸಿದ್ಧಿಸಿರುವುವೆಂದು ನಾನು ತಿಳಿದಿರುವೆನು.

ಅನ್ಯಥಾ ಮಮ ಕಾ ಶಕ್ತಿಃ ಶತ್ರೂನ್ ಹಂತುಂ ತಥಾವಿಧಾನ್ ।
ಅನಲ್ಪೀಕುರುತೇ ಫಲ್ಗುಂ ಯನ್ಮೇ ವ್ಯವಸಿತಂ ಭವಾನ್ ॥ ೫೫ ॥

ಫಲಮಲ್ಪಮಪಿ ಪ್ರೀತ್ಯೈ ಸ್ಯಾದಗಸ್ಯಾಧಿರೋಪಿತುಃ ॥
ಜೈಮಿನಿರುವಾಚ :—
ಏವಂ ಸಂಭಾವಿತಃ ಸಮ್ಯಕ್ ಸಗರೇಣ ಮಹಾಮುನಿಃ ॥ ೫೬ ॥

ಅಭ್ಯನುಜ್ಞಾಯ ತಂ ಭೂಯಃ ಪ್ರಜಗಾಮ ನಿಜಾಶ್ರಮಮ್ ।
ವಸಿಷ್ಠೇ ತು ಗತೇ ರಾಜಾ ಸಗರಃ ಪ್ರೀತಮಾನಸಃ ॥ ೫೭ ॥

ಅಯೋಧ್ಯಾಯಾಮಭಿವಸನ್ ಪ್ರಶಶಾಸಾಖಿಲಾಂ ಭುವಮ್ ।
ಭಾರ್ಯಾಭ್ಯಾಂ ಸಮುಪೇತಾಭ್ಯಾಂ ರೂಪಶೀಲಗುಣಾದಿಭಿಃ ॥ ೫೮ ॥

ಬುಭುಜೇ ವಿಷಯಾನ್ ರಮ್ಯಾನ್ ಯಥಾಕಾಮಂ ಯಥಾಸುಖಮ್ ।
ಸುಮತಿಃ ಕೇಶಿನೀ ಚೋಭೇ ವಿಕಸದ್ವಂದನಾಂಬುಜೇ ॥ ೫೯ ॥

---

೫೫. ಹಾಗಿಲ್ಲದಿದ್ದರೆ ಅಂತಹ ಬಲಿಷ್ಠರಾದ ಶತ್ರುಗಳನ್ನು ಸಂಹರಿಸಲು ನನಗೆ ಶಕ್ತಿಯು ಎಲ್ಲಿಯದು? ನೀನು ನನ್ನ ಮಹತ್ತಾದ ವ್ಯವಸಾಯವನ್ನು ಸಫಲವನ್ನಾಗಿ ಮಾಡಿರುತ್ತೀ.

೫೬. ತಾನಾಗಿ ಗಿಡವನ್ನು ನೆಟ್ಟಿರುವವನಿಗೆ ಆ ಗಿಡದಲ್ಲಿ ಬಿಟ್ಟಿರುವ ಅಲ್ಪವಾದ ಫಲವು ಕೂಡ ಪ್ರೀತಿಯನ್ನುಂಟುಮಾಡುವುದು. ಜೈಮಿನಿ ಮುನಿಯು ಹೀಗೆ ಮುಂದುವರಿಸಿದನು :—ಮಹಾತ್ಮನಾದ ಸಗರ ರಾಜನಿಂದ ಮುನಿಯು ಹೀಗೆ ಚನ್ನಾಗಿ ಗೌರವಿಸಲ್ಪಟ್ಟನು.

೫೭. ಮತ್ತು ಆ ರಾಜನನ್ನು ಒಪ್ಪಿಸಿ ಮತ್ತೆ ತಾನು ತನ್ನ ಆಶ್ರಮಕ್ಕೆ ತೆರಳಿದನು. ಹೀಗೆ ವಸಿಷ್ಠ ಮುನಿಯು ಆಶ್ರಮಕ್ಕೆ ಹೊರಟು ಹೋಗಲಾಗಿ ಸಗರ ರಾಜನು ಪ್ರೀತಿಯಿಂದ ಕೂಡಿದ ಮಾನಸವುಳ್ಳವನಾದನು.

೫೮. ಹಾಗೆ ರೂಪ—ಶೀಲ-ಗುಣ ಮುಂತಾದುವುಗಳಿಂದ ಕೂಡಿ ಶ್ಲಾಘ್ಯರಾದ ಇಬ್ಬರು ಪತ್ನಿಯರಿಂದ ಸಹಿತನಾಗಿ ಅಯೋಧ್ಯಾ ನಗರದಲ್ಲಿ ವಾಸಿಸುತ್ತ ಸಮಗ್ರ ಭೂಮಂಡಲವನ್ನು ಆಳಿದನು.

೫೯. ಮತ್ತು ತನ್ನ ಇಷ್ಟವನ್ನು ಅನುಸರಿಸಿ ಸುಖಮಯ ಮತ್ತು ರಮ್ಯವಾದ ವಿಷಯಗಳನ್ನು ಅನುಭವಿಸಿದನು, ಅವನ ಪತ್ನಿಯರಾದ ಸುಮತಿ ಮತ್ತು ಕೇಶಿನೀ ಎಂಬುವರು ಅರಳಿದ ಕಮಲದಂತೆ ಇರುವ ಮುಖ ಸೌಂದರ್ಯದಿಂದ ಶೋಭಿಸುತ್ತಿದ್ದರು.

ರೂಪೌದಾರ್ಯಗುಣೋಪೇತೇ ಪೀನವೃತ್ತಪಯೋಧರೇ ।
ನೀಲಕುಂಚಿತಕೇಶಾಢ್ಯೇ ಸರ್ವಾಭರಣಭೂಷಿತೇ ॥ ೬೦ ॥

ಸರ್ವಲಕ್ಷಣಸಂಪನ್ನೇ ನವಯೌವನಗೋಚರೇ ।
ಪ್ರಿಯೇ ಸನ್ನಿಹಿತೇ ತಸ್ಯ ನಿತ್ಯಂ ಪ್ರಿಯಹಿತೇ ರತೇ ॥ ೬೧ ॥

ಸ್ವಾಚಾರಭಾವಚೇಷ್ಟಾಭಿರ್ಜಹ್ರತುಸ್ತನ್ಮನೋಽನಿಶಮ್ ।
ಸ ಚಾಪಿ ಭರಣೋತ್ಕರ್ಷಪ್ರತೀತಾತ್ಮಾ ಮಹೀಪತಿಃ ॥ ೬೨ ॥

ರಮಮಾಣೋ ಯಥಾಕಾಮಂ ಸಹ ತಾಭ್ಯಾಂ ಪುರೇಽವಸತ್ ।
ಅನ್ಯೇಷಾಂ ಭುವಿ ರಾಜ್ಞಾಂ ತು ರಾಜಶಬ್ದೋ ನ ಚಾಪ್ಯಭೂತ್ ॥ ೬೩ ॥

ಗುಣೇನ ಚಾಭವತ್ತಸ್ಯ ಸಗರಸ್ಯ ಮಹಾತ್ಮನಃ ।
ಅಲ್ಪೋಽಪಿ ಧರ್ಮಃ ಸತತಂ ಯಥಾ ಭವತಿ ಮಾನಸೇ ॥ ೬೪ ॥

---

೬೦. ಮತ್ತು ರೂಪ-ಔದಾರ್ಯ-ಗುಣಗಳಿಂದ ಕೂಡಿದವರೂ ಸ್ಥೂಲ-ವರ್ತುಲಗಳಾದ ಸ್ತನಗಳಿಂದ ಶೋಭಿತರೂ, ನೀಲ-ವಕ್ರಕೇಶಗಳಿಂದ ಸುಂದರರೂ, ಮತ್ತು ಸಮಸ್ತ ಆಭರಣಗಳಿಂದ ಅಲಂಕೃತರೂ ಆಗಿದ್ದರು.

೬೧. ಸಮಸ್ತ ಲಕ್ಷಣಗಳಿಂದ ಸಂಪನ್ನರೂ, ನವತಾರುಣ್ಯದಿಂದ ರಾಜಿಸುವವರೂ ಆದ ಆ ಭಾರ್ಯೆಯರು ಪತಿಯ ಹಿತದಲ್ಲಿ ಆದರವುಳ್ಳವರಾಗಿ ಯಾವಾಗಲೂ ಪತಿಯ ಸನ್ನಿಧಿಯಲ್ಲಿರುತ್ತಿದ್ದರು.

೬೨. ಅಂತಹ ಪತ್ನಿಯರು ತಮ್ಮ ಆಚಾರ-ಭಾವ-ಚೇಷ್ಟೆಗಳಿಂದ ಪತಿಯ ಮಾನಸವನ್ನು ಆಕರ್ಷಿಸಿದರು. ಆ ರಾಜನು ಆ ವಿಧವಾದ ರಮಣ ಸುಖದಿಂದ ನೆಮ್ಮದಿಯಾದ ಅಂತರಂಗವುಳ್ಳವನಾದನು.

೬೩. ಹಾಗೆಯೆ ಆ ಪ್ರಿಯೆಯರಿಂದ ಸಮೇತನಾಗಿ ತನ್ನ ಇಷ್ಟಾನುಸಾರವಾಗಿ ರಮಿಸುತ್ತ ನಗರದಲ್ಲಿ ವಾಸಮಾಡಿದನು. ಆಗ ಭೂಮಿಯಲ್ಲಿ ಮತ್ತಾರಿಗೂ ರಾಜ ಎಂಬ ಹೆಸರು ಇರಲಿಲ್ಲ.

೬೪. ಮಹಾತ್ಮನಾದ ಆ ಸಗರ ರಾಜನಿಗೆ ಅವನ ಗುಣಳಿಂದ ತುಲ್ಯನಾದವನು ಬೇರೊಬ್ಬನಿರಲಿಲ್ಲ. ಅಂತಹ ರಾಜನ ಮನಸ್ಸಿನಲ್ಲಿ ಸರ್ವ ಕಾಲದಲ್ಲಿಯೂ ಅಲ್ಪವಾದರೂ ಧರ್ಮಮಾತ್ರವು ಸ್ಥಿತಿಯನ್ನು ಹೊಂದಿತ್ತು.

**ರಾಜ್ಞಸ್ತಸ್ಯಾರ್ಥಕಾಮೌ ತು ನ ತಥಾ ವಿಪುಲಾವಪಿ ।**
**ಅಲುಬ್ಧಮಾನಸೋಽರ್ಥಂ ಚ ಭೇಜೇ ಧರ್ಮಮಪೀಡಯನ್ ॥ ೬೫ ॥**

**ತದರ್ಥಮೇವ ರಾಜೇಂದ್ರ ಕಾಮಂ ಚಾಪೀಡಯಂಸ್ತಯೋಃ ॥ ೬೬ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ಏಕೋನಪಂಚಾಶತ್ತಮೋಽಧ್ಯಾಯಃ**

---

೬೫. ಹಾಗೆ ಸಮೃದ್ಧಿಯಾದ ಅರ್ಥ-ಕಾಮಗಳು ಆ ರಾಜನ ಮಾನಸದಲ್ಲಿ ಇರುತ್ತಿರಲಿಲ್ಲ, ಧರ್ಮಕ್ಕೆ ಬಾಧವುಂಟಾಗದಂತೆಯೂ ಲೋಭಕ್ಕೆ ಮಾನಸವು ವಶವಾಗದಂತೆಯೂ ಅರ್ಥವನ್ನು ಆರ್ಜಿಸಿದನು.

೬೬. ರಾಜೇಂದ್ರನೆ! ಅಂತಹ ಶ್ರೇಷ್ಠ ಪತ್ನಿಯರೊಡನೆ ಧರ್ಮ-ಅರ್ಥಗಳಿಗೆ ಪೀಡೆಯಾಗದಂತೆ ಧರ್ಮರೂಪವಾದ ಕಾಮವನ್ನು ಅನುಭವಿಸಿದನು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ನಲವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

---

## ಪಂಚಾಶತ್ತಮೋಽಧ್ಯಾಯಃ

**ಜೈಮಿನಿರುವಾಚ :—**

**ಏವಂ ಸ ರಾಜಾ ವಿಧಿವತ್ ಪಾಲಯಾಮಾಸ ಮೇದಿನೀಮ್ ।**
**ಸಪ್ತದ್ವೀಪವತೀಂ ಸಮ್ಯಕ್ ಸಾಕ್ಷಾದ್ಧರ್ಮ ಇವಾಪರಃ ॥ ೧ ॥**

**ಬ್ರಾಹ್ಮಣಾದೀಂಸ್ತಥಾ ವರ್ಣಾನ್ ಸ್ವೇ ಸ್ವೇ ಧರ್ಮೇ ಪೃಥಕ್ ಪೃಥಕ್।**
**ಸ್ಥಾಪಯಿತ್ವಾ ಯಥಾನ್ಯಾಯಂ ರರಕ್ಷಾವ್ಯಾಹತೇಂದ್ರಿಯಃ ॥ ೨ ॥**

**ಪ್ರಜಾಶ್ಚ ಸರ್ವವರ್ಣೇಷು ಯಥಾಶ್ರೇಷ್ಠಾನುವರ್ತಿನಃ ।**
**ವರ್ಣಾಂಶ್ಚೈವಾನುಲೋಮ್ಯೇನ ತದ್ವದರ್ಥೇಷು ಚ ಕ್ರಮಾತ್ ॥ ೩ ॥**

**ನ ಸತಿ ಸ್ಥವಿರೇ ಬಾಲಂ ಮೃತ್ಯುರಭ್ಯುಪಗಚ್ಛತಿ ।**
**ಸರ್ವವರ್ಣೇಷು ಭೂಪಾಲೇ ಮಹೀಂ ತಸ್ಮಿನ್ ಪ್ರಶಾಸತಿ ॥ ೪ ॥**

---

೧. ಜೈಮಿನಿ ಮುನಿಯು ಹೀಗೆ ಹೇಳಿದನು :—ಆ ರಾಜನು ಈ ರೀತಿಯಾಗಿ ಸಪ್ತದ್ವೀಪಗಳಿಂದ ಕೂಡಿರುವ ಭೂಮಿಯನ್ನು ಮೂರ್ತಿಯನ್ನು ಧರಿಸಿ ಬಂದ ಮತ್ತೊಬ್ಬ ಧರ್ಮಪುರುಷನಂತೆ ಯಥಾವಿಧಿಯಾಗಿ ಚೆನ್ನಾಗಿ ಪಾಲಿಸಿದನು.

೨. ಮತ್ತು ಕುಮಾರ್ಗ ಪ್ರವೇಶವೆಂಬ ವ್ಯಾಹತಿಯಿಲ್ಲದ ಇಂದ್ರಿಯಗಳುಳ್ಳ ಆ ರಾಜನು ಬ್ರಾಹ್ಮಣ ಮುಂತಾದ ನಿಖಿಲ ವರ್ಣಗಳನ್ನು ನ್ಯಾಯಸಮ್ಮತವಾಗಿ ತಮ್ಮ ತಮ್ಮ ಧರ್ಮದಲ್ಲಿ ಅಸಂಕೀರ್ಣವಾಗಿ ಇರಿಸಿ ಭೂಮಿಯನ್ನು ರಕ್ಷಿಸಿದನು.

೩. ಆ ರಾಷ್ಟ್ರದ ಪ್ರಜೆಗಳು ವರ್ಣಗಳಲ್ಲಿ ಶ್ರೇಷ್ಠರಾದವರನ್ನು ಅನುವರ್ತಿಸುತ್ತ, ಆನುಲೋಮ್ಯದಿಂದ ಉತ್ತಮವರ್ಣಗಳನ್ನು ಪುರಸ್ಕರಿಸುತ್ತ ಹಾಗೆಯೇ ನ್ಯಾಯಾನುಸಾರ ಅರ್ಥವನ್ನು ಸೇವಿಸುತ್ತ ವಿಹಿತಮಾರ್ಗದಲ್ಲಿದ್ದರು.

೪. ಆ ಭೂಪಾಲಕನು ಭೂಮಿಯನ್ನು ಆಳುತ್ತಿರಲು ಎಲ್ಲ ವರ್ಣಗಳಲ್ಲಿಯೂ ವೃದ್ಧನು ಬದುಕಿರಲು ಅವನ ಮುಂದೆ ಮೃತ್ಯುವು ಬಾಲಕನನ್ನು ಸೆಳೆದೊಯ್ಯುತ್ತಿರಲಿಲ್ಲ.

ಸ್ಫೀತಾನ್ಯಪೇತಬಾಧಾನಿ ತದಾ ರಾಷ್ಟ್ರಾಣಿ ಕೃತ್ಸ್ನಶಃ ।
ತೇಷ್ವಸಂಖ್ಯಾ ಜನಪದಾಶ್ಚಾತುರ್ವರ್ಣ್ಯಜನಾವೃತಾಃ ॥ ೫ ॥

ತೇ ಚಾಸಂಖ್ಯಗೃಹಗ್ರಾಮಶತೋಪೇತಾ ವಿಭಾಗಶಃ ।
ದೇಶಾಶ್ಚಾವಾಸಭೂಯಿಷ್ಠಾ ನೃಪೇ ತಸ್ಮಿನ್ ಪ್ರಶಾಸತಿ ॥ ೬ ॥

ಅನಾಶ್ರಮೀ ದ್ವಿಜಃ ಕಶ್ಚಿನ್ನ ಬಭೂವ ತದಾ ಭುವಿ ।
ಪ್ರಜಾನಾಂ ಸರ್ವವರ್ಣೇಷು ಪ್ರಾರಂಭಾಃ ಫಲದಾಯಿನಃ ॥ ೭ ॥

ಸ್ವೋಚಿತಾನ್ಯೇವ ಕರ್ಮಾಣಿ ಪ್ರಾರಭಂತೇ ಚ ಮಾನವಾಃ ।
ಪುರುಷಾರ್ಥೋಪಪನ್ನಾನಿ ಕರ್ಮಾಣಿ ಚ ತದಾ ನೃಣಾಮ್ ॥ ೮ ॥

ಮಹೋತ್ಸವಸಮುದ್ಯುಕ್ತಾಃ ಪುರಗ್ರಾಮವ್ರಜಾಕರಾಃ ।
ಅನ್ಯೋನ್ಯಪ್ರಿಯಕಾಮಾಶ್ಚ ರಾಜಭಕ್ತಿಸಮನ್ವಿತಾಃ ॥ ೯ ॥

---

೫. ಆಗ ಆ ರಾಜನ ರಾಷ್ಟ್ರಗಳೆಲ್ಲವೂ ಸಕಲ ತೊಂದರೆಗಳಿಂದ ದೂರವಾಗಿಯೂ ಸಮೃದ್ಧಿಯಾಗಿಯೂ ಇದ್ದುವು. ಅವುಗಳಲ್ಲಿ ಚಾತುರ್ವರ್ಣ್ಯ ಧರ್ಮವನ್ನಾಚರಿಸುವ ಜನರಿಂದ ಪೂರ್ಣವಾದ ದೇಶಗಳು ಸಂಖ್ಯಾತೀತವಾಗಿದ್ದುವು.

೬. ಮತ್ತು ಆ ರಾಜನು ರಾಜ್ಯವನ್ನು ಆಳುತ್ತಿರಲು ರಾಜ್ಯದಲ್ಲಿ ಸೇರಿದ ಅನೇಕ ದೇಶಗಳು ಗಣನಾತೀತವಾದ ಗೃಹಗಳಿಂದಲೂ ನೂರಾರು ಗ್ರಾಮಗಳಿಂದಲೂ ಸೇರಿದವುಗಳಾಗಿಯೂ ವಿಭಾಗದಿಂದಿರುವ ಅನೇಕ ವಾಸಭೂಮಿಗಳಿಂದ ಕೂಡಿದುವುಗಳಾಗಿಯೂ ಇದ್ದುವು.

೭. ಆಗ ಭೂಮಿಯಲ್ಲಿ ಯಾವ ದ್ವಿಜನು ಕೂಡ ಅನಾಶ್ರಮಿಯಾಗಿ ಇರಲಿಲ್ಲ. ಪ್ರಜೆಗಳಲ್ಲಿ ಸಮಸ್ತ ವರ್ಣಗಳು ತಮ್ಮ ಅಧಿಕಾರಾನುಸಾರವಾಗಿ ಕೈಗೊಂಡಿರುವ ಉದ್ಯಮಗಳು ಫಲದಾಯಕಗಳಾಗಿದ್ದುವು.

೮. ಆಗ ಮಾನವರು ತಮಗೆ ಉಚಿತವೆನಿಸಿದ ಕರ್ಮಗಳನ್ನು ಮಾತ್ರ ಪ್ರಾರಂಭಿಸುತ್ತಲಿದ್ದರು. ಮತ್ತು ಪ್ರಜೆಗಳ ಕರ್ಮಗಳು ಸಾಮಾನ್ಯವಾಗಿ ಪುರುಷಾರ್ಥಗಳಿಂದ ಕೂಡಿದುವುಗಳಾಗಿದ್ದುವು.

೯. ಪುರ-ಗ್ರಾಮ-ವ್ರಜಗಳಲ್ಲಿ ವಾಸಿಸುವ ಪ್ರಜೆಗಳೆಲ್ಲರೂ ಮಹೋತ್ಸವದಲ್ಲಿ ತತ್ಪರರೂ, ಪರಸ್ಪರ ಪ್ರಿಯವಾಗಿ ನಡೆಯುವ ಕಾಮವುಳ್ಳವರೂ, ಮತ್ತು ಅತಿಶಯವಾದ ರಾಜಭಕ್ತಿಯಿಂದ ಕೂಡಿದವರೂ ಆಗಿದ್ದರು.

ನ ನಿಂದಿತೋಽಭಿಶಸ್ತೋ ವಾ ದರಿದ್ರೋ ವ್ಯಾಧಿತೋಽಪಿ ವಾ ।
ಪ್ರಜಾಸು ಕಶ್ಚಿಲ್ಲುಬ್ಧೋ ವಾ ಕೃಪಣೋ ನಾಪಿ ನಾಭವತ್ ॥ ೧೦ ॥

ಜನಾಃ ಪರಗುಣಪ್ರೀತಾಃ ಸ್ವಸಂಪರ್ಕಾಭಿಕಾಂಕ್ಷಿಣಃ ।
ಗುರುಷು ಪ್ರಣತಾ ನಿತ್ಯಂ ಸದ್ವಿದ್ಯಾವ್ಯಸನಾದೃತಾಃ ॥ ೧೧ ॥

ಪರಾಪವಾದಭೀತಾಶ್ಚ ಸ್ವದಾರರತಯೋಽನಿಶಮ್ ।
ನಿಸರ್ಗಾತ್ ಖಲಸಂಸರ್ಗವಿರತಾ ಧರ್ಮತತ್ಪರಾಃ ॥ ೧೨ ॥

ಆಸ್ತಿಕಾಃ ಸರ್ವಶೋಽಭೂವನ್ ಪ್ರಜಾಸ್ತಸ್ಮಿನ್ ಪ್ರಶಾಸತಿ ।
ಏವಂ ಸುಬಾಹುತನಯೇ ಸ್ವಪ್ರತಾಪಾರ್ಜಿತಾಂ ಮಹೀಮ್ ॥ ೧೩ ॥

ಋತವಶ್ಚ ಮಹಾಭಾಗ ಯಥಾಕಾಲಾನುವರ್ತಿನಃ ।
ಶಾಲಿಭೂಯಿಷ್ಠಸಸ್ಯಾಢ್ಯಾ ಸದೈವ ಸಕಲಾ ಮಹೀ ॥ ೧೪ ॥

---

೧೦. ಆಗ ಇರುವ ಪ್ರಜಾವರ್ಗದಲ್ಲಿ ನಿಂದಾಸ್ಪದನೂ ಅಪವಾದಗ್ರಸ್ತನೂ, ದರಿದ್ರನೂ, ರೋಗಿಯೂ, ಲೋಭಿಯೂ, ಅಥವಾ ಕೃಪಣನೂ ಆದ ಅಧಮನು ಯಾರೊಬ್ಬನೂ ಇರಲಿಲ್ಲ.

೧೧. ಜನರು ಪರರ ಗುಣಗಳನ್ನು ಪ್ರೀತಿಸುವವರೂ, ಅವರೊಡನೆ ತಮಗೆ ಸಂಪರ್ಕವನ್ನು ಕಾಂಕ್ಷಿಸುವವವರೂ, ಗುರುಗಳಲ್ಲಿ ಪ್ರಣಾಮಶೀಲವುಳ್ಳವರೂ ಮತ್ತು ಸದ್ವಿದ್ಯಾರ್ಜನವೆಂಬ ವ್ಯಸನದಲ್ಲಿ ಆದರವುಳ್ಳವರೂ ಆಗಿದ್ದರು.

೧೨. ಮತ್ತು ಪರಾಪವಾದದಿಂದ ಭಯಗೊಳ್ಳುವ ಶೀಲವುಳ್ಳವರೂ ಯಾವಾಗಲೂ ಸ್ವಸ್ತ್ರೀಯರಲ್ಲಿ ಮಾತ್ರ ರತಿವಿಹಾರವುಳ್ಳವರೂ, ಸ್ವಭಾವವಾಗಿ ಸಂಭವಿಸುವ ಖಲಸಂಗದಿಂದ ವರ್ಜಿತರೂ ಮತ್ತು ಧರ್ಮತತ್ಪರರೂ ಆಗಿದ್ದರು.

೧೩. ಆ ರಾಜನ ಆಳ್ವಿಕೆಯಲ್ಲಿ ಸಮಸ್ತ ಪ್ರಜೆಗಳೂ ಆಸ್ತಿಕ್ಯದಿಂದ ಶೋಭಿಸುವವರಾಗಿದ್ದರು, ಸುಬಾಹು ಪುತ್ರನಾದ ಸಗರ ರಾಜನು ಈ ರೀತಿಯಾಗಿ ತನ್ನ ಪ್ರತಾಪದಿಂದ ಆರ್ಜಿಸಿದ ಭೂಮಿಯನ್ನು ಆಳಿದನು.

೧೪. ಮಹಾ ಭಾಗ್ಯವಂತನೆ ! ಎಲ್ಲ ಋತುಗಳು ಆಯಾಯ ಕಾಲಕ್ಕೆ ತಕ್ಕಂತೆ ಅನುವರ್ತಿಸಿ ಪ್ರಾಪ್ತವಾಗುತ್ತಲಿದ್ದುವು. ಎಲ್ಲ ಭೂಮಿಯು ಯಾವಾಗಲೂ ಅತ್ಯಂತ ಧಾನ್ಯ ಸಂಪತ್ತಿಯಿಂದ ಕೂಡಿದ ಸಸ್ಯಗಳಿಂದ ಪೂರ್ಣವಾಗಿತ್ತು

ಬಭೂವ ನೃಪಶಾರ್ದೂಲೇ ತಸ್ಮಿನ್ ರಾಜ್ಯಾನಿ ಶಾಸತಿ || ೧೫ ||

ಯಸ್ಯಾಷ್ಟಾದಶಮಂಡಲಾಧಿಪತಿಭಿಃ ಸೇವಾರ್ಥಮಭ್ಯಾಗತೈಃ
ಪ್ರಖ್ಯಾತೋರುಪರಾಕ್ರಮೈರ್ನೃಪಶತೈರ್ಮೂರ್ಧಾಭಿಷಿಕ್ತೈಃ ಪೃಥಕ್ ।
ಸಂವಿಷ್ಟೈರ್ಮಣಿವಿಷ್ಟರೇಷು ನಿತರಾಮುಧ್ಭಾಸ್ಯಮಾನಾಮರೈಃ
ಶಕ್ರಸ್ಯೇವ ವಿರಾಜತೇ ದಿವಿ ಸಭಾ ರತ್ನಪ್ರಭೋದ್ಭಾಸಿತಾ || ೧೬ ||

ಸಂಕೇತಾವಿಷಯಾಂತರಾಭ್ಯುಪಗಮಾಃ ಸರ್ವೇಽಪಿ ಸೋಪಾಯನಾಃ
ಕೃತ್ವಾ ಸೈನ್ಯನಿವೇಶನಾನಿ ಪರಿತಃ ಪುರ್ಯಾಃ ಪೃಥಕ್ ಪಾರ್ಥಿವಾಃ ।
ದ್ರಷ್ಟುಂ ಕಾಂಕ್ಷಿತರಾಜಕಾಃ ಸತನಯಾ ವಿಜ್ಞಾಪಯಂತೋ ಮುಹು-
ರ್ದ್ವಾಃಸ್ಥೈರೇವ ನರೇಶ್ವರಾಯ ಸುಚಿರಂ ವತ್ಸ್ಯಂತಮಂತಃಪುರೇ||೧೭||

ನಮನ್ನರೇಂದ್ರಮುಕುಟಶ್ರೇಣೀನಾಮತಿಘರ್ಷಣಾತ್ ।
ಕಿಣೀಕೃತೌ ವಿರಾಜೇತೇ ಚರಣೌ ತಸ್ಯ ಭೂಭುಜಃ || ೧೮ ||

---

೧೫ ನೃಪತಿಶ್ರೇಷ್ಠನಾದ ಆ ರಾಜನು ರಾಜ್ಯಗಳನ್ನು ಆಳುತ್ತಿರಲು ಅವನ ಧರ್ಮಮಹಿಮಾನುಗುಣವಾಗಿ ಮೇಲೆ ಹೇಳಿದಂತೆ ಸರ್ವ ಸಮೃದ್ಧಿ ಫಲಗಳು ವೈಭವದಿಂದ ಉಂಟಾಗುತ್ತಲಿದ್ದುವು.

೧೬. ಆಗ ಪ್ರಖ್ಯಾತ ಮಹಾ ಪರಾಕ್ರಮವುಳ್ಳ, ಪ್ರತ್ಯೇಕವಾಗಿ ಪಟ್ಟಾಭಿಷೇಕ ಸಂಸ್ಕಾರಸಂಸ್ಕೃತರಾದ, ಮತ್ತು ಈ ರಾಜನ ಸೇವೆಗೋಸ್ಕರವಾಗಿ ಬಂದು ಮಣಿಮಯವಾದ ಆಸನಗಳಲ್ಲಿ ಕುಳಿತುಕೊಂಡಿರುವ, ಹದಿನೆಂಟು ಮಂಡಲಾಧಿಪತಿಗಳು ನೆರೆದಿರುವ, ರತ್ನಕಿರಣ ಪ್ರಭೆಯಿಂದ ಪ್ರಕಾಶಿಸಲ್ಪಟ್ಟ ಆ ರಾಜನ ಸಭೆಯು ಸ್ವರ್ಗದಲ್ಲಿ ದೇವತೆಗಳಿಂದ ಪೂರ್ಣವಾದ ಇಂದ್ರನ ಸುಧರ್ಮ ಸಭೆಯಂತೆ ಶೋಭಿಸುತ್ತಲಿದೆ.

೧೭. ರಾಜನ ಅನುಜ್ಞಾಸಂಕೇತವಿಲ್ಲದ್ದರಿಂದ ಅಂತಃ ಪ್ರವೇಶವಿಲ್ಲದಿರುವ ಮತ್ತೆ ಕೆಲವುಮಂದಿ ರಾಜರು ಎಲ್ಲರೂ ಕಾಣಿಕೆಯ ಸಹಿತವಾಗಿ ಬಂದು ನಗರದಸುತ್ತ ಸೈನ್ಯಶಿಬಿರಗಳನ್ನು ಪ್ರತ್ಯೇಕವಾಗಿ ರಚಿಸಿ ರಾಜದರ್ಶನ ಕಾಂಕ್ಷಿಗಳೂ ಸಪುತ್ರರೂ ಆಗಿ ಅಂತಃಪುರದಲ್ಲಿ ವಾಸಿಸುತ್ತಿರುವ ಧೊರೆಗೆ ದ್ವಾರಪಾಲಕರ ಮೂಲಕ ತಮ್ಮ ವಿಜ್ಞಾಪನೆಯನ್ನು ಕಳುಹಿಸುತ್ತಿರುವರು.

೧೮. ಆ ರಾಜನ ಎರಡು ಪಾದಗಳಿಗೆ ನಮಸ್ಕಾರ ಮಾಡುತ್ತಿರುವ ನರೇಂದ್ರರ ಕಿರೀಟಶ್ರೇಣಿಗಳ ಘರ್ಷಣವಾಗಿ ವ್ರಣಾಂಕದಿಂದ ಆ ಪಾದಗಳು ರಾಜಿಸುತ್ತವೆ.

ಸೇವಾಗತನರೇಂದ್ರೌಘವಿನಿಕೀರ್ಣೈಃ ಸಮಂತತಃ ಃ
ರತ್ನೈರ್ಭಾತಿ ಸಭಾ ತಸ್ಯ ಗುಹಾ ಸೌಮೇರವೀ ಯಥಾ ॥ ೧೯ ॥

ಏವಂ ಸ ರಾಜಾ ಧರ್ಮೇಣ ಭಾನುವಂಶಶಿಖಾಮಣಿಃ ।
ಅನನ್ಯಶಾಸನಾಮುರ್ವೀಮನ್ವಶಾಸದರಿಂದಮಃ ॥ ೨೦ ॥

ಇತ್ಥಂ ಪಾಲಯತಃ ಪೃಥ್ವೀಂ ಸಗರಸ್ಯ ಮಹೀಪತೇಃ ।
ನ ಚಾಪಸಾತ ಮುತ್ ಪುತ್ರಮುಖಾಲೋಕನಜೃಂಭಿತಾ ॥ ೨೧ ॥

ವಿನಾ ತಾಂ ದುಃಖಿತೋಽತ್ಯರ್ಥಂ ಚಿಂತಯಾಮಾಸ ನೈಕಧಾ ।
ಅಹೋ ಕಷ್ಟಮಪುತ್ರೋಽಹಮಸ್ಮಿನ್ವಂಶೇ ಧ್ರುವಂ ತು ಯತ್॥ ೨೨ ॥

ಪ್ರಯಾಂತಿ ನೂನಮಸ್ಮಾಕಂ ಪಿತರಃ ಪಿಂಡವಿಪ್ಲವಮ್ ।
ನಿರಯಾದಪಿ ಸತ್ಪುತ್ರೇ ಸಂಜಾತೇ ಪಿತರಃ ಕಿಲ ॥ ೨೩ ॥

---

೧೯. ಮತ್ತು ಸೇವಾರ್ಥವಾಗಿ ಬಂದ ನರೇಂದ್ರ ಶ್ರೇಣಿಯಿಂದ ಸುತ್ತಲೂ ಗೌರವದಿಂದ ಎರಚಲ್ಪಟ್ಟಿರುವ ರತ್ನಗಳಿಂದ ಆ ರಾಜನ ಆಸ್ಥಾನ ಸಭೆಯು ಸುಮೇರು ಪರ್ವತದ ಗುಹೆಯಂತೆ ಪ್ರಕಾಶಿಸುತ್ತಿದೆ.

೨೦. ಸೂರ್ಯನ ವಂಶಕ್ಕೆ ಶಿಖಾಮಣಿಯಂತೆ ಇರುವನೂ, ಶತ್ರುಂಜಯನೂ ಆದ ಆ ರಾಜನು ಬೇರೊಬ್ಬನ ಆಳ್ವಿಕೆಯಿಲ್ಲದ ಸಕಲ ಭೂಮಿಯನ್ನು ಹೀಗೆ ಧರ್ಮದಿಂದ ಪರಿಪಾಲಿಸಿದನು.

೨೧. ಈ ರೀತಿಯಾಗಿ ಭೂಮಿಯನ್ನು ಆಳುತ್ತಿದ್ದ ಸಗರ ರಾಜನಿಗೆ ಸಂತಾನವಿಲ್ಲದ್ದರಿಂದ ಪುತ್ರನ ಮುಖದರ್ಶನದಿಂದ ಲಭಿಸುವ ಸುಖಸಂಪತ್ತಿಯು ಮಾತ್ರ ಉಂಟಾಗಲಿಲ್ಲ.

೨೨. ಪುತ್ರಪ್ರಾಪ್ತಿ ಆನಂದವಿಲ್ಲದ ಆ ರಾಜನು ಅತಿಯಾಗಿ ದುಃಖಿತನಾಗಿ ಅನೇಕವಿಧವಾಗಿ ಚಿಂತಿಸಿದನು. ಅಯ್ಯೊ, ಕಷ್ಟವು, ಈ ವಂಶದಲ್ಲಿ ನಾನು ನಿಜವಾಗಿ ಅಪುತ್ರನಾಗಿರುವೆನು.

೨೩. ವಂಶಚ್ಛೇದವಾಗಿ ನನ್ನ ಪಿತೃಗಳು ನಿಜವಾಗಿ ಪಿಂಡಲೋಪವನ್ನು ಅನುಭವಿಸುತ್ತಾರೆ. ಸತ್ಪುತ್ರನು ಜನಿಸಿದರೆ ನರಕದಲ್ಲಿದ್ದ ಪಿತೃಗಳು ಕೂಡ ಪುತ್ರಮುಖದರ್ಶನಾನಂದವನ್ನು ಅನುಭವಿಸುತ್ತಾರಲ್ಲವೆ.

ಪ್ರೀತ್ಯಾ ಪ್ರಯಾಂತಿ ತದ್ಗೇಹಂ ಜಾತಕರ್ಮಕ್ರಿಯೋತ್ಸುಕಾಃ ।
ಮಹತಾ ಸುಕೃತೇನಾಪಿ ಸಂಪ್ರಾಪ್ತಸ್ಯ ದಿವಂ ಕಿಲ ॥ ೨೪ ॥

ಅಪುತ್ರಸ್ಯಾಮರಾಃ ಸ್ವರ್ಗೇ ದ್ವಾರಂ ನೋದ್ಘಾಟಯಂತಿ ಹಿ ।
ಪಿತಾ ತು ಲೋಕಮುಭಯೋಃ ಸ್ವರ್ಲೋಕಂ ತತ್ಪಿತಾಮಹಾಃ ॥ ೨೫ ॥

ಜೇಷ್ಯಂತಿ ಕಿಲ ಸತ್ಪುತ್ರೇ ಜಾತೇ ವಂಶದ್ವಯೇಽಪಿ ಚ ।
ಅನಪತ್ಯತಯಾಽಹಂ ತು ಪುತ್ರಿಣಾಂ ಯಾ ಭವೇದ್ಗತಿಃ ॥ ೨೬ ॥

ನ ತಾಂ ಪ್ರಾಪ್ಸ್ಯಾಮಿ ವೈ ನೂನಂ ಸುದುರ್ಲಭತರಾ ಹಿ ಸಾ ।
ಪದಾದೈಂದ್ರಾತ್ಕಿಲಾಭಿನ್ನಮೃದ್ಧಂ ರಾಜ್ಯಮಖಂಡಿತಮ್ ॥ ೨೭ ॥

ಮಮ ಯತ್ತದಪುಣ್ಯಸ್ಯ ಯಾತಿ ನಿಷ್ಫಲತಾಮಿಹ ।
ಇದಂ ಮತ್ಪೂರ್ವಜೈರೇವ ಸಿಹ್ಮಾಸನಮಧಿಷ್ಠಿತಮ್ ॥ ೨೮ ॥

---

೨೪. ನರಕಸ್ಥ ಪಿತೃಗಳು ಜಾತಕರ್ಮಾನುಷ್ಠಾನದಲ್ಲಿ ಆದರವುಳ್ಳವರಾಗಿ ಪುತ್ರನು ಜನಿಸಿದ ಗೃಹಕ್ಕೆ ಬರುವರು. ಪುತ್ರಮುಖಾವಲೋಕನವಿಲ್ಲದೆ ಹೆಚ್ಚು ಸುಕೃತರಾಶಿಯಿಂದ ಸ್ವರ್ಗಕ್ಕೆ ಹೋದರೂ ಅದು ವ್ಯರ್ಥವು.

೨೫. ದೇವತೆಗಳು ಅಪುತ್ರನಾಗಿ ಬಂದವನಿಗೆ ಸ್ವರ್ಗಲೋಕದ ದ್ವಾರವನ್ನು ತೆರೆಯುವುದಿಲ್ಲ. ಸತ್ಪುತ್ರಪ್ರಾಪ್ತಿಯಿಂದ ಪಿತನು ಇಹ-ಪರಲೋಕದ್ವಯವನ್ನೂ, ಪಿತಾಮಹರು ಸ್ವರ್ಗಲೋಕವನ್ನೂ ಜಯಿಸುವರು.

೨೬. ಪಿತೃ–ಮಾತೃವಂಶದ್ವಯದ ಪಿತೃಗಳು ಸತ್ಪುತ್ರ ಜನ್ಮದಿಂದ ಉತ್ತಮ ಲೋಕವನ್ನು ಜಯಿಸುವರು. ನಾನು ಸಂತತಿರಹಿತನಾದ್ದರಿಂದ ಪುತ್ರವಂತರಿಗೆ ಲಭಿಸುವ ಸದ್ಗತಿಯಿಂದ ದೂರನಾಗಿರುವೆನು.

೨೭. ಪುತ್ರಪ್ರಾಪ್ಯವಾದ ಸದ್ಗತಿಯನ್ನು ನಾನು ಹೊಂದುವುದಿಲ್ಲ. ನನ್ನ ಭಾಗ್ಯಕ್ಕೆ ಅದು ಅತಿ ದುರ್ಲಭವಾಗಿದೆ. ಅಖಂಡಿತವಾದ ಸಮೃದ್ಧರಾಜ್ಯಭೋಗವೆಂಬುದು ಇಂದ್ರಪದಕ್ಕೆ ಸಮಾನವಾದುದು.

೨೮. ಆದರೆ ಇಂತಹ ರಾಜ್ಯವು ಭಾಗ್ಯರಹಿತನಾದ ನನಗೆ ನಿಷ್ಪ್ರಯೋಜನವಾಗಿರುವುದು. ಅವಿಚ್ಛಿನ್ನವಾಗಿ ಈ ಸಿಹ್ಮಾಸನವು ನನ್ನ ಪೂರ್ವಜರಿಂದ ಅಲಂಕರಿಸಲ್ಪಟ್ಟಿರುವುದು.

**ಅಪುತ್ರತ್ವೇನ ರಾಜ್ಯಂ ಚ ಪರಾಧೀನತ್ವಮೇಷ್ಯತಿ ।**
**ತಸ್ಮಾದೌರ್ವಾಶ್ರಮಮಹಂ ಗತ್ವಾ ತಂ ಮುನಿಪುಂಗವಮ್ ॥ ೨೯ ॥**

**ಪ್ರಸಾದಯಿಷ್ಯೇ ಪುತ್ರಾರ್ಥಂ ಭಾರ್ಯಾಭ್ಯಾಂ ಸಹಿತೋಽಧುನಾ ।**
**ಗತ್ವಾ ತಸ್ಮೈ ತ್ವಪುತ್ರತ್ವಂ ವಿನಿವೇದ್ಯ ಮಹಾತ್ಮನೇ ॥ ೩೦ ॥**

**ಸ ಯದ್ವಕ್ಷ್ಯತಿ ತತ್ಸರ್ವಂ ಕರಿಷ್ಯೇ ನಾತ್ರ ಸಂಶಯಃ ।**
**ಇತಿ ಸಂಚಿಂತ್ಯ ಮನಸಾ ಸಗರೋ ರಾಜಸತ್ತಮಃ ॥ ೩೧ ॥**

**ಇತ್ಯೇಷ ಕೃತ್ಯವಿದ್ರಾಜನ್ ಗಂತುಮೌರ್ವಾಶ್ರಮಂ ಪ್ರತಿ ।**
**ಸ ಮಂತ್ರಿಪ್ರವರೇ ರಾಜ್ಯಂ ಪ್ರತಿಷ್ಠಾಪ್ಯ ತತೋ ವನಮ್ ॥ ೩೨ ॥**

**ಪ್ರಯಯೌ ರಥಮಾರುಹ್ಯ ಭಾರ್ಯಾಭ್ಯಾಂ ಸಹಿತೋ ಮುದಾ ।**
**ಜಗಾಮ ರಥಘೋಷೇಣ ಮೇಘನಾದಾತಿಶಂಕಿಭಿಃ ॥ ೩೩ ॥**

---

೨೯. ಅಂತಹ ಈ ರಾಜ್ಯವು ನನಗೆ ಸಂತತಿಯಿಲ್ಲದೆ ಪರಾಧೀನತೆಯನ್ನು ಹೊಂದುತ್ತದೆ. ಆದುದರಿಂದ ಈಗ ಮಹಾಮುನಿಯಾದ ಔರ್ವಮಹರ್ಷಿಯನ್ನು ಸಂದರ್ಶಿಸಲು ಆ ಮುನಿಯ ಆಶ್ರಮಕ್ಕೆ ಹೋಗುವೆನು.

೩೦. ಮತ್ತು ಅಲ್ಲಿ ಪತ್ನಿಯರಿಂದ ಸಮೇತನಾಗಿ ಆ ಮುನಿಯನ್ನು ಈಗ ಸೇವೆಯಿಂದ ಸುಪ್ರಸನ್ನನಾಗುವಂತೆ ಮಾಡುತ್ತೇನೆ. ಹಾಗು ಆ ಮಹಾತ್ಮನಿಗೆ ನನ್ನ ಅಪುತ್ರತ್ವವನ್ನು ವಿಜ್ಞಾಪಿಸಿಕೊಳ್ಳುತ್ತೇನೆ.

೩೧. ಆಗ ಮುನಿಯು ಯಾವುದನ್ನು ಆದೇಶಿಸುವನೋ ಅದೆಲ್ಲವನ್ನೂ ಮಾಡುವೆನು. ಇದರಲ್ಲಿ ಸಂದೇಹವಿಲ್ಲ. ರಾಜತಿಲಕನಾದ ಸಗರನು ಹೀಗೆಂದು ಮಾನಸದಲ್ಲಿ ಚಿಂತಿಸಿದನು.

೩೨. ರಾಜನೆ! ಕರ್ತವ್ಯಗಳನ್ನು ಅರಿತಿರುವ ರಾಜನು ಔರ್ವಮುನಿಯ ಆಶ್ರಮಕ್ಕೆ ತೆರಳಲು ತನ್ನ ಮಂತ್ರಿವರೇಣ್ಯನಲ್ಲಿ ರಾಜ್ಯಭಾರವನ್ನು ಇರಿಸಿ ಅನಂತರ ವನಕ್ಕೆ ಪ್ರಯಾಣಮಾಡಿದನು.

೩೩. ತನ್ನ ಧರ್ಮಪತ್ನಿಯರಿಂದ ಸಮೇತನಾಗಿ ರಥವನ್ನು ಹತ್ತಿ ಅರಣ್ಯಕ್ಕೆ ಹೋದನು. ಆಗ ನವಿಲುಗಳು ರಥದಿಂದಾಗುವ ಗಂಭೀರ ಶಬ್ದವನ್ನು ಮೇಘಗರ್ಜನೆಯೆಂದು ಶಂಕಿಸುತ್ತಲಿದ್ದುವು.

ಸ್ತಬ್ಧೇಕ್ಷಣೈರ್ಲಕ್ಷ್ಯಮಾಣೋ ಮಾರ್ಗೋಪಾಂತೇ ಶಿಖಂಡಿಭಿಃ ।
ಪ್ರಿಯಾಭ್ಯಾಂ ದರ್ಶಯನ್ ರಾಜನ್ ಸಾರಂಗಾಂಸ್ತಿಮಿತೇಕ್ಷಣಾನ್ ॥ ೩೪ ॥

ಕ್ಷಣಮೂರ್ಧ್ವಮುಖಾನ್ ಸದ್ಯಃ ಪಲಾಯನಪರಾನ್ ಪುನಃ ।
ವೃಕ್ಷಾನ್ ಪುಷ್ಪಫಲೋಪೇತಾನ್ ವಿಲೋಕ್ಯ ಮುದಿತೋಽಭವತ್ ॥ ೩೫ ॥

ಅಮ್ಲಾನಕುಸುಮೈಃ ಸ್ವಾದುಫಲೈಃ ಶಾದ್ವಲಭೂಮಿಕೈಃ ।
ಸುಸ್ನಿಗ್ಧಪಲ್ಲವಚ್ಛಾಯೈರಭಿತಃ ಸಂಭೃತಂ ನಗೈಃ ॥ ೩೬ ॥

ಚೂತಾಗ್ರಪಲ್ಲವಾಸ್ವಾದಸ್ನಿಗ್ಧಕಂಠಪಿಕಾರವೈಃ ।
ಶ್ರೋತ್ರಾಭಿರಾಮಜನಕೈಃ ಸಂಘುಷ್ಟಂ ಸರ್ವತೋದಿಶಮ್ ॥ ೩೭ ॥

ಸರ್ವರ್ತುಕುಸುಮೋಪೇತಂ ಭ್ರಮದ್ಭ್ರಮರಮಂಡಿತಮ್ ।
ಪ್ರಸೂನಸ್ತಬಕಾನಮ್ರವಲ್ಲರೀವೇಲ್ಲಿತದ್ರುಮಮ್ ॥ ೩೮ ॥

---

೩೪. ಮತ್ತು ಮಾರ್ಗದ ಪಾರ್ಶ್ವಭೂಮಿಯಲ್ಲಿ ನಿಂತು ಸ್ತಬ್ಧವಾದ ದೃಷ್ಟಿಗಳಿಂದ ರಾಜನನ್ನು ನೋಡುತ್ತಲಿದ್ದುವು. ಒಂದು ಕಡೆ ರಾಜನು ಪತ್ನಿಯರಿಗೆ ಸ್ತಬ್ಧದೃಷ್ಟಿಯುಳ್ಳ ಸಾರಂಗಗಳನ್ನು ತೋರಿಸುತ್ತಲಿದ್ದನು.

೩೫. ಆ ಸಾರಂಗಗಳು ಒಂದುಕ್ಷಣ ಊರ್ಧ್ವಮುಖವಾಗಿ ನೋಡುತ್ತ ಮತ್ತೊಂದು ಕ್ಷಣದಲ್ಲಿ ಪಲಾಯನವನ್ನು ಮಾಡುತ್ತಲಿದ್ದುವು. ಪಾರ್ಶ್ವಗಳಲ್ಲಿ ಫಲ–ಪುಷ್ಪಗಳಿಂದ ಕೂಡಿದ ವೃಕ್ಷಗಳನ್ನು ನೋಡಿ ರಾಜನು ಆನಂದಪಟ್ಟನು.

೩೬. ರಾಜನು ಪ್ರಯಾಣಮಾಡುತ್ತಲಿದ್ದ ತಪೋವನವು ಬಾಡದಿರುವ ಕೋಮಲಪುಷ್ಪ, ಮಧುರವಾದ ಫಲ, ಗರಿಕೆಗಳಿಂದ ತುಂಬಿದ ಭೂಮಿ, ದಟ್ಟವಾಗಿ ಬೆಳೆದ ಸೊಂಪಾದ ಪಲ್ಲವಛಾಯೆ ಇವುಗಳಿಂದ ಕೂಡಿದ ವೃಕ್ಷಗಳಿಂದ ರಮ್ಯವಾಗಿತ್ತು.

೩೭. ಮತ್ತು ಮಾವಿನ ಎಳೆಯ ಪಲ್ಲವಾಗ್ರಗಳ ಆಸ್ವಾದದಿಂದ ಮಧುರವಾದ ಸ್ನಿಗ್ಧಕಂಠವುಳ್ಳ ಕೋಗಿಲೆಗಳ ಶ್ರೋತ್ರಾನಂದವನ್ನು ಉಂಟುಮಾಡುವ ಧ್ವನಿಗಳಿಂದ ವನದ ನಾಲ್ಕು ದಿಕ್ಕುಗಳು ಶಬ್ದಮಯವಾಗಿದ್ದುವು.

೩೮. ಎಲ್ಲ ಋತುಗಳಲ್ಲಿ ಬಿಡುವ ಪುಷ್ಪಗಳಿಂದ ಕೂಡಿರುವುದೂ ಸಂಚರಿಸುತ್ತಿದ್ದ ಭ್ರಮರಗಳಿಂದ ಮಂಡಿತವೂ, ಮತ್ತು ಪುಷ್ಪಗಳ ಗೊಂಚಲುಗಳಿಂದ ಬಗ್ಗಿದ ಲತೆಗಳಿಂದ ವೇಷ್ಟಿಸಲ್ಪಟ್ಟ ವೃಕ್ಷಗಳಿಂದ ಶೋಭಿತವೂ ಆಗಿ ಆ ತಪೋವನವು ಪ್ರಕಾಶಮಾನವಾಗಿತ್ತು.

ಕಪಿಯೂಥಸಮಾಕ್ರಾಂತ ವನಸ್ಪತಿಶತಾವೃತಮ್ ।
ಉನ್ಮತ್ತಶಿಖಿಸಾರಂಗಕೂಜತ್ಪಕ್ಷಿಗಣಾನ್ವಿತಮ್ ॥ ೩೯ ॥

ಗಾಯದ್ವಿದ್ಯಾಧರವಧೂಗೀತಿಕಾಸುಮನೋಹರಮ್ ।
ಸಂಚರತ್ಕಿನ್ನರೀದ್ವಂದ್ವವಿರಾಜದ್ವನಗಹ್ವರಮ್ ॥ ೪೦ ॥

ಹಂಸಸಾರಸಚಕ್ರಾಹ್ವಕಾರಂಡವಶುಕಾದಿಭಿಃ ।
ಸುಸ್ವರೈರಾವೃತೋಪಾಂತೈಃ ಸರೋಭಿಃ ಪರಿವಾರಿತಮ್ ॥ ೪೧ ॥

ಸರಃಸ್ವಂಬುಜಕಲ್ಹಾರಕುಸುಮೋತ್ಪಲರಾಶಿಷು ।
ಶನೈಃ ಪರಿವಹನ್ಮಂದಮಾರುತಾಪೂರ್ಣದಿಙ್ಮುಖಮ್ ॥ ೪೨ ॥

ಏವಂವಿಧಗುಣೋಪೇತಮಧಿಗಾಹ್ಯ ತಪೋವನಮ್ ।
ಗಚ್ಛನ್ ರಥೇನಾಥ ನೃಪಃ ಪ್ರಹರ್ಷಂ ಪರಮಂ ಯಯೌ ॥ ೪೩ ॥

---

೩೯. ಮತ್ತು ಕಪಿಗಳ ಗುಂಪಿನಿಂದ ಆಕ್ರಮಿಸಲ್ಪಟ್ಟ ನೂರಾರು ವೃಕ್ಷಶ್ರೇಣಿಯಿಂದಲೂ ಮದಿಸಿದ ನವಿಲು, ಸಾರಂಗ, ಧ್ವನಿಗೈಯುವ ಅನೇಕ ಪಕ್ಷಿಗಣ ಇವುಗಳಿಂದಲೂ ರಮ್ಯವಾಗಿತ್ತು.

೪೦. ಮತ್ತು ಗಾನಮಾಡುತ್ತಲಿದ್ದ ವಿದ್ಯಾಧರ ವಧುಗಳ ಗಾನಸ್ವರದಿಂದ ಮನೋಹರವೂ, ಅಲ್ಲಲ್ಲಿ ಸಂಚರಿಸುವ ಕಿನ್ನರಕಾಮುಕರಿಂದ ರಾಜಿಸುವ ದುರ್ಗಮವನ ಭೂಮಿಯುಳ್ಳದ್ದೂ ಆಗಿತ್ತು.

೪೧. ಹಾಗು, ಹಂಸ, ಸಾರಸ, ಚಕ್ರವಾಕ, ಕಾರಂಡವ ಮತ್ತು ಶುಕ ಮುಂತಾದ ಸುಸ್ವರವಾಗಿ ಧ್ವನಿಮಾಡುವ ರಮ್ಯಪಕ್ಷಿಗಳು ಆಶ್ರಯಿಸಿರುವ ಅನೇಕ ಸರೋವರಗಳಿಂದ ಸುತ್ತಲ್ಪಟ್ಟಿತ್ತು.

೪೨. ತಾವರೆ, ಸೌಗಂಧಿಕ, ಬಿಳಿನೈದಿಲೆ, ಕನ್ನೈದಿಲೆ ಮುಂತಾದ ಪುಷ್ಪರಾಶಿಯುಳ್ಳ ಸರೋವರಗಳಲ್ಲಿ ಮಂದವಾಗಿ ಬೀಸುವ ಮಾರುತದಿಂದ ತಪೋವನದಿಗಂತವು ಪೂರ್ಣವಾಗಿತ್ತು.

೪೩. ಈ ವಿಧವಾದ ಗುಣಗಳಿಂದ ಕೂಡಿದ ತಪೋವನವನ್ನು ಪ್ರವೇಶಿಸಿ ರಥದಿಂದ ಪ್ರಯಾಣ ಬೆಳೆಸಿದ ರಾಜನು ರಮ್ಯಪ್ರಕೃತಿ ಸೌಂದರ್ಯದರ್ಶನದಿಂದ ಅತ್ಯಾನಂದವನ್ನು ಅನುಭವಿಸಿದನು.

ಉಪಶಾಂತಾಶಯಃ ಸೋಽಥ ಸಂಪ್ರಾಪ್ಯಾಶ್ರಮಮಂಡಲಮ್ ।
ಭಾರ್ಯಾಭ್ಯಾಂ ಸಹಿತಃ ಶ್ರೀಮಾನ್ ನಾಹಾದವರುರೋಹ ವೈ॥ ೪೪ ॥

ಧುರ್ಯಾನ್ ವಿಶ್ರಾಮಯೇತ್ಯುಕ್ತ್ವಾ ಯಂತಾರಮವನೀಪತಿಃ ।
ಆಸಸಾದಾಶ್ರಮೋಪಾಂತಂ ಮಹರ್ಷೇರ್ಭಾವಿತಾತ್ಮನಃ ॥ ೪೫ ॥

ಸ ಶ್ರುತ್ವಾ ಮುನಿಶಿಷ್ಯೇಭ್ಯಃ ಕೃತನಿತ್ಯಕ್ರಿಯಾದರಮ್ ।
ಮುನಿಂ ದ್ರಷ್ಟುಂ ವಿನೀತಾತ್ಮಾ ಪ್ರವಿವೇಶಾಶ್ರಮಂ ತದಾ ॥ ೪೬ ॥

ಮುನಿಮಧ್ಯೇ ಸಮಾಸೀನಮೃಷಿವೃಂದೈಃ ಸಮನ್ವಿತಮ್ ।
ನನಾಮ ಶಿರಸಾ ರಾಜಾ ಭಾರ್ಯಾಭ್ಯಾಂ ಸಹಿತೋ ಮುದಾ ॥ ೪೭ ॥

ಕೃತಪ್ರಣಾಮಂ ನೃಪತಿಮೃಷಿರೌರ್ವಃ ಪ್ರತಾಪವಾನ್ ।
ಉಪಾವಿಶೇತಿ ಪ್ರೇಮ್ಣಾ ವೈ ಸಹ ತಾಭ್ಯಾಂ ಸಮಾದಿಶತ್ ॥ ೪೮ ॥

---

೪೪. ಆಗ ಶಾಂತವಾದ ಅಂತಃಕರಣವುಳ್ಳವನಾಗಿ ಆಶ್ರಮಪಂಕ್ತಿಯ ಸಮೀಪವನ್ನು ಹೊಂದಿ ಭಾರ್ಯೆಯರಿಂದ ಸಮೇತನಾಗಿ ರಥದಿಂದ ಕೆಳಕ್ಕೆ ಇಳಿದನು.

೪೫. ರಾಜನು ಅಶ್ವಗಳಿಗೆ ವಿಶ್ರಾಂತಿಯನ್ನು ಕೊಡುವಂತೆ ಸಾರಥಿಗೆ ಆದೇಶವನ್ನು ಕೊಟ್ಟು ಸಂಸ್ಕೃತವಾದ ಶುದ್ಧ ಅಂತಕರಣವುಳ್ಳ ಮಹರ್ಷಿಯ ಆಶ್ರಮದ ಸಮೀಪಕ್ಕೆ ಹೋದನು.

೪೬. ಆಗ ರಾಜನು ಮುನಿಯ ಶಿಷ್ಯರಿಂದ ನಿತ್ಯಕರ್ಮಾನುಷ್ಠಾನವನ್ನು ಆದರದಿಂದ ಪೂರ್ತಿಗೊಳಿಸಿ ಮುನಿಯು ವಿಶ್ರಾಂತಿಯಿಂದಿರುವುದನ್ನು ಕೇಳಿ ಮುನಿಯನ್ನು ನೋಡಲು ನಮ್ರವಾದ ಅಂತಃಕರಣದಿಂದ ಅಶ್ರಮವನ್ನು ಪ್ರವೇಶಿಸಿದನು.

೪೭. ಅಲ್ಲಿ ಮಹರ್ಷಿ ಜನ ಮಧ್ಯದಲ್ಲಿ ಕುಳಿತುಕೊಂಡಿರುವ ಮತ್ತು ಅನೇಕ ಋಷಿಸಂಘದಿಂದ ಸೇವಿಸಲ್ಪಡುತ್ತಿದ್ದ ಔರ್ವಮುನಿಯನ್ನು ರಾಜನು ಭಾರ್ಯೆಯರಿಂದೊಡಗೂಡಿ ಸಂತೋಷದಿಂದ ತಲೆಬಾಗಿ ನಮಸ್ಕರಿಸಿದನು.

೪೮. ಪ್ರಭಾವವಂತನಾದ ಔರ್ವಮುನಿಯು ನಮಸ್ಕರಿಸಿ ನಿಂತಿರುವ ರಾಜನನ್ನು ನೋಡಿ ಪ್ರೇಮದಿಂದ ಭಾರ್ಯಾಸಹಿತನಾಗಿ ಕುಳಿತುಕೊಳ್ಳುವಂತೆ ಆದೇಶವನ್ನಿತ್ತನು.

ಅರ್ಘ್ಯಪಾದ್ಯಾದಿಭಿಃ ಸಮ್ಯಕ್ ಪೂಜಯಿತ್ವಾ ಮಹಾಮುನಿಃ ।
ಆತಿಥ್ಯೇನ ಚ ವನ್ಯೇನ ಸಭಾರ್ಯಂ ತಮತೋಷಯತ್ ॥ ೪೯ ॥

ಅಥಾತಿಥ್ಯೋಪವಿಶ್ರಾಂತಂ ಪ್ರಣಮ್ಯಾಸೀನಮಗ್ರತಃ ।
ರಾಜಾನಮಬ್ರವೀದೌರ್ವಃ ಶನೈರ್ಮೃದ್ವಕ್ಷರಂ ವಚಃ ॥ ೫೦ ॥

ಕುಶಲಂ ನನು ತೇ ರಾಜ್ಯೇ ಬಾಹ್ಯೇಷ್ವಾಭ್ಯಂತರೇಷು ಚ ।
ಅಪಿ ಧರ್ಮೇಣ ಸಕಲಾಃ ಪ್ರಜಾಸ್ತ್ವಂ ಪರಿರಕ್ಷಸಿ ॥ ೫೧ ॥

ಅಪಿ ಜೇತುಂ ತ್ರಿವರ್ಗಂ ತ್ವಮುಪಾಯೈಃ ಸಮ್ಯಗೀಹಸೇ ।
ಫಲಂತಿ ಹಿ ಗುಣಾಸ್ತುಭ್ಯಂ ತ್ವಯಾ ಸಮ್ಯಕ್ ಪ್ರಚೋದಿತಾಃ ॥ ೫೨ ॥

ದಿಷ್ಟ್ಯಾ ತ್ವಯಾ ಜಿತಾಃ ಸರ್ವೇ ರಿಪವೋ ನೃಪಸತ್ತಮ ।
ದಿಷ್ಟ್ಯಾ ಚ ಸಕಲಂ ರಾಜ್ಯಂ ತ್ವಯಾ ಧರ್ಮೇಣ ರಕ್ಷ್ಯತೇ ॥ ೫೩ ॥

---

೪೯. ಮತ್ತು ಮಹಾ ಮುನಿಯು ಅರ್ಘ್ಯ-ಪಾದ್ಯಾದಿ ಪರಿಕರಗಳಿಂದ ಚನ್ನಾಗಿ ಪೂಜೆಮಾಡಿ ಅರಣ್ಯದಲ್ಲಿ ಬೆಳೆದ ಕಂದ-ಮೂಲಾದಿ ಆತಿಥ್ಯವನ್ನು ಅರ್ಪಿಸಿ ಪತ್ನೀ ಸಮೇತನಾದ ಆ ರಾಜನನ್ನು ತೃಪ್ತಿಪಡಿಸಿದನು.

೫೦. ತರುವಾಯ ಆತಿಥ್ಯ ಸ್ವೀಕಾರದಿಂದ ವಿಶ್ರಾಂತಿ ಹೊಂದಿ ಮುಂದುಗಡೆಯಲ್ಲಿ ನಮಸ್ಕಾರಮಾಡಿ ಕುಳಿತಿರುವ ರಾಜನನ್ನು ಕುರಿತು ಔರ್ವಮುನಿಯು ಮೃದುವಾದ ವರ್ಣಗಳಿಂದ ಕೂಡಿದ ವಚನವನ್ನು ಮೆಲ್ಲಗೆ ಹೇಳಲಾರಂಭಿಸಿದನು.

೫೧. ರಾಜನೆ! ಬಾಹ್ಯ-ಆಭ್ಯಂತರವೆಂಬ ಸಕಲ ರಾಜ್ಯಾಂಗಗಳಲ್ಲಿಯೂ ನಿನಗೆ ಕುಶಲವು ಇದೆಯಲ್ಲವೆ? ನೀನು ನಿನ್ನ ಸಕಲ ಪ್ರಜೆಗಳನ್ನು ಧರ್ಮದಿಂದ ರಕ್ಷಿಸುವೆಯಾ?

೫೨. ನೀನು ಧರ್ಮ-ಅರ್ಥ-ಕಾಮಗಳೆಂಬ ತ್ರಿವರ್ಗವನ್ನು ಜಯಿಸಲು ಉಪಾಯದಿಂದ ಯತ್ನಿಸುತ್ತಿರುವೆಯಾ? ನಿನ್ನಿಂದ ಚನ್ನಾಗಿ ಪ್ರಯೋಗಿಸಲ್ಪಟ್ಟ ಗುಣಗಳು ನಿನಗೆ ಫಲದಾಯಕವಾಗಿ ಇವೆಯೆ?

೫೩. ರಾಜವರ್ಯನೆ! ನಿನ್ನಿಂದ ಸಮಸ್ತ ಶತ್ರು ರಾಜರು ಜಯಿಸಲ್ಪಟ್ಟಿರುವರು. ಆನಂದವು, ಸಕಲ ರಾಜ್ಯವು ನಿನ್ನಿಂದ ಧರ್ಮಮಾರ್ಗದಲ್ಲಿ ರಕ್ಷಿಸಲ್ಪಡುತ್ತಲಿದೆ, ಬಹಳ ಸಂತೋಷವು.

ಧರ್ಮ ಏವ ಸ್ಥಿತಿರ್ಯೇಷಾಂ ತೇಷಾಂ ನಾಸ್ತ್ಯತ್ರ ವಿಪ್ಲವಃ ।
ನ ತಂ ರಕ್ಷತಿ ಕಿಂ ಧರ್ಮಃ ಸ್ವಯಂ ಯೇನಾಭಿರಕ್ಷಿತಃ ॥ ೫೪ ॥

ಪೂರ್ವಮೇವಾಹಮಶ್ರೌಷಂ ವಿಜಿತ್ಯ ಸಕಲಾಂ ಮಹೀಮ್ ।
ಸಬಲೋ ನಗರೀಂ ಪ್ರಾಪ್ತಃ ಕೃತದಾರೋ ಭವಾನಿತಿ ॥ ೫೫ ॥

ರಾಜ್ಞಾಂ ತು ಪ್ರವರೋ ಧರ್ಮೋ ಯತ್ಪ್ರಜಾಪರಿಪಾಲನಮ್ ।
ಭವಂತಿ ಸುಖಿನೋ ನೂನಂ ತೇನೈವೇಹ ಪರತ್ರ ಚ ॥ ೫೬ ॥

ಸ ಭವಾನ್ ರಾಜ್ಯಭರಣಂ ಪರಿತ್ಯಜ್ಯ ಮದಂತಿಕಮ್ ।
ಭಾರ್ಯಾಭ್ಯಾಂ ಸಹಿತೋ ರಾಜನ್ ಸಮಾಯಾತೋಽಸಿ ಮೇ ವದ ॥ ೫೭ ॥

ಜೈಮಿನಿರುವಾಚ :—

ಏವಮುಕ್ತಸ್ತು ಮುನಿನಾ ಸಗರೋ ರಾಜಸತ್ತಮಃ ।
ಕೃತಾಂಜಲಿಪುಟೋ ಭೂತ್ವಾ ಪ್ರಾಹ ತಂ ಮಧುರಂ ವಚಃ ॥ ೫೮ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ಪಂಚಾಶತ್ತಮೋಽಧ್ಯಾಯಃ

---

೫೪. ಯಾವ ಮಾನವರಿಗೆ ಉಪಾಯಾಂತರವನ್ನು ಬಿಟ್ಟು ಕೇವಲ ಧರ್ಮದಲ್ಲಿಯೇ ಅವಲಂಬನವಿರುವುದೋ ಅವರಿಗೆ ಯಾವ ಹಾನಿಯೂ ಆಗಲಾರದು. ಯಾರಿಂದ ಧರ್ಮವು ರಕ್ಷಿಸಲ್ಪಟ್ಟಿರುವುದೋ ಅವನನ್ನು ಧರ್ಮವು ರಕ್ಷಿಸದೇ ಕೈಬಿಡುವುದೆ !

೫೫. ನೀನು ಸೈನ್ಯದೊಡನೆ ಹೊರಟು ಸಮಸ್ತ ಭೂಮಿಯನ್ನು ಜಯಿಸಿ ವಿವಾಹಿತನಾಗಿ ಪತ್ನೀ ಸಮೇತನಾಗಿ ನಗರವನ್ನು ಹೊಂದಿರುತ್ತಿಯೆಂಬುದನ್ನು ನಾನು ಮೊದಲು ಕೇಳಿರುತ್ತೇನೆ.

೫೬. ಪ್ರಜೆಗಳನ್ನು ಚೆನ್ನಾಗಿ ಪಾಲಿಸುವುದು ರಾಜರಿಗೆ ಉತ್ತಮವಾದ ಧರ್ಮವು. ಆ ಧರ್ಮದಿಂದಲೇ ನೀವು ನಿಜವಾಗಿ ಇಹ-ಪರಲೋಕಗಳಲ್ಲಿ ಸುಖ ಭೋಗಿಗಳು ಆಗುತ್ತೀರಿ.

೫೭. ರಾಜನೆ ! ಈಗ ನೀನು ರಾಜ್ಯಪರಿಪಾಲನವನ್ನು ಬಿಟ್ಟು ಈ ಭಾರ್ಯೆಯರೊಂದಿಗೆ ನನ್ನ ಸಮಿಾಪಕ್ಕೆ ಬಂದಿರುತ್ತೀಯೆ. ಇದರ ಕಾರಣವನ್ನು ನನಗೆ ಹೇಳು.

೫೮. ಜೈಮಿನಿ ಮುನಿಯು ಇಂತೆಂದನು :—ಔರ್ವಮುನಿಯಿಂದ ಈ ರೀತಿಯಾಗಿ ಹೇಳಲ್ಪಟ್ಟ ರಾಜಶ್ರೇಷ್ಠನಾದ ಸಗರ ಭೂಪತಿಯು ಅಂಜಲಿ ಕಟ್ಟಿಕೊಂಡವನಾಗಿ ಮುನಿಯನ್ನು ಕುರಿತು ಮಧುರವಾದ ವಚನವನ್ನು ಹೇಳಿದನು.

ಬ್ರಹ್ಮಾಂಡಪುರಾಣದಲ್ಲಿ ವುತ್ತರಾರ್ಧದಲ್ಲಿ ಐವತ್ತನೆಯ ಅಧ್ಯಾಯವು ಮುಗಿದುದು.

## ಏಕಪಂಚಾಶತ್ತಮೋಽಧ್ಯಾಯಃ

**ಸಗರ ಉವಾಚ :—**

**ಕುಶಲಂ ಮಮ ಸರ್ವತ್ರ ಮಹರ್ಷೇ ನಾತ್ರ ಸಂಶಯಃ ।**
**ಯಸ್ಯ ಮೇ ತ್ವಮನುಧ್ಯಾತಾ ಶಮಂ ಭಾರ್ಗವಸತ್ತಮ ॥ ೧ ॥**

**ಯಸ್ತಥಾ ಶಿಕ್ಷಿತಃ ಪೂರ್ವಮಸ್ತ್ರೇ ಶಸ್ತ್ರೇ ಚ ಸಾಂಪ್ರತಮ್ ।**
**ಸೋಽಹಂ ಕಥಮಶಕ್ತಃ ಸ್ಯಾಂ ಸಕಲಾರಿವಿನಿಗ್ರಹೇ ॥ ೨ ॥**

**ತ್ವಂ ಮೇ ಗುರುಃ ಸುಹೃದ್ದೈವಂ ಬಂಧುರ್ಮಿತ್ರಂ ಚ ಕೇವಲಮ್ ।**
**ನ ಹ್ಯನ್ಯಮಭಿಜಾನಾಮಿ ತ್ವಾಮೃತೇ ಪಿತರಂ ಚ ಮೇ ॥ ೩ ॥**

**ತ್ವಯೋಪದಿಷ್ಟೇನಾಸ್ತ್ರೇಣ ಸಕಲಾ ಭೂಭೃತೋ ಮಯಾ ।**
**ವಿಜಿತಾ ಯದನುಸ್ಮೃತ್ಯಾ ಶಕ್ತಿಃ ಸಾ ತಪಸಸ್ತವ ॥ ೪ ॥**

---

೧. ಸಗರ ರಾಜನು ಹೀಗೆ ಪ್ರತ್ಯುತ್ತರವಿತ್ತನು :—ಮಹರ್ಷಿಯೆ ! ಭೃಗು ವಂಶ ಮುನಿವರ್ಯನಾದ ನೀನು ನನ್ನ ಕ್ಷೇಮವನ್ನು ಚಿಂತಿಸುತ್ತಿರುವುದರಿಂದ ನನಗೆ ಎಲ್ಲ ಅಂಶಗಳಲ್ಲಿಯೂ ಕುಶಲವಿರುವುದು. ಇದಕ್ಕೆ ಸಂದೇಹವಿಲ್ಲ.

೨. ಮೊದಲು ಯಾವ ನಾನು ಅಸ್ತ್ರ ಮತ್ತು ಶಸ್ತ್ರ ವಿದ್ಯೆಗಳಲ್ಲಿ ಅಪರಿಮಿತ ವಾಗಿ ಶಿಕ್ಷಿಸಲ್ಪಟ್ಟಿರುವೆನೊ, ಅಂತಹ ನಾನು ಈಗ ಸಕಲ ಶತ್ರುಗಳನ್ನು ನಿಗ್ರಹಿಸುವ ಕಾರ್ಯದಲ್ಲಿ ಹೇಗೆ ಅಶಕ್ತನಾಗುವೆನು ?

೩. ಮುನಿಯೆ ! ನನಗೆ ಗುರು, ಮಿತ್ರ, ದೈವ, ಬಂಧು, ಹಿತಾಕಾಂಕ್ಷೀ-ಎಲ್ಲ ನೀನೊಬ್ಬನೆ ಆಗಿರುತ್ತೀ. ನಿನ್ನನ್ನು ಬಿಟ್ಟು ಮತ್ತಾರನ್ನೂ ಅಥವಾ ನನ್ನ ತಂದೆ ಯನ್ನು ಕೂಡ ನಾನು ಅರಿಯೆನು.

೪. ಹಿಂದೆ ನಿನ್ನಿಂದ ಉಪದೇಶಿಸಲ್ಪಟ್ಟಿರುವ ಅಸ್ತ್ರ ಬಲದಿಂದ ಎಲ್ಲ ರಾಜರೂ ನನ್ನಿಂದ ಪರಾಜಯಗೊಳಿಸಲ್ಪಟ್ಟರು. ಅದನ್ನು ನೆನೆಸಿಕೊಂಡರೆ ಅದೆಲ್ಲ ನಿನ್ನ ಮಹಾ ತಪೋಬಲವು.

ತಪಸಾ ತ್ವಂ ಜಗತ್ಸರ್ವಂ ಪುನಾಸಿ ಪರಿಪಾಸಿ ಚ ।
ಸ್ರಷ್ಟುಂ ಸಂಹರ್ತುಮಪಿ ಚ ಶಕ್ನೋಽಸ್ಯೇವ ನ ಸಂಶಯಃ || ೫ ||

ಮಹಾನನನ್ಯಸಾಮಾನ್ಯಪ್ರಭಾವಸ್ತಪಸಶ್ಚ ತೇ ।
ಇಹ ತಸ್ಯೈಕದೇಶೋಽಪಿ ದೃಶ್ಯತೇ ವಿಸ್ಮಯಪ್ರದಃ || ೬ ||

ಪಶ್ಯ ಸಿಹ್ಮಾಸನೇ ಬಾಲ್ಯಾದುಪೇತ್ಯ ಮೃಗಪೋತಕಃ ।
ಪಿಬತ್ಯಂಭಃ ಶನೈರ್ಬ್ರಹ್ಮನ್ ನಿಃಶಂಕಂ ತೇ ತಪೋವನೇ || ೭ ||

ಧಯತ್ಯತ್ರಾತಿವಿಸ್ರಂಭಾತ್ ಕೃಶಾಪಿ ಹರಿಣೀಸ್ತನಮ್ ।
ಕರೋತಿ ಮೃಗಶೃಂಗಾಗ್ರೇ ಗಂಡಕಂಡೂಯನಂ ರುರುಃ || ೮ ||

ನವಪ್ರಸೂತಾಂ ಹರಿಣೀಂ ಹತ್ವಾ ವೃತ್ತ್ಯೈ ವನಾಂತರೇ ।
ವ್ಯಾಘ್ರೀ ತ್ವತ್ತಪಸಾವಾಸೇ ಸೈವ ಪುಷ್ಣಾತಿ ತಚ್ಛಿಶೂನ್ || ೯ ||

---

೫. ನೀನು ತಪೋಮಹಿಮೆಯಿಂದ ಸಮಸ್ತ ಜಗತ್ತನ್ನು ಪವಿತ್ರವನ್ನಾಗಿ ಮಾಡುತ್ತಿ, ಪರಿಪಾಲನಮಾಡುತ್ತಿ, ಮತ್ತು ಸೃಷ್ಟಿ-ಸಂಹಾರಗಳನ್ನು ಮಾಡಲು ಶಕ್ತನಾಗಿದ್ದಿ. ಇದರಲ್ಲಿ ಯಾವ ಸಂಶಯವೂ ಇಲ್ಲ.

೬. ಇತರ ಜನರಿಗೆ ಸಾಮಾನ್ಯವಾಗಿ ಇಲ್ಲದ ನಿನ್ನ ತಪಸ್ಸಿನ ಪ್ರಭಾವವು ಅಗಾಧವಾದುದು. ಈಗ ಆ ತಪಸ್ಸಿನ ಒಂದು ಅಂಶವು ಕೂಡ ಅತಿ ವಿಸ್ಮಯವನ್ನು ಉಂಟುಮಾಡುವುದಾಗಿ ಕಾಣುತ್ತಿದೆ.

೭. ಬ್ರಹ್ಮರ್ಷಿಯೆ! ಸಿಹ್ಮಗಳಿಗೆ ಆಶ್ರಯವಾದ ಈ ತಪೋವನದಲ್ಲಿ ಬಾಲ್ಯದಿಂದ ಅರಿಯದ ಜಿಂಕೆಯ ಮರಿಯು ನಿಶ್ಶಂಕವಾಗಿ ಮೆಲ್ಲಗೆ ನೀರನ್ನು ಕುಡಿಯುತ್ತಿದೆ. ನೋಡು.

೮. ಮತ್ತು ಇಲ್ಲಿ ಅತ್ಯಂತ ವಿಶ್ವಾಸದಿಂದ ಕೃಶವಾದ ಜಿಂಕೆಯ ಮರಿಯು ಜಿಂಕೆಯ ಸ್ತನವನ್ನು ಪಾನಮಾಡುತ್ತದೆ. ಇನ್ನೊಂದು ಜಿಂಕೆಯು ಮೃಗಶೃಂಗಾಗ್ರದಲ್ಲಿ ಕಪೋಲದ ನವೆಯನ್ನು ಉಜ್ಜಿಕೊಳ್ಳುತ್ತಿದೆ.

೯. ವನಮಧ್ಯದಲ್ಲಿ ವ್ಯಾಘ್ರಾಂಗನೆಯು ಆಗ ತಾನೆ ಪ್ರಸವಿಸಿದ ಹೆಣ್ಣು ಜಿಂಕೆಯನ್ನು ಆಹಾರಾರ್ಥವಾಗಿ ಕೊಂದು ನಿನ್ನ ತಪೋಬಲದಿಂದ ಆ ಜಿಂಕೆಯ ಶಿಶುಗಳನ್ನು ತಾನು ಪೋಷಿಸುತ್ತಿದೆ.

21

ಗಜಂ ದ್ರುತಮನುದ್ರುತ್ಯ ಸಿಹ್ಮೋ ಯಸ್ಮಾದಿದಂ ವನಮ್ ।
ಪ್ರವಿಷ್ಟೋಽನುಸರಂತೌ ತ್ವದ್ಭಯಾದೇಕತ್ರ ತಿಷ್ಠತಃ ॥ ೧೦ ॥

ನಕುಲಸ್ತ್ವಾಖುಮಾರ್ಜಾರಮಯೂರಶಶಪನ್ನಗಾಃ ।
ವೃಕಸೂಕರಶಾರ್ದೂಲಶರಭರ್ಕ್ಷಪ್ಲವಂಗಮಾಃ ॥ ೧೧ ॥

ಸೃಗಾಲಾ ಗವಯಾ ಗಾವೋ ಹರಿಣಾ ಮಹಿಷಾಸ್ತಥಾ ।
ವನೇಽತ್ರ ಸಹಜಂ ವೈರಂ ಹಿತ್ವಾ ಮೈತ್ರೀಮುಪಾಗತಾಃ ॥ ೧೨ ॥

ಏವಂವಿಧಾ ತಪಃಶಕ್ತಿರ್ಲೋಕವಿಸ್ಮಯದಾಯಿನೀ ।
ನ ಕ್ವಾಪಿ ದೃಶ್ಯತೇ ಬ್ರಹ್ಮನ್ ತ್ವಾಮೃತೇ ಭುವಿ ದುರ್ಲಭಾ ॥ ೧೩ ॥

ಅಹಂ ತು ತ್ವತ್ಪ್ರಸಾದೇನ ವಿಜಿತ್ಯ ವಸುಧಾಮಿಮಾಮ್ ।
ರಿಪುಭಿಃ ಸಹ ವಿಪ್ರರ್ಷೇ ಸ್ವರಾಜ್ಯಂ ಸಮುಪಾಗತಃ ॥ ೧೪ ॥

---

೧೦. ಆನೆಯನ್ನು ವೇಗವಾಗಿ ಹಿಂದಟ್ಟಿಕೊಂಡು ಬಂದ ಸಿಹ್ಮವು ಈ ವನವನ್ನು ಪ್ರವೇಶಿಸಿದ ಕೂಡಲೆ ನಿನ್ನ ತಪೋಮಹಿಮೆಯ ವ್ಯಾಪ್ತಿಯಿಂದ ಆ ಸಿಹ್ಮ-ಗಜಗಳು ಪರಸ್ಪರವಾಗಿ ಅನುಸರಿಸಿಕೊಂಡು ಒಂದು ಪ್ರದೇಶದಲ್ಲಿ ನಿಂತುಕೊಂಡಿರುವುವು.

೧೧. ಮತ್ತು ಮುಂಗಸಿ, ಇಲಿ, ಬೆಕ್ಕು, ನವಿಲು, ಮೊಲ, ಸರ್ಪ, ತೋಳ, ಹಂದಿ, ಶಾರ್ದೂಲ, ಶರಭ, ಕರಡಿ, ಮತ್ತು ಕೋತಿ—ಈ ಪ್ರಾಣಿಗಳು ಪರಸ್ಪರ ಹಿಂಸಕತ್ವವನ್ನು ಬಿಟ್ಟು ಇಲ್ಲಿ ಸುಖವಾಗಿರುವುವು.

೧೨. ಮತ್ತು ನರಿ, ಗವಯ, ಗೋವು, ಜಿಂಕೆ, ಕೋಣ-ಮುಂತಾದ ಎಲ್ಲ ಪ್ರಾಣಿಗಳು ಈ ವನದಲ್ಲಿ ತಮ್ಮ ಸಹಜ ವೈರವನ್ನು ಬಿಟ್ಟು ಮೈತ್ರಿಯನ್ನು ಹೊಂದಿ ವಿಶ್ವಾಸದಿಂದ ವರ್ತಿಸುವುವು.

೧೩. ಬ್ರಹ್ಮರ್ಷಿಯೆ! ಲೋಕಗಳಿಗೆ ವಿಸ್ಮಯವನ್ನು ಉಂಟುಮಾಡುವ ಈ ವಿಧವಾದ ತಪಃಶಕ್ತಿಯು ಭೂಮಿಯಲ್ಲಿ ನಿನ್ನನ್ನು ಬಿಟ್ಟು ಮತ್ತಾರಲ್ಲಿಯೂ ಕಂಡು ಬರುವುದಿಲ್ಲ.

೧೪. ವಿಪ್ರರ್ಷಿಯೆ! ನಾನು ನಿನ್ನ ಪ್ರಸಾದದಿಂದ ಈ ನಿಖಿಲವಾದ ಭೂಮಂಡಲವನ್ನು ಗೆದ್ದು ಅಧೀನರಾಗಿರುವ ಈ ಶತ್ರುಗಳೊಡನೆ ನನ್ನ ರಾಜ್ಯಕ್ಕೆ ಹಿಂತಿರುಗಿ ಬಂದಿರುವೆನು.

ವಶ್ಯಾಮಾತ್ಯಸ್ತ್ರಿವರ್ಗೇಽಪಿ ಯಥಾಯೋಗ್ಯಕೃತಾದರಃ ।
ತ್ವಯೋಪದಿಷ್ಟಮಾರ್ಗೇಣ ಸಮ್ಯಗ್ರಾಜ್ಯಮಪಾಲಯಮ್ ॥ ೧೫ ॥

ಏವಂ ಪ್ರವರ್ತಮಾನಸ್ಯ ಮಮ ರಾಜ್ಯೇಽವತಿಷ್ಠತಃ ।
ಭವದ್ದಿದೃಕ್ಷಾ ಸಂಜಾತಾ ಸಾಪೇಕ್ಷಾ ಭೃಗುಪುಂಗವ ॥ ೧೬ ॥

ಕಿಂತ್ವದ್ಯ ಮಯಿ ಪರ್ಯಾಪ್ತಮನಪತ್ಯತಯೈವ ಮೇ ।
ಪಿತೃಪಿಂಡಪ್ರದಾನೇನ ಸಹ ಸಂರಕ್ಷಣಂ ಭುವಃ ॥ ೧೭ ॥

ತದಿದಂ ದುಃಖಮತ್ಯರ್ಥಮನಿವಾರ್ಯಂ ಮನೋಗತಮ್ ।
ನಾನ್ಯೋಽಪಹರ್ತಾ ಲೋಕೇಽಸ್ಮಿನ್ ಮಮೇತಿ ತ್ವಾಮುಪಾಗತಃ ॥ ೧೮ ॥

ಇತ್ಯುಕ್ತಃ ಸಗರೇಣಾಥ ಸ್ಥಿತ್ವಾ ಸೋಽಂತರ್ಮನಾಃ ಕ್ಷಣಮ್ ।
ಉವಾಚ ಭಗವಾನೌರ್ವಃ ಸನಿದೇಶಮಿದಂ ವಚಃ ॥ ೧೯ ॥

---

೧೫. ಮತ್ತು ಅಧೀನರಾಗಿರುವ ಮಂತ್ರಿವರ್ಗವುಳ್ಳವನಾಗಿ ಧರ್ಮ-ಅರ್ಥ-ಕಾಮಗಳೆಂಬ ತ್ರಿವರ್ಗದಲ್ಲಿ ಯಥಾಯೋಗ್ಯವಾದ ಆದರವನ್ನು ಇಟ್ಟವನಾಗಿ ನಿನ್ನಿಂದ ಉಪದೇಶಿಸಲ್ಪಟ್ಟ ಮಾರ್ಗದಿಂದ ರಾಜ್ಯವನ್ನು ಚನ್ನಾಗಿ ಪಾಲಿಸಿದೆನು.

೧೬. ಭೃಗುವಂಶ ತಿಲಕನಾದ ಮುನಿಯೆ! ಈ ರೀತಿಯಾಗಿ ಪ್ರವರ್ತಿಸಿ ರಾಜ್ಯವನ್ನಾಳುತ್ತಿದ್ದ ನನಗೆ ಒಂದು ಆಕಾಂಕ್ಷಾವಿಶೇಷದಿಂದ ನಿನ್ನನ್ನು ಸಂದರ್ಶನ ಮಾಡುವ ಇಚ್ಛೆಯು ಉದಯಿಸಿತು.

೧೭. ಇಷ್ಟು ಸಮೃದ್ಧಿಯಿದ್ದರೂ ನನಗೆ ಸಂತತಿಯಿಲ್ಲದ್ದರಿಂದ ಪಿತೃಗಳಿಗೆ ಪಿಂಡ ಪ್ರದಾನ ಮಾಡುವುದರ ಜೊತೆಯಲ್ಲಿ ಭೂಮಿಯ ಪರಿಪಾಲನವೆಂಬ ಈ ಧರ್ಮಾನುಷ್ಠಾನವು ನನ್ನ ವಂಶದಲ್ಲಿ ನನ್ನಲ್ಲಿಯೇ ಸಮಾಪ್ತಿ ಹೊಂದುವುದು.

೧೮. ಅತಿಯಾಗಿ ಪೀಡಿಸುವ ಮನೋಗತವಾದ ಆ ದುಃಖವು ಅನಿವಾರ್ಯವಾಗಿರುವುದು. ಈ ಲೋಕದಲ್ಲಿ ನನ್ನ ಈ ದುಃಖವನ್ನು ನಿವಾರಿಸುವವರು ಮತ್ತಾರೂ ಇಲ್ಲವೆಂದು ಅರಿತು ನಿನ್ನ ಬಳಿಗೆ ಬಂದಿರುವೆನು.

೧೯. ಸಗರ ರಾಜನಿಂದ ಈ ರೀತಿಯಾಗಿ ಹೇಳಲ್ಪಟ್ಟ ಭಗವಂತನಾದ ಆ ಔರ್ವಮುನಿಯು ಸ್ವಲ್ಪ ಹೊತ್ತು ಪ್ರತ್ಯಗ್ದೃಷ್ಟಿಯಿಂದ ಇದ್ದು ಆದೇಶಪೂರ್ವಕವಾಗಿ ಈ ವಚನವನ್ನು ಹೇಳಿದನು.

ನಿಯಮ್ಯ ಸಹ ಭಾರ್ಯಾಭ್ಯಾಂ ಕಿಂಚಿತ್ಕಾಲಮಿಹಾವಸ ।
ಅವಾಪ್ಸ್ಯತಿ ತತೋಽಭೀಷ್ಟಂ ಭವಾನ್ನಾತ್ರ ವಿಚಾರಣಾ ॥ ೨೦ ॥

ಸ ಚ ತತ್ರಾವಸತ್ ಪ್ರೀತಸ್ತಚ್ಛುಶ್ರೂಷಾಪರಾಯಣಃ ।
ಪತ್ನೀಭ್ಯಾಂ ಸಹ ಧರ್ಮಾತ್ಮಾ ಭಕ್ತಿಯುಕ್ತಶ್ಚಿರಂ ತದಾ ॥ ೨೧ ॥

ರಾಜಪತ್ನ್ಯೌ ಚ ತೇ ತಸ್ಯ ಸರ್ವಕಾಲಮತಂದ್ರಿತೇ ।
ಮುನೇರತನುತಾಂ ಪ್ರೀತಿಂ ವಿನಯಾಚಾರಭಕ್ತಿಭಿಃ ॥ ೨೨ ॥

ಭಕ್ತ್ಯಾ ಶುಶ್ರೂಷಯಾ ಚೈವ ತಯೋಸ್ತುಷ್ಟೋ ಮಹಾಮುನಿಃ ।
ರಾಜಪತ್ನ್ಯೌ ಸಮಾಹೂಯ ಇದಂ ವಚನಮಬ್ರವೀತ್ ॥ ೨೩ ॥

ಭವತ್ಯೌ ವರಮಸ್ಮತ್ತೋ ವ್ರಿಯತಾಂ ಕಾಮಮೀಪ್ಸಿತಮ್ ।
ದಾಸ್ಯಾಮಿ ತಂ ನ ಸಂದೇಹೋ ಯದ್ಯಪಿ ಸ್ಯಾತ್ಸುದುರ್ಲಭಮ್ ॥ ೨೪ ॥

---

೨೦. ಕರಣಗಳನ್ನು ನಿಗ್ರಹಿಸಿ ಭಾರ್ಯೆಯರಿಂದ ಸಹಿತನಾಗಿ ಕೆಲವು ಕಾಲ ಇಲ್ಲಿಯೇ ವಾಸಮಾಡು. ತರುವಾಯ ನೀನು ನಿನ್ನ ಇಷ್ಟವನ್ನು ಹೊಂದುತ್ತೀ. ಈ ವಿಷಯದಲ್ಲಿ ಇನ್ನೇನೂ ವಿಚಾರ ಮಾಡಬೇಡ.

೨೧. ಆಗ ಆ ರಾಜನು ಧರ್ಮಾತ್ಮನೂ, ಭಕ್ತಿಯಿಂದ ಕೂಡಿದವನೂ ಆಗಿ ಪತ್ನೀ ಸಮೇತನಾಗಿ ಆ ಮುನಿಯ ಶುಶ್ರೂಷೆ ಮಾಡುವುದರಲ್ಲಿ ಆಸಕ್ತಿಯಿಂದ ಸುಪ್ರೀತನಾಗಿ ಆ ಆಶ್ರಮದಲ್ಲಿ ಬಹಳ ಕಾಲ ವಾಸಮಾಡಿದನು.

೨೨. ಆ ರಾಜನ ರಾಜಪತ್ನಿಯರೂ ಕೂಡ ಎಲ್ಲ ಸಮಯಗಳಲ್ಲಿಯೂ ಆಲಸ್ಯ ವಿಲ್ಲದೆ ವಿನಯ-ಆಚಾರ-ಭಕ್ತಿಗಳ ಅನುಷ್ಠಾನಗಳಿಂದ ಆ ಮುನಿಗೆ ಅತಿಶಯವಾದ ಪ್ರೀತಿಯನ್ನು ಉಂಟುಮಾಡಿದರು.

೨೩. ಅವರ ಭಕ್ತಿ, ಶುಶ್ರೂಷೆಗಳಿಂದ ಸಂತುಷ್ಟನಾದ ಆ ಮಹಾ ಮುನಿಯು ಆಗ ರಾಜಪತ್ನಿಯರನ್ನು ಸಮೀಪಕ್ಕೆ ಕರೆದು ಈ ಮಾತನ್ನು ಹೇಳಿದನು.

೨೪. ರಾಜಪತ್ನಿಯರೆ! ನೀವು ನಿಮ್ಮ ಇಷ್ಟವಾದ ವರವನ್ನು ನನ್ನಲ್ಲಿ ಪ್ರಾರ್ಥಿಸಿ ಕೊಳ್ಳಿರಿ, ಒಂದುವೇಳೆ ದುರ್ಲಭವಾಗಿದ್ದರೂ ಅಂತಹ ವರವನ್ನು ನಾನು ಕೊಡುವೆನು, ಸಂದೇಹವಿಲ್ಲ.

ತತಃ ಪ್ರಣಮ್ಯ ಶಿರಸಾ ತೇಽಪ್ಯುಭೇ ತಂ ಮಹಾಮುನಿಮ್ ।
ಊಚತುರ್ಭಗವಾನ್ ಪುತ್ರಾನ್ ಕಾಮಯಾವೇತಿ ಸಾದರಮ್ ॥ ೨೫ ॥

ತತಸ್ತೇ ಭಗವಾನಾಹ ಭವತೀಭ್ಯಾಂ ಮಯಾ ಪುನಃ ।
ರಾಜ್ಞಶ್ಚ ಪ್ರಿಯಕಾಮೇನ ವರೋ ದತ್ತೋಽಯಮೀಪ್ಸಿತಃ ॥ ೨೬ ॥

ಪುತ್ರವತ್ಯೌ ಮಹಾಭಾಗೇ ಭವತ್ಯೌ ಮತ್ಪ್ರಸಾದತಃ ।
ಭವೇತಾಂ ಧ್ರುವಮನ್ಯಚ್ಚ ಶ್ರೂಯತಾಂ ವಚನಂ ಮಮ ॥ ೨೭ ॥

ಪುತ್ರೋ ಭವಿಷ್ಯತ್ಯೇಕಸ್ಯಾಮೇಕಃ ಸೋಽನತಿಧಾರ್ಮಿಕಃ ।
ತಥಾಪಿ ತಸ್ಯ ಕಲ್ಪಾಂತಂ ಸಂಭೂತಿಶ್ಚ ಭವಿಷ್ಯತಿ ॥ ೨೮ ॥

ಷಷ್ಟಿಃ ಪುತ್ರಸಹಸ್ರಾಣಾಮಪರಸ್ಯಾಂ ಚ ಜಾಯತೇ ।
ಅಕೃತಾರ್ಥಾಶ್ಚ ತೇ ಸರ್ವೇ ವಿನಂಕ್ಷ್ಯಂತ್ಯಚಿರಾದಿವ ॥ ೨೯ ॥

---

೨೫. ಆಗ ಅವರಿಬ್ಬರೂ ಆ ಮುನಿಯನ್ನು ತಲೆಬಾಗಿಸಿ ನಮಸ್ಕಾರಮಾಡಿ ಭಗವಂತನೇ ! ನಾವು ಪುತ್ರಸಂತಾನವನ್ನು ಬಯಸುತ್ತೇವೆ ಎಂದು ಆದರದಿಂದ ಹೇಳಿದರು.

೨೬. ಆಗ ಪೂಜ್ಯನಾದ ಮುನಿಯು ರಾಜನಿಗೆ ಪ್ರಿಯವನ್ನು ಉಂಟುಮಾಡುವ ಇಷ್ಟವುಳ್ಳ ನನ್ನಿಂದ ನಿಮಗೆ ಇಷ್ಟವಾದ ವರವು ಕೊಡಲ್ಪಟ್ಟಿರುವುದು ಎಂದು ರಾಜ ಪತ್ನಿಯರಿಗೆ ಹೇಳಿದನು.

೨೭. ಮಹಾಭಾಗ್ಯಶಾಲಿಗಳಾದ ನೀವಿಬ್ಬರು ನನ್ನ ಅನುಗ್ರಹದಿಂದ ತಪ್ಪದೇ ಪುತ್ರವತಿಯರಾಗಿ. ಅಲ್ಲದೇ ನನ್ನ ಮತ್ತೊಂದು ವಚನವು ನಿಮ್ಮಿಂದ ಕೇಳಲ್ಪಡಲಿ.

೨೮. ನಿಮ್ಮಿಬ್ಬರ ಪೈಕಿ ಒಬ್ಬಳಲ್ಲಿ ಒಬ್ಬ ಪುತನು ಜನಿಸುವನು. ಅವನು ಅತ್ಯಂತ ಧಾರ್ಮಿಕನಾಗಿರುವುದಿಲ್ಲ. ಆದರೆ ಅವನ ವಂಶವು ಕಲ್ಪಾಂತದವರೆಗೂ ಅವಿಚ್ಛಿನ್ನವಾಗಿ ಪ್ರವರ್ತಿಸುವುದು.

೨೯. ಮತ್ತೊಬ್ಬಳಲ್ಲಿ ಅರವತ್ತು ಸಹಸ್ರ ಪುತ್ರರು ಹುಟ್ಟುವರು. ಆದರೆ ಅವರು ಯಾವ ಅರ್ಥವನ್ನೂ ನೆರವೇರಿಸದೆ ಅಕೃತಾರ್ಥರಾಗಿ ಎಲ್ಲರೂ ಶೀಘ್ರವಾಗಿ ನಾಶಹೊಂದುವರು.

ಏವಂವಿಧಗುಣೋಪೇತೌ ವರೌ ದತ್ತೌ ಮಯಾ ಯುವಾಮ್ ।
ಅಭೀಪ್ಸಿತಂ ತು ಯದ್ಯಸ್ಯಾಃ ಸ್ವೇಚ್ಛಯಾ ತತ್ಪ್ರಕೀರ್ತ್ಯತಾಮ್॥ ೩೦ ॥

ಏವಮುಕ್ತೇ ತು ಮುನಿನಾ ವೈದರ್ಭ್ಯನ್ವಯವರ್ಧನಮ್ ।
ವರಯಾಮಾಸ ತನಯಂ ಪುತ್ರಾನನ್ಯಾಂಸ್ತಥಾ ಪರಾ ॥ ೩೧ ॥

ಇತಿ ದತ್ವಾ ವರಂ ರಾಜ್ಞೇ ಸಗರಾಯ ಮಹಾಮುನಿಃ ।
ಸ ಭಾರ್ಯಮನುಮಾನ್ಯೈನಂ ವಿಸಸರ್ಜ ಪುರೀಂ ಪ್ರತಿ ॥ ೩೨ ॥

ಮುನಿನಾ ಸಮನುಜ್ಞಾತಃ ಕೃತಕೃತ್ಯೋ ಮಹೀಪತಿಃ ।
ರಥಮಾರುಹ್ಯ ವೇಗೇನ ಸಪ್ರಿಯಃ ಪ್ರಯಯೌ ಪುರೀಮ್ ॥ ೩೩ ॥

ಸ ಪ್ರವಿಶ್ಯ ಪುರೀಂ ರಮ್ಯಾಂ ಹೃಷ್ಟಪುಷ್ಟಜನಾವೃತಾಮ್ ।
ಆನಂದಿತಃ ಪೌರಜನೈ ರೇಮೇ ಪರಮಯಾ ಮುದಾ ॥ ೩೪ ॥

---

೩೦. ಈ ವಿಲಕ್ಷಣ ಗುಣಗಳಿಂದ ಕೂಡಿದ ವರಗಳು ನನ್ನಿಂದ ನಿಮಗೆ ಕೊಡಲ್ಪಟ್ಟಿವೆ. ನಿಮ್ಮಿಬ್ಬರಲ್ಲಿ ಯಾರಿಗೆ ಯಾವುದು ಇಷ್ಟವೋ, ನಿಮ್ಮ ಇಚ್ಛಾನುಸಾರವಾಗಿ ಅದು ಹೇಳಲ್ಪಡಲಿ.

೩೧. ಹೀಗೆ ಮುನಿಯಿಂದ ಹೇಳಲ್ಪಡಲು ವಿದರ್ಭವಂಶಸಂಭೂತಳಾದ ಕೇಶಿನಿ ರಾಣಿಯು ವಂಶವನ್ನು ವೃದ್ಧಿಗೊಳಿಸುವ ಪುತ್ರನನ್ನೂ ಮತ್ತೊಬ್ಬಳು ಅನಂತಪುತ್ರರನ್ನೂ ವರವನ್ನಾಗಿ ಬೇಡಿಕೊಂಡರು.

೩೨. ಈ ರೀತಿಯಾಗಿ ಮಹಾ ಮುನಿಯು ಸಗರ ರಾಜನಿಗೆ ವರವನ್ನು ಕೊಟ್ಟು ಪತ್ನೀಸಮೇತನಾದ ರಾಜನನ್ನು ಸನ್ಮಾನಿಸಿ ಅನುಜ್ಞೆ ಕೊಟ್ಟು ತನ್ನ ನಗರಕ್ಕೆ ಕಳುಹಿಸಿಕೊಟ್ಟನು.

೩೩. ಮುನಿಯಿಂದ ಸಮ್ಮತಿಸಲ್ಪಟ್ಟ ಮಹಾರಾಜನು ಕೃತ ಕೃತ್ಯನಾಗಿ ರಥವನ್ನು ಹತ್ತಿ ವೇಗದಿಂದ ಪತ್ನಿಯರೊಡನೆ ತನ್ನ ನಗರವನ್ನು ಹೊಂದಿದನು.

೩೪. ಆ ರಾಜನು ಹೃಷ್ಟ ಪುಷ್ಟರಾದ ಜನರಿಂದ ತುಂಬಿರುವ ತನ್ನ ರಮ್ಯ ನಗರಿಯನ್ನು ಪ್ರವೇಶಿಸಿ ಆನಂದಪಟ್ಟವನಾಗಿ ಪೌರಜನರೊಡನೆ ಅತ್ಯಂತ ಪ್ರೀತಿಯಿಂದ ರಮಿಸಿದನು.

ಏತಸ್ಮಿನ್ನೇವ ಕಾಲೇ ತು ರಾಜಪತ್ನ್ಯಾವುಭೇ ನೃಪ ।
ರಾಜ್ಞೇ ಪ್ರಾವೋಚತಾಂ ಗರ್ಭಂ ಮುದಾ ಪರಮಯಾ ಯುತೇ॥ ೩೫ ॥

ವವೃಧೇ ಚ ತಯೋರ್ಗರ್ಭಃ ಶುಕ್ಲಪಕ್ಷೇ ಯಥೋಡುರಾಟ್ ।
ಸಹ ಸಂತೋಷಸಂಪತ್ತ್ಯಾ ಪಿತ್ರೋಃ ಪೌರಜನಸ್ಯ ಚ ॥ ೩೬ ॥

ಸಂಪೂರ್ಣೇ ತು ತತಃ ಕಾಲೇ ಮುಹೂರ್ತೇ ಕೇಶಿನೀ ಶುಭೇ ।
ಅಸೂಯತಾಗ್ನಿಗರ್ಭಾಭಂ ಕುಮಾರಮಮಿತದ್ಯುತಿಮ್ ॥ ೩೭ ॥

ಜಾತಕರ್ಮಾದಿಕಂ ತಸ್ಯ ಕೃತ್ವಾ ಚೈವ ಯಥಾವಿಧಿ ।
ಅಸಮಂಜಸ ಇತ್ಯೇವ ನಾಮ ತಸ್ಯಾಕರೋನ್ನೃಪಃ ॥ ೩೮ ॥

ಸುಮತಿಶ್ಚಾಪಿ ತತ್ಕಾಲೇ ಗರ್ಭಾಲಾಬುಮಸೂಯತ ।
ಸಂಪ್ರಸೂತಂ ತು ತಂ ತ್ಯಕ್ತುಂ ದೃಷ್ಟ್ವಾ ರಾಜಾಕರೋನ್ಮನಃ ॥ ೩೯ ॥

---

೩೫. ರಾಜನೆ! ಇದೇ ಸಮಯದಲ್ಲಿ ಆ ಇಬ್ಬರು ರಾಜಪತ್ನಿಯರು ಗರ್ಭವತಿಯರಾಗಿ ಪರಮಾನಂದಭರಿತರಾಗಿ ರಾಜನಿಗೆ ಗರ್ಭೋದಯವನ್ನು ತಿಳಿಸಿದರು.

೩೬. ಅವರಿಬ್ಬರು ರಾಜಪತ್ನಿಯರ ಗರ್ಭವು ಮಾತಾ-ಪಿತೃಗಳ ಮತ್ತು ಪೌರಜನರ ಸಂತೋಷ ಸಂಪತ್ತಿಯೊಡನೆ ದಿನ ದಿನಕ್ಕೂ ಶುಕ್ಲಪಕ್ಷದ ಚಂದ್ರಕಲೆಯಂತೆ ಬೆಳೆಯಿತು.

೩೭. ಅನಂತರದಲ್ಲಿ ಗರ್ಭಕಾಲವು ಸಂಪೂರ್ಣ ಕಳೆಯಲು ಆ ಕೇಶಿನಿಯು ಶುಭಮುಹೂರ್ತದಲ್ಲಿ ಅಗ್ನಿ ರೂಪವಾದ ಗರ್ಭದಂತೆ ಇರುವ, ಅಪರಿಮಿತವಾದ ಕಾಂತಿಯಿಂದ ಕೂಡಿದ ಕುಮಾರನನ್ನು ಪ್ರಸವಿಸಿದಳು.

೩೮. ರಾಜನು ಆ ಕುಮಾರನಿಗೆ ಜಾತಕರ್ಮ ಮುಂತಾದ ಸಂಸ್ಕಾರವನ್ನು ಯಥಾವಿಧಿಯಾಗಿ ಮಾಡಿ ಅಸಮಂಜಸನೆಂದು ನಾಮವನ್ನಿಟ್ಟು ನಾಮಕರಣ ಮಾಡಿದನು.

೩೯. ಅದೇ ಸಮಯದಲ್ಲಿ ಸುಮತಿಯು ಒಂದು ಗರ್ಭದ ಬುರುಡೆಯನ್ನು ಪ್ರಸವಿಸಿದಳು. ಗರ್ಭಾಲಾಬು ಪ್ರಸವವನ್ನು ಕಂಡು ರಾಜನು ಅದನ್ನು ತ್ಯಜಿಸಲು ಮನಸ್ಸಿನಲ್ಲಿ ಸ್ಥಿರಮಾಡಿದನು.

ತಜ್ಜ್ಞಾತ್ವಾ ಭಗವಾನೌರ್ವಸ್ತತ್ರಾಗಚ್ಛದ್ಯದೃಚ್ಛಯಾ ।
ಸಮ್ಯಕ್ ಸಂಭಾವಿತೋ ರಾಜ್ಞಾ ತಮುವಾಚ ತ್ವರಾನ್ವಿತಃ ॥ ೪೦ ॥

ಗರ್ಭಾಲಾಬುರಯಂ ರಾಜನ್ ನ ತ್ಯಕ್ತುಂ ಭವತಾರ್ಹತಿ ।
ಪುತ್ರಾಣಾಂ ಷಷ್ಟಿಸಾಹಸ್ರಬೀಜಭೂತೋ ಯತಸ್ತ್ವವ ॥ ೪೧ ॥

ತಸ್ಮಾತ್ತಚ್ಛಕಲೀಕೃತ್ಯ ಘೃತಕುಂಭೇಷು ಯತ್ನತಃ ।
ನಿಕ್ಷಿಪ್ಯ ಸಪಿಧಾನೇಷು ರಕ್ಷಣೀಯಂ ಪೃಥಕ್ ಪೃಥಕ್ ॥ ೪೨ ॥

ಸಮ್ಯಗೇವಂ ಕೃತೇ ರಾಜನ್ ಭವತೋ ಮತ್ಪ್ರಸಾದತಃ ।
ಯಥೋಕ್ತಸಂಖ್ಯಾ ಪುತ್ರಾಣಾಂ ಭವಿಷ್ಯತಿ ನ ಸಂಶಯಃ ॥ ೪೩ ॥

ಕಾಲೇ ಪೂರ್ಣೇ ತತಃ ಕುಂಭಾನ್ ಭಿತ್ವಾ ನಿರ್ಯಾಂತಿ ತೇ ಪೃಥಕ್ ।
ಏವಂ ತೇ ಷಷ್ಟಿಸಾಹಸ್ರಂ ಪುತ್ರಾಣಾಂ ಜಾಯತೇ ನೃಪ ॥ ೪೪ ॥

---

೪೦. ಅದನ್ನು ತಿಳಿದ ಭಗವಂತನಾದ ಔರ್ವಮುನಿಯು ಆಕಸ್ಮಿಕವಾಗಿ ಅಲ್ಲಿಗೆ ಬಂದನು, ಮತ್ತು ಅವನ್ನು ತಿಳಿದು ರಾಜನಿಂದ ಗೌರವಿಸಲ್ಪಟ್ಟವನಾಗಿ ತ್ವರೆಯಿಂದ ಕೂಡಿ ರಾಜನಿಗೆ ಹೀಗೆ ಹೇಳಿದನು.

೪೧. ರಾಜನೆ! ನಿನ್ನಿಂದ ಈ ಗರ್ಭಾಲಾಬುವು ತ್ಯಜಿಸಲ್ಪಡುವುದು ಸಮಂಜಸವಲ್ಲ. ಈ ಗರ್ಭಾಲಾಬುವು ಅರವತ್ತು ಸಹಸ್ರ ಪುತ್ರರ ಉತ್ಪತ್ತಿಗೆ ಬೀಜಭೂತವಾಗಿರುವುದು.

೪೨. ಆದುದರಿಂದ ಆ ಗರ್ಭಾಂಡವನ್ನು ಚೂರು ಚೂರು ಮಾಡಿ ಭದ್ರವಾಗಿ ಮುಚ್ಚಿರುವ ತುಪ್ಪದ ಗಡಿಗೆಗಳಲ್ಲಿ ಬೇರೆ ಬೇರೆಯಾಗಿ ಇರಿಸಿ ಯತ್ನದಿಂದ ರಕ್ಷಿಸಬೇಕು.

೪೩. ರಾಜನೆ! ನೀನು ಈ ರೀತಿಯಾಗಿ ಸರಿಯಾಗಿ ಮಾಡಿದರೆ ನಿನಗೆ ನನ್ನ ಅನುಗ್ರಹದಿಂದ ಹಿಂದೆ ನಾನು ಹೇಳಿದಂತೆ ಅರವತ್ತು ಸಹಸ್ರ ಪುತ್ರರು ಜನಿಸುವರು. ಯಾವ ಸಂಶಯವೂ ಇಲ್ಲ.

೪೪. ಅವುಗಳ ಕಾಲವು ಪೂರ್ಣವಾದ ಮೇಲೆ ಅವು ಕುಂಭಗಳನ್ನು ಭೇದಿಸಿ ತಾವಾಗಿ ಹೊರಕ್ಕೆ ಬರುವುವು. ರಾಜನೆ! ಹೀಗೆ ನಿನಗೆ ಅರವತ್ತು ಸಹಸ್ರ ಪುತ್ರರು ಜನಿಸುವರು.

ಇತ್ಯುಕ್ತ್ವಾ ಭಗವಾನೌರ್ವಸ್ತತ್ರೈವಾಂತರಧಾದ್ವಿಭುಃ ।
ರಾಜಾ ಚ ತತ್ತಥಾ ಚಕ್ರೇ ಯಥೌರ್ವೇಣ ಸಮೀರಿತಮ್ ॥ ೪೫ ॥

ತತಃ ಸಂವತ್ಸರೇ ಪೂರ್ಣೇ ಘೃತಕುಂಭಾತ್ ಕ್ರಮೇಣ ತೇ ।
ಭಿತ್ವಾ ಭಿತ್ವಾ ಪುನರ್ಜಜ್ಞುಃ ಸಹಸ್ಸೈವಾನುವಾಸರಮ್ ॥ ೪೬ ॥

ಏವಂ ಕ್ರಮೇಣ ಸಂಜಾತಾಸ್ತನಯಾಸ್ತೇ ಮಹೀಪತೇ ।
ವವೃಧುಃ ಸಂಘಶೋ ರಾಜನ್ ಷಷ್ಟಿಸಾಹಸ್ರಸಂಖ್ಯಯಾ ॥ ೪೭ ॥

ಅಪೃಥಗ್ಧರ್ಮಚರಣಾ ಮಹಾಬಲಪರಾಕ್ರಮಾಃ ।
ಬಭೂವುಸ್ತೇ ದುರಾಧರ್ಷಾಃ ಕ್ರೂರಾತ್ಮಾನೋ ವಿಶೇಷತಃ ॥ ೪೮ ॥

ಸ ನಾತಿಪ್ರೀತಿಮಾಂಸ್ತೇಷು ರಾಜಾ ಮತಿಮತಾಂ ವರಃ ।
ಕೇಶಿನೀತನಯಂ ತ್ವೇಕಂ ಬಹು ಮೇನೇ ಸುತಂ ಪ್ರಿಯಮ್ ॥ ೪೯ ॥

---

೪೫. ಸರ್ವ ಶಕ್ತನೂ ಭಗವಂತನೂ ಆದ ಔರ್ವಮುನಿಯು ಹೀಗೆ ಹೇಳಿ ಅಲ್ಲಿಯೇ ಅದೃಶ್ಯನಾದನು. ಆಗ ರಾಜನು ಔರ್ವಮುನಿಯಿಂದ ಹೇಳಲ್ಪಟ್ಟಂತೆ ಅದೆಲ್ಲವನ್ನೂ ಹಾಗೆಯೇ ಆಚರಿಸಿದನು.

೪೬. ತರುವಾಯ ಒಂದು ಸಂವತ್ಸರವು ಪೂರ್ಣವಾಗಲು ಆ ಗರ್ಭಶಕಲಗಳು ಘೃತಕುಂಭದಿಂದ ಪ್ರತಿ ದಿನವೂ ಭೇದಿಸಿ ಕ್ರಮವಾಗಿ ಜನಿಸಿದುವು.

೪೭. ರಾಜನೆ! ಈ ಕ್ರಮದಿಂದ ಜನ್ಮವೆತ್ತಿದ ಆ ರಾಜನ ಪುತ್ರರು ಅರವತ್ತು ಸಹಸ್ರ ವ್ಯಕ್ತಿ ಸಂಖ್ಯೆಯಿಂದ ಕೂಡಿ ಸಂಘರೂಪರಾಗಿ ವೃದ್ಧಿಯನ್ನು ಹೊಂದಿದರು.

೪೮. ಆ ಪುತ್ರರು ಸಮಾನವಾದ ಕೃತ್ಯವ್ಯಸನದಲ್ಲಿ ಶೀಲವುಳ್ಳವರೂ, ಮಹಾ ಬಲ-ಪರಾಕ್ರಮಗಳಿಂದ ಕೂಡಿದವರೂ, ಮತ್ತೊಬ್ಬರಿಂದ ತಡೆಯಲಾಗದವರೂ ಮತ್ತು ವಿಶೇಷವಾಗಿ ಕ್ರೂರಸ್ವಭಾವವುಳ್ಳವರೂ ಆಗಿದ್ದರು.

೪೯. ಬುದ್ಧಿಶಾಲಿಗಳಲ್ಲಿ ಗಣ್ಯನಾದ ಆ ರಾಜನು ಅವರಲ್ಲಿ ವಿಶೇಷ ಪ್ರೀತಿವಂತನಾಗಿರಲಿಲ್ಲ. ಕೇಶಿನೀ ಪುತ್ರನೊಬ್ಬನನ್ನು ಮಾತ್ರ ಪ್ರಿಯನಾದ ಪುತ್ರನೆಂದು ಅರಿತಿದ್ದನು.

ವಿವಾಹಂ ವಿಧಿವತ್ತಸ್ಮೈ ಕಾರಯಾಮಾಸ ಪಾರ್ಥಿವಃ ।
ಸಚಾಪ್ಯಾನಂದಯಾಮಾಸ ಸ್ವಗುಣೈಃ ಸುಹೃದೋಽಖಿಲಾನ್ ॥ ೫೦ ॥

ಏವಂ ಪ್ರವರ್ತಮಾನಸ್ಯ ಕೇಶಿನೀತನಯಸ್ಯ ತು ।
ಅಜಾಯತ ಸುತಃ ಶ್ರೀಮಾನ್ ಅಂಶುಮಾನಿತಿ ವಿಶ್ರುತಃ ॥ ೫೧ ॥

ಸ ಬಾಲ್ಯ ಏವ ಮತಿಮಾನ್ ಉದಾರೈಃ ಸ್ವಗುಣೈರ್ಭೃಶಮ್ ।
ಪ್ರೀಣಯಾಮಾಸ ಸುಹೃದಃ ಸ್ವಪಿತಾಮಹಮೇವ ಚ ॥ ೫೨ ॥

ಏತಸ್ಮಿನ್ನಂತರೇ ರಾಜ್ಞಸ್ತಸ್ಯ ಪುತ್ರೋಽಸಮಂಜಸಃ ।
ಆವಿಷ್ಟೋ ನಷ್ಟಚೇಷ್ಟೋಽಭೂತ್ಸ ಪಿಶಾಚೇನ ಕೇನಚಿತ್ ॥ ೫೩ ॥

ಸ ತು ಕಶ್ಚಿದಭೂದ್ವೈಶ್ಯಃ ಪೂರ್ವಜನ್ಮನಿ ಧರ್ಮವಿತ್ ।
ಕಸ್ಯಚಿದ್ವಿಷಯೇ ರಾಜ್ಞಃ ಪ್ರಭೂತಧನಧಾನ್ಯವಾನ್ ॥ ೫೪ ॥

---

೫೦. ರಾಜನು ಆ ಪುತ್ರನಿಗೆ ವಿಧಿವತ್ತಾಗಿ ವಿವಾಹವನ್ನು ಮಾಡಿದನು. ಆ ಅಸಮಂಜಸ ಪುತ್ರನು ತನ್ನ ಸದ್ಗುಣಗಳಿಂದ ಎಲ್ಲ ಮಿತ್ರ ವೃಂದವನ್ನು ಆನಂದ ಪಡಿಸಿದನು.

೫೧. ಈ ರೀತಿಯಾಗಿ ನಡೆದುಕೊಳ್ಳುತ್ತಲಿದ್ದ ಕೇಶಿನೀ ಪುತ್ರನಾದ ಅಸಮಂಜಸನಿಗೆ ಕಾಂತಿಯುಕ್ತನಾದ ಮತ್ತು ಅಂಶುಮಾನ್ ಎಂದು ಪ್ರಸಿದ್ಧನಾದ ಒಬ್ಬ ಪುತ್ರನು ಜನಿಸಿದನು.

೫೨. ಆ ಅಂಶುಮಂತನು ಬಾಲ್ಯದಲ್ಲಿಯೇ ಬುದ್ಧಿಶಾಲಿಯೆಂದೆನಿಸಿ ತನ್ನ ಉದಾರ ಗುಣಗಳಿಂದ ತನ್ನ ಮಿತ್ರಗೋಷ್ಠಿಯನ್ನೂ ಪಿತಾಮಹನನ್ನೂ ಅಧಿಕವಾಗಿ ಪ್ರೀತಿಗೊಳಿಸಿದನು.

೫೩. ಈ ಸಮಯದಲ್ಲಿ ಆ ರಾಜನ ಪುತ್ರನಾದ ಅಸಮಂಜಸನು ಯಾವುದೋ ಒಂದು ಪಿಶಾಚದಿಂದ ಆವೇಶಮಾಡಲ್ಪಟ್ಟು ಯಾವುದೊಂದು ಸಾಧು ಚೇಷ್ಟೆಯೂ ಇಲ್ಲದಂತೆ ಸ್ತಬ್ಧನಾದನು.

೫೪. ಅವನು ಪೂರ್ವಜನ್ಮದಲ್ಲಿ ಒಬ್ಬ ರಾಜನ ದೇಶದಲ್ಲಿ ಅತಿಶಯವಾದ ಧನ-ಧಾನ್ಯಗಳ ಸಮೃದ್ಧಿಯುಳ್ಳ ಮತ್ತು ಧರ್ಮ ಮರ್ಮವನ್ನು ಅರಿತಿರುವ ಒಬ್ಬ ವೈಶ್ಯನಾಗಿ ಜನಿಸಿದ್ದನು.

ಸ ಕದಾಚಿದರಣ್ಯೇಷು ವಿಚರನ್ನಿಧಿಮುತ್ತಮಮ್ ।
ದೃಷ್ಟ್ವಾ ಗ್ರಹೀತುಮಾರೇಭೇ ವಣಿಗ್ಲೋಭಪರಿಪ್ಲುತಃ ॥ ೫೫ ॥

ತತಸ್ತದ್ರಕ್ಷಕೋಽಭ್ಯೇತ್ಯ ಪಿಶಾಚಃ ಪ್ರಾಹ ತಂ ತದಾ ।
ಕ್ಷುಧಿತೋಽಹಂ ಚಿರಾದಸ್ಮಿನ್ನಿವಸನ್ನಿಧಿಪಾಲಕಃ ॥ ೫೬ ॥

ತಸ್ಮಾತ್ತತ್ಪರಿಹಾರಾಯ ಮಮ ದತ್ತ್ವಾ ಗವಾಮಿಷಮ್ ।
ಕಾಮತಃ ಪ್ರತಿಗೃಹ್ಣೀಷ್ವ ನಿಧಿಮೇನಂ ಮಮಾಜ್ಞಯಾ ॥ ೫೭ ॥

ಸ ತಸ್ಮೈ ತತ್ಪರಿಶ್ರುತ್ಯ ದಾಸ್ಯಾಮೀತಿ ಗವಾಮಿಷಮ್ ।
ಆದತ್ತ ಚ ನಿಧಿಂ ತಂ ತು ಪಿಶಾಚೇನಾನುಮೋದಿತಃ ॥ ೫೮ ॥

ನ ಪ್ರಾದಾಚ್ಚ ತತೋ ಮೌಢ್ಯಾತ್ತಸ್ಮೈ ಯತ್ತತ್ಪ್ರತಿಶ್ರುತಮ್ ।
ಪ್ರತಿಶ್ರುತಾಪ್ರದಾನೋತ್ಥ ದೋಷಂ ನ ಶ್ರದ್ದಧೇ ನೃಪ ॥ ೫೯ ॥

---

೫೫. ಅವನು ಒಂದಾನೊಂದು ಕಾಲದಲ್ಲಿ ಸಂಚಾರಮಾಡುತ್ತ ಒಂದು ಅರಣ್ಯದಲ್ಲಿ ಉತ್ತಮವಾದ ಒಂದು ನಿಧಿಯನ್ನು ನೋಡಿ ವೈಶ್ಯರ ಸಹಜವಾದ ಲೋಭದಿಂದ ವಶನಾಗಿ ಅದನ್ನು ತೆಗೆದುಕೊಳ್ಳಲು ಯತ್ನಿಸಿದನು.

೫೬. ತರುವಾಯ ಆ ನಿಧಿಯನ್ನು ರಕ್ಷಿಸುತ್ತಿದ್ದ ಒಂದು ಪಿಶಾಚವು ಬಂದು ಆಗ ಅವನನ್ನು ಕುರಿತು ಹೇಳಿತು, ನಾನು ಇಲ್ಲಿ ಬಹುಕಾಲದಿಂದ ನಿಧಿಯನ್ನು ಪಾಲಿಸುತ್ತ ವಾಸಮಾಡಿ ತುಂಬ ಹಸಿಗೊಂಡವನು ಆಗಿರುವೆನು.

೫೭. ಆದ್ದರಿಂದ ನನ್ನ ಹಸಿವು ನಿವೃತ್ತಿಯಾಗುವುದಕ್ಕೆ ನನಗೆ ಗೋಮಾಂಸವನ್ನು ಕೊಟ್ಟು ಈ ನಿಧಿಯನ್ನು ನನ್ನ ಆಜ್ಞೆಯನ್ನು ಅನುಸರಿಸಿ ನಿನ್ನ ಇಷ್ಟಾನುಸಾರವಾಗಿ ತೆಗೆದುಕೊ.

೫೮. ಆಗ ಆ ವೈಶ್ಯನು ಪಿಶಾಚಕ್ಕೆ ಇಷ್ಟವಾದ ಗೋಮಾಂಸವನ್ನು ಕೊಡುವೆನೆಂದು ಶಪಥಪೂರ್ವಕವಾಗಿ ವಚನವಿತ್ತು ಪಿಶಾಚದಿಂದ ಅನುಮೋದಿಸಲ್ಪಟ್ಟು ಆ ನಿಧಿಯನ್ನು ಸ್ವೀಕರಿಸಿದನು.

೫೯. ರಾಜನೆ! ಅನಂತರದಲ್ಲಿ ಮೂಢತನದಿಂದ ಪ್ರತಿಜ್ಞೆಮಾಡಿದಂತೆ ಕೊಡಬೇಕಾದ ಗೋಮಾಂಸವನ್ನು ಅವನು ಪಿಶಾಚಕ್ಕೆ ಕೊಡಲಿಲ್ಲ. ಒಪ್ಪಿದ ವಸ್ತುವನ್ನು ಕೊಡದಿರುವುದರಿಂದ ಉಂಟಾಗುವ ದೋಷವನ್ನು ಅವನು ನಂಬಲಿಲ್ಲ.

ತಸ್ಮೋವಂ ಸುಚಿರಂ ಕಾಲಂ ಪ್ರತೀಕ್ಷ್ಯಾಶನಶಂಕಯಾ ।
ಅಪನೀತಧನಃ ಸೋಽಪಿ ಮಮಾರ ವ್ಯಥಿತಃ ಕ್ಷುಧಾ ॥ ೬೦ ॥

ವೈಶ್ಯೋಽಪಿ ಬಾಲೋ ಮರಣಂ ಸಂಪ್ರಾಪ್ಯ ಸಗರಸ್ಯ ತು ।
ಬಭೂವ ಕಾಲೇ ಕೇಶಿನ್ಯಾಂ ತನಯೋಽನ್ವಯವರ್ಧನಃ ॥ ೬೧ ॥

ಅಶರೀರಃ ಪಿಶಾಚೋಽಪಿ ಪೂರ್ವವೈರಮನುಸ್ಮರನ್ ।
ವಾಯುಭೂತೋಽವಿಶದ್ದೇಹಂ ರಾಜಪುತ್ರಸ್ಯ ಭೂಪತೇ ॥ ೬೨ ॥

ತೇನಾವಿಷ್ಟಸ್ತತಃ ಸೋಽಪಿ ಕ್ರೂರಚಿತ್ತೋಽಭವತ್ತದಾ ।
ಮತಿವಿಭ್ರಂಶಮಾಸಾದ್ಯ ಮುಹುಸ್ತೇನ ಬಲಾತ್ಕೃತಃ ॥ ೬೩ ॥

ಅಸಮಂಜಸ ತ್ವಂ ನಗರೇ ಚಕ್ರೇ ಸೋಽಪಿ ನೃಶಂಸವತ್ ।
ಬಾಲಾಂಶ್ಚ ಯೂನಃ ಸ್ಥವಿರಾನ್ ಯೋಷಿತಶ್ಚ ಸದಾ ಖಲಃ ॥ ೬೪ ॥

---

೬೦. ಆ ಪಿಶಾಚವು ಧನವನ್ನು ಕಳೆದುಕೊಂಡು ವೈಶ್ಯನು ಗೋಮಾಂಸ ತರುವುದನ್ನು ಆಹಾರದ ಇಷ್ಟದಿಂದ ಬಹುಕಾಲ ನಿರೀಕ್ಷಿಸಿ ಲಭಿಸದೆ ಹಸಿವಿನಿಂದ ವ್ಯಥೆಗೊಂಡು ಪ್ರಾಣವನ್ನು ಬಿಟ್ಟಿತು.

೬೧. ಆ ದೋಷದಿಂದ ವೈಶ್ಯನು ಬಾಲ್ಯದಲ್ಲಿಯೇ ಮರಣವನ್ನು ಹೊಂದಿ ಪುನರ್ಜನ್ಮ ಹೊಂದುವ ಕಾಲದಲ್ಲಿ ಸಗರನ ಕೇಶಿನಿ ಎಂಬ ಪತ್ನಿಯಲ್ಲಿ ವಂಶವರ್ಧಕ ನಾದ ಪುತ್ರನಾಗಿ ಜನಿಸಿದನು.

೬೨. ಭೂಪತಿಯೆ! ಶರೀರವಿಲ್ಲದ ಪಿಶಾಚವು ಹಿಂದಿನ ವೈರವನ್ನು ನೆನೆಸಿ ಕೊಂಡು ವಾಯುರೂಪವನ್ನು ತೆಗೆದುಕೊಂಡು ರಾಜಪುತ್ರನಾದ ಅಸಮಂಜಸನ ದೇಹವನ್ನು ಆವೇಶಮಾಡಿತು.

೬೩. ಆ ಪಿಶಾಚದ ಆವೇಶದಿಂದ ಅಸಮಂಜಸನು ಆಗ ಬಹಳ ಕ್ರೂರವಾದ ಚಿತ್ತವುಳ್ಳವನಾದನು, ಮತ್ತು ಪಿಶಾಚದಿಂದ ಬಲಾತ್ಕರಿಸಲ್ಪಟ್ಟವನಾಗಿ ಮತ್ತೆ ಮತ್ತೆ ಬುದ್ಧಿಭ್ರಂಶವನ್ನು ಹೊಂದಿದನು.

೬೪. ಅದರಿಂದ ಅವನು ನಗರದಲ್ಲಿ ಅತಿ ಕ್ರೂರ ಪುರುಷನಂತೆ ಅಸಮಂಜಸ ವಾದ ಕಾರ್ಯಗಳನ್ನು ಮಾಡಿದನು. ಆ ದುರ್ಬುದ್ಧಿಯು ಬಾಲ, ಯುವಕ, ವೃದ್ಧ ಮತ್ತು ಸ್ತ್ರೀಯರ ವಿಷಯದಲ್ಲಿ ಕ್ರೂರಕೃತ್ಯವನ್ನು ನಡೆಸಿದನು.

ಹತ್ವಾ ಹತ್ವಾ ಪ್ರಚಿಕ್ಷೇಪ ಸರಯ್ವಾಮತಿನಿರ್ದಯಃ ।
ತತಃ ಪೌರಜನಾಃ ಸರ್ವೇ ದೃಷ್ಟ್ವಾ ತಸ್ಯ ಕದರ್ಯತಾಮ್ || ೬೫ ||

ಬಹುಶೋ ನಿಕೃತಾಸ್ತೇನ ಗತ್ವಾ ರಾಜ್ಞೇ ವ್ಯಜಿಜ್ಞಪತ್ ।
ರಾಜಾ ಚ ತದುಪಶ್ರುತ್ಯ ತಮಾಹೂಯ ಪ್ರಯತ್ನತಃ || ೬೬ ||

ವಾರಯಾಮಾಸ ಬಹುಧಾ ದುಃಖೇನ ಮಹತಾನ್ವಿತಃ ।
ಬಹುಶಃ ಪ್ರತಿಷಿದ್ಧೋಽಪಿ ಪಿತ್ರಾ ತೇನ ಮಹಾತ್ಮನಾ || ೬೭ ||

ಜಲೇ ತಪ್ತೇ ಚ ಸಂತಪ್ತಾಃ ಸಂಬಭೂವುರ್ಯಥಾ ಯವಾಃ ।
ನಾಶಕತ್ತಂ ಯದಾ ಪಾಪಾದ್ವಿನಿವರ್ತಯಿತುಂ ನೃಪಃ || ೬೮ ||
ಲೋಕಾಪವಾದಭೀರುತ್ವಾದ್ವಿಷಯಾನತ್ಯಜತ್ತದಾ || ೬೯ ||

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ
ಏಕಪಂಚಾಶತ್ತಮೋಽಧ್ಯಾಯಃ

---

೬೫. ಅಸಮಂಜಸನು ಅತಿ ನಿರ್ದಯನಾಗಿ ಅವರನ್ನೆಲ್ಲ ಕೊಂದು ಕೊಂದು ಸರಯೂ ನದಿಯಲ್ಲಿ ಬಿಡುತ್ತಿದ್ದನು. ಆಗ ಪುರ-ಗ್ರಾಮವಾಸಿ ಜನಗಳೆಲ್ಲರೂ ಅವನ ಕ್ರೂರಕೃತ್ಯವನ್ನು ನೋಡಿದರು.

೬೬. ಹೀಗೆ ಅನೇಕಾವರ್ತಿ ಅವನಿಂದ ಪೀಡೆಯನ್ನು ಅನುಭವಿಸಿದ ಜನರು ರಾಜನ ಸನ್ನಿಧಿಗೆ ಹೋಗಿ ರಾಜನಿಗೆ ಈ ಹಿಂಸಾಕೃತ್ಯವನ್ನು ವಿಜ್ಞಾಪಿಸಿಕೊಂಡರು. ರಾಜನು ಅದನ್ನು ಲಾಲಿಸಿ ಪ್ರಯತ್ನಪೂರ್ವಕವಾಗಿ ಅವನನ್ನು ಸಮೀಪಕ್ಕೆ ಕರೆಸಿದನು.

೬೭. ಮತ್ತು ಅತಿಯಾದ ದುಃಖ–ವಿಷಾದಗಳಿಂದ ಕೂಡಿ ಅನೇಕ ಬಗೆಯಿಂದ ಅವನನ್ನು ಹಿಂಸಾಕೃತ್ಯದಿಂದ ತಡೆದನು. ಆ ಮಹಾತ್ಮನಾದ ಪಿತೃವಿನಿಂದ ಅನೇಕ ಸಲ ಅಸಮಂಜಸನು ನಿಷೇಧಿಸಲ್ಪಟ್ಟನು.

೬೮. ಆದರೂ ತಪ್ತಜಲದಲ್ಲಿ ಹಾಕಿದ ಯವಧಾನ್ಯವು ತಪ್ತವೇ ಆಗುವಂತೆ ಪುತ್ರನು ಪ್ರಕೃತಿಸ್ಥನಾಗಲಿಲ್ಲ. ಆದುದರಿಂದ ರಾಜನು ಅವನನ್ನು ಪಾಪದಿಂದ ಹಿಂತಿರುಗಿಸಲು ಸಮರ್ಥನಾಗಲಿಲ್ಲ.

೬೯. ಆಗ ರಾಜನು ದಿನದಿನಕ್ಕೂ ಹಿಂಸಾಕೃತ್ಯವು ಹೆಚ್ಚುತ್ತ ಪುತ್ರನ ಮೇಲಿನ ಪ್ರೀತಿಯಿಂದ ರಾಜನು ಧಾರ್ಮಿಕತ್ವವನ್ನು ಬಿಟ್ಟನೆಂಬ ಲೋಕಾಪವಾದಕ್ಕೆ ಭಯಪಟ್ಟು ಪುತ್ರನನ್ನು ದೇಶದಿಂದ ಹೊರಗೆ ಕಳುಹಿಸಿದನು.

ಬ್ರಹ್ಮಾಂಡ ಪುರಾಣದಲ್ಲಿ ಉತ್ತರಾರ್ಧದಲ್ಲಿ ಐವತ್ತೊಂದನೆಯ ಅಧ್ಯಾಯವು
ಸಮಾಪ್ತವು.

# ದ್ವಿಪಂಚಾಶತ್ತಮೋಽಧ್ಯಾಯಃ

ಜೈಮಿನಿರುವಾಚ :—

ತ್ಯಕ್ತ್ವಾ ಪುತ್ರಂ ಸ ಧರ್ಮಾತ್ಮಾ ಸಗರಃ ಪ್ರೇಮ ತದ್ಗತಮ್ ।
ಧರ್ಮಶೀಲೇ ತದಾ ಬಾಲೇ ಚಕಾರಾಂಶುಮತಿ ಪ್ರಭುಃ ॥ ೧ ॥

ಏತಸ್ಮಿನ್ನೇವ ಕಾಲೇ ತು ಸುಮತ್ಯಾಸ್ತನಯಾ ನೃಪ ।
ವವೃಧುಃ ಸಂಘಶಃ ಸರ್ವೇ ಪರಸ್ಪರಮನುವ್ರತಾಃ ॥ ೨ ॥

ವಜ್ರಸಂಹನನಾಃ ಕ್ರೂರಾ ನಿರ್ದಯಾ ನಿರಪತ್ರಪಾಃ ।
ಅಧರ್ಮಶೀಲಾ ನಿತರಾಮೇಕಧರ್ಮಾಣ ಏವ ಚ ॥ ೩ ॥

ಏಕಕಾರ್ಯಾಭಿನಿರತಾಃ ಕ್ರೋಧನಾ ಮೂಢಚೇತಸಃ ।
ಅಧೃಷ್ಯಾಃ ಸರ್ವಭೂತಾನಾಂ ಜನೋಪದ್ರವಕಾರಿಣಃ ॥ ೪ ॥

---

೧. ಜೈಮಿನಿಮುನಿಯು ಇಂತೆಂದನು :—ಸಗರರಾಜನು ಅಸಮಂಜಸ ಪುತ್ರನನ್ನು ದೂರ ಕಳುಹಿಸಿ ಅವನಲ್ಲಿದ್ದ ಪುತ್ರಪ್ರೇಮವನ್ನು ಧರ್ಮಶೀಲನೂ ಬಾಲಕನೂ ಆದ ಅಂಶುಮಂತನಲ್ಲಿ ಇರಿಸಿದನು.

೨. ರಾಜನೆ! ಇದೇ ಸಮಯದಲ್ಲಿ ಸುಮತಿಯ ಪುತ್ರರು ಎಲ್ಲರೂ ಒಬ್ಬರನ್ನೊಬ್ಬರು ಅನುಸರಿಸುವ ವರ್ತನವುಳ್ಳವರಾಗಿ ಗುಂಪಾಗಿ ಬೆಳೆದರು.

೩. ಆ ಪುತ್ರರು ಎಲ್ಲರು ವಜ್ರದಂತೆ ಕಠಿನಕಾಯವುಳ್ಳವರೂ, ಕ್ರೂರಸ್ವಭಾವವುಳ್ಳವರೂ, ನಿಷ್ಕರುಣರೂ, ಲಜ್ಜಾರಹಿತರೂ, ಅಧರ್ಮದಲ್ಲಿ ಅಭಿರುಚಿಯುಳ್ಳವರೂ ಮತ್ತು ಎಲ್ಲರೂ ತುಲ್ಯವಾದ ರೀತಿಯುಳ್ಳವರೂ ಆಗಿದ್ದರು.

೪. ಎಲ್ಲರೂ ಒಂದೇಕಾರ್ಯದಲ್ಲಿ ತೊಡಗುವವರೂ, ಕ್ರೋಧದ ಶೀಲವುಳ್ಳವರೂ, ವಿವೇಕಹೀನವಾದ ಮಾನಸವುಳ್ಳವರೂ ಸರ್ವಪ್ರಾಣಿಗಳಿಗೂ ಆಕ್ರಮಿಸಲು ಅಶಕ್ಯರೂ ಮತ್ತು ಜನರಿಗೆ ಉಪದ್ರವವನ್ನುಂಟುಮಾಡುವವರೂ ಆಗಿದ್ದರು.

ವಿನಯಾಚಾರಸನ್ಮಾರ್ಗನಿರಪೇಕ್ಷಾಃ ಸಮಂತತಃ ।
ಬಬಾಧಿರೇ ಜಗತ್ಸರ್ವಮಸುರಾ ಇವ ಕಾಮತಃ ॥ ೫ ॥

ವಿಧ್ವಸ್ತಯಜ್ಞಸನ್ಮಾರ್ಗಂ ಭುವನಂ ತೈರುಪದ್ರುತಮ್ ।
ನಿಃಸ್ವಾಧ್ಯಾಯವಷಟ್ಕಾರಂ ಬಭೂವಾರ್ತಂ ವಿಶೇಷತಃ ॥ ೬ ॥

ವಿಧ್ವಸ್ಯಮಾನೇ ಸುಭೃಶಂ ಸಾಗರೈರ್ವರದರ್ಪಿತೈಃ ।
ಪ್ರಕ್ಷೋಭಂ ಪರಮಂ ಜಗ್ಮುರ್ದೇವಾಸುರಮಹೋರಗಾಃ ॥ ೭ ॥

ಧರಾ ಸಾ ಸಾಗರಾಕ್ರಾಂತಾ ನ ಚಲಾಪಿ ತದಾ ಚಲಾ ।
ತಪಃಸಮಾಧಿಭಂಗಶ್ಚ ಪ್ರಬಭೂವ ತಪಸ್ವಿನಾಮ್ ॥ ೮ ॥

ಹವ್ಯಕವ್ಯಪರಿಭ್ರಷ್ಟಾಸ್ತ್ರಿದಶಾಃ ಪಿತೃಭಿಸ್ಸಹ ।
ದುಃಖೇನ ಮಹತಾವಿಷ್ಟಾ ವಿರಂಚಭವನಂ ಯಯುಃ ॥ ೯ ॥

---

೫. ಮತ್ತು ವಿನಯ, ಆಚಾರ ಮುಂತಾದ ಸನ್ಮಾರ್ಗದಲ್ಲಿ ಗಮನವಿಲ್ಲದವರೂ ಆಗಿ ತಮ್ಮ ಇಷ್ಟದಂತೆ ನಡೆದುಕೊಳ್ಳುತ್ತ ಅಸುರರಂತೆ ಸಕಲ ಜಗತ್ತನ್ನು ಸುತ್ತಲೂ ಬಾಧಿಸಿದರು.

೬. ಅವರಿಂದ ಪೀಡಿಸಲ್ಪಟ್ಟ ಭುವನವು ಧ್ವಂಸಹೊಂದಿದ ಯಜ್ಞಾದಿ ಸನ್ಮಾರ್ಗವುಳ್ಳದ್ದೂ ಸ್ವಾಧ್ಯಾಯ-ವಷಟ್ಕಾರಗಳ ಸದ್ದು ಕೂಡ ಶೂನ್ಯವಾದದ್ದೂ ಆಗಿ ವಿಶೇಷವಾಗಿ ಪೀಡೆಗೆ ಗುರಿಯಾಯಿತು.

೭. ವರಲಾಭದಿಂದ ದರ್ಪಹೊಂದಿದ ಸಗರಪುತ್ರರಿಂದ ಭುವನವು ಹೀಗೆ ಧ್ವಂಸ ಮಾಡಲ್ಪಡಲು ದೇವ-ಅಸುರ-ಮಹಾನಾಗ ಮುಂತಾದವರು ಅತಿಶಯವಾಗಿ ಕ್ಷೋಭವನ್ನು ಹೊಂದಿದರು.

೮. ಆಗ ಭೂಮಿಯು ತನ್ನ ಅಚಲ ಸ್ವಭಾವವನ್ನು ಬಿಟ್ಟು ದುಷ್ಟಸಗರಪುತ್ರರ ಭಾರದಿಂದ ಆಕ್ರಾಂತವಾಗಿ ಚಲವಾಗಿ ಹೋಯಿತು. ಮತ್ತು ತಪಸ್ವಿಜನರಿಗೆ ತಮ್ಮ ತಪಸ್ಸು-ಸಮಾಧಿಗಳಿಗೆ ಭಂಗವು ಉಂಟಾಯಿತು.

೯. ಮತ್ತು ಹವ್ಯ-ಕವ್ಯಗಳಿಂದ ಭ್ರಷ್ಟರಾದ ದೇವತೆಗಳು ಮತ್ತು ಪಿತೃಗಳ ಮಹತ್ತರವಾದ ದುಃಖದಿಂದ ಬ್ರಹ್ಮಲೋಕಕ್ಕೆ ತೆರಳಿದರು.

ತತ್ರ ಗತ್ವಾ ಯಥಾನ್ಯಾಯಂ ದೇವಾಃ ಶರ್ವಪುರೋಗಮಾಃ ।
ಶಶಂಸುಃ ಸಕಲಂ ತಸ್ಮೈ ಸಾಗರಾಣಾಂ ವಿಚೇಷ್ಟಿತಮ್ ॥ ೧೦ ॥

ತಚ್ಛ್ರುತ್ವಾ ವಚನಂ ತೇಷಾಂ ಬ್ರಹ್ಮಾ ಲೋಕಪಿತಾಮಹಃ ।
ಕ್ಷಣಮಂತರ್ಮನಾ ಭೂತ್ವಾ ಜಗಾಮ ಸುರಸತ್ತಮಃ ॥ ೧೧ ॥

ದೇವಾಃ ಶೃಣುತ ಭದ್ರಂ ವೋ ವಾಣೀಮವಹಿತಾ ಮಮ ।
ವಿನಂಕ್ಷ್ಯಂತ್ಯಚಿರೇಣೈವ ಸಾಗರಾ ನಾತ್ರ ಸಂಶಯಃ ॥ ೧೨ ॥

ಕಾಲಂ ಕಂಚಿತ್ಪ್ರತೀಕ್ಷಧ್ವಂ ತೇನ ಸರ್ವಂ ನಿಯಮ್ಯತೇ ।
ನಿಮಿತ್ತಮಾತ್ರಮನ್ಯತ್ತು ಸ ಏವ ಸಕಲೇಶಿತಾ ॥ ೧೩ ॥

ತಸ್ಮಾದ್ಯುಷ್ಮದ್ಧಿತಾರ್ಥಾಯ ಯದ್ವಕ್ಷ್ಯಾಮಿ ಸುರೋತ್ತಮಾಃ ।
ಸರ್ವೈರ್ಭವದ್ಭಿರಧುನಾ ತತ್ಕರ್ತವ್ಯಮತಂದ್ರಿತೈಃ ॥ ೧೪ ॥

---

೧೦. ಅಲ್ಲಿಗೆ ಹೋಗಿ ಈಶ್ವರ ಮುಂತಾದ ಸಕಲ ದೇವತೆಗಳು ನ್ಯಾಯವನ್ನು ಅನುಸರಿಸಿ ದುಷ್ಟರಾದ ಸಗರ ಪುತ್ರರ ಎಲ್ಲ ಹಾವಳಿಯನ್ನು ಬ್ರಹ್ಮನಿಗೆ ವಿಜ್ಞಾಪಿಸಿ ಕೊಂಡರು.

೧೧. ಸಕಲ ದೇವತೆಗಳಲ್ಲಿ ಶ್ರೇಷ್ಠನಾದ ಮತ್ತು ಲೋಕಗಳಿಗೆ ಪಿತಾಮಹ ನಾದ ಬ್ರಹ್ಮದೇವನು ದೇವತೆಗಳು ನುಡಿದಿರುವ ವಚನವನ್ನು ಲಾಲಿಸಿ ಸ್ವಲ್ಪ ಹೊತ್ತು ಪ್ರತ್ಯಗ್ದೃಷ್ಟಿಯನ್ನು ಹೊಂದಿದ ಮಾನಸವುಳ್ಳವನಾಗಿ ಮತ್ತೆ ಈ ರೀತಿಯಾಗಿ ಹೇಳಿದನು.

೧೨. ದೇವತೆಗಳೆ! ನಿಮಗೆ ಕಲ್ಯಾಣವಾಗುವುದು. ಗಮನವಿಟ್ಟವರಾಗಿ ನನ್ನ ವಾಣಿಯನ್ನು ನೀವು ಕೇಳಿರಿ. ಸಗರ ಪುತ್ರರು ಶೀಘ್ರದಲ್ಲಿಯೇ ನಾಶವನ್ನು ಹೊಂದುವರು. ಈ ವಿಷಯದಲ್ಲಿ ಸಂಶಯವಿಲ್ಲ.

೧೩. ಆದರೆ ಸಲ್ಪಕಾಲವನ್ನು ನಿರೀಕ್ಷಿಸಿರಿ. ಆ ಕಾಲಾತ್ಮನಿಂದ ಸರ್ವವೂ ನಿಯಮಿಸಲ್ಪಡುತ್ತಿದೆ. ಮಿಕ್ಕ ಎಲ್ಲ ಸನ್ನಿವೇಶವು ನಿಮಿತ್ತಮಾತ್ರವಾಗುವುದು. ಕಾಲಾತ್ಮನೆ ಸಕಲ ಕಾರ್ಯಕ್ಕೂ ನಿಯಾಮಕನು.

೧೪. ದೇವೋತ್ತಮರೇ! ಆದುದರಿಂದ ನಿಮ್ಮ ಹಿತದ ದೃಷ್ಟಿಯಿಂದ ನಾನೀಗ ಯಾವುದನ್ನು ಹೇಳುವೆನೊ, ಅದು ಈಗ ಸ್ವಲ್ಪಮಾತ್ರವೂ ಆಲಸ್ಯವಿಲ್ಲದಂತೆ ನಿಮ್ಮೆಲ್ಲ ರಿಂದ ಮಾಡಲ್ಪಡಬೇಕು.

ವಿಷ್ಣೋರಂಶೇನ ಭಗವಾನ್ ಕಪಿಲೋ ಜಯತಾಂ ವರಃ ।
ಜಾತೋ ಜಗದ್ಧಿತಾರ್ಥಾಯ ಯೋಗೀಂದ್ರಪ್ರವರೋ ಭುವಿ ॥ ೧೫ ॥

ಅಗಸ್ತ್ಯಪೀತಸಲಿಲೇ ದಿವ್ಯವರ್ಷಶತಾವಧಿ ।
ಧ್ಯಾಯನ್ನಾಸ್ತೇಽಧುನಾಂಭೋಧಾವೇಕಾಂತೇ ತತ್ರ ಕುತ್ರಚಿತ್ ॥೧೬॥

ಗತ್ವಾ ಯೂಯಂ ಮಮಾದೇಶಾತ್ಕಪಿಲಂ ಮುನಿಪುಂಗವಮ್ ।
ಧ್ಯಾನಾವಸಾನಮಿಚ್ಛಂತಸ್ತಿಷ್ಠಧ್ವಂ ತದುಪಹ್ವರೇ ॥ ೧೭ ॥

ಸಮಾಧಿವಿರತೌ ತಸ್ಯ ಸ್ವಾಭಿಪ್ರಾಯಮಶೇಷತಃ ।
ನತ್ವಾ ತಸ್ಮೈ ವದಿಷ್ಯಧ್ವಂ ಸ ವಃ ಶ್ರೇಯೋ ವಿಧಾಸ್ಯತಿ ॥ ೧೮ ॥

ಸಮಾಧಿಭಂಗಶ್ಚ ಮುನೇರ್ಯಥಾ ಸ್ಯಾತ್ ಸಾಗರೈಃ ಕೃತಃ ।
ಕುರುಧ್ವಂ ಚ ತಥಾ ಯೂಯಂ ಪ್ರವೃತ್ತಿಂ ವಿಬುಧೋತ್ತಮಾಃ ॥೧೯॥

---

೧೫. ಜಯಿಸುವವರಲ್ಲಿ ಅಗ್ರಗಣ್ಯನೂ, ಯೋಗೀಂದ್ರರಲ್ಲಿ ಶ್ರೇಷ್ಠನೂ ಮತ್ತು ಭಗವಂತನೂ ಆದ ಕಪಿಲ ಮಹಾಮುನಿಯು ಭೂಮಿಯಲ್ಲಿ ಜಗತ್ತಿನ ಹಿತಕ್ಕೋಸ್ಕರ ವಿಷ್ಣುವಿನ ಅಂಶದಿಂದ ಅವತರಿಸಿರುವನು.

೧೬. ಅಗಸ್ತ್ಯಮುನಿಯಿಂದ ಪಾನಮಾಡಲ್ಪಟ್ಟ ಜಲವುಳ್ಳ ಸಮುದ್ರದಲ್ಲಿ ಒಂದಾನೊಂದು ಏಕಾಂತ ಪ್ರದೇಶದಲ್ಲಿ ದಿವ್ಯವಾದ ನೂರಾರು ವರ್ಷಗಳ ಅವಧಿಯಿಂದ ಈಗ ಆ ಮಹಾಮುನಿಯು ಧ್ಯಾನಮಗ್ನನಾಗಿರುವನು.

೧೭. ನೀವೆಲ್ಲರೂ ನನ್ನ ಆದೇಶದಂತೆ ಆ ಕಪಿಲ ಮಹಾಮುನಿಯ ಸನ್ನಿಧಿಗೆ ಹೋಗಿ ಅವನ ಧ್ಯಾನದ ಅವಸಾನಸಮಯವನ್ನು ನಿರೀಕ್ಷಿಸುತ್ತ ಅವನ ಪಾರ್ಶ್ವದ ಏಕಾಂತ ಪ್ರದೇಶದಲ್ಲಿ ನಿಂತುಕೊಳ್ಳಿ.

೧೮. ಆಗ ಮುನಿಯ ಧ್ಯಾನಾವಸಾನ ಸಮಯದಲ್ಲಿ ನೀವು ಅವನನ್ನು ನಮಸ್ಕರಿಸಿ ನಿಮ್ಮ ಸಂಪೂರ್ಣ ಅಭಿಪ್ರಾಯವನ್ನು ಹೇಳಿರಿ, ಆ ಮುನಿಯು ನಿಮಗೆ ಶ್ರೇಯಸ್ಸನ್ನು ಉಂಟುಮಾಡುವನು.

೧೯. ವಿಬುಧೋತ್ತಮರೆ! ಮತ್ತು ಆ ಮುನಿಗೆ ಸಗರ ಪುತ್ರರಿಂದ ಸಮಾಧಿಯ ಭಂಗವು ಹೇಗೆ ಸಂಭವಿಸಬಹುದೋ, ಆ ರೀತಿಯ ಉದ್ಯಮವನ್ನು ನೀವು ಆಚರಿಸಬೇಕು.

ಜೈಮಿನಿರುವಾಚ :—
ಇತ್ಯುಕ್ತಾಸ್ತೇನ ವಿಬುಧಾಸ್ತಂ ಪ್ರಣಮ್ಯ ಪಿತಾಮಹಮ್ ।
ಗತ್ವಾ ತಂ ವಿಬುಧಶ್ರೇಷ್ಠಂ ತೇ ಕೃತಾಂಜಲಯೋಽಬ್ರುವನ್ ॥ ೨೦ ॥

ದೇವಾ ಊಚುಃ :—
ಪ್ರಸೀದ ನೋ ಮುನಿಶ್ರೇಷ್ಠ ವಯಂ ತ್ವಾಂ ಶರಣಂ ಗತಾಃ ।
ಉಪದ್ರುತಂ ಜಗತ್ಸರ್ವಂ ಸಾಗರೈಃ ಸಂಪ್ರಣಶ್ಯತಿ ॥ ೨೧ ॥

ತ್ವಂ ಕಿಲಾಖಿಲಲೋಕಾನಾಂ ಸ್ಥಿತಿಸಂಹಾರಕಾರಣಃ ।
ವಿಷ್ಣೋರಂಶೇನ ಯೋಗೀಂದ್ರಸ್ವರೂಪೀ ಭುವಿ ಸಂಸ್ಥಿತಃ ॥ ೨೨ ॥

ಪುಂಸಾಂ ತಾಪತ್ರಯಾರ್ತಾನಾಮಾರ್ತಿನಾಶಾಯ ಕೇವಲಮ್ ।
ಸ್ವೇಚ್ಛಯಾ ತೇ ಧೃತೋ ದೇಹೋ ನ ತು ತ್ವಂ ತಪತಾಂ ವರಃ ॥೨೩॥

ಮನಸೈವ ಜಗತ್ಸರ್ವಂ ಸ್ರಷ್ಟುಂ ಸಂಹರ್ತುಮೇವ ಚ ।
ವಿಧಾತುಂ ಸ್ವೇಚ್ಛಯಾ ಬ್ರಹ್ಮನ್ ಭವಾನ್ ಶಕ್ತೋಽತ್ಯಸಂಶಯಮ್ ॥ ೨೪ ॥

---

೨೦. ಜೈಮಿನಿ ಮುನಿಯು ಇಂತೆಂದನು :—ಬ್ರಹ್ಮದೇವನಿಂದ ಈ ರೀತಿಯಾಗಿ ಹೇಳಲ್ಪಟ್ಟ ದೇವತೆಗಳು ಆ ಪಿತಾಮಹದೇವನನ್ನು ವಂದಿಸಿ ವಿಬುಧರಲ್ಲಿ ಶ್ರೇಷ್ಠನಾದ ವಿಷ್ಣುವಿನ ಅಂಶದಿಂದ ಇರುವ ಆ ಮುನಿಯ ಬಳಿಗೆ ಹೋಗಿ ವಿನಯದಿಂದ ಅಂಜಲಿಯನ್ನು ಕಟ್ಟಿದವರಾಗಿ ಹೀಗೆ ಹೇಳಿದರು.

೨೧. ದೇವತೆಗಳು ಇಂತೆಂದರು :—ಮುನಿವರ್ಯನೆ! ನೀನು ನಮ್ಮಲ್ಲಿ ಪ್ರಸನ್ನನಾಗು. ನಾವು ನಿನ್ನನ್ನು ಶರಣು ಹೊಂದಿರುವೆವು. ಸಮಸ್ತ ಪ್ರಪಂಚವು ಸಗರರಾಜನ ಪುತ್ರರಿಂದ ಪೀಡಿಸಲ್ಪಟ್ಟದ್ದಾಗಿ ನಾಶವಾಗುತ್ತಿದೆ.

೨೨. ನೀನಾದರೊ ಸಮಸ್ತ ಲೋಕಗಳ ಸೃಷ್ಟಿ-ಸ್ಥಿತಿ-ಸಂಹಾರಗಳಿಗೆ ಕಾರಣನು, ಅಂತಹ ನೀನು ವಿಷ್ಣು ಪರಮಾತ್ಮನ ಅಂಶದಿಂದ ಯೋಗೀಂದ್ರನ ರೂಪದಿಂದ ಭೂಮಿಯಲ್ಲಿ ಇದ್ದೀಯೆ.

೨೩. ತಾಪತ್ರಯದಿಂದ ಪೀಡೆಯನ್ನು ಅನುಭವಿಸುವ ಜನರ ಪೀಡೆಯನ್ನು ನಾಶಗೊಳಿಸುವುದಕ್ಕೆ ಮಾತ್ರ ಸ್ವೇಚ್ಛೆಯಿಂದ ನೀನು ದೇಹವನ್ನು ಧರಿಸಿರುವಿ, ನೀನು ನಿಜವಾಗಿ ಸಾಧಕನಾದ ಯೋಗೀಂದ್ರನು ಅಲ್ಲ.

೨೪. ಬ್ರಹ್ಮರ್ಷಿಯೆ! ನೀನು ನಿಸ್ಸಂಶಯವಾಗಿ ಮಾನಸ ವ್ಯಾಪಾರದಿಂದಲೇ ಸಕಲ ಜಗತ್ತನ್ನು ಸೃಷ್ಟಿ ಮಾಡಲು, ಸಂಹಾರಮಾಡಲು ಅಥವಾ ಪರಿಪಾಲಿಸಲು ಶಕ್ತನಾಗಿದ್ದೀಯೆ.

ತ್ವಂ ನೋ ಧಾತಾ ವಿಧಾತಾ ಚ ತ್ವಂ ಗುರುಸ್ತ್ವಂ ಪರಾಯಣಮ್ ।
ಪರಿತ್ರಾತಾ ತ್ವಮಸ್ಮಾಕಂ ವಿನಿವರ್ತಯ ಚಾಪದಮ್ ॥ ೨೫ ॥

ಶರಣಂ ಭವ ವಿಪ್ರೇಂದ್ರ ವಿಪ್ರೇಂದ್ರಾಣಾಂ ವಿಶೇಷತಃ ।
ಸಾಗರೈರ್ದಹ್ಯಮಾನಾನಾಂ ಲೋಕತ್ರಯನಿವಾಸಿನಾಮ್ ॥ ೨೬ ॥

ನನು ವೈ ಸಾತ್ತ್ವಿಕೀ ಚೇಷ್ಟಾ ಭವತೀಹ ಭವಾದೃಶಾಮ್ ।
ತ್ರಾತುಮರ್ಹಸಿ ತಸ್ಮಾತ್ತ್ವಂ ಲೋಕಾನಸ್ಮಾಂಶ್ಚ ಸುವ್ರತ ॥ ೨೭ ॥

ನ ಚೇದಕಾಲೇ ಭಗವನ್ ವಿನಂಕ್ಷ್ಯತ್ಯಖಿಲಂ ಜಗತ್ ।
ಜೈಮಿನಿರುವಾಚ :—
ಇತ್ಯುಕ್ತಃ ಸಕಲೈರ್ದೇವೈರುನ್ಮೀಲ್ಯ ನಯನೇ ಶನೈಃ ॥ ೨೮ ॥

ವಿಲೋಕ್ಯ ತಾನುವಾಚೇದಂ ಕಪಿಲಃ ಸೂನೃತಂ ವಚಃ ।
ಸ್ವಕರ್ಮಣೈವ ನಿರ್ದಗ್ಧಾಃ ಪ್ರವಿನಂಕ್ಷ್ಯಂತಿ ಸಾಗರಾಃ ॥ ೨೯ ॥

---

೨೫. ಮಹಾಮಹಿಮನಾದ ನೀನು ನಮಗೆ ಸೃಷ್ಟಿಕರ್ತೃವೂ, ರಕ್ಷಕನೂ, ಗುರುವೂ ಆಗಿದ್ದೀ ನಮಗೆ ನೀನೇ ಪರಮಗತಿಯು, ನೀನೇ ನಮ್ಮನ್ನು ಪರಿತ್ರಾಣ ಮಾಡುವವನು. ಆದುದರಿಂದ ನಮಗೆ ಬಂದ ವಿಪತ್ತನ್ನು ದೂರಮಾಡು.

೨೬. ವಿಪ್ರೇಂದ್ರನೆ! ವಿಶೇಷವಾಗಿ ಸಗರ ಪುತ್ರರಿಂದ ದಹಿಸಲ್ಪಡುತ್ತಿರುವ, ಲೋಕತ್ರಯದಲ್ಲಿ ವಾಸಮಾಡುವ ವಿಪ್ರೇಂದ್ರರಿಗೆ ನೀನು ವಿಪತ್ತನ್ನು ನಿವಾರಿಸಲು ಶರಣನಾಗು.

೨೭. ಸಾಧುವ್ರತಶೀಲನೆ! ನಿಮ್ಮಂತಹವರಿಗೆ ಸತ್ತ್ವಗುಣಮಯವಾದ ವ್ಯಾಪಾರವು ಸರ್ವ ಕಾಲದಲ್ಲಿಯೂ ಇರುವುದಲ್ಲವೆ; ಆದ್ದರಿಂದ ನೀನು ನಿಖಿಲ ಲೋಕಗಳನ್ನೂ ನಮ್ಮನ್ನೂ ರಕ್ಷಿಸಲು ಅರ್ಹನಾಗಿದ್ದೀಯೆ.

೨೮. ಭಗವಂತನೆ! ಹಾಗಿಲ್ಲದಿದ್ದರೆ ಸಕಲ ಜಗತ್ತು ಅಕಾಲದಲ್ಲಿ ನಾಶ ಹೊಂದುವುದು. ಜೈಮಿನಿ ಮುನಿಯು ಮತ್ತೆ ಮುಂದುವರಿಸಿ ಹೇಳಿದನು :—ದೇವತೆಗಳಿಂದ ಈ ರೀತಿಯಾಗಿ ಹೇಳಲ್ಪಟ್ಟ ಮುನಿಯು ಮೆಲ್ಲಗೆ ಕಣ್ಣುಗಳನ್ನು ತೆರೆದು ನೋಡಿದನು.

೨೯. ಕಪಿಲ ಮುನಿಯು ಅವರನ್ನು ನೋಡಿ ಈ ಪ್ರಿಯವಾದ ವಚನವನ್ನು ಆಡಿದನು. ಸಗರ ಪುತ್ರರು ತಮ್ಮ ದುಷ್ಕೃತ ಕರ್ಮದಿಂದಲೆ ಭಸ್ಮೀಭೂತರಾಗಿ ನಾಶವನ್ನು ಹೊಂದುವರು.

ಕಾಲೇ ಪ್ರಾಪ್ತೇ ತು ಯುಷ್ಮಾಭಿಃ ಸ ತಾವತ್ಪರಿಪಾಲ್ಯತಾಮ್ ।
ಅಹಂ ತು ಕಾರಣಂ ತೇಷಾಂ ವಿನಾಶಾಯ ದುರಾತ್ಮನಾಮ್ ॥ ೩೦ ॥

ಭವಿಷ್ಯಾಮಿ ಸುರಶ್ರೇಷ್ಠಾ ಭವತಾಮರ್ಥಸಿದ್ಧಯೇ ।
ಮಮ ಕ್ರೋಧಾಗ್ನಿವಿಪ್ಲುಷ್ಟಾಃ ಸಾಗರಾಃ ಪಾಪಚೇತಸಃ ॥ ೩೧ ॥

ಭವಿಷ್ಯಂತ್ಯಚಿರೇಣೈವ ಕಾಲೋಪಹತಬುದ್ಧಯಃ ।
ತಸ್ಮಾದ್ಗತಜ್ವರಾ ದೇವಾ ಲೋಕಾಶ್ಚೈವಾಕುತೋಭಯಾಃ ॥ ೩೨ ॥

ಭವಂತು ತೇ ದುರಾಚಾರಾಃ ಕ್ಷಿಪ್ರಂ ಯಾಸ್ಯಂತಿ ಸಂಕ್ಷಯಮ್ ।
ತದ್ಯೂಯಂ ನಿರ್ಭಯಾ ಭೂತ್ವಾ ವ್ರಜಧ್ವಂ ಸ್ವಾಂ ಪುರೀಂ ಪ್ರತಿ ॥೩೩॥

ಕಾಲಂ ಕಂಚಿತ್ಪ್ರತೀಕ್ಷಧ್ವಂ ತತೋಽಭೀಷ್ಟಮವಾಪ್ಸ್ಯಥ ।
ಕಪಿಲೇನೈವಮುಕ್ತಾಸ್ತೇ ದೇವಾಃ ಸರ್ವೇ ಸವಾಸವಾಃ ॥ ೩೪ ॥

---

೩೦. ಆದರೆ ಅಂತಹ ಕಾಲಸನ್ನಿವೇಶವು ಪ್ರಾಪ್ತವಾಗಬೇಕು, ಅಂತಹ ಕಾಲವು ಪ್ರತೀಕ್ಷಿಸಲ್ಪಡಲಿ, ಆ ದುರಾತ್ಮರಾದ ಸಗರ ಪುತ್ರರ ನಾಶಕ್ಕೆ ನಾನು ಕಾರಣನಾಗುವೆನು.

೩೧. ಸುರಶ್ರೇಷ್ಠರೆ! ನಾನು ನಿಮ್ಮ ಇಷ್ಟಾರ್ಥಪ್ರಾಪ್ತಿಗೆ ಸಹಾಯನಾಗುವೆನು. ಪಾಪಶೀಲವಾದ ಮಾನಸವುಳ್ಳ ಸಗರ ಪುತ್ರರು ನನ್ನ ಕ್ರೋಧಾಗ್ನಿ ಜ್ವಾಲೆಯಿಂದ ದಗ್ಧರಾಗುವರು.

೩೨. ಕಾಲ ವಿಶೇಷದಿಂದ ನಷ್ಟವಾದ ವಿವೇಕ ಬುದ್ಧಿಯುಳ್ಳವರಾಗಿ ಶೀಘ್ರವಾಗಿ ಅವರು ನಾಶವನ್ನು ಹೊಂದುವರು. ಆದ್ದರಿಂದ ದೇವತೆಗಳು ಸಂತಾಪವನ್ನು ಬಿಡಲಿ, ಲೋಕಗಳು ನಿರ್ಭಯಾವಸ್ಥೆಯನ್ನು ಹೊಂದಲಿ.

೩೩. ದುರಾಚಾರವುಳ್ಳ ಆ ಅಧಮರು ಕ್ಷಿಪ್ರದಲ್ಲಿ ಕ್ಷಯವನ್ನು ಹೊಂದುವರು, ಆದುದರಿಂದ ನೀವೆಲ್ಲರೂ ನಿರ್ಭಯರಾಗಿ ಈಗ ನಿಮ್ಮ ನಗರಕ್ಕೆ ಪ್ರಯಾಣಮಾಡಿರಿ.

೩೪. ಕೆಲವು ಕಾಲವನ್ನು ಮಾತ್ರ ಪ್ರತೀಕ್ಷೆಮಾಡಿರಿ. ಅನಂತರದಲ್ಲಿ ನಿಮ್ಮ ಇಷ್ಟವನ್ನು ಹೊಂದುತ್ತೀರಿ. ಹೀಗೆಂದು ಇಂದ್ರನು ಮುಂತಾದ ಸಕಲ ದೇವತೆಗಳು ಕಪಿಲಮುನಿಯಿಂದ ಹೇಳಲ್ಪಟ್ಟರು.

ತಂ ಪ್ರಣಮ್ಯ ತತೋ ಜಗ್ಮುಃ ಪ್ರತೀತಾಸ್ತ್ರಿದಿವಂ ಪ್ರತಿ ।
ಏತಸ್ಮಿನ್ನಂತರೇ ರಾಜಾ ಸಗರಃ ಪೃಥಿವೀಪತಿಃ ॥ ೩೫ ॥

ವಾಜಿಮೇಧಂ ಮಹಾಯಜ್ಞಂ ಕರ್ತುಂ ಚಕ್ರೇ ಮನೋರಥಮ್ ।
ಆಹೃತ್ಯ ಸರ್ವಸಂಭಾರಾನ್ ವಸಿಷ್ಠಾನುಮತೇ ತದಾ ॥ ೩೬ ॥

ಔರ್ವಾದ್ಯೈಃ ಸಹಿತೋ ವಿಪ್ರೈರ್ಯಥಾವದ್ದೀಕ್ಷಿತೋಽಭವತ್ ।
ದೀಕ್ಷಾಂ ಪ್ರವಿಷ್ಟೋ ನೃಪತಿರ್ಹಯಸಂಚಾರಣಾಯ ವೈ ॥ ೩೭ ॥

ಪುತ್ರಾನ್ ಸರ್ವಾನ್ ಸಮಾಹೂಯ ಸಂದಿದೇಶ ಮಹಾಯಶಾಃ ।
ಸಂಚಾರಯಿತ್ವಾ ತುರಗಂ ಪರೀತ್ಯ ಪೃಥಿವೀತಲೇ ॥ ೩೮ ॥

ಕ್ಷಿಪ್ರಂ ಮಮಾಂತಿಕಂ ಪುತ್ರಾಃ ಪುನರಾಹರ್ತುಮರ್ಹಥ ।
ಜೈಮಿನಿರುವಾಚ :—
ತತಸ್ತೇ ಪಿತುರಾದೇಶಾತ್ತಮಾದಾಯ ತುರಂಗಮಮ್ ॥ ೩೯ ॥

---

೩೫. ಆಗ ಆ ಎಲ್ಲ ದೇವತೆಗಳು ಮುನಿಯನ್ನು ಪ್ರಣಾಮಮಾಡಿ ನಂಬಿದವರಾಗಿ ಸ್ವರ್ಗಲೋಕವನ್ನು ಕುರಿತು ಹೊರಟು ಹೋದರು. ಈ ಸಮಯದಲ್ಲಿ ಭೂಪತಿಯಾದ ಸಗರ ರಾಜನು ಒಂದು ಸುಕೃತ ಸಮಾರಂಭವನ್ನು ಮಾಡಲು ಯೋಚಿಸಿದನು.

೩೬. ಆಗ ವಸಿಷ್ಠ ಮಹಾ ಮುನಿಯ ಅನುಮತಿಯನ್ನು ಪಡೆದು ಸರ್ವ ಸಾಮಗ್ರಿಗಳನ್ನು ಸಿದ್ಧಪಡಿಸಿಕೊಂಡು ಅಶ್ವಮೇಧವೆಂಬ ಮಹಾ ಯಜ್ಞವನ್ನು ಮಾಡಲು ಮನಸ್ಸಿನಲ್ಲಿ ಆಲೋಚಿಸಿದನು.

೩೭. ಮತ್ತು ಔರ್ವಮುನಿ ಮುಂತಾದ ವಿಪ್ರರಿಂದೊಡಗೂಡಿ ಯಥಾವಿಧಿಯಾಗಿ ದೀಕ್ಷೆಯನ್ನು ಕೈಗೊಂಡನು, ದೀಕ್ಷೆಯ ವಿಧಿಯನ್ನು ಪ್ರವೇಶಿಸಿದ ಕೂಡಲೆ ಯಾಗಾಂಗವಾಗಿ ಅಶ್ವವನ್ನು ಬಿಡಲು ಉಪಕ್ರಮಿಸಿದನು.

೩೮ ಆಗ ಮಹಾ ಯಶಸ್ವಿಯಾದ ರಾಜನು ತನ್ನ ಎಲ್ಲ ಪುತ್ರರನ್ನು ಕರೆದು ಈ ರೀತಿಯಾಗಿ ಆಜ್ಞಾಪಿಸಿದನು, ಅಶ್ವವನ್ನು ಭೂಮಿಯಲ್ಲೆಲ್ಲ ಸಂಚಾರ ಮಾಡಿಸಿ ಸುತ್ತಿಕೊಂಡು ಬರಬೇಕು.

೩೯. ಪುತ್ರರೆ ! ಭೂಸಂಚಾರ ಮುಗಿದಮೇಲೆ ಕ್ಷಿಪ್ರದಲ್ಲಿ ನನ್ನ ಸಮೀಪಕ್ಕೆ ಇದನ್ನು ತರಲು ನೀವು ಅರ್ಹರು-ಹೀಗೆಂದು ಆದೇಶವಿತ್ತನು, ಜೈಮಿನಿ ಮುನಿಯು ಮುಂದೆ ಹೇಳಿದನು, ತರುವಾಯ ಆ ಪುತ್ರರು ತಂದೆಯ ಆದೇಶದಂತೆ ಅಶ್ವವನ್ನು ತೆಗೆದುಕೊಂಡರು.

ಪರಿಚಂಕ್ರಮಯಾಮಾಸುಃ ಸಕಲೇ ಕ್ಷಿತಿಮಂಡಲೇ ।
ವಿಧಿಚೋದನಯೈವಾಶ್ವಃ ಸ ಭೂಮೌ ಪರಿವರ್ತಿತಃ ॥ ೪೦ ॥

ನ ತು ದಿಗ್ವಿಜಯಾರ್ಥಾಯ ಕರಾದಾನಾರ್ಥಮೇವ ಚ ।
ಪೃಥಿವೀ ಭೂಭುಜಾ ತೇನ ಪೂರ್ವಮೇವ ವಿನಿರ್ಜಿತಾ ॥ ೪೧ ॥

ನೃಪಾಶ್ಚೋದಾರವೀರ್ಯೇಣ ಕರದಾಃ ಸಮರೇ ಕೃತಾಃ ।
ತತಸ್ತೇ ರಾಜತನಯಾ ನಿಸ್ತೋಯೇ ಲವಣಾಂಬುಧೌ ॥ ೪೨ ॥

ಭೂತಲೇ ವಿವಿಶುರ್ಹೃಷ್ಟಾಃ ಪರಿವಾರ್ಯ ತುರಂಗಮಮ್ ॥ ೪೩ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ದ್ವಿಪಂಚಾಶತ್ತಮೋಽಧ್ಯಾಯಃ.

---

೪೦. ಮತ್ತು ಸಮಸ್ತ ಭೂಮಂಡಲದಲ್ಲಿ ಅದನ್ನು ಸಂಚಾರಮಾಡಿಸಿದರು, ಆ ಅಶ್ವವು ಶಾಸ್ತ್ರ ವಿಧಿಯ ಚೋದನೆಯಿಂದಲೇ ಭೂಮಿಯಲ್ಲೆಲ್ಲ ತಿರುಗಾಡಿಸಲ್ಪಟ್ಟಿತು.

೪೧. ನೂತನವಾಗಿ ದಿಗ್ವಿಜಯಕ್ಕೋಸ್ಕರವಾಗಲಿ, ಅಥವಾ ಪೊಗದಿಯನ್ನು ಸ್ವೀಕಾರಮಾಡುವುದಕ್ಕಾಗಲಿ ಅಶ್ವಸಂಚಾರಣವಾದುದಲ್ಲ. ಆ ನೃಪತಿಯಿಂದ ಪೂರ್ವದಲ್ಲಿ ಸಕಲ ರಾಜರು ಗೆಲ್ಲಲ್ಪಟ್ಟಿದ್ದರು.

೪೨. ಮತ್ತು ಯಥೇಚ್ಛಶಕ್ತಿ–ವೀರ್ಯಗಳಿಂದ ಕೂಡಿದ ಸಗರ ರಾಜನಿಂದ ಸಮಸ್ತ ರಾಜರು ಪೊಗದಿ ಕೊಡುವವರಾಗಿ ಮಾಡಲ್ಪಟ್ಟಿದ್ದರು. ತರುವಾಯ ರಾಜಪುತ್ರರು ಜಲರಹಿತವಾದ ಲವಣ ಸಮುದ್ರದಲ್ಲಿ ಸಂಚಾರಮಾಡಿದರು.

೪೩. ಮತ್ತು ರಾಜಪುತ್ರರು ಭೂಮಿ ಸಮುದ್ರ ಪ್ರಾಂತಗಳಲ್ಲಿ ಅಶ್ವವನ್ನು ಸಂಚಾರಮಾಡಿಸಿ ಹರ್ಷೋನ್ಮತ್ತರಾಗಿ ಅಶ್ವವನ್ನು ಸುತ್ತುವರಿದು ಸಾಗರದ ಭೂಮಿಯ ತಲಭಾಗಕ್ಕೆ ಪ್ರವೇಶಿಸಿದರು.

ಬ್ರಹ್ಮಾಂಡ ಪುರಾಣದಲ್ಲಿ ಉತ್ತರಾರ್ಧದಲ್ಲಿ ಐವತ್ತೆರಡನೆಯ ಅಧ್ಯಾಯವು ಸಮಾಪ್ತವು.

## ತ್ರಿಪಂಚಾಶತ್ತಮೋಽಧ್ಯಾಯಃ

---

**ಜೈಮಿನಿರುವಾಚ :—**

**ತೇಷು ತತ್ರ ನಿವಿಷ್ಟೇಷು ವಾಸವೇನ ಪ್ರಚೋದಿತಃ ।**
**ಜಹಾರ ತುರಗಂ ವಾಯುಸ್ತತ್ಕ್ಷಣೇನ ರಸಾತಲಮ್ ॥ ೧ ॥**

**ಅದೃಷ್ಟಮಶ್ವಂ ತೈಃ ಸರ್ವೈರಪಹೃತ್ಯ ಸದಾಗತಿಃ ।**
**ಅನಯತ್ತತ್ಪಥಾ ರಾಜನ್ ಕಪಿಲಸ್ಯಾಂತಿಕಂ ಮುನೇಃ ॥ ೨ ॥**

**ತತಃ ಸಮಾಕುಲಾಃ ಸರ್ವೇ ವಿನಷ್ಟೇಽಶ್ವೇ ನೃಪಾತ್ಮಜಾಃ ।**
**ಪರೀತ್ಯ ವಸುಧಾಂ ಸರ್ವಾಂ ಪ್ರಮಾರ್ಗಂತಸ್ತುರಂಗಮಮ್ ॥ ೩ ॥**

**ವಿಚಿತ್ಯ ಪೃಥಿವೀಂ ತೇ ತು ಸಪುರಾಚಲಕಾನನಾಮ್ ।**
**ಅಪಶ್ಯಂತೋ ಯಜ್ಞಪಶುಂ ದುಃಖಂ ಮಹದವಾಪ್ನುವನ್ ॥ ೪ ॥**

---

೧. ಜೈಮಿನಿ ಮಹರ್ಷಿಯು ಇಂತೆಂದನು :—ಆ ಸಗರರಾಜ ಪುತ್ರರು ಸಾಗರ ದಲ್ಲಿ ಭೂತಲವನ್ನು ಪ್ರವೇಶಿಸಲಾಗಿ ಇಂದ್ರನಿಂದ ಪ್ರೇರೇಪಿಸಲ್ಪಟ್ಟ ವಾಯುದೇವನು ಆ ಕ್ಷಣದಲ್ಲಿ ಅಶ್ವವನ್ನು ಪಾತಾಲಕ್ಕೆ ಅಪಹರಿಸಿಕೊಂಡು ಹೋದನು.

೨. ರಾಜನೆ! ವಾಯುದೇವನು ಅವರೆಲ್ಲರಿಗೆ ಕಾಣದಂತೆ ಅಶ್ವವನ್ನು ಅಪಹರಿಸಿ ಪಾತಾಲ ಲೋಕಗಾಮಿಯಾದ ಮಾರ್ಗದಿಂದ ಕಪಿಲ ಮಹಾಮುನಿಯ ಸಮೀಪಕ್ಕೆ ತಂದನು.

೩. ತರುವಾಯ ಅಶ್ವವು ಮಾಯವಾದುದನ್ನು ತಿಳಿದು ಎಲ್ಲ ರಾಜಪುತ್ರರು ವಿಷಣ್ಣರಾಗಿ ಅಶ್ವವನ್ನು ಹುಡುಕುತ್ತ ಎಲ್ಲ ಭೂಮಿಯನ್ನು ಸುತ್ತಿದರು.

೪. ಭೂಮಿಯಲ್ಲಿರುವ ನಗರ, ಪರ್ವತ ಮತ್ತು ಅರಣ್ಯ ಮುಂತಾದ ಸರ್ವ ಪ್ರದೇಶಗಳಲ್ಲಿ ಹುಡುಕಿ ಯಜ್ಞಪಶುವಾದ ಅಶ್ವವನ್ನು ಕಾಣದ ಆ ರಾಜಪುತ್ರರು ಮಹತ್ತರವಾದ ದುಃಖವನ್ನು ಹೊಂದಿದರು.

ತತೋಽಯೋಧ್ಯಾಂ ಸಮಾಸಾದ್ಯ ಋಷಿಭಿಃ ಪರಿವಾರಿತಾಮ್ ।
ದೃಷ್ಟ್ವಾ ಪ್ರಣಮ್ಯ ಪಿತರಂ ತಸ್ಮೈ ಸರ್ವಂ ನ್ಯವೇದಯನ್ ॥ ೫ ॥

ಪರೀತ್ಯ ಪೃಥ್ವೀಮಸ್ಮಾಭಿರ್ನಿವಿಷ್ಟೇ ವರುಣಾಲಯೇ ।
ರಕ್ಷ್ಯಮಾಣೋಽಪಿ ಪಶ್ಯದ್ಭಿಃ ಕೇನಾಪಿ ತುರಗೋ ಹೃತಃ ॥ ೬ ॥

ಇತ್ಯುಕ್ತಸ್ತೈ ರುಷಾವಿಷ್ಟಸ್ತಾನುವಾಚ ನೃಪೋತ್ತಮಃ ।
ಪ್ರಯಾತ್ಯಧ್ವಮಧರ್ಮಿಷ್ಠಾಃ ಸರ್ವೇ ನಾವೃತ್ತಯೇ ಪುನಃ ॥ ೭ ॥

ಕಥಂ ಭವದ್ಭಿರ್ಜೀವದ್ಭಿರ್ವಿನಷ್ಟೋ ವೈ ದುರಾತ್ಮಭಿಃ ।
ತುರಗೇಣ ವಿನಾ ಸತ್ಯಂ ನೇಹಾಗಮನಮಸ್ತಿ ವಃ ॥ ೮ ॥

ತತಃ ಸಮೇತ್ಯ ತಸ್ಮಾತ್ತೇ ಸಂಪ್ರಯಾತಾಃ ಪರಸ್ಪರಮ್ ।
ಊಚುರ್ನ ದೃಶ್ಯತೇಽದ್ಯಾಪಿ ತುರಗಃ ಕಿಂ ಪ್ರಕುರ್ಮಹೇ ॥ ೯ ॥

---

೫. ಅನಂತರದಲ್ಲಿ ಅನೇಕ ಋಷಿಗಳಿಂದ ತುಂಬಿರುವ ಅಯೋಧ್ಯಾನಗರಿಗೆ ಬಂದು ತಂದೆಯನ್ನು ನೋಡಿ ನಮಸ್ಕರಿಸಿ ಅವನಿಗೆ ನಡೆದಿರುವ ಸಕಲ ವೃತ್ತಾಂತವನ್ನು ತಿಳಿಸಿದರು.

೬. ನಮ್ಮಿಂದ ಭೂಮಿಯನ್ನೆಲ್ಲ ಸಂಚರಿಸಿ ಸಮುದ್ರವು ಆಕ್ರಮಿಸಲ್ಪಡಲಾಗಿ ಅಶ್ವವನ್ನು ರಕ್ಷಿಸಿಕೊಂಡು ನೋಡುತ್ತಲಿರುವ ಹಾಗೆಯೆ ಯಾರೊ ಒಬ್ಬನಿಂದಲೂ ಅಶ್ವವು ಅಪಹರಿಸಲ್ಪಟ್ಟಿತು.

೭. ಈ ರೀತಿಯಾಗಿ ಅವರಿಂದ ಹೇಳಲ್ಪಟ್ಟ ನೃಪೋತ್ತಮನು ಕೋಪಾವಿಷ್ಟನಾಗಿ ಅವರನ್ನು ಕುರಿತು ಹೀಗೆ ಹೇಳಿದನು :—ಅಧಾರ್ಮಿಕರಾದ ನೀವೆಲ್ಲರೂ ಹೊರಟುಹೋಗಿ, ಮತ್ತೆ ಹಿಂದಿರುಗಿ ಬರುವುದು ಬೇಡ.

೮. ನೀವೆಲ್ಲರೂ ಜೀವಂತರಾಗಿರುವಾಗ ದುಷ್ಟಾಂತಃಕರಣವುಳ್ಳವರಿಂದ ಅಶ್ವವು ಅಪಹರಿಸಲ್ಪಟ್ಟಿರುವುದು ಹೇಗೆ? ಅಶ್ವವನ್ನು ಹುಡುಕಿ ಹಿಂದಕ್ಕೆ ತರದಿದ್ದರೆ ನಿಜವಾಗಿ ನಿಮಗೆ ಇಲ್ಲಿ ಆಗಮನವು ಇಲ್ಲ.

೯. ತರುವಾಯ ಅವರೆಲ್ಲರೂ ಒಟ್ಟುಗೂಡಿ ಅಲ್ಲಿಂದ ಹೊರಟು ಪರಸ್ಪರವಾಗಿ ಮಾತನಾಡಿಕೊಂಡರು, ಈಗಲೂ ಅಶ್ವವು ಎಲ್ಲೆಲ್ಲಿಯೂ ಕಾಣಿಸುವುದಿಲ್ಲ. ನಾವು ಏನು ಮಾಡೋಣ?

ವಸುಧಾ ವಿಜಿತಾಸ್ಮಾಭಿಃ ಸಶೈಲವನಕಾನನಾ ।
ನ ಚಾಪಿ ದೃಶ್ಯತೇ ವಾಜೀ ತದ್ವಾರ್ತಾಪಿ ನ ಕುತ್ರಚಿತ್ ॥ ೧೦ ॥

ತಸ್ಮಾದಬ್ಧೇಃ ಸಮಾರಭ್ಯ ಪಾತಾಲಾವಧಿ ಮೇದಿನೀಮ್ ।
ವಿಭಜ್ಯ ಖಾತ್ವಾ ಪಾತಾಲಂ ವಿವಿಶಾಮ ತುರಂಗಮಮ್ ॥ ೧೧ ॥

ಇತಿ ಕೃತ್ವಾ ಮತಿಂ ಸರ್ವೇ ಸಾಗರಾಃ ಕ್ರೂರನಿಶ್ಚಯಾಃ ।
ನಿಚಖ್ನುರ್ಭೂಮಿಮಂಭೋಧೇಸ್ತಟಾದಾರಭ್ಯ ಸರ್ವತಃ ॥ ೧೨ ॥

ತೈಃ ಖನ್ಯಮಾನಾ ವಸುಧಾ ರರಾಸ ಭೃಶವಿಹ್ವಲಾ ।
ಚುಕ್ರುಶುಶ್ಚಾಪಿ ಭೂತಾನಿ ದೃಷ್ಟ್ವಾ ತೇಷಾಂ ವಿಚೇಷ್ಟಿತಮ್ ॥ ೧೩ ॥

ತತಸ್ತೇ ಭಾರತಂ ಖಂಡಂ ಖಾತ್ವಾ ಸಂಕ್ಷಿಪ್ತಭೂತಲೇ ।
ಭೂಮೇರ್ಯೋಜನಸಾಹಸ್ರಂ ಯೋಜಯಾಮಾಸುರಂಬುಧೌ ॥ ೧೪ ॥

---

೧೦. ನಮ್ಮಿಂದ ಪರ್ವತ, ಅರಣ್ಯ, ಮತ್ತು ದುರ್ಗಭೂಮಿ ಎಲ್ಲ ಸ್ಥಳಗಳಲ್ಲಿ ಭೂಮಿಯು ಹುಡುಕಲ್ಪಟ್ಟಿತು. ಆದರೆ ಅಶ್ವವು ಕಾಣುವುದಿಲ್ಲ. ಎಲ್ಲೆಲ್ಲಿಯೂ ಅಶ್ವದ ವಾರ್ತೆಯು ಕೂಡ ತಿಳಿಯಲಿಲ್ಲ.

೧೧. ಆದ್ದರಿಂದ ಸಮುದ್ರದಿಂದ ಆರಂಭಿಸಿ ಪಾತಾಲದ ವರೆಗೆ ಭೂಮಿಯನ್ನು ಭೇದಿಸಿ ವಿಂಗಡಿಸಿ ಅಗೆದು ಪಾತಾಲಲೋಕವನ್ನು ಪ್ರವೇಶಿಸಿ ಅಶ್ವವನ್ನು ಅನ್ವೇಷಣ ಮಾಡೋಣ.

೧೨. ಎಲ್ಲ ಸಗರ ರಾಜಪುತ್ರರು ಈ ರೀತಿಯಾಗಿ ಸಂಕಲ್ಪವನ್ನು ಮಾಡಿ ಕ್ರೂರವಾದ ನಿಶ್ಚಯವುಳ್ಳವರಾಗಿ ಸಮುದ್ರದ ತೀರಭೂಮಿಯನ್ನು ಆರಂಭಿಸಿ ಎಲ್ಲ ಕಡೆಯಲ್ಲಿಯೂ ಭೂಮಿಯನ್ನು ಅಗೆದರು.

೧೩. ಭೂಮಿಯು ಅವರಿಂದ ಅಗೆಯಲ್ಪಡುತ್ತ ಅದನ್ನು ಸಹಿಸಲಾರದೆ ಹೆಚ್ಚಾಗಿ ಕಳವಳಗೊಂಡು ಕೂಗಿಕೊಂಡಿತು. ಮತ್ತು ಅವರ ಈ ಉದ್ಯೋಗವನ್ನು ಕಂಡು ಎಲ್ಲ ಪ್ರಾಣಿಗಳು ಕೂಗಿದುವು.

೧೪. ಅನಂತರದಲ್ಲಿ ಅವರು ಭೂತಲದಲ್ಲಿ ಭರತಖಂಡವನ್ನು ಅಗೆದುಹಾಕಿ ಸಂಕೋಚಪಡಿಸಿ ಭೂಮಿಯ ಸಹಸ್ರಯೋಜನ ಪರಿಮಾಣದ ವಿಸ್ತಾರಭಾಗವನ್ನು ಸಮುದ್ರದಲ್ಲಿ ಹಾಕಿದರು.

ಆಪಾತಾಲತಲಂ ತೇ ತು ಖನಂತೋ ಮೇದಿನೀತಲಮ್ ।
ಚರಂತಮಶ್ವಂ ಪಾತಾಲೇ ದದೃಶುರ್ನೃಪನಂದನಾಃ ॥ ೧೫ ॥

ಸಂಪ್ರಹೃಷ್ಟಾಸ್ತತಃ ಸರ್ವೇ ಸಮೇತ್ಯ ಚ ಸಮಂತತಃ ।
ಸಂತೋಷಾಜ್ಜಹಸುಃ ಕೇಚಿನ್ನನೃತುಶ್ಚ ಮುದಾನ್ವಿತಾಃ ॥ ೧೬ ॥

ದದೃಶುಶ್ಚ ಮಹಾತ್ಮಾನಂ ಕಪಿಲಂ ದೀಪ್ತತೇಜಸಮ್ ।
ವೃದ್ಧಂ ಪದ್ಮಾಸನಾಸೀನಂ ನಾಸಾಗ್ರನ್ಯಸ್ತಲೋಚನಮ್ ॥ ೧೭ ॥

ಋಜ್ವಾಯತಶಿರೋಗ್ರೀವಂ ಪುರೋವಿಷ್ಟಬ್ಧವಕ್ಷಸಮ್ ।
ಸ್ವತೇಜಸಾಭಿಸರತಾ ಪರಿಪೂರ್ಣೇನ ಸರ್ವತಃ ॥ ೧೮ ॥

ಪ್ರಕಾಶ್ಯಮಾನಃ ಪರಿತೋ ನಿವಾತಸ್ಥಪ್ರದೀಪವತ್ ।
ಸ್ವಾಂತಃಪ್ರಕಾಶಿತಾಶೇಷವಿಜ್ಞಾನಮಯವಿಗ್ರಹಮ್ ॥ ೧೯ ॥

---

೧೫. ಹೀಗೆ ಆ ರಾಜಪುತ್ರರು ಭೂತಲವನ್ನು ಪಾತಾಲದ ತಲದವರೆಗೆ ಅಗೆಯುತ್ತ ಪಾತಾಲದಲ್ಲಿ ಅಶ್ವವು ಸಂಚರಿಸುತ್ತ ಇರುವುದನ್ನು ಕಂಡರು.

೧೬. ತರುವಾಯ ಅವರು ಸಂತೋಷಗೊಂಡವರಾಗಿ ಸುತ್ತಲೂ ಗುಂಪಾಗಿ ಸೇರಿ ಸಂತೋಷದಿಂದ ಕೆಲವರು ನಕ್ಕರು. ಮತ್ತೆ ಕೆಲವರು ಹರ್ಷದಿಂದ ಮತ್ತರಾಗಿ ಕುಣಿದಾಡಿದರು.

೧೭. ಮತ್ತು ಜ್ವಲಿಸುತ್ತಿದ್ದ ತೇಜಸ್ಸುಳ್ಳವನೂ, ವೃದ್ಧನೂ, ಪದ್ಮಾಸನದಲ್ಲಿ ಕುಳಿತಿರುವವನೂ, ಮತ್ತು ಧ್ಯಾನಕ್ರಮದಿಂದ ನಾಸಾಗ್ರದಲ್ಲಿ ದೃಷ್ಟಿಯನ್ನು ಇರಿಸಿದವನೂ ಆದ ಮಹಾತ್ಮ ಕಪಿಲ ಮುನಿಯನ್ನು ನೋಡಿದರು.

೧೮. ಮತ್ತು ಆ ಮಹಾಮುನಿಯು ಸರಳವೂ ದೀರ್ಘವೂ ಆದ ಶಿರಸ್ಸು-ಕತ್ತುಗಳ ಸನ್ನಿವೇಶವುಳ್ಳವನೂ, ಮುಂದಕ್ಕೆ ಚಾಚಿಕೊಂಡಿರುವ ವಕ್ಷಸ್ಸು ಉಳ್ಳವನೂ, ಸುತ್ತಲೂ ಪ್ರಸರಿಸುತ್ತಿರುವ ತನ್ನ ಪೂರ್ಣ ತೇಜಸ್ಸಿನಿಂದ ಕೂಡಿದವನೂ ಆಗಿದ್ದನು.

೧೯. ಸುತ್ತಲೂ ತುಂಬಿದ ತನ್ನ ತೇಜಸ್ಸಿನಿಂದ ನಿವಾತ ಪ್ರದೇಶದಲ್ಲಿದ್ದ ದೀಪದಂತೆ ಸ್ಥಿರವಾಗಿ ಪ್ರಕಾಶಿಸುತ್ತಲಿರುವವನೂ, ಮತ್ತು ಅಂತಃಕರಣದಲ್ಲಿ ಪ್ರಕಾಶಿಸುವ ಅಖಂಡಾಶೇಷ ವಿಜ್ಞಾನಮಯ ಮೂರ್ತಿಯುಳ್ಳವನೂ ಆಗಿದ್ದನು.

ಸಮಾಧಿಗತಚಿತ್ತಂ ತಂ ನಿಭೃತಾಂಭೋಧಿಸನ್ನಿಭಮ್ ।
ಆರೂಢಯೋಗಂ ವಿಧಿವದ್ಧ್ಯೇಯಸಂಲೀನಮಾನಸಮ್ ॥ ೨೦ ॥

ಯೋಗೀಂದ್ರಪ್ರವರಂ ಶಾಂತಂ ಜ್ವಾಲಾಮಾಲಮಿವಾನಲಮ್ ।
ವಿಲೋಕ್ಯ ತತ್ರ ತಿಷ್ಠಂತಂ ವಿಮೃಶಂತಃ ಪರಸ್ಪರಮ್ ॥ ೨೧ ॥

ಮುಹೂರ್ತಮಿವ ತೇ ರಾಜನ್ ಸಾಧ್ವಸಂ ಪರಮಂ ಗತಾಃ ।
ತತೋಽಯಮಶ್ವಹರ್ತೇತಿ ಸಾಗರಾಃ ಕಾಲಚೋದಿತಾಃ ॥ ೨೨ ॥

ಪರಿವವ್ರುರ್ದುರಾತ್ಮಾನಃ ಕಪಿಲಂ ಮುನಿಸತ್ತಮಮ್ ।
ತತಸ್ತಂ ಪರಿವಾರ್ಯೋಚುಶ್ಚೋರೋಽಯಂ ನಾತ್ರ ಸಂಶಯಃ ॥ ೨೩ ॥

ಅಶ್ವಹರ್ತಾ ತತೋ ಹ್ಯೇಷ ವಧ್ಯೋಽಸ್ಮಾಭಿರ್ದುರಾಶಯಃ ।
ತಂ ಪ್ರಾಕೃತವದಾಸೀನಂ ತೇ ಸರ್ವೇ ಹತಬುದ್ಧಯಃ ॥ ೨೪ ॥

---

೨೦. ಸಮಾಧಾನವನ್ನು ಹೊಂದಿದ ಚಿತ್ತವನ್ನು ಹೊಂದಿದವನೂ, ನಿಶ್ಚಲವಾದ ಸಮುದ್ರದಂತೆ ಇರುವವನೂ ಶಾಸ್ತ್ರವಿಧಿಯನ್ನು ಅನುಸರಿಸಿ ಯೋಗಾರೂಢನೂ ಮತ್ತು ಧ್ಯೇಯವಸ್ತುವಿನಲ್ಲಿ ಲಯ ಹೊಂದಿದ ಮಾನಸವುಳ್ಳವನೂ ಆಗಿದ್ದನು.

೨೧. ರಾಜಪುತ್ರರು ಅಲ್ಲಿ ಶಾಂತವಾದ ಜ್ವಾಲಾಮಾಲೆಗಳುಳ್ಳ ಅಗ್ನಿಯಂತೆ ಭಾಸಿಸುತ್ತಿದ್ದ ಯೋಗೀಂದ್ರ ಪ್ರವರನಾದ ಕಪಿಲಮುನಿಯನ್ನು ಕಂಡು ಅನ್ಯೋನ್ಯವಾಗಿ ವಿಮರ್ಶೆಮಾಡಿದರು.

೨೨. ರಾಜನೆ! ಅವರು ಮುನಿಯನ್ನು ಕಂಡೊಡನೆ ಒಂದು ಮುಹೂರ್ತಕಾಲ ಭಯವನ್ನು ಹೊಂದಿದಂತೆ ಆದರು, ಅನಂತರದಲ್ಲಿ ಆ ಸಾಗರರು ಕಾಲವಶರಾಗಿ "ಇವನು ನಮ್ಮ ಅಶ್ವವನ್ನು ಅಪಹರಿಸಿರುವನುಎಂದು" ಭಾವಿಸಿದರು.

೨೩. ಮತ್ತು ಆ ದುರಾತ್ಮರು ಇಂತೆಂದು ಭಾವಿಸಿ ಮುನಿಪ್ರವರನಾದ ಕಪಿಲಋಷಿಯನ್ನು ಸುತ್ತುವರಿದು ನಿಂತರು, ಅನಂತರದಲ್ಲಿ ಮುನಿಯನ್ನು ಹಾಗೆಯೆ ಸುತ್ತಿಕೊಂಡು ನಿಂತು "ಇವನು ಅಶ್ವಚೋರನು, ಇದರಲ್ಲಿ ಸಂಶಯವಿಲ್ಲ" ಎಂದು ಹೇಳಿದರು.

೨೪. ಮತ್ತು "ಇವನು ನಮ್ಮ ಅಶ್ವಚೋರನು" ಆದುದರಿಂದ ಈ ದುರಾಶಯನು ನಮ್ಮಿಂದ ವಧಿಸಲ್ಪಡಬೇಕು. ಹೀಗೆಂದು ವಿವೇಕಭ್ರಷ್ಟರಾದ ಆ ಎಲ್ಲ ಸಗರ ಪುತ್ರರು ಪ್ರಾಕೃತ ಪುರುಷನಂತೆ ಕುಳಿತಿರುವ ಮಹಾಮುನಿಯನ್ನು ತಿರಸ್ಕರಿಸಿದರು.

ಆಸನ್ನಮರಣಾಶ್ಚಕ್ರುರ್ಧರ್ಷಿತಂ ಮುನಿಮಂಜಸಾ ।
ಜೈಮಿನಿರುವಾಚ :—
ತತೋ ಮುನಿರದೀನಾತ್ಮಾ ಧ್ಯಾನಭಂಗಪ್ರಧರ್ಷಿತಃ ॥ ೨೫ ॥

ಕ್ರೋಧೇನ ಮಹತಾವಿಷ್ಟಶ್ಚುಕ್ಷುಭೇ ಕಪಿಲಸ್ತದಾ ।
ಪ್ರಚಚಾಲ ದುರಾಧರ್ಷೋ ಧರ್ಷಿತಸ್ತೈರ್ದುರಾತ್ಮಭಿಃ ॥ ೨೬ ॥

ವ್ಯಜೃಂಭತ ಚ ಕಲ್ಪಾಂತೇ ಮರುದ್ಭಿರಿವ ಚಾನಲಃ ।
ತಸ್ಯ ಚಾರ್ಣವಗಂಭೀರಾದ್ವಪುಷಃ ಕೋಪಪಾವಕಃ ॥ ೨೭ ॥

ದಿಧಕ್ಷುರಿವ ಪಾತಾಲಾಂಲ್ಲೋಕಾನ್ ಸಾಂಕರ್ಷಣೋಽನಲಃ ।
ಶುಶುಭೇ ಧರ್ಷಣಕ್ರೋಧಪರಾಮರ್ಶವಿದೀಪಿತಃ ॥ ೨೮ ॥

ಉನ್ಮೀಲಯತ್ತದಾ ನೇತ್ರೇ ವಹ್ನಿಚಕ್ರಸಮದ್ಯುತಿಃ ।
ತದಾಕ್ಷಿಣೀ ಕ್ಷಣಂ ರಾಜನ್ ರಾಜೇತಾಂ ಸುಭೃಶಾರುಣೇ ॥ ೨೯ ॥

---

೨೫. ಅವರು ಸಮೀಪಿಸಿದ ಮೃತ್ಯುಸಮಯವುಳ್ಳವರಾಗಿ ಬೇಗ ಮುನಿಯನ್ನು ತಿರಸ್ಕಾರ ಪಾತ್ರನನ್ನಾಗಿ ಮಾಡಿದರು. ಜೈಮಿನಿ ಮುನಿಯು ಇಂತೆಂದನು:— ಅನಂತರದಲ್ಲಿ ಉದಾರವಾದ ಅಂತಃಕರಣವುಳ್ಳ ಮುನಿಯು ಧ್ಯಾನಭಂಗದಿಂದ ತಿರಸ್ಕರಿಸಲ್ಪಟ್ಟವನಾದನು.

೨೬. ಆಗ ಕಪಿಲ ಮುನಿಯು ಹೆಚ್ಚಾದ ಕೋಪದಿಂದ ಕ್ಷೋಭಗೊಂಡನು, ಮತ್ತು ತಿರಸ್ಕಾರ ಪಾತ್ರನಲ್ಲದ ಆ ಮುನಿಯು ದುರಾತ್ಮರಿಂದ ತಿರಸ್ಕರಿಸಲ್ಪಟ್ಟು ಕೋಪಪರವಶನಾಗಿ ಚಲಿಸಿದನು.

೨೭. ಮತ್ತು ಪ್ರಲಯಕಾಲದಲ್ಲಿ ಗಾಳಿಯಿಂದ ಅಗ್ನಿಯಂತೆ ಕೋಪದಿಂದ ವಿಜೃಂಭಿಸಿದನು. ಆಗ ಸಮುದ್ರದಂತೆ ಗಂಭೀರವಾಗಿದ್ದ ಅವನ ಶರೀರದಿಂದ ಕೋಪಾಗ್ನಿಯು ಜ್ವಲಿಸಲು ಆರಂಭಿಸಿತು.

೨೮. ಸಂಕರ್ಷಣ ಮೂರ್ತಿಯಿಂದ ಉದ್ಭವಿಸಿದ ಆ ಕೋಪಾಗ್ನಿಯು ಪಾತಾಲ ಲೋಕಗಳನ್ನು ಸುಟ್ಟುಹಾಕುವಂತೆ ರಾಜಪುತ್ರರ ಉಪದ್ರವದಿಂದ ಉಂಟಾದ ಕ್ರೋಧ ಸಂಪರ್ಕದಿಂದ ಜ್ವಲಿಸುತ್ತ ಪ್ರಕಾಶಿಸಿತು.

೨೯. ರಾಜನೆ! ಆಗ ಮುನಿಯು ಅಗ್ನಿಚಕ್ರಕ್ಕೆ ಸಮಾನ ಕಾಂತಿಯುಳ್ಳ ತನ್ನ ಎರಡು ಕಣ್ಣುಗಳನ್ನು ತೆರೆದನು. ಆಗ ಆ ಕಣ್ಣುಗಳು ಒಂದು ಕ್ಷಣಕಾಲ ಹೆಚ್ಚಾಗಿ ಕೆಂಪಾಗಿ ಪ್ರಕಾಶಿಸಿದುವು.

ಪೂರ್ವಸಂಧ್ಯಾಸಮುದಿತೌ ಪುಷ್ಪವಂತಾವಿವಾಂಬರೇ ।
ತತೋಽಪ್ಯುದ್ವರ್ತಮಾನಾಭ್ಯಾಂ ನೇತ್ರಾಭ್ಯಾಂ ನೃಪನಂದನಾನ್ ॥ ೩೦ ॥

ಅನ್ವೈಕ್ಷತ ಚ ಗಂಭೀರಃ ಕೃತಾಂತಃ ಕಾಲಪರ್ಯಯೇ ।
ಕ್ರುದ್ಧಸ್ಯ ತಸ್ಯ ನೇತ್ರಾಭ್ಯಾಂ ಸಹಸಾ ಪಾವಕಾರ್ಚಿಷಃ ॥ ೩೧ ॥

ನಿಶ್ಚೇರುರಭಿತೋ ದಿಕ್ಷು ಕಾಲಾಗ್ನೇರಿವ ಸಂತತಾಃ ।
ಸಧೂಮಕವಲೋದಗ್ರಾಃ ಸ್ಫುಲಿಂಗೌಘಮುಚೋ ಮುಹುಃ ॥ ೩೨ ॥

ಮುನಿಕ್ರೋಧಾನಲಜ್ವಾಲಾಃ ಸಮಂತಾದ್ವ್ಯಾನಶುರ್ದಿಶಃ ।
ವ್ಯಾಲೋದರೋಗ್ರಕುಹರಾ ಜ್ವಾಲಾಸ್ತನ್ನೇತ್ರನಿರ್ಗತಾಃ ॥ ೩೩ ॥

ವಿರೇಜುರ್ನಿರ್ಭೃತಾಂಭೋಧೇರ್ವಡವಾಗ್ನೇರಿವಾರ್ಚಿಷಃ ।
ಕ್ರೋಧಾಗ್ನಿಃ ಸುಮಹಾರಾಜ ಜ್ವಾಲಾವ್ಯಾಪ್ತದಿಗಂತರಃ ॥ ೩೪ ॥

---

೩೦. ಪ್ರಾತಃ ಸಂಧ್ಯಾಕಾಲದಲ್ಲಿ ಪೂರ್ವ ದಿಕ್ಕಿನ ಆಕಾಶದಲ್ಲಿ ಉದಯಿಸಿದ ಚಂದ್ರ-ಸೂರ್ಯರಂತೆ ಪ್ರಕಾಶಿಸಿದುವು. ಅನಂತರ ಕೋಪದಿಂದ ಸುತ್ತುತ್ತಲಿದ್ದ ಕಣ್ಣುಗಳಿಂದ ಆ ರಾಜಪುತ್ರರನ್ನು ನೋಡಿದನು.

೩೧. ಕಲ್ಪಾಂತದಲ್ಲಿರುವ ಅಂತಕನಂತೆ ಗಂಭೀರ ದೃಷ್ಟಿಯಿಂದ ರಾಜಪುತ್ರರನ್ನು ನೋಡಲಾಗಿ ಕುಪಿತನಾದ ಅವನ ಕಣ್ಣುಗಳಿಂದ ಬಲು ಬೇಗ ಅಗ್ನಿಜ್ವಾಲೆಗಳು ಕಾಣಿಸಿಕೊಂಡುವು.

೩೨. ಆ ಜ್ವಾಲೆಗಳು ಪ್ರಲಯಾಗ್ನಿ ಜ್ವಾಲೆಯಂತೆ ಸುತ್ತಲೂ ಧೂಮಸಹಿತವಾಗಿಯೂ ಎಲ್ಲ ಜಗತ್ತನ್ನು ಗ್ರಾಸ ತೆಗೆದುಕೊಳ್ಳುವಷ್ಟು ಉಲ್ಬಣವಾಗಿಯೂ ಮತ್ತೆ ಮತ್ತೆ ಹೆಚ್ಚಾಗಿ ಕಿಡಿಗಳನ್ನು ಬಿಡುವುವುಗಳಾಗಿಯೂ ಹೊರಗೆ ವ್ಯಾಪಿಸಿದುವು.

೩೩. ಮುನಿಯ ಕ್ರೋಧಾಗ್ನಿಯಿಂದ ಉದ್ಭವಿಸಿದ ಜ್ವಾಲೆಗಳು ಸುತ್ತಲೂ ದಿಕ್ಕುಗಳನ್ನು ವ್ಯಾಪಿಸಿದುವು. ಕೃಷ್ಣ ಸರ್ಪದ ಉದರದಂತೆ ನೀಲವಾದ ರಂಧ್ರಾಗ್ರವುಳ್ಳ ಮುನಿಯ ನೇತ್ರಗಳಿಂದ ಹುಟ್ಟಿದ ಅಗ್ನಿಜ್ವಾಲೆಗಳು ಅತಿಯಾಗಿ ಪ್ರಕಾಶಿಸಿದುವು.

೩೪. ಆ ಜ್ವಾಲೆಗಳು ನಿಶ್ಚಲವಾದ ಸಮುದ್ರದಿಂದ ಹುಟ್ಟಿದ ಬಡಬಾಗ್ನಿಯ ಜ್ವಾಲೆಗಳಂತೆ ಪ್ರಕಾಶಿಸಿದುವು. ಮಹಾರಾಜನೆ! ಆ ಕ್ರೋಧಾಗ್ನಿಯು ಆ ಜ್ವಾಲೆಗಳಿಂದ ದಿಗಂತರವನ್ನು ವ್ಯಾಪಿಸುವಂತೆ ಪ್ರಸರಿಸಿತು.

ದಗ್ಧಾಂಶ್ಚಕಾರ ತಾನ್ ಸರ್ವಾನಾವೃಣ್ವಾನೋ ನಭಸ್ತಲಮ್ ॥ ೩೫ ॥

ಸಶಬ್ದಮುದ್ಭ್ರಾಂತಮರುತ್ಪ್ರಕೋಪ-
ವಿವರ್ತಮಾನಾನಲಧೂಮಜಾಲೈಃ ।
ಮಹೀರಜೋಭಿಶ್ಚ ನಿತಾಂತಮುದ್ಧತೈಃ
ಸಮಾವೃತಂ ಲೋಕಮಭೂದ್ಭೃಶಾತುರಮ್ ॥ ೩೬ ॥

ತತಃ ಸವಹ್ನಿರ್ವಿಲಿಖನ್ನಿವಾಭಿತಃ
ಸಮೀರವೇಗಾಭಿಹತಾಭಿರಂಬರಮ್ ।
ಶಿಖಾಭಿರುರ್ವೀಶಸುತಾನಶೇಷತೋ
ದದಾಹ ಸದ್ಯಃ ಸುರವಿದ್ವಿಷಸ್ತಾನ್ ॥ ೩೭ ॥

ಮಿಷತಃ ಸರ್ವಲೋಕಸ್ಯ ಕ್ರೋಧಾಗ್ನಿಸ್ತಮೃತೇ ಹಯಮ್ ।
ಸಾಗರಾಂಸ್ತಾನಶೇಷೇಣ ಭಸ್ಮಸಾದಕರೋತ್ಸ ತಾನ್ ॥ ೩೮ ॥

ಏವಂ ಕ್ರೋಧಾಗ್ನಿನಾ ತೇನ ಸಾಗರಾಃ ಪಾಪಚೇತಸಃ ।
ಜಜ್ವಲುಃ ಸಹಸಾ ದಾವೇ ತರವೋ ನೀರಸಾ ಇವ ॥ ೩೯ ॥

---

೩೫. ಮತ್ತು ಆ ಕ್ರೋಧಾಗ್ನಿಯು ಅಂತರಿಕ್ಷವನ್ನು ಮುಚ್ಚುವಂತೆ ವ್ಯಾಪಿಸಿ ಅಲ್ಲಿದ್ದ ಸಕಲ ರಾಜಪುತ್ರರನ್ನು ಸುಟ್ಟು ಭಸ್ಮಮಾಡಿತು.

೩೬. ಆಗ ಭೀಷಣವಾಗಿ ಶಬ್ದ ಮಾಡುತ್ತ ಸುತ್ತುವ ಬಿರುಗಾಳಿಯ ವೇಗದಿಂದ ಸುತ್ತುತ್ತಿರುವ ಅಗ್ನಿಯಿಂದ ಮೇಲಕ್ಕೆ ಎದ್ದ ಧೂಮ ಮಂಡಲಗಳಿಂದಲೂ ಅತಿಯಾಗಿ ಮೇಲಕ್ಕೆ ಎದ್ದ ಭೂಮಿಯ ಧೂಳಿಜಾಲದಿಂದಲೂ ಆವರಿಸಲ್ಪಟ್ಟ ಲೋಕವು ಹೆಚ್ಚಾಗಿ ಪೀಡೆಯುಳ್ಳದ್ದಾಯಿತು.

೩೭. ಅನಂತರದಲ್ಲಿ ಆ ಅಗ್ನಿಯು ಸುತ್ತಲೂ ವಾಯುವಿನ ವೇಗದಿಂದ ಹೊಡೆಯಲ್ಪಟ್ಟ ಜ್ವಾಲೆಗಳಿಂದ ಆಕಾಶವನ್ನು ವ್ಯಾಪಿಸುವಂತೆ ದೇವತೆಗಳಿಗೆ ಶತ್ರುಗಳಾದ ಆ ರಾಜಪುತ್ರರನ್ನು ಕೂಡಲೆ ನಿಶ್ಶೇಷವಾಗಿ ಸುಟ್ಟುಹಾಕಿತು.

೩೮. ಮುನಿಯ ಆ ಕ್ರೋಧಾಗ್ನಿಯು ಸರ್ವ ಲೋಕವು ನೋಡುತ್ತಿರುವಂತೆ ಆ ಅಶ್ವವನ್ನು ಮಾತ್ರ ಬಿಟ್ಟು ಆ ಸಗರರಾಜ ಪುತ್ರರನ್ನು ನಿಶ್ಶೇಷವಾಗಿ ಸುಟ್ಟು ಭಸ್ಮ ಮಾಡಿತು

೩೯. ಈ ರೀತಿಯಾಗಿ ಆ ಮುನಿ ಕ್ರೋಧಾಗ್ನಿಯಿಂದ ಪಾಪಮಯವಾದ ಮಾನಸವುಳ್ಳ ಸಗರ ರಾಜಪುತ್ರರು ಕಾಡುಕಿಚ್ಚಿನಲ್ಲಿ ಒಣಗಿದ ವೃಕ್ಷಗಳು ಸುಟ್ಟು ಹೋಗುವಂತೆ ಶೀಘ್ರವಾಗಿ ಉರಿದು ಸುಟ್ಟು ಹೋದರು.

ದೃಷ್ಟ್ವಾ ತೇಷಾಂ ತು ನಿಧನಂ ಸಾಗರಾಣಾಂ ದುರಾತ್ಮನಾಮ್ ।
ಅನ್ಯೋನ್ಯಮಬ್ರುರ್ವ ದೇವಾ ವಿಸ್ಮಿತಾ ಋಷಿಭಿಃ ಸಹ ॥ ೪೦ ॥

ಅಹೋ ದಾರುಣಪಾಪಾನಾಂ ವಿಪಾಕೋ ನ ಚಿರಾಯಿತಃ ।
ದುರಂತಃ ಖಲು ಲೋಕೇಽಸ್ಮಿನ್ನರಾಣಾಮಸದಾತ್ಮನಾಮ್ ॥ ೪೧ ॥

ಯದಿಮೇ ಪರ್ವತಾಕಾರಾ ನೃಶಂಸಾಃ ಕ್ರೂರಬುದ್ಧಯಃ ।
ಯುಗಪದ್ವಿಲಯಂ ಪ್ರಾಪ್ತಾಃ ಸಹಸೈವ ತೃಣಾಗ್ನಿವತ್ ॥ ೪೨ ॥

ಉದ್ವೇಜನೀಯಾ ಭೂತಾನಾಂ ಸದ್ಭಿರತ್ಯಂತಗರ್ಹಿತಾಃ ।
ಆಜೀವಾಂತಮಿಮೇ ಹರ್ತುಂ ದಿಷ್ಟ್ಯಾ ಸಂಕ್ಷಯಮಾಗತಾಃ ॥ ೪೩ ॥

ಪರೋಪತಾಪಿ ನಿತರಾಂ ಸರ್ವಲೋಕಜುಗುಪ್ಸಿತಮ್ ।
ಇಹ ಕೃತ್ವಾಽಶುಭಂ ಕರ್ಮ ಕಃ ಪುಮಾನ್ ವಿಂದತೇ ಸುಖಮ್ ॥ ೪೪ ॥

---

೪೦. ದುರಾತ್ಮರಾದ ಆ ರಾಜಪುತ್ರರ ಮರಣವನ್ನು ನೋಡಿ ದೇವತೆಗಳು ವಿಸ್ಮಯಗೊಂಡವರಾಗಿ ಮಹರ್ಷಿಗಳಿಂದ ಕೂಡ ಅನ್ಯೋನ್ಯವಾಗಿ ಮಾತನಾಡಿ ಕೊಂಡರು.

೪೧. ಭಯಾನಕವಾದ ತೀವ್ರ ಪಾಪಗಳ ಪರಿಪಾಕವು ವಿಲಂಬವಾಗದೆ ಶೀಘ್ರದಲ್ಲಿ ಆಗುವುದು. ಆಶ್ಚರ್ಯವು, ಈ ಲೋಕದಲ್ಲಿ ಅಸಾಧುವಾದ ಆಚಾರವುಳ್ಳವರಿಗೆ ಪರಿಣಾಮವು ದುಃಖಮಯವಾಗುವುದು.

೪೨. ಹಿಂಸಕರೂ ಕ್ರೂರವಾದ ಬುದ್ಧಿಯುಳ್ಳವರೂ ಆದ ಪರ್ವತದ ಆಕಾರದಂತೆ ಇದ್ದ ಈ ರಾಜಪುತ್ರರು ಆಕಸ್ಮಿಕವಾಗಿ ಅಗ್ನಿಯಿಂದ ಹುಲ್ಲುಕಡ್ಡಿಯಂತೆ ಒಂದೇ ಸಲಕ್ಕೆ ಲಯವನ್ನು ಹೊಂದಿದರು.

೪೩. ಪ್ರಾಣಿಗಳಿಗೆ ಕಳವಳಕ್ಕೆ ಕಾರಣರೂ, ಸಾಧುಗಳಿಂದ ಅತ್ಯಂತ ನಿಂದಿಸಲ್ಪಟ್ಟವರೂ ಆದ ಇವರು ಜೀವಿಸಿರುವವರೆಗೂ ಲೋಕದಲ್ಲಿ ಇಷ್ಟು ವಿನಾಶಕೃತ್ಯವನ್ನು ಆಚರಿಸುತ್ತ ಕಾಲವಶದಿಂದ ಕ್ಷಯವನ್ನು ಹೊಂದಿರುವರು.

೪೪. ಅತಿಯಾಗಿ ಪರರಿಗೆ ಸಂತಾಪವನ್ನು ಕೊಡುವ ಸರ್ವ ಲೋಕಗಳಲ್ಲಿಯೂ ಜುಗುಪ್ಸೆಯನ್ನುಂಟುಮಾಡುವ ಅಶುಭವಾದ ಕರ್ಮವನ್ನು ಮಾಡಿ ಯಾವ ಮಾನವನು ಈ ಲೋಕದಲ್ಲಿ ಸುಖವನ್ನು ಹೊಂದುವನು ?

ವಿಕ್ರೋಶ್ಯ ಸರ್ವಭೂತಾನಿ ಸಂಪ್ರಯಾತಾಃ ಸ್ವಕರ್ಮಭಿಃ ।
ಬ್ರಹ್ಮದಂಡಹತಾಃ ಪಾಪಾ ನಿರಯಂ ಶಾಶ್ವತೀಃ ಸಮಾಃ ॥ ೪೫ ॥

ತಸ್ಮಾತ್ ಸದೈವ ಕರ್ತವ್ಯಂ ಕರ್ಮ ಪುಂಸಾಂ ಮನೀಷಿಣಾಮ್ ।
ದೂರತಶ್ಚ ಪರಿತ್ಯಾಜ್ಯಮಿತರಲ್ಲೋಕನಿಂದಿತಮ್ ॥ ೪೬ ॥

ಕರ್ತವ್ಯಃ ಶ್ರೇಯಸೇ ಯತ್ನೋ ಯಾವಜ್ಜೀವಂ ವಿಜಾನತಾ ।
ನಾಚರೇತ್ ಕಸ್ಯಚಿದ್ದ್ರೋಹಮನಿತ್ಯಂ ಜೀವನಂ ಯತಃ ॥ ೪೭ ॥

ಅನಿತ್ಯೋಽಯಂ ಯದಾ ದೇಹಃ ಸಂಪದಶ್ಚಾತಿಚಂಚಲಾಃ ।
ಸಂಸಾರಶ್ಚಾತಿನಿಸ್ಸಾರಸ್ತತ್ಕಥಂ ವಿಶ್ವಸೇದ್ಬುಧಃ ॥ ೪೮ ॥

ಏವಂ ಸುರಮುನೀಂದ್ರೇಷು ಕಥಯತ್ಸು ಪರಸ್ಪರಮ್ ।
ಮುನಿಕ್ರೋಧೇಂಧನೀಭೂತಾ ವಿನೇಶುಃ ಸಗರಾತ್ಮಜಾಃ ॥ ೪೯ ॥

---

೪೫. ಈ ಪಾಪಿಗಳು ಸಮಸ್ತ ಪ್ರಾಣಿಗಳನ್ನು ಆಕ್ರಂದನಮಾಡಿಸಿ ಬ್ರಹ್ಮದಂಡದಿಂದ ಹೊಡೆಯಲ್ಪಟ್ಟವರಾಗಿ ಅನೇಕಾನೇಕ ಸಂವತ್ಸರಗಳವರೆಗೆ ಭೋಗ್ಯವಾದ ನರಕಕ್ಕೆ ಸ್ವಕರ್ಮಬಲದಿಂದ ಹೋಗಿರುವರು.

೪೬. ಆದ್ದರಿಂದ ವಿದ್ವಾಂಸರಾದ ಜನರಿಗೆ ಯಾವಾಗಲೂ ಶುಭ ಕರ್ಮವು ಆಚರಿಸಲು ಯೋಗ್ಯವು ; ಹಾಗು ಲೋಕನಿಂದಾಸ್ಪದವಾದ ಅಶುಭ ಕರ್ಮವು ದೂರ ಪರಿತ್ಯಾಗಕ್ಕೆ ಅರ್ಹವು.

೪೭. ಈ ಜೀವನವು ಅನಿತ್ಯವಾದ್ದರಿಂದ ಜ್ಞಾನಿಯಾದವನಿಂದ ಬದುಕಿರುವವರೆಗೂ ಶ್ರೇಯಸ್ಸಿಗೋಸ್ಕರ ಯತ್ನವು ಆಚರಿಸಲ್ಪಡಬೇಕು. ಪರರಿಗೆ ಯಾರೊಬ್ಬನಿಗೂ ಯಾವಾಗಲೂ ದ್ರೋಹವನ್ನು ಆಚರಿಸಬಾರದು.

೪೮. ಈ ದೇಹವು ಯಾವಾಗಲೂ, ಅಸ್ಥಿರವಾದುದು. ಸಂಪತ್ತುಗಳು ಅತ್ಯಂತ ಚಂಚಲವಾದುವು. ಮತ್ತು ಸಂಸಾರವು ಸಾರರಹಿತವಾದುದು. ಆದ್ದರಿಂದ ಈ ದೇಹಾದಿಗಳಲ್ಲಿ ಜ್ಞಾನಿಯು ಹೇಗೆ ವಿಶ್ವಾಸವಿಡುವನು ?

೪೯. ಈ ರೀತಿಯಾಗಿ ದೇವತೆಗಳೂ ಮುನೀಂದ್ರರೂ ಪರಸ್ಪರವಾಗಿ ಹೇಳುತ್ತಿರಲು ಕಪಿಲಮುನಿಯ ಕ್ರೋಧಾಗ್ನಿಗೆ ಕಾಷ್ಠಭೂತರಾದ ಸಗರ ಪುತ್ರರು ನಾಶ ಹೊಂದಿದರು.

ನಿರ್ದಗ್ಧದೇಹಾಃ ಸಹಸಾ ಭುವಂ ವಿಷ್ಟಭ್ಯ ಭಸ್ಮನಾ ।
ಅವಾಪುರ್ನಿರಯಂ ಸದ್ಯಃ ಸಾಗರಾಸ್ತೇ ಸ್ವಕರ್ಮಭಿಃ　　॥ ೫೦ ॥

ಸಾಗರಾಂಸ್ತಾನಶೇಷೇಣ ದಗ್ಧ್ವಾ ತತ್ಕ್ರೋಧಜೋಽನಲಃ ।
ಕ್ಷಣೇನ ಲೋಕಾನಖಿಲಾನುದ್ಯತೋ ದಗ್ಧುಮಂಜಸಾ　　॥ ೫೧ ॥

ಭಯಭೀತಾಸ್ತತೋ ದೇವಾಃ ಸಮೇತ್ಯ ದಿವಿ ಸಂಸ್ಥಿತಾಃ ।
ತುಷ್ಟುವುಸ್ತಂ ಮಹಾತ್ಮಾನಂ ಕ್ರೋಧಾಗ್ನಿಶಮನಾರ್ಥಿನಃ　　॥ ೫೨ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ತ್ರಿಪಂಚಾಶತ್ತಮೋಽಧ್ಯಾಯಃ

---

೫೦. ಮತ್ತು ಆ ಸಗರ ಪುತ್ರರು ಶೀಘ್ರವಾಗಿ ಸುಟ್ಟು ಹೋದ ದೇಹವುಳ್ಳವರಾಗಿ ದೇಹ ಭಸ್ಮದಿಂದ ಭೂಮಿಯು ತುಂಬಿ ಹೋಗಲಾಗಿ ಸ್ವಕರ್ಮಾಯತ್ತವಾಗಿ ಕೂಡಲೆ ನರಕಕ್ಕೆ ಹೋದರು.

೫೧. ಮುನಿಯ ಕ್ರೋಧದಿಂದ ಹುಟ್ಟಿದ ಅಗ್ನಿಯು ಆ ಸಗರ ಪುತ್ರರನ್ನು ಸಂಪೂರ್ಣವಾಗಿ ದಹಿಸಿ ಮತ್ತೆ ಸಕಲ ಲೋಕಗಳನ್ನು ಕ್ಷಣಮಾತ್ರದಿಂದ ಸುಟ್ಟು ಹಾಕಲು ಬೇಗ ಪ್ರವರ್ತಿಸಿತು.

೫೨. ತರುವಾಯ ಆ ಭಯದಿಂದ ಕಂಗೆಟ್ಟ ದೇವತೆಗಳು ಸೇರಿಕೊಂಡು ಕ್ರೋಧಾಗ್ನಿಯ ಶಾಂತಿಯನ್ನು ಅಪೇಕ್ಷಿಸುವವರಾಗಿ ಆಕಾಶದಲ್ಲಿ ನಿಂತು ಮಹಾತ್ಮನಾದ ಕಪಿಲಮುನಿಯನ್ನು ಸ್ತೋತ್ರಮಾಡಿದರು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಐವತ್ತ ಮೂರನೆಯ ಅಧ್ಯಾಯವು ಸಮಾಪ್ತವು.

---

## ಚತುಃಪಂಚಾಶತ್ತಮೋಽಧ್ಯಾಯಃ

**ಜೈಮಿನಿರುವಾಚ :—**

**ಕ್ರೋಧಾಗ್ನಿಮೇನಂ ವಿಪ್ರೇಂದ್ರ ಸದ್ಯಃ ಸಂಹರ್ತುಮರ್ಹಸಿ ।**
**ನೋ ಚೇದಕಾಲೇ ಲೋಕೋಽಯಂ ಸಕಲಸ್ತೇನ ದಹ್ಯತೇ** ॥ ೧ ॥

**ದೃಷ್ಟಸ್ತೇ ಮಹಿಮಾನೇನ ವ್ಯಾಪ್ತಮಾಸೀಚ್ಚರಾಚರಮ್ ।**
**ಕ್ಷಮಸ್ವ ಸಂಹರ ಕ್ರೋಧಂ ನಮಸ್ತೇ ವಿಪ್ರಪುಂಗವ** ॥ ೨ ॥

**ಏವಂ ಸಂಸ್ತೂಯಮಾನಸ್ತು ಭಗವಾನ್ ಕಪಿಲೋ ಮುನಿಃ ।**
**ತೂರ್ಣಮೇವ ಕ್ಷಯಂ ನಿನ್ಯೇ ಕ್ರೋಧಾಗ್ನಿಮತಿಭೈರವಮ್** ॥ ೩ ॥

**ತತಃ ಪ್ರಶಾಂತಮಭವಜ್ಜಗತ್ಸರ್ವಂ ಚರಾಚರಮ್ ।**
**ದೇವಾಸ್ತಪಸ್ವಿನಶ್ಚೈವ ಬಭೂವುರ್ವಿಗತಜ್ವರಾಃ** ॥ ೪ ॥

**ಏತಸ್ಮಿನ್ನೇವ ಕಾಲೇ ತು ಭಗವಾನ್ನಾರದೋ ಮುನಿಃ ।**
**ಅಯೋಧ್ಯಾಮಗಮದ್ರಾಜನ್ ದೇವಲೋಕಾದ್ಯದೃಚ್ಛಯಾ** ॥ ೫ ॥

---

೧. ಜೈಮಿನಿಮುನಿಯು ಇಂತೆಂದನು :— ವಿಪ್ರೇಂದ್ರನೆ ! ನಿನ್ನ ಈ ಕ್ರೋಧಾಗ್ನಿಯನ್ನು ಈಗಲೇ ಪ್ರಶಮನ ಮಾಡಲು ಅರ್ಹನಾಗಿದ್ದೀಯೆ, ಇಲ್ಲದಿದ್ದರೆ ಈ ಸಕಲ ಲೋಕವೂ ಅಕಾಲದಲ್ಲಿ ಅಗ್ನಿಯಿಂದ ಸುಡಲ್ಪಡುವುದು.

೨. ವಿಪ್ರೋತ್ತಮನೆ ! ಇದರಿಂದ ನಿನ್ನ ಮಹಿಮೆಯು ನೋಡಲ್ಪಟ್ಟಿತು. ಈ ನಿನ್ನ ಮಹಿಮೆಯಿಂದ ಚರಾಚರ ಪ್ರಪಂಚವೆಲ್ಲವೂ ವ್ಯಾಪಿಸಲ್ಪಟ್ಟಿದೆ. ಈ ಕ್ರೋಧಾಗ್ನಿಯನ್ನು ಶಮನಮಾಡು, ಕ್ಷಮಿಸು, ನಿನ್ನನ್ನು ವಂದಿಸುವೆವು.

೩. ಈ ರೀತಿಯಾಗಿ ಸ್ತುತಿಸಲ್ಪಡುತ್ತಿದ್ದ ಭಗವಂತನಾದ ಕಪಿಲಮುನಿಯು ಅತಿ ಭಯಂಕರವಾದ ಕ್ರೋಧಾಗ್ನಿಯನ್ನು ಬೇಗ ಪ್ರಶಮನಮಾಡಿದನು.

೪. ತರುವಾಯ ಸಕಲ ಚರಾಚರ ಪರಿಪೂರ್ಣವಾದ ಜಗತ್ತು ಶಾಂತಿ ಸ್ಥಿತಿಯನ್ನು ಹೊಂದಿತು. ದೇವತೆಗಳೂ ತಪಸ್ವಿ ಋಷಿಗಳೂ ಶಾಂತವಾದ ಜ್ವರತಾಪವುಳ್ಳವರಾದರು.

೫. ರಾಜನೆ ! ಈ ಸಮಯದಲ್ಲಿ ಭಗವಂತನಾದ ನಾರದ ಮುನಿಯು ದೇವಲೋಕದಿಂದ ಆಕಸ್ಮಿಕವಾಗಿ ಅಯೋಧ್ಯಾ ನಗರಿಗೆ ಬಂದನು.

ತಮಾಗತಮಭಿಪ್ರೇಕ್ಷ್ಯ ನಾರದಂ ಸಗರಸ್ತದಾ ।
ಅರ್ಘ್ಯಪಾದ್ಯಾದಿಭಿಃ ಸಮ್ಯಕ್ ಪೂಜಯಾಮಾಸ ಶಾಸ್ತ್ರತಃ ॥ ೬ ॥

ಪರಿಗೃಹ್ಯ ಚ ತತ್ಪೂಜಾಮಾಸೀನಃ ಪರಮಾಸನೇ ।
ನಾರದೋ ರಾಜಶಾರ್ದೂಲಮಿದಂ ವಚನಮಬ್ರವೀತ್ ॥ ೭ ॥

ನಾರದ ಉವಾಚ :—

ಹಯಸಂಚಾರಣಾರ್ಥಾಯ ಸಂಪ್ರಯಾತಾಸ್ತವಾತ್ಮಜಾಃ ।
ಬ್ರಹ್ಮದಂಡಹತಾಃ ಸರ್ವೇ ವಿನಷ್ಟಾ ನೃಪಸತ್ತಮಾಃ ॥ ೮ ॥

ಸಂರಕ್ಷ್ಯಮಾಣಸ್ತೈಃ ಸರ್ವೈರ್ಹಯಸ್ತೇ ಯಜ್ಞಿಯೋ ನೃಪ ।
ಕೇನಾಪ್ಯಲಕ್ಷಿತಃ ಕ್ವಾಪಿ ನೀತೋ ವಿಧಿವಶಾದ್ದಿವಿ ॥ ೯ ॥

ತತೋ ವಿನಷ್ಟಂ ತುರಗಂ ವಿಚಿನ್ವಂತೋ ಮಹೀತಲೇ ।
ನ್ಪ್ರಾಲಭಂತ ನ ತೇ ಕ್ವಾಪಿ ತತ್ಪ್ರವೃತ್ತಿಂ ಚಿರಾನ್ನೃಪ ॥ ೧೦ ॥

---

೬. ಸಗರ ರಾಜನು ಆ ನಾರದ ಮುನಿಯು ಬಂದಿರುವುದನ್ನು ನೋಡಿ ಆಗ ಅರ್ಘ್ಯ, ಪಾದ್ಯ ಮುಂತಾದ ಉಪಚಾರಗಳಿಂದ ಶಾಸ್ತ್ರಾನುಸಾರವಾಗಿ ಆ ಮುನಿಯನ್ನು ಚನ್ನಾಗಿ ಪೂಜಿಸಿದನು.

೭. ನಾರದಮುನಿಯು ಆ ಪೂಜಾಸತ್ಕಾರವನ್ನು ಸ್ವೀಕರಿಸಿ ಉತ್ತಮವಾದ ಆಸನದಲ್ಲಿ ಕುಳಿತುಕೊಂಡವನಾಗಿ ರಾಜಶ್ರೇಷ್ಠನಾದ ಸಗರನನ್ನು ಕುರಿತು ಈ ವಚನವನ್ನು ಹೇಳಿದನು.

೮. ನಾರದ ಮುನಿಯು ಇಂತೆಂದನು :—ರಾಜಶ್ರೇಷ್ಠನೆ! ಅಶ್ವವನ್ನು ಸಂಚಾರಮಾಡಿಸಲು ಹೊರಟುಹೋದ ನಿನ್ನ ಪುತ್ರರು ಎಲ್ಲರೂ ಬ್ರಹ್ಮಕೋಪವೆಂಬ ದಂಡದಿಂದ ಹೊಡೆಯಲ್ಪಟ್ಟು ನಾಶವನ್ನು ಹೊಂದಿದರು.

೯. ರಾಜನೆ! ನಿನ್ನ ಯಜ್ಞಯೋಗ್ಯವಾದ ಅಶ್ವವು ಅವರೆಲ್ಲರಿಂದ ರಕ್ಷಿಸಲ್ಪಡುತ್ತಲಿದ್ದು ವಿಧಿಬಲದಿಂದ ಆಕಾಶದಲ್ಲಿ ಯಾರಿಂದಲೊ ಎಲ್ಲಿಗೊ ಕಣ್ಣಿಗೆ ಕಾಣದಂತೆ ಒಯ್ಯಲ್ಪಟ್ಟಿತು.

೧೦. ರಾಜನೆ! ತರುವಾಯ ನಷ್ಟವಾದ ಆ ಅಶ್ವವನ್ನು ಭೂತಲದಲ್ಲಿ ಹುಡುಕುತ್ತ ಅವರು ಎಲ್ಲಿಯೂ ಅದರ ಸಮಾಚಾರವನ್ನು ತಿಳಿಯಲಿಲ್ಲ.

ತತೋಽವನೇರಧಸ್ತೇಽಶ್ವಂ ವಿಚೇತುಂ ಕೃತನಿಶ್ಚಯಾಃ ।
ಸಾಗರಾಸ್ತೇ ಸಮಾರಭ್ಯ ಪ್ರಚಖ್ನುರ್ವಸುಧಾತಲಮ್ ॥ ೧೧ ॥

ಖನಂತೋ ವಸುಧಾಮಶ್ವಂ ಪಾತಾಲೇ ದದೃಶುರ್ನೃಪ ।
ಸಮೀಪೇ ತಸ್ಯ ಯೋಗೀಂದ್ರಂ ಕಪಿಲಂ ಚ ಮಹಾಮುನಿಮ್ ॥ ೧೨ ॥

ತಂ ದೃಷ್ಟ್ವಾ ಪಾಪಕರ್ಮಾಣಸ್ತೇ ಸರ್ವೇ ಕಾಲಚೋದಿತಾಃ ।
ಕಪಿಲಂ ಕೋಪಯಾಮಾಸುರಶ್ವಹರ್ತಾಯಮಿತ್ಯಲಮ್ ॥ ೧೩ ॥

ತತಸ್ತತ್ಕ್ರೋಧಸಂಭೂತನೇತ್ರಾಗ್ನೇರ್ದಹತೋ ದಿಶಃ ।
ಇಂಧನೀಭೂತದೇಹಾಸ್ತೇ ಪುತ್ರಾಃ ಸಂಕ್ಷಯಮಾಗತಾಃ ॥ ೧೪ ॥

ಕ್ರೂರಾಃ ಪಾಪಸಮಾಚಾರಾಃ ಸರ್ವಲೋಕೋಪರೋಧಕಾಃ ।
ಯತಸ್ತೇ ತೇನ ರಾಜೇಂದ್ರ ನ ಶೋಕಂ ಕರ್ತುಮರ್ಹಸಿ ॥ ೧೫ ॥

---

೧೧. ಅನಂತರದಲ್ಲಿ ಭೂಮಿಯ ಕೆಳಭಾಗದಲ್ಲಿ ಅಶ್ವವನ್ನು ಹುಡುಕಲು ಸ್ಥಿರ ಮಾಡಿದ ಸಂಕಲ್ಪವುಳ್ಳವರಾಗಿ ಆ ನಿನ್ನ ಪುತ್ರರು ಭೂತಲವನ್ನು ಅಗೆಯಲು ಪ್ರಾರಂಭಿಸಿದರು.

೧೨. ರಾಜನೆ! ಭೂಮಿಯನ್ನು ಅಗೆಯುತ್ತ ಹೋಗಿ ಪಾತಾಲಲೋಕದಲ್ಲಿ ಅಶ್ವವನ್ನು ಕಂಡರು. ಅದರ ಸಮೀಪದಲ್ಲಿ ಯೋಗೀಂದ್ರನಾದ ಕಪಿಲ ಮಹಾಮುನಿಯನ್ನು ನೋಡಿದರು.

೧೩. ಆ ಮುನಿಯನ್ನು ನೋಡಿ ಪಾಪಪ್ರಾಯವಾದ ನಡತೆಯುಳ್ಳ ಅವರೆಲ್ಲರೂ ಕಾಲಬಲದಿಂದ ಪ್ರೇರೇಪಿಸಲ್ಪಟ್ಟವರಾಗಿ "ಇವನು ಅಶ್ವಚೋರನು" ಎಂದು ಹೇಳಿ ಕಪಿಲ ಮುನಿಯನ್ನು ಅತಿಯಾಗಿ ಕೋಪಗೊಳಿಸಿದರು.

೧೪. ಅನಂತರದಲ್ಲಿ ಮುನಿಯ ಕ್ರೋಧದಿಂದ ಹುಟ್ಟಿದ ಸಕಲ ದಿಕ್ಕುಗಳನ್ನು ಸುಡುತ್ತಲಿರುವ ನೇತ್ರಾಗ್ನಿಗೆ ನಿನ್ನ ಪುತ್ರರು ಕಾಷ್ಠಭೂತವಾದ ದೇಹವುಳ್ಳವರಾಗಿ ನಾಶವನ್ನು ಹೊಂದಿದರು.

೧೫. ರಾಜೇಂದ್ರನೆ! ನಿನ್ನ ಪುತ್ರರು ಕ್ರೂರರೂ, ಪಾಪಮಯವಾದ ಆಚರಣೆಯುಳ್ಳವರೂ ಮತ್ತು ಸರ್ವಲೋಕಗಳಿಗೆ ಉಪದ್ರವಕಾರಿಗಳೂ ಆಗಿದ್ದುದರಿಂದ ಅವರ ನಾಶದಿಂದ ನೀನು ಶೋಕಪಡುವುದು ಉಚಿತವಲ್ಲ.

ಸ ತ್ವಂ ಧೈರ್ಯಧನೋ ಭೂತ್ವಾ ಭವಿತವ್ಯತಯಾತ್ಮನಃ ।
ನಷ್ಟಂ ಮೃತಮತೀತಂ ಚ ನಾನುಶೋಚಂತಿ ಪಂಡಿತಾಃ ॥ ೧೬ ॥

ತಸ್ಮಾತ್ ಪೌತ್ರಮಿಮಂ ಬಾಲಮಂಶುಮಂತಂ ಮಹಾಮತಿಮ್ ।
ತುರಗಾನಯನಾರ್ಥಾಯ ನಿಯುಂಕ್ಷ್ವ ನೃಪಸತ್ತಮ ॥ ೧೭ ॥

ಇತ್ಯುಕ್ತ್ವಾ ರಾಜಶಾರ್ದೂಲಂ ಸದಸ್ಯರ್ತ್ವಿಕ್ಸಮನ್ವಿತಮ್ ।
ಕ್ಷಣೇನ ಪಶ್ಯತಾಂ ತೇಷಾಂ ನಾರದೋಽಂತರ್ದಧೇ ಮುನಿಃ ॥ ೧೮ ॥

ತಚ್ಛ್ರುತ್ವಾ ವಚನಂ ತಸ್ಯ ನಾರದಸ್ಯ ನೃಪೋತ್ತಮಃ ।
ದುಃಖಶೋಕಪರೀತಾತ್ಮಾ ದಧ್ಯೌ ಚಿರಮುದಾರಧೀಃ ॥ ೧೯ ॥

ತಂ ಧ್ಯಾನಯುಕ್ತಂ ಸದಸಿ ಸಮಾಸೀನಮವಾಙ್ಮುಖಮ್ ।
ವಸಿಷ್ಠಃ ಪ್ರಾಹ ರಾಜಾನಂ ಸಾಂತ್ವಯನ್ ದೇಶಕಾಲವಿತ್ ॥ ೨೦ ॥

---

೧೬. ನೀನು ನಿನ್ನ ಭವಿತವ್ಯತೆಯನ್ನು ಅರಿತು ಧೈರ್ಯಧನನಾಗಿರಬೇಕು. ಪಂಡಿತರು, ಕಳೆದುಹೋದ, ಮೃತಿಹೊಂದಿದ ಅಥವಾ ಹಿಂದಾದ ವಿಷಯಕ್ಕೆ ಶೋಕವನ್ನು ಹೊಂದುವುದಿಲ್ಲ.

೧೭. ರಾಜಶ್ರೇಷ್ಠನೆ! ಆದ್ದರಿಂದ ಈ ನಿನ್ನ ಪೌತ್ರನಾದ ಮಹಾಪ್ರಾಜ್ಞನಾದ ಮತ್ತು ಬಾಲಕನಾದ ಅಂಶುಮಂತನನ್ನು ಅಶ್ವವನ್ನು ಹಿಂದಕ್ಕೆ ತರುವಂತೆ ಆಜ್ಞಾಪಿಸಿ ಕಳುಹಿಸು.

೧೮. ಸದಸ್ಸಿನಲ್ಲಿ ಋತ್ವಿಜರಿಂದ ಕೂಡಿದ ರಾಜಶ್ರೇಷ್ಠನನ್ನು ಕುರಿತು ಈ ರೀತಿಯಾಗಿ ಹೇಳಿ ನಾರದಮುನಿಯು ಅವರು ನೋಡುತ್ತಿರುವಷ್ಟರಲ್ಲಿ ಕ್ಷಣಮಾತ್ರದಿಂದ ಅದೃಶ್ಯನಾದನು.

೧೯. ರಾಜಶ್ರೇಷ್ಠನಾದ ಸಗರನು ನಾರದಮುನಿಯು ಹೇಳಿದ ಆ ವಚನವನ್ನು ಕೇಳಿ ದುಃಖ-ಶೋಕಗಳಿಂದ ಪೀಡಿತವಾದ ಮಾನಸವುಳ್ಳವನಾಗಿ ಉದಾರವಾದ ಬುದ್ಧಿಭಾವನೆಯಿಂದ ಬಹುಕಾಲ ಧ್ಯಾನಿಸಿದನು.

೨೦. ಹೀಗೆ ಧ್ಯಾನಿಸುತ್ತ ಸದಸ್ಸಿನಲ್ಲಿ ಅಧೋಮುಖನಾಗಿ ಕುಳಿತಿರುವ ಸಗರ ಭೂಪಾಲನನ್ನು ನೋಡಿ ದೇಶಕಾಲಗಳನ್ನು ಅರಿತಿರುವ ವಸಿಷ್ಠಮುನಿಯು ಸಮಾಧಾನ ಮಾಡುತ್ತ ಈ ರೀತಿಯಾಗಿ ಹೇಳಿದನು.

ಕಿಮಿದಂ ಧೈರ್ಯಸಾರಾಣಾಮವಕಾಶಂ ಭವಾದೃಶಾಮ್ ।
ಲಭತೇ ಹೃದಿ ಚೇಚ್ಛೋಕಃ ಪ್ರಾಪ್ತಂ ಧೀರತಯಾ ಫಲಮ್ ॥ ೨೧ ॥

ದೌರ್ಮನಸ್ಯಂ ಶಿಥಿಲಯ ಸರ್ವಂ ದಿಷ್ಟವಶಾನುಗಮ್ ।
ಮನಸ್ವಿನೋಽನಂತರಂ ಕೃತ್ಯಂ ಕರ್ತುಮರ್ಹಸ್ಯಸಂಶಯಮ್ ॥ ೨೨ ॥

ವಸಿಷ್ಠೇನೈವಮುಕ್ತಸ್ತು ರಾಜಾ ಕಾರ್ಯಾರ್ಥತತ್ತ್ವವಿತ್ ।
ಧೃತಿಂ ಸತ್ತ್ವಂ ಸಮಾಲಂಬ್ಯ ತಥೇತಿ ಪ್ರತ್ಯಭಾಷತ ॥ ೨೩ ॥

ಅಂಶುಮಂತಂ ಸಮಾಹೂಯ ಪೌತ್ರಂ ವಿನಯಶಾಲಿನಮ್ ।
ಬ್ರಹ್ಮಕ್ಷತ್ರಸಭಾಮಧ್ಯೇ ಶನೈರಿದಮಭಾಷತ ॥ ೨೪ ॥

ಬ್ರಹ್ಮದಂಡಹತಾಃ ಸರ್ವೇ ಪಿತರಸ್ತವ ಪುತ್ರಕ ।
ಪತಿತಾಃ ಪಾಪಕರ್ಮಾಣೋ ನಿರಯೇ ಶಾಶ್ವತೀಃ ಸಮಾಃ ॥ ೨೫ ॥

---

೨೧. ಇದೇನು? ಧೈರ್ಯವೇ ಧನವಾಗಿವುಳ್ಳ ನಿಮ್ಮಂತಹವರ ಹೃದಯದಲ್ಲಿಯೂ ಶೋಕವು ಆಸ್ಪದವನ್ನು ಹೊಂದುವುದಾದರೆ ಲೋಕದಲ್ಲಿ ಧೈರ್ಯಕ್ಕೆ ಫಲವು ಲಭಿಸಿದಂತೆಯೇ ಆಯಿತು.

೨೨. ಮನಸ್ಸಿನ ಚಿಂತಾಕಳಂಕವನ್ನು ನ್ಯೂನಮಾಡುತ್ತ "ಎಲ್ಲವೂ ಕಾಲಬಲಕ್ಕೆ ಅಧೀನವಾದುದು" ಎಂದು ತಿಳಿದು ಮುಂದಿನ ಕಾರ್ಯವನ್ನು ನಿಸ್ಸಂಶಯನಾಗಿ ಮಾಡಲು ಅರ್ಹನಾಗಿದ್ದೀಯೆ.

೨೩. ವಸಿಷ್ಠಮುನಿಯಿಂದ ಹೀಗೆ ಬೋಧಿಸಲ್ಪಟ್ಟ ರಾಜನು ಕರ್ತವ್ಯ ವಿಷಯದ ತತ್ತ್ವವನ್ನು ತಿಳಿದವನಾಗಿ ಧೈರ್ಯ-ಬಲಗಳನ್ನು ಅವಲಂಬಿಸಿ ಹಾಗೆ ಆಗಲಿ ಎಂದು ಪ್ರತ್ಯುತ್ತರವನ್ನು ಹೇಳಿದನು.

೨೪. ಮತ್ತು ವಿನಯದಿಂದ ಶೋಭಿಸುವ ಪೌತ್ರನಾದ ಅಂಶುಮಂತನನ್ನು ಬ್ರಾಹ್ಮಣ-ಕ್ಷತ್ರಿಯರಿಂದ ಕೂಡಿದ ಸಭೆಯ ಮಧ್ಯದಲ್ಲಿ ಕರೆದು ಮೆಲ್ಲಗೆ ಈ ಮಾತನ್ನು ಹೇಳಿದನು.

೨೫. ಪುತ್ರನೆ! ಪಾಪಕರ್ಮಿಗಳಾದ ನಿನ್ನ ಪಿತೃಗಳೆಲ್ಲರೂ ಬ್ರಹ್ಮದಂಡದಿಂದ ಹೊಡೆಯಲ್ಪಟ್ಟವರಾಗಿ ಅನೇಕಾನೇಕ ವರ್ಷಭೋಗ್ಯವಾದ ನರಕದಲ್ಲಿ ಪತಿತರಾದರು.

ತ್ವಮೇವ ಸಂತತಿರ್ಮಹ್ಯಂ ರಾಜ್ಯಸ್ಯಾಸ್ಯ ಚ ರಕ್ಷಿತಾ ।
ತ್ವದಾಯತ್ತಮಶೇಷಂ ಮೇ ಶ್ರೇಯೋಽಮುತ್ರ ಪರತ್ರ ಚ ॥ ೨೬ ॥

ಸ ತ್ವಂ ಗಚ್ಛ ಮಮಾದೇಶಾತ್ ಪಾತಾಲೇ ಕಪಿಲಾಂತಿಕಮ್ ।
ತುರಗಾನಯನಾರ್ಥಾಯ ಯತ್ನೇನ ಮಹತಾನ್ವಿತಃ ॥ ೨೭ ॥

ತಂ ಪ್ರಾರ್ಥಯಿತ್ವಾ ವಿಧಿವತ್ ಪ್ರಸಾದ್ಯ ಚ ವಿಶೇಷತಃ ।
ಆದಾಯ ತುರಗಂ ವತ್ಸ ಶೀಘ್ರಮಾಗಂತುಮರ್ಹಸಿ ॥ ೨೮ ॥

ಜೈಮಿನಿರುವಾಚ :—
ಏವಮುಕ್ತೋಽಂಶುಮಾಂಸ್ತೇನ ಪ್ರಣಮ್ಯ ಪಿತರಂ ಪಿತುಃ ।
ತಥೇತ್ಯುಕ್ತ್ವಾ ಮಹಾಬುದ್ಧಿಃ ಪ್ರಯಯೌ ಕಪಿಲಾಂತಿಕಮ್ ॥ ೨೯ ॥

ತಮುಪಾಗಮ್ಯ ವಿಧಿವನ್ನಮಸ್ಕೃತ್ಯ ಯಥಾಮತಿ ।
ಪ್ರಶ್ರಯಾವನತೋ ಭೂತ್ವಾ ಶನೈರಿದಮುವಾಚ ಹ ॥ ೩೦ ॥

---

೨೬. ನನಗೆ ನೀನೊಬ್ಬನೇ ಸಂತತಿಯು ; ನೀನೇ ಈ ರಾಜ್ಯದ ಪಾಲಕನು ; ನನಗೆ ಇಹ ಪರಲೋಕಗಳಲ್ಲಿ ಲಭ್ಯವಾದ ಸರ್ವವಿಧವಾದ ಶ್ರೇಯಸ್ಸು ನಿನಗೆ ಅಧೀನವಾಗಿರುವುದು.

೨೭. ಅಂತಹ ನೀನು ನನ್ನ ಆದೇಶದಂತೆ ಪಾತಾಲ ಲೋಕದಲ್ಲಿರುವ ಅಶ್ವವನ್ನು ತರುವುದಕ್ಕೆ ಮಹಾ ಪ್ರಯತ್ನದಿಂದ ಕೂಡಿದವನಾಗಿ ಕಪಿಲ ಮುನಿಯ ಸಮೀಪ ದೇಶಕ್ಕೆ ಹೋಗು.

೨೮. ವತ್ಸನೆ ! ಆ ಮುನಿಯನ್ನು ಪ್ರಾರ್ಥಿಸಿ ವಿಧಿವತ್ತಾಗಿ ವಿಶೇಷ ಸತ್ಕಾರಗಳಿಂದ ಪ್ರಸನ್ನನನ್ನಾಗಿ ಮಾಡಿ ಅಶ್ವವನ್ನು ತೆಗೆದುಕೊಂಡು ಬೇಗ ಇಲ್ಲಗೆ ಬರಲು ಅರ್ಹನಾಗಿದ್ದೀ.

೨೯. ಜೈಮಿನಿಮುನಿಯು ಇಂತೆಂದನು :—ತಾತನಿಂದ ಈ ರೀತಿಯಾಗಿ ಹೇಳಲ್ಪಟ್ಟ ಮಹಾ ಬುದ್ಧಿಶಾಲಿಯಾದ ಅಂಶುಮಂತನು ಹಾಗೆ ಆಗಲೆಂದು ಹೇಳಿ ತಾತನನ್ನು ವಂದಿಸಿ ಕಪಿಲಮುನಿಯ ಸನ್ನಿಧಿಗೆ ಪ್ರಯಾಣ ಮಾಡಿದನು.

೩೦. ಕಪಿಲಮುನಿಯ ಸಮೀಪಕ್ಕೆ ಹೋಗಿ ತನ್ನ ಜ್ಞಾನ ಶಕ್ತಿಯನ್ನು ಅನುಸರಿಸಿ ವಿಧಿವತ್ತಾಗಿ ನಮಸ್ಕರಿಸಿ ವಿನಯದಿಂದ ನಮ್ರನಾಗಿ ಮೆಲ್ಲಗೆ ಈ ವಚನವನ್ನು ಹೇಳಿದನು.

ಪ್ರಸೀದ ವಿಪ್ರಶಾರ್ದೂಲ ತ್ವಾಮಹಂ ಶರಣಂ ಗತಃ ।
ಕೋಪಂ ಚ ಸಂಹರ ಕ್ಷಿಪ್ರಂ ಲೋಕಪ್ರಕ್ಷಯಕಾರಕಮ್ ॥ ೩೧ ॥

ತ್ವಯಿ ಕ್ರುದ್ಧೇ ಜಗತ್ಸರ್ವಂ ಪ್ರಣಾಶಮುಪಯಾಸ್ಯತಿ ।
ಪ್ರಶಾಂತಿಮುಪಯಾಹ್ಯಾಶು ಲೋಕಾಃ ಸಂತು ಗತವ್ಯಥಾಃ ॥ ೩೨ ॥

ಪ್ರಸನ್ನೋಽಸ್ಮಾನ್ಮಹಾಭಾಗ ಪಶ್ಯ ಸೌಮ್ಯೇನ ಚಕ್ಷುಷಾ ।
ಯೇ ತ್ವತ್ಕ್ರೋಧಾಗ್ನಿನಿರ್ದಗ್ಧಾಸ್ತತ್ಸಂತತಿಮವೇಹಿ ಮಾಮ್ ॥ ೩೩ ॥

ನಾಮ್ನಾಂಽಶುಮಂತಂ ನಪ್ತಾರಂ ಸಗರಸ್ಯ ಮಹೀಪತೇಃ ।
ಸೋಽಹಂ ತಸ್ಯ ನಿಯೋಗೇನ ತ್ವತ್ಪ್ರಸಾದಾಭಿಕಾಂಕ್ಷಯಾ ॥ ೩೪ ॥

ಪ್ರಾಪ್ತೋ ದಾಸ್ಯಸಿ ಚೇದ್ಬ್ರಹ್ಮಂಸ್ತುರಗಾನಯನಾಯ ಚ ।
ಜೈಮಿನಿರುವಾಚ :—
ಇತಿ ತದ್ವಚನಂ ಶ್ರುತ್ವಾ ಯೋಗೀಂದ್ರಪ್ರವರೋ ಮುನಿಃ ॥ ೩೫ ॥

---

೩೧ ವಿಪ್ರೋತ್ತಮನೆ! ಪ್ರಸನ್ನನಾಗು. ನಾನು ನಿನ್ನನ್ನು ಶರಣಹೊಂದಿರುವೆನು. ಲೋಕಗಳನ್ನು ನಾಶಮಾಡುವಂತಹ ಉಗ್ರವಾದ ಈ ಕೋಪವನ್ನು ಶಮನ ಮಾಡು.

೩೨. ಭಗವಂತನಾದ ನೀನು ಕೋಪಗೊಂಡರೆ ಸರ್ವಪ್ರಪಂಚವು ನಾಶಹೊಂದುವುದು. ಆದ್ದರಿಂದ ನೀನು ಶೀಘ್ರವಾಗಿ ಶಾಂತಿಯನ್ನು ಹೊಂದು. ಲೋಕಗಳು ಶಾಂತವಾದ ವ್ಯಥೆಯುಳ್ಳವುಗಳಾಗಲಿ.

೩೩. ಮಹಾಮುನಿಯೆ! ನೀನು ಪ್ರಸನ್ನನಾಗಿ ಸೌಮ್ಯವಾದ ದೃಷ್ಟಿಯಿಂದ ನಮ್ಮನ್ನು ನೋಡು. ನಿನ್ನ ಕ್ರೋಧಾಗ್ನಿಯಿಂದ ಯಾರು ಭಸ್ಮೀಭೂತರಾಗಿರುವರೋ ನಾನು ಅವರ ಸಂತತಿಗೆ ಸೇರಿದವನೆಂದು ತಿಳಿ.

೩೪. ಸಗರ ಮಹಾರಾಜನ ಪೌತ್ರನಾದ ನನ್ನನ್ನು ಅಂಶುಮಂತನೆಂಬ ನಾಮಾಂಕಿತನೆಂದು ತಿಳಿ. ನಾನು ಆ ಸಗರ ರಾಜನ ಆದೇಶದಿಂದ ನಿನ್ನ ಅನುಗ್ರಹವನ್ನು ಆಕಾಂಕ್ಷಿಸಿ ಬಂದಿರುವೆನು.

೩೫. ನೀನು ಅನುಗ್ರಹಿಸಿ ಕೊಡುವುದಾದರೆ ಯಜ್ಞಿಯ ಅಶ್ವವನ್ನು ತೆಗೆದುಕೊಂಡು ಹೋಗಲು ಬಂದಿರುವೆನು. ಜೈಮಿನಿಮುನಿಯು ಮುಂದುವರಿಸಿ ಹೇಳಿದನು :—ಯೋಗೀಂದ್ರರಲ್ಲಿ ಶ್ರೇಷ್ಠನಾದ ಕಪಿಲಮಹಾಮುನಿಯು ಈ ರೀತಿಯಾದ ಅಂಶುಮಂತನ ವಚನವನ್ನು ಕೇಳಿದನು.

ಅಂಶುಮಂತಂ ಸಮಾಲೋಕ್ಯ ಪ್ರಸನ್ನಮಿದಮಬ್ರವೀತ್ ।
ಸ್ವಾಗತಂ ಭವತೋ ವತ್ಸ ದಿಷ್ಟ್ಯಾ ಚ ತ್ವಮಿಹಾಗತಃ　　॥ ೩೬ ॥

ಗಚ್ಛ ಶೀಘ್ರಂ ಹಯಶ್ಚಾಯಂ ನೀಯತಾಂ ಸಗರಾಂತಿಕಮ್ ।
ಅಧಿಕ್ಷಿಪ್ತೋಽಸ್ಯ ಯಜ್ಞೋಽಪಿ ಪ್ರಾಗತಃ ಸಂಪ್ರವರ್ತತಾಮ್ ॥ ೩೭ ॥

ವ್ರಿಯತಾಂ ಚ ವರೋ ಮತ್ತಸ್ತ್ವಯಾ ಯಸ್ತೇ ಮನೋಗತಃ ।
ದಾಸ್ಯೇ ಸುದುರ್ಲಭಮಪಿ ತ್ವದ್ಭಕ್ತಿಪರಿತೋಷಿತಃ　　॥ ೩೮ ॥

ಏಷಾಂ ತು ಸಂಪ್ರಣಾಶಂ ಹಿ ಗತ್ವಾ ವದ ಪಿತಾಮಹಮ್ ।
ಪಾಪಾನಾಂ ಮರಣಂ ತ್ವೇಷಾಂ ನ ಚ ಶೋಚಿತುಮರ್ಹಸಿ　　॥ ೩೯ ॥

ತತಃ ಪ್ರಣಮ್ಯ ಯೋಗೀಂದ್ರಮಂಶುಮಾನಿದಮಬ್ರವೀತ್ ।
ವರಂ ದದಾಸಿ ಚೇನ್ಮಹ್ಯಂ ವರಯೇ ತ್ವಾಂ ಮಹಾಮುನೇ　　॥ ೪೦ ॥

---

೩೬. ಆಗ ಅಂಶುಮಂತನನ್ನು ನೋಡಿ ಪ್ರಸನ್ನನಾಗಿ ಈ ವಚನವನ್ನು ಹೇಳಿದನು. ಬಾಲಕನೆ! ನಿನಗೆ ಸುಖಾಗಮನವೆ? ಭಾಗ್ಯವಶದಿಂದ ನೀನು ಇಲ್ಲಿಗೆ ಬಂದಿರುವೆ, ಸಂತೋಷವು.

೩೭. ನೀನು ಇಲ್ಲಿಂದ ಬೇಗ ಹೊರಡು, ಈ ಅಶ್ವವು ಸಗರ ರಾಜನ ಸಮೀಪಕ್ಕೆ ಒಯ್ಯಲ್ಪಡಲಿ, ಅವನ ಯಜ್ಞವು ಇದಕ್ಕೆ ಮುಂಚೆ ಭಂಗ ಹೊಂದಿರುವುದು. ಇನ್ನು ಮುಂದೆ ಯಜ್ಞವು ನಡೆಯಲಿ.

೩೮. ನಿನ್ನ ಮಾನಸದಲ್ಲಿ ಏನು ಇಷ್ಟವಿದೆಯೋ ಆ ಇಷ್ಟ ವರವು ನಿನ್ನಿಂದ ನನ್ನಲ್ಲಿ ಕೇಳಲ್ಪಡಲಿ, ನಿನ್ನ ಭಕ್ತಿಯಿಂದ ಸಂತೋಷ ಹೊಂದಿದ ನಾನು ದುರ್ಲಭವಾದರೂ ಅಂತಹ ವರವನ್ನು ಕೊಡುವೆನು.

೩೯. ನೀನು ಹೋಗಿ ನಿನ್ನ ಪಿತಾಮಹನಿಗೆ ಇವರು ಮರಣ ಹೊಂದಿರುವುದನ್ನು ಹೇಳು, ಇದು ಪಾಪಿಗಳಿಗೆ ಅವಶ್ಯವಾಗಿ ಸಂಭವಿಸಬೇಕಾದ ಮರಣವು. ಇದಕ್ಕೆ ನೀನು ಶೋಕಪಡಲು ಅರ್ಹನಲ್ಲ.

೪೦. ತರುವಾಯ ಅಂಶುಮಂತನು ಯೋಗೀಂದ್ರನಾದ ಕಪಿಲಮುನಿಯನ್ನು ನಮಸ್ಕರಿಸಿ ಈ ವಚನವನ್ನು ಹೇಳಿದನು. ಮಹಾಮುನಿಯೆ! ವರವನ್ನು ನೀನು ಕೊಡುವುದಾದರೆ ನಿನ್ನಲ್ಲಿ ಒಂದು ವರವನ್ನು ಬೇಡುವೆನು.

ವರಮರ್ಹಾಮಿ ಚೇತ್ತ್ವತ್ತಃ ಪ್ರಸನ್ನೋ ದಾತುಮರ್ಹಸಿ ।
ತ್ವದ್ರೋಷಪಾವಕಪ್ಲುಷ್ಟಾಃ ಪಿತರೋ ಯೇ ಮಮಾಖಿಲಾಃ ॥ ೪೧ ॥

ಸಂಪ್ರಯಾಸ್ಯಂತಿ ತೇ ಬ್ರಹ್ಮನ್ ನಿರಯಂ ಶಾಶ್ವತೀಃ ಸಮಾಃ ।
ಬ್ರಹ್ಮದಂಡಹತಾನಾಂ ತು ನ ಹಿ ಪಿಂಡೋದಕಕ್ರಿಯಾಃ ॥ ೪೨ ॥

ಪಿಂಡೋದಕವಿಹೀನಾನಾಮಿಹಲೋಕೇ ಮಹಾಮುನೇ ।
ವಿದ್ಯತೇ ಪಿತೃಸಾಲೋಕ್ಯಂ ನ ಖಲು ಶ್ರುತಿಚೋದಿತಮ್ ॥ ೪೩ ॥

ಅಕ್ಷಯಃ ಸ್ವರ್ಗವಾಸೋಽಸ್ತು ತೇಷಾಂ ತು ತ್ವತ್ಪ್ರಸಾದತಃ ।
ವರೇಣಾನೇನ ಭಗವನ್ ಕೃತಕೃತ್ಯೋ ಭವಾಮ್ಯಹಮ್ ॥ ೪೪ ॥

ತತ್ಪ್ರಸೀದ ತ್ವಮೇನ್ವೈಷಾಂ ಸ್ವರ್ಗತೇರ್ವದ ಕಾರಣಮ್ ।
ಯೇನೋದ್ಧಾರಣಮೇತೇಷಾಂ ವಹ್ನೇಃ ಕೋಪಸ್ಯ ವೈ ಭವೇತ್॥ ೪೫ ॥

---

೪೧. ನಿನ್ನಿಂದ ವರಪಡೆಯಲು ನಾನು ಅರ್ಹನಾಗಿದ್ದರೆ ಪ್ರಸನ್ನನಾದ ನೀನು ವರವನ್ನು ಕೊಡಲು ಅರ್ಹನಾಗಿದ್ದಿ, ನನ್ನ ಈ ಎಲ್ಲ ಪಿತೃಗಳು ನಿನ್ನ ಕೋಪಾಗ್ನಿಯ ಜ್ವಾಲೆಯಿಂದ ಧಗ್ಧರಾಗಿರುವರು.

೪೨. ಬ್ರಹ್ಮರ್ಷಿಯೆ! ಇವರು ಅನೇಕ ವರ್ಷಗಳ ದೀರ್ಘಕಾಲದವರೆಗೆ ನರಕಕ್ಕೆ ಹೋಗುತ್ತಾರೆ, ಬ್ರಹ್ಮದಂಡದಿಂದ ಸಂಹಾರಹೊಂದಿದವರಿಗೆ ಪಿಂಡ-ಉದಕ ದಾನವ ಕ್ರಿಯೆಯು ಆಚರಿಸಲ್ಪಡುವುದಿಲ್ಲ.

೪೩. ಮಹಾಮುನಿಯೆ! ಈ ಲೋಕದಲ್ಲಿ ನಡೆಯುವ ಪಿಂಡ-ಉದಕ-ದಾನದಿಂದ ಹೀನರಾದ ಪಿತೃಗಳಿಗೆ ಪಿತೃಸಾಲೋಕ್ಯವು (ಪಿತೃಲೋಕ ವಾಸವು) ಉಂಟಾಗುವುದಿಲ್ಲವೆಂದು ಶ್ರುತಿಯಿಂದ ಬೋಧಿಸಲ್ಪಟ್ಟಿದೆ.

೪೪. ಅಂತಹ ನನ್ನ ಪಿತೃಗಳಿಗೆ ನಿನ್ನ ಪ್ರಸಾದದಿಂದ ಶಾಶ್ವತವಾದ ಸ್ವರ್ಗ ಲೋಕದ ವಾಸವು ಲಭಿಸುವಂತೆ ಆಗಲಿ, ಪೂಜ್ಯನೆ! ಈ ವರದ ಪ್ರಾಪ್ತಿಯಿಂದ ನಾನು ಕೃತಕೃತ್ಯನಾಗುವೆನು.

೪೫. ಆದುದರಿಂದ ಪ್ರಸನ್ನನಾಗು, ಇವರಿಗೆ ಸ್ವರ್ಗಲೋಕ ಪ್ರಾಪ್ತಿಯನ್ನು ಉಂಟುಮಾಡುವ ಉಪಾಯವನ್ನು ಹೇಳು. ಅದರಂತೆ ಆಚರಿಸುವುದರಿಂದ ಇವರು ನಿನ್ನ ಕ್ರೋಧಾಗ್ನಿಯಿಂದ ಉದ್ಧಾರವನ್ನು ಹೊಂದಬೇಕು.

ತತಸ್ತಮಾಹ ಯೋಗೀಂದ್ರಃ ಸುಪ್ರಸನ್ನೇನ ಚೇತಸಾ ।
ನಿರಯೋದ್ಧಾರಣಂ ತೇಷಾಂ ತ್ವಯಾ ವತ್ಸ ನ ಶಕ್ಯತೇ ॥ ೪೬ ॥

ತೈಶ್ಚಾಪಿ ನರಕೇ ತಾವದ್ವಸ್ತವ್ಯಂ ಪಾಪಕರ್ಮಭಿಃ ।
ಕಾಲಃ ಪ್ರತೀಕ್ಷ್ಯತಾಂ ತಾವದ್ಯಾವತ್ತ್ವತ್ಪೌತ್ರಸಂಭವಃ ॥ ೪೭ ॥

ಕಾಲಾಂತೇ ಭವಿತಾ ವತ್ಸ ಪೌತ್ರಸ್ತವ ಮಹಾಮತಿಃ ।
ರಾಜಾ ಭಗೀರಥೋ ನಾಮ ಸರ್ವಧರ್ಮಾರ್ಥತತ್ತ್ವವಿತ್ ॥ ೪೮ ॥

ಸ ತು ಯತ್ನೇನ ಮಹತಾ ಪಿತೃಗೌರವಯಂತ್ರಿತಃ ।
ಆನೇಷ್ಯತಿ ದಿವೋ ಗಂಗಾಂ ತಪಸ್ತಪ್ತ್ವಾ ಮಹದ್ಧ್ರುವಮ್ ॥ ೪೯ ॥

ತದಂಭಸಾ ಪಾವಿತೇಷು ತೇಷಾಂ ಗಾತ್ರಾಸ್ಥಿಭಸ್ಮಸು ।
ಪ್ರಾಪ್ಸ್ಯಂತಿ ಗತಿಂ ಸ್ವರ್ಗೇ ಭವತಃ ಪಿತರೋಽಖಿಲಾಃ ॥ ೫೦ ॥

---

೪೬. ಅನಂತರದಲ್ಲಿ ಯೋಗೀಂದ್ರನಾದ ಮುನಿಯು ಪ್ರಸನ್ನವಾದ ಮಾನಸದಿಂದ ಅಂಶುಮಂತನನ್ನು ಕುರಿತು ಹೇಳಿದನು, ಬಾಲಕನೆ! ಇವರನ್ನು ನರಕದಿಂದ ಉದ್ಧಾರಮಾಡುವುದು ನಿನಗೆ ಶಕ್ಯವಾಗುವುದಿಲ್ಲ.

೪೭. ಪಾಪಕರ್ಮವನ್ನು ಆಚರಿಸಿದ ನಿನ್ನ ಪಿತೃಗಳಿಂದಲೂ ಅಷ್ಟುಕಾಲ ನರಕಲೋಕ ವಾಸವು ಅನುಭವಿಸಲ್ಪಡಬೇಕಾಗಿರುವುದು, ನಿನ್ನ ಪೌತ್ರನು ಹುಟ್ಟುವವರೆಗೂ ಅಷ್ಟುಕಾಲವು ನಿರೀಕ್ಷಿಸಲ್ಪಡಲಿ.

೪೮. ವತ್ಸನೆ! ಕೆಲವು ಕಾಲ ಕಳೆದ ತರುವಾಯ ನಿನಗೆ ಮಹಾ ಬುದ್ಧಿಶಾಲಿಯಾದ ಪೌತ್ರನು ಜನಿಸುವನು, ಅವನು ಸಮಸ್ತ ಧರ್ಮ-ಅರ್ಥಗಳ ತತ್ತ್ವವನ್ನು ತಿಳಿದವನೂ ಭಗೀರಥ ರಾಜನೆಂಬ ಸಂಜ್ಞಾಂಕಿತನೂ ಆಗಿರುವನು.

೪೯. ಅವನು ಪಿತೃಗಳಲ್ಲಿರುವ ಗೌರವಭಾವನೆಯಿಂದ ಬದ್ಧನಾಗಿ ಮಹಾ ಪ್ರಯತ್ನದಿಂದ ಅತಿಶಯವಾದ ತಪಸ್ಸನ್ನು ಆಚರಿಸಿ ತಪ್ಪದೇ ದೇವಲೋಕದಿಂದ ಗಂಗೆಯನ್ನು ತರುವನು.

೫೦. ಆ ಗಂಗೆಯ ತೀರ್ಥದಿಂದ ಅವರ ಶರೀರ-ಅಸ್ಥಿ-ಭಸ್ಮಗಳು ನೆನೆದು ಪವಿತ್ರವಾಗಲಾಗಿ ನಿನ್ನ ಸಮಸ್ತ ಪಿತೃಗಳು ಸ್ವರ್ಗಲೋಕದ ಸದ್ಗತಿಯನ್ನು ಹೊಂದುತ್ತಾರೆ.

ತಥೇತಿ ತಸ್ಯಾ ಮಾಹಾತ್ಮ್ಯಂ ಗಂಗಾಯಾ ನೃಪನಂದನ ।
ಭಾಗೀರಥೀತಿ ಲೋಕೇಽಸ್ಮಿನ್ ಸಾ ವಿಖ್ಯಾತಿಮುಪೈಷ್ಯತಿ　　॥ ೫೧ ॥

ಯತ್ತೋಯಪ್ಲಾವಿತೇಷ್ವಸ್ಥಿಭಸ್ಮಲೋಮನಖೇಷ್ವಪಿ ।
ನಿರಯಾದಪಿ ಸಂಯಾತಿ ದೇಹೀ ಸ್ವರ್ಲೋಕಮಕ್ಷಯಮ್　　॥ ೫೨ ॥

ತಸ್ಮಾತ್ತ್ವಂ ಗಚ್ಛ ಭದ್ರಂ ತೇ ನ ಶೋಕಂ ಕರ್ತುಮರ್ಹಸಿ ।
ಪಿತಾಮಹಾಯ ಚೈನ್ಯೈನಮಶ್ವಂ ಸಂಪ್ರತಿಪಾದಯ　　॥ ೫೩ ॥

ಜೈಮಿನಿರುವಾಚ :—

ತತಃ ಪ್ರಣಮ್ಯ ತಂ ಭಕ್ತ್ಯಾ ತಥೇತ್ಯುಕ್ತ್ವಾ ಮಹಾಮತಿಃ ।
ಯಯೌ ತೇನಾಭ್ಯನುಜ್ಞಾತಃ ಸಾಕೇತನಗರಂ ಪ್ರತಿ　　॥ ೫೪ ॥

ಸಗರಂ ಸ ಸಮಾಸಾದ್ಯ ತಂ ಪ್ರಣಮ್ಯ ಯಥಾಕ್ರಮಮ್ ।
ನ್ಯವೇದಯಚ್ಚ ವೃತ್ತಾಂತಂ ಮುನೇಸ್ತೇಷಾಂ ತಥಾತ್ಮನಃ　　॥ ೫೫

---

೫೧. ರಾಜಪುತ್ರನೆ! ಈ ರೀತಿಯಾಗಿ ಸಗರ ಪುತ್ರರ ಸದ್ಗತಿ ಪ್ರಾಪ್ತಿಯ ನಿಮಿತ್ತದಿಂದ ಗಂಗಾನದಿಗೆ ವಿಶೇಷ ಮಾಹಾತ್ಮ್ಯವು ವ್ಯಕ್ತವಾಗುವುದು. ಆದರಿಂದ ಈ ಲೋಕದಲ್ಲಿ ಗಂಗಾನದಿಯು ಭಗೀರಥನಿಂದ ಇಹಲೋಕಕ್ಕೆ ತರಲ್ಪಟ್ಟು ಇರುವುದರಿಂದ ಭಾಗೀರಥೀ ಎಂದು ಪ್ರಸಿದ್ಧಿಯನ್ನು ಹೊಂದುವುದು.

೫೨. ಯಾವ ಪ್ರಾಣಿಗೆ ಗಂಗಾನದಿಯ ನೀರಿನಿಂದ ತನ್ನ ಶರೀರದ ಅಸ್ಥಿ-ಭಸ್ಮ ರೋಮ-ಉಗುರುಗಳು ನೆನೆದು ಪವಿತ್ರವಾಗುವುವೊ, ಆ ಪ್ರಾಣಿಯು ನರಕದಲ್ಲಿದ್ದರೂ ಅಲ್ಲಿಂದ ಶಾಶ್ವತವಾದ ಸ್ವರ್ಗವಾಸವನ್ನು ಹೊಂದುವುದು.

೫೩. ಆದ್ದರಿಂದ ನೀನು ಇಲ್ಲಿಂದ ಹೋಗು, ನಿನಗೆ ಮಂಗಳವಾಗಲಿ, ಶೋಕ ಮಾಡಲು ನೀನು ಅರ್ಹನಾಗಿಲ್ಲ. ಈ ಅಶ್ವವನ್ನು ನಿನ್ನ ಪಿತಾಮಹನಾದ ಸಗರ ರಾಜನಿಗೆ ಒಪ್ಪಿಸು.

೫೪. ಜೈಮಿನಿ ಮುನಿಯು ಇಂತೆಂದನು:—ತರುವಾಯ ಮಹಾಮತಿಯಾದ ಅಂಶುಮಂತನು ಹಾಗೆ ಆಗಲೆಂದು ಹೇಳಿ ಮುನಿಯನ್ನು ಭಕ್ತಿಯಿಂದ ನಮಸ್ಕರಿಸಿ ಮುನಿಯಿಂದ ಅನುಜ್ಞೆಯನ್ನು ಪಡೆದು ಅಯೋಧ್ಯಾನಗರಕ್ಕೆ ಹೋದನು.

೫೫. ಅಲ್ಲಿ ಸಗರ ರಾಜನ ಸನ್ನಿಧಿಗೆ ಬಂದು ಕ್ರಮವನ್ನು ಅನುಸರಿಸಿ ಅವನಿಗೆ ವಂದಿಸಿ ಕಪಿಲಮುನಿಯಿಂದ ಸಗರ ರಾಜಪುತ್ರರಿಗೆ ಸಂಭವಿಸಿದ ವಿಪತ್ತಿನ ವೃತ್ತಾಂತವನ್ನೂ ತನಗೆ ಮುನಿಯಿಂದ ಆದ ಪ್ರಸಾದ ವೃತ್ತಾಂತವನ್ನೂ ತಿಳಿಸಿದನು.

**ಪ್ರದದೌ ತುರಗಂ ಚಾಪಿ ಸಮಾನೀತಂ ಪ್ರಯತ್ನತಃ ।**
**ಅತಃ ಪರಮನುಷ್ಠೇಯಮಬ್ರವೀತ್ ಕಿಂ ಮಯೇತಿ ಚ || ೫೬ ||**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ಚತುಃಪಂಚಾಶತ್ತಮೋಽಧ್ಯಾಯಃ**

---

೫೬. ಮತ್ತು ಪ್ರಯತ್ನಪೂರ್ವಕವಾಗಿ ತಂದಿರುವ ಅಶ್ವವನ್ನು ಸಗರ ರಾಜನಿಗೆ ಕೊಟ್ಟನು. ಇನ್ನುಮುಂದೆ ನಾನು ಆಚರಿಸಬೇಕಾದ ಕರ್ತವ್ಯವೇನು? ಎಂದು ಕೇಳಿದನು.

ಬ್ರಹ್ಮಾಂಡ ಪುರಾಣದಲ್ಲಿ ಉತ್ತರಾರ್ಧದಲ್ಲಿ ಐವತ್ತನಾಲ್ಕನೆಯ ಅಧ್ಯಾಯವು ಸಮಾಪ್ತವು.

## ಪಂಚಪಂಚಾಶತ್ತಮೋಽಧ್ಯಾಯಃ

ಜೈಮಿನಿರುವಾಚ :—

ತತಃ ಪೌತ್ರಂ ಪರಿಷ್ವಜ್ಯ ಸಗರಃ ಪ್ರೇಮವಿಹ್ವಲಃ ।
ಅಭಿನಂದ್ಯಾಶಿಷಾತ್ಯರ್ಥಂ ಲಾಲಯನ್ ಪ್ರಶಶಂಸ ಹ ॥ ೧ ॥

ಅಥ ಋತ್ವಿಕ್‌ಸದಸ್ಯೈಶ್ಚ ಸಹಿತೋ ರಾಜಸತ್ತಮಃ ।
ಉಪಾಕ್ರಮತ ತಂ ಯಜ್ಞಂ ವಿಧಿವದ್ವೇದಪಾರಗೈಃ ॥ ೨ ॥

ತತಃ ಪ್ರವವೃತೇ ಯಜ್ಞಃ ಸರ್ವಸಂಪದ್ಗುಣಾನ್ವಿತಃ ।
ಸಮ್ಯಗೌರ್ವವಸಿಷ್ಠಾದ್ಯೈರ್ಮುನಿಭಿಃ ಸಂಪ್ರವರ್ತಿತಃ ॥ ೩ ॥

ಹಿರಣ್ಮಯಮಯೀ ವೇದಿಃ ಪಾತ್ರಾಣ್ಯುಚ್ಚಾವಚಾನಿ ಚ ।
ಸುಸಮೃದ್ಧಂ ಯಥಾಶಾಸ್ತ್ರಂ ಯಜ್ಞೇ ಸರ್ವಂ ಬಭೂವ ಹ ॥ ೪ ॥

ಏವಂ ಪ್ರವರ್ತಿತಂ ಯಜ್ಞಮೃತ್ವಿಜಃ ಸರ್ವ ಏವ ತೇ ।
ಕ್ರಮಾತ್ ಸಮಾಪಯಾಮಾಸುರ್ಯಜಮಾನಪುರಃಸರಾಃ ॥ ೫ ॥

---

೧. ಜೈಮುನಿ ಮುನಿಯು ಇಂತೆಂದನು :—ಅನಂತರದಲ್ಲಿ ಸಗರ ರಾಜನು ಪ್ರೇಮಪರವಶನಾಗಿ ಪೌತ್ರನಾದ ಅಂಶುಮಂತನನ್ನು ಆಲಿಂಗಿಸಿ ಆಶೀರ್ವಚನದಿಂದ ಅಭಿನಂದಿಸಿ ಅತಿಯಾಗಿ ಲಾಲನೆಮಾಡುತ್ತ ಪ್ರಶಂಸೆ ಮಾಡಿದನು.

೨. ಅನಂತರದಲ್ಲಿ ರಾಜಶ್ರೇಷ್ಠನಾದ ಸಗರ ರಾಜನು ವೇದಗಳಲ್ಲಿ ಪಾರಂಗತರಾದ ಋತ್ವಿಜರಿಂದಲೂ ಸದಸ್ಯರಿಂದಲೂ ಕೂಡಿ ಆ ಯಾಗವನ್ನು ವಿಧಿವತ್ತಾಗಿ ನೆರವೇರಿಸಲು ಉಪಕ್ರಮಿಸಿದನು.

೩. ತರುವಾಯ ಔರ್ವಮುನಿ, ವಸಿಷ್ಠಮಹರ್ಷಿ ಮುಂತಾದ ಮುನಿಗಳಿಂದ ಚನ್ನಾಗಿ ನಡೆಸಲ್ಪಟ್ಟ ಯಜ್ಞವು ಸಕಲಸಂಪತ್ತಿಗಳಿಂದಲೂ ಅಂಗಗಳಿಂದಲೂ ಕೂಡಿ ವಿಜೃಂಭಣೆಯಿಂದ ನಡೆಯಿತು.

೪. ಯಜ್ಞದಲ್ಲಿ ವೇದಿಯು ಸುವರ್ಣಮಯ ವಸ್ತುಗಳಿಂದ ಪೂರ್ಣವಾಗಿತ್ತು. ಯಜ್ಞಪಾತ್ರಗಳು ಅನೇಕಬಗೆಯಾಗಿದ್ದುವು. ಯಜ್ಞದಲ್ಲಿ ಎಲ್ಲವೂ ಉತ್ತಮ ಸಮೃದ್ಧಿಯಿಂದ ಕೂಡಿರುವುದೂ ಶಾಸ್ತ್ರಾನುಸಾರಿಯೂ ಆಗಿತ್ತು.

೫. ಈ ರೀತಿಯಾಗಿ ನಡೆದುಬಂದ ಯಜ್ಞವನ್ನು ಯಜಮಾನನನ್ನು ಮುಂದಿಟ್ಟುಕೊಂಡು ಆ ಎಲ್ಲ ಋತ್ವಿಜರು ಕ್ರಮವಾಗಿ ಸಮಾಪ್ತಿಗೊಳಿಸಿದರು.

**ಸಮಾಪಯಿತ್ವಾ ತಂ ಯಜ್ಞಂ ರಾಜಾ ವಿಧಿವಿದಾಂ ವರಃ ।**
**ಯಥಾವದ್ದಕ್ಷಿಣಾಂ ಚೈವ ಋತ್ವಿಜಾಂ ಪ್ರದದೌ ತದಾ ॥ ೬ ॥**

**ಅಥ ಋತ್ವಿಕ್ಸದಸ್ಯಾನಾಂ ಬ್ರಾಹ್ಮಣಾನಾಂ ತಥಾರ್ಥಿನಾಮ್ ।**
**ತತ್ಕಾಂಕ್ಷಿತಾದಭ್ಯಧಿಕಂ ಪ್ರದದೌ ವಸು ಸರ್ವಶಃ ॥ ೭ ॥**

**ಏವಂ ಸಂತರ್ಪ್ಯ ವಿಪ್ರಾದೀನ್ ದಕ್ಷಿಣಾಭಿರ್ಯಥಾಕ್ರಮಮ್ ।**
**ಕ್ಷಮಾಪಯಾಮಾಸ ಗುರೂನ್ ಸದಸ್ಯಾನ್ ಪ್ರಣಿಪತ್ಯ ಚ ॥ ೮ ॥**

**ಬ್ರಾಹ್ಮಣಾದ್ಯೈಸ್ತತೋ ವರ್ಣೈರೃತ್ವಿಗ್ಭಿಶ್ಚ ಸಮನ್ವಿತಃ ।**
**ವಾರನಾರೀಕದಂಬೈಶ್ಚ ಸೂತಮಾಗಧವಂದಿಭಿಃ ॥ ೯ ॥**

**ಅನ್ವೀಯಮಾನಃ ಸಸ್ತ್ರೀಕಃ ಶ್ವೇತಚ್ಛತ್ರವಿರಾಜಿತಃ ।**
**ದೋಧೂಯಮಾನಚಮರೋ ವಾಲವ್ಯಜನರಾಜಿತಃ ॥ ೧೦ ॥**

೬. ಶಾಸ್ತ್ರವಿಧಿಯನ್ನು ತಿಳಿದವರಲ್ಲಿ ಪ್ರವರನಾದ ರಾಜನು ಆ ಯಜ್ಞವನ್ನು ಪೂರ್ತಿಗೊಳಿಸಿ ಆಗ ಋತ್ವಿಜರಿಗೆ ವಿಧಿವತ್ತಾಗಿ ದಕ್ಷಿಣೆಯನ್ನು ಕೊಟ್ಟನು.

೭. ಅನಂತರದಲ್ಲಿ ರಾಜನು ಋತ್ವಿಜರಿಗೂ, ಸದಸ್ಯರಿಗೂ, ಬ್ರಾಹ್ಮಣರಿಗೂ ಮತ್ತು ಭಿಕ್ಷುಕರಿಗೂ ಕೂಡ ಅವರ ಇಷ್ಟವನ್ನು ಮೀರಿ ಅಧಿಕವಾಗಿ ದಾನಕೊಟ್ಟನು.

೮. ಈ ರೀತಿಯಾಗಿ ಕ್ರಮವನ್ನು ಅನುಸರಿಸಿ ದಕ್ಷಿಣೆಗಳಿಂದ ವಿಪ್ರ ಮುಂತಾದವರನ್ನು ತೃಪ್ತಿಪಡಿಸಿ ಗುರುಗಳನ್ನೂ ಸದಸ್ಯರನ್ನೂ ನಮಸ್ಕರಿಸಿ ಕ್ಷಮೆ ಬೇಡಿಕೊಂಡನು.

೯. ಮತ್ತು ಬ್ರಾಹ್ಮಣ ಮುಂತಾದ ನಾನಾ ವರ್ಣಗಳಿಂದಲೂ ಋತ್ವಿಜರಿಂದಲೂ ವಾರನಾರಿಯರ ಗುಂಪಿನಿಂದಲೂ, ಸೂತ-ಮಾಗಧ-ವಂದಿ ಜನರಿಂದಲೂ ಕೂಡಿ ಅವಭೃಥ ಸ್ನಾನಕ್ಕೆ ಹೋದನು.

೧೦. ಅನೇಕ ಸ್ತ್ರೀಯರಿಂದ ಹಿಂಬಾಲಿಸಲ್ಪಟ್ಟವನೂ ಶ್ವೇತಚ್ಛತ್ರದಿಂದ ಭೂಷಿತನೂ ಚಾಮರಗಳಿಂದ ಸೇವಿಸಲ್ಪಟ್ಟವನೂ, ಮತ್ತು ಬೀಸಣಿಗೆಗಳಿಂದ ಸೇವಿಸಲ್ಪಟ್ಟವನೂ ಆಗಿ ಹೊರಟನು.

ನಾನಾ ವಾದಿತ್ರನಿರ್ಘೋಷೈರ್ಬಧಿರೀಕೃತದಿಙ್ಮುಖಃ |
ಸ ಗತ್ವಾ ಸರಯೂತೀರಂ ಯಥಾಶಾಸ್ತ್ರಂ ಯಥಾವಿಧಿ || ೧೧ ||

ಚಕಾರಾವಭೃಥಸ್ನಾನಂ ಮುದಿತಃ ಸಹ ಬಂಧುಭಿಃ |
ಏವಂ ಸ್ನಾತ್ವಾ ಸಪತ್ನೀಕಃ ಸುಹೃದ್ಭಿರ್ಬ್ರಾಹ್ಮಣೈಃ ಸಹ || ೧೨ ||

ವೀಣಾವೇಣುಮೃದಂಗಾದಿನಾನಾವಾದಿತ್ರನಿಃಸ್ವನೈಃ |
ಮಂಗಲ್ಯೈರ್ವೇದಘೋಷೈಶ್ಚ ಸಹ ವಿಪ್ರಜನೇರಿತೈಃ || ೧೩ ||

ಸಂಸ್ತೂಯಮಾನಃ ಪರಿತಃ ಸೂತಮಾಗಧವಂದಿಭಿಃ |
ಪ್ರವಿವೇಶ ಪುರೀಂ ರಮ್ಯಾಂ ಹೃಷ್ಟಪುಷ್ಟಜನಾಯುತಾಮ್ || ೧೪ ||

ಶ್ವೇತವ್ಯಜನಸಚ್ಛತ್ರಪತಾಕಾಧ್ವಜಮಾಲಿನೀಮ್
ಸಿಕ್ತಸಮ್ಮೃಷ್ಟಭೂಭಾಗಾಪಣಶೋಭಾಸಮನ್ವಿತಾಮ್ || ೧೫ ||

---

೧೧. ಅನೇಕ ವಿಧವಾದ ವಾದ್ಯಘೋಷಗಳಿಂದ ಕಿವುಡಾದಂತೆ ಇರುವ ದಿಗಂತವುಳ್ಳವನಾಗಿ ಶಾಸ್ತ್ರಾನುಸಾರವಾದ ವಿಧಾನಗಳನ್ನೊಳಗೊಂಡಿರುವ ಅವಭೃಥ ಸ್ನಾನಕ್ಕೆ ಸರಯೂ ನದಿಯ ತೀರಕ್ಕೆ ಹೋದನು.

೧೨. ಅಲ್ಲಿ ಅನೇಕ ಬಂಧುಜನ-ಮಿತ್ರವೃಂದ-ಬ್ರಾಹ್ಮಣ ಸಮೂಹ ಮತ್ತು ಪತ್ನಿಯರಿಂದೊಡಗೂಡಿ ಅವಭೃಥಸ್ನಾನವನ್ನು ವಿಧಿವತ್ತಾಗಿ ಮಾಡಿದನು.

೧೩. ಅಲ್ಲಿ ವೀಣಾ-ವೇಣು-ಮೃದಂಗ ಮುಂತಾದ ವಿವಿಧ ವಾದ್ಯಗಳ ಧ್ವನಿಗಳಿಂದಲೂ ಬ್ರಾಹ್ಮಣೋತ್ತಮರಿಂದ ಪಠಿಸಲ್ಪಟ್ಟ ಮಂಗಲಕರವಾದ ವೇದಗಳ ಘೋಷಗಳಿಂದಲೂ ಸ್ತುತಿಸಲ್ಪಟ್ಟವನಾದನು.

೧೪. ಹೀಗೆ ಸೂತ-ಮಾಗಧ-ವಂದಿಗಳಿಂದ ಸುತ್ತಲೂ ನಿಂತು ಸ್ತುತಿಸಲ್ಪಟ್ಟವನಾಗಿ ಹರ್ಷಗೊಂಡಿರುವ ಮತ್ತು ಪುಷ್ಟರಾದ ಜನರಿಂದ ಕೂಡಿದ ರಮ್ಯವಾದ ನಗರಕ್ಕೆ ಪ್ರವೇಶಮಾಡಿದನು.

೧೫. ಆಗ ಅಲಂಕರಿಸಲ್ಪಟ್ಟ ನಗರಿಯು ಶ್ವೇತವರ್ಣದ ವ್ಯಜನ, ಛತ್ರ, ಧ್ವಜ ಪತಾಕೆಗಳ ಶ್ರೇಣಿಯಿಂದ ಕೂಡಿಯೂ ಮತ್ತು ನೀರನ್ನು ಎರಚಿ ಶೋಧಿಸಿದ ಭೂಮಿಯುಳ್ಳ ಅಂಗಡಿ ಬೀದಿಗಳ ಶೋಭೆಯಿಂದ ರಮ್ಯವೂ ಆಗಿತ್ತು.

ಕೈಲಾಸಾದ್ರಿಪ್ರಕಾಶಾಭಿರುಜ್ಜ್ವಲಾಂ ಸೌಧಪಂಕ್ತಿಭಿಃ ।
ಸ ತತ್ಕ್ರಾಗರುಧೂಪೋತ್ಥಗಂಧಾಮೋದಿತದಿಜ್ಮುಖಾಮ್ ॥ ೧೬ ॥

ವಿಕೀರ್ಯಮಾಣಃ ಪರಿತಃ ಪೌರನಾರೀಜನೈರ್ಮುಹುಃ ।
ಲಾಜವರ್ಷೇಣ ಸಾನಂದಂ ವೀಕ್ಷ್ಯಮಾಣಶ್ಚ ನಾಗರೈಃ ॥ ೧೭ ॥

ಉಪದಾಭಿರನೇಕಾಭಿಸ್ತತ್ರ ತತ್ರ ವಣಿಗ್ಜನೈಃ ।
ಸಂಭಾವ್ಯಮಾನಃ ಶನಕೈರ್ಜಗಾಮ ಸ್ವಪುರಂ ಪ್ರತಿ ॥ ೧೮ ॥

ಸ ಪ್ರವಿಶ್ಯ ಗೃಹಂ ರಮ್ಯಂ ಸರ್ವಮಂಡಲಮಂಡಿತಮ್ ।
ಸಮ್ಯಕ್ ಸಂಭಾವಯಾಮಾಸ ಸುಹೃದೋ ಬ್ರಾಹ್ಮಣಾನಪಿ ॥ ೧೯ ॥

ಸಂಸೇವ್ಯಮಾನಶ್ಚ ತದಾ ನಾನಾದೇಶೇಶ್ವರೈರ್ನೃಪೈಃ ।
ಸಭಾಯಾಂ ರಾಜಶಾರ್ದೂಲೋ ರೇಮೇ ಶಕ್ರ ಇವಾಪರಃ ॥ ೨೦ ॥

---

೧೬. ಮತ್ತು ಆ ನಗರಿಯು ಕೈಲಾಸಾದ್ರಿಗೆ ಸಮಾನವಾಗಿ ರಾಜಿಸುವ ಮಹಡಿ ಮನೆಗಳ ಶ್ರೇಣಿಗಳಿಂದ ಉಜ್ಜ್ವಲವಾಗಿಯೂ ಕೃಷ್ಣಾಗುರುಧೂಪದಿಂದ ಉಂಟಾದ ಸುಗಂಧದಿಂದ ವ್ಯಾಪಿಸಿದ ದಿಗಂತಗಳಿಂದ ಮನೋಹರವಾಗಿಯೂ ಇತ್ತು.

೧೭. ನಗರ ಪ್ರವೇಶ ಸಮಯದಲ್ಲಿ ಪಾರ್ಶ್ವಗಳಲ್ಲಿ ನಿಂತು ಪುರವನಿತೆಯರಿಂದ ಮತ್ತೆ ಮತ್ತೆ ಲಾಜವರ್ಷದಿಂದ ಎರಚಲ್ಪಡುತ್ತಲೂ ಆನಂದದಿಂದ ನಾಗರಿಕ ಜನರಿಂದ ನೋಡಲ್ಪಡುತ್ತಲೂ ಪ್ರವೇಶಮಾಡಿದನು.

೧೮. ಮತ್ತು ಅಲ್ಲಲ್ಲಿ ಅನೇಕ ವಿಧವಾದ ಕಾಣಿಕೆಗಳನ್ನು ಅರ್ಪಿಸಿ ವರ್ತಕ ಸಂಘದಿಂದ ಗೌರವಿಸಲ್ಪಡುತ್ತ ಮೆಲ್ಲಗೆ ತನ್ನ ನಗರ ಪ್ರವೇಶ ಮಾಡಿದನು.

೧೯. ರಾಜನು ಹಾಗೆಯೆ ಸರ್ವವಿಧವಾದ ಪ್ರಕೃತಿ ಮಂಡಲದಿಂದ ಶೋಭಿಸಲ್ಪಟ್ಟ ರಮ್ಯವಾದ ತನ್ನ ಗೃಹವನ್ನು ಪ್ರವೇಶಿಸಿ ಮಿತ್ರರನ್ನೂ ಬ್ರಾಹ್ಮಣರನ್ನೂ ಚನ್ನಾಗಿ ಗೌರವಿಸಿದನು.

೨೦. ಆಗ ನಾನಾ ದೇಶಗಳ ಅಧಿಪತಿಗಳಾದ ರಾಜರಿಂದ ಸೇವಿಸಲ್ಪಡುತ್ತಲಿದ್ದ ರಾಜಶ್ರೇಷ್ಠನು ತನ್ನ ಸಭೆಯಲ್ಲಿ ಮತ್ತೊಬ್ಬ ದೇವಾಧಿಪತಿಯಾದ ಇಂದ್ರನಂತೆ ರಮಿಸಿದನು.

ಏವಂ ಸುಹೃದ್ಭಿಃ ಸಹಿತಃ ಪೂರಯಿತ್ವಾ ಮನೋರಥಮ್ ।
ಸಗರಃ ಸಹ ಭಾರ್ಯಾಭ್ಯಾಂ ರೇಮೇ ನೃಪವರೋತ್ತಮಃ ॥ ೨೧ ॥

ಅಂಶುಮಂತಂ ತತಃ ಪೌತ್ರಂ ಮುದಾ ವಿನಯಶಾಲಿನಮ್ ।
ವಸಿಷ್ಠಾನುಮತೇ ರಾಜಾ ಯೌವರಾಜ್ಯೇಽಭ್ಯಷೇಚಯತ್ ॥ ೨೨ ॥

ಪೌರಜಾನಪದಾನಾಂ ತು ಬಂಧೂನಾಂ ಸುಹೃದಾಮಪಿ ।
ಸ ಪ್ರಿಯೋಽಭವದತ್ಯರ್ಥಮುದಾರೈಶ್ಚ ಗುಣೈರ್ವೃತಃ ॥ ೨೩ ॥

ಪ್ರಜಾಸ್ತಮನ್ವರಜ್ಯಂತ ಬಾಲಮಪ್ಯಮಿತೌಜಸಮ್ ।
ನವಂ ಚ ಶುಕ್ಲಪಕ್ಷಾದೌ ಶೀತಾಂಶುಮಚಿರೋದಿತಮ್ ॥ ೨೪ ॥

ಸ ತೇನ ಸಹಿತಃ ಶ್ರೀಮಾನ್ ಸುಹೃದ್ಭಿಶ್ಚ ನೃಪೋತ್ತಮಃ ।
ಭಾರ್ಯಾಭ್ಯಾಮನುರೂಪಾಭ್ಯಾಂ ರಮಮಾಣೋಽವಸಚ್ಚಿರಮ್॥ ೨೫ ॥

---

೨೧. ಹೀಗೆ ರಾಜಶ್ರೇಷ್ಠರಲ್ಲಿ ಪ್ರವರನಾದ ಸಗರ ಭೂಪತಿಯು ಮಿತ್ರರಿಂದ ಕೂಡಿ ತನ್ನ ಮನೋರಥವನ್ನು ಪೂರ್ತಿಮಾಡಿಕೊಂಡು ತನ್ನ ಇಬ್ಬರು ಪತ್ನಿಯರೊಡನೆ ರತಿವಿಹಾರ ಸೌಖ್ಯವನ್ನು ಅನುಭವಿಸಿದನು.

೨೨. ತರುವಾಯ ಸಗರ ರಾಜನು ವಿನಯಗುಣದಿಂದ ಶೋಭಿಸುವ ಅಂಶುಮಂತನೆಂಬ ಪೌತ್ರನನ್ನು ವಸಿಷ್ಠ ಮಹರ್ಷಿಯ ಅನುಮತಿಯಂತೆ ಸಂತೋಷದಿಂದ ಯೌವರಾಜ್ಯ ಪದವಿಯಲ್ಲಿ ಪಟ್ಟಾಭಿಷೇಕಮಾಡಿದನು.

೨೩. ಮತ್ತು ಆ ಯುವರಾಜನು ಪುರ-ಜನಪದಗಳಲ್ಲಿರುವ ಜನರಿಗೂ ಬಂಧುವರ್ಗಕ್ಕೂ ಮತ್ತು ಮಿತ್ರಗೋಷ್ಠಿಗೂ ಉದಾರವಾದ ತನ್ನ ಗುಣಜಾಲದಿಂದ ಅತ್ಯಂತ ಪ್ರಿಯನಾಗಿದ್ದನು.

೨೪. ಶುಕ್ಲಪಕ್ಷದ ಆದ್ಯತಿಥಿಯಲ್ಲಿ ಆಗತಾನೆ ಉದಯಿಸಿರುವ ಬಾಲಚಂದ್ರನನ್ನು ನೋಡಿ ಆನಂದಿಸಿದಂತೆ ಬಾಲಕನಾದರೂ ಅತಿಶಯವಾದ ಕಾಂತಿಯುಳ್ಳ ಅಂಶುಮಂತ ರಾಜನನ್ನು ಪ್ರಜೆಗಳು ಅನುಸರಿಸಿ ಪ್ರೀತಿಸಿದರು.

೨೫. ಸಂಪತ್ತಿಯಿಂದ ಶೋಭಿಸುವ ನೃಪಶ್ರೇಷ್ಠನಾದ ಸಗರ ರಾಜನು ಯುವರಾಜನಾದ ಅಂಶುಮಂತನಿಂದ ಸಹಿತನಾಗಿದ್ದು ಅನುರೂಪರಾದ ಭಾರ್ಯೆಯರಿಂದ ಕೂಡಿ ಬಹುಕಾಲದ ವರೆಗೆ ರಮಿಸಿದನು.

**ಯುವ್ಯೈವ ರಾಜಶಾರ್ದೂಲಃ ಸಾಕ್ಷಾದ್ಧರ್ಮ ಇವಾಪರಃ ।**
**ಪಾಲಯಾಮಾಸ ವಸುಧಾಂ ಸಶೈಲವನಕಾನನಾಮ್ ॥ ೨೬ ॥**

**ಏವಂ ಮಹಾನಹಿಮದೀಧಿತಿವಂಶಮೌಳಿ—**
**ರಶ್ಮಾಯಮಾನವಪುರುತ್ತರಕೋಸಲೇಶಃ ।**
**ಪೂರ್ಣೇಂದುವತ್ಸಕಲಲೋಕಮನೋಽಭಿರಾಮಃ**
**ಸಾರ್ಧಂ ಪ್ರಜಾಭಿರಖಿಲಾಭಿರಲಂ ಜಹರ್ಷ ॥ ೨೭ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ಪಂಚಪಂಚಾಶತ್ತ ಮೋಽಧ್ಯಾಯಃ**

---

೨೬. ಪ್ರಶಂಸನೀಯನಾದ ಯುವರಾಜನು ಮೂರ್ತಿಮತ್ತಾದ ಮತ್ತೊಬ್ಬ ಧರ್ಮನಂತೆ ಶೈಲ, ಅರಣ್ಯ, ಮತ್ತು ದುರ್ಗಗಳಿಂದ ಕೂಡಿದ ಸಂಪೂರ್ಣ ಪೃಥಿವಿಯನ್ನು ಪಾಲಿಸಿದನು.

೨೭. ಈ ರೀತಿಯಾಗಿ ಸೂರ್ಯನ ವಂಶಕ್ಕೆ ಚೂಡಾಮಣಿಯಂತಿರುವ ದೇಹದಿಂದ ರಾಜಿಸುವ ಉತ್ತರ ಕೋಸಲ ದೇಶಾಧಿಪತಿಯಾದ ಸಗರ ರಾಜನು ಪೂರ್ಣಚಂದ್ರನಂತೆ ಸಕಲ ಪ್ರಜೆಗಳ ಮನಸ್ಸಿಗೆ ಅಭಿರಾಮನಾಗಿ ಸಮಸ್ತ ಪ್ರಜೆಗಳೊಡನೆ ಹೆಚ್ಚಾಗಿ ಹರ್ಷಗೊಂಡನು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಐವತ್ತೈದನೆಯ ಅಧ್ಯಾಯವು ಮುಗಿದುದು.

---

# ಷಟ್ಪಂಚಾಶತ್ತಮೋಽಧ್ಯಾಯಃ

ಜೈಮಿನಿರುವಾಚ :—

ಏತತ್ತೇ ಚರಿತಂ ಸರ್ವಂ ಸಗರಸ್ಯ ಮಹಾತ್ಮನಃ ।
ಸಂಕ್ಷೇಪವಿಸ್ತರಾಭ್ಯಾಂ ತು ಕಥಿತಂ ಪಾಪನಾಶನಮ್ ॥ ೧ ॥

ಖಂಡೋಽಯಂ ಭಾರತೋ ನಾಮ ದಕ್ಷಿಣೋತ್ತರಮಾಯತಃ ।
ನವಯೋಜನಸಾಹಸ್ರಂ ವಿಸ್ತಾರಪರಿಮಂಡಲಮ್ ॥ ೨ ॥

ಪುತ್ರೈಸ್ತಸ್ಯ ನರೇಂದ್ರಸ್ಯ ಮೃಗಯದ್ಭಿಸ್ತುರಂಗಮಮ್ ।
ಯೋಜನಾನಾಂ ಸಹಸ್ರಂ ತು ಖಾತ್ವಾಷ್ಟೌ ವಿನಿಪಾದಿತಾಃ ॥ ೩ ॥

ಸಗರಸ್ಯ ಸುತೈರ್ಯಸ್ಮಾದ್ವರ್ಧಿತೋ ಮಕರಾಲಯಃ ।
ತತಃ ಪ್ರಭೃತಿ ಲೋಕೇಷು ಸಾಗರಾಖ್ಯಾಮವಾಪ್ತವಾನ್ ॥ ೪ ॥

---

೧. ಜೈಮಿನಿಮುನಿಯು ಇಂತೆಂದನು :-ಮಹಾತ್ಮನಾದ ಸಗರ ಚಕ್ರವರ್ತಿಯ ಪಾಪಗಳನ್ನು ಕಳೆಯುವ ಈ ಸಕಲ ಚರಿತ್ರೆಯು ಸಂಕ್ಷೇಪ ಮತ್ತು ವಿಸ್ತಾರಗಳಿಂದ ವಿಶದವಾಗಿ ನಿನಗೆ ಹೇಳಲ್ಪಟ್ಟಿತು.

೨. ಮಧ್ಯಮ ಭುವನದಲ್ಲಿ ಈ ಭರತಖಂಡವು ದಕ್ಷಿಣ ಉತ್ತರ ದಿಕ್ಕುಗಳನ್ನು ವ್ಯಾಪಿಸಿ ದೀರ್ಘವಾಗಿರುವುದು. ಇದರ ವರ್ತುಲ ಪರಿಮಾಣವು ಒಂಭತ್ತು ಯೋಜನ ಸಂಖ್ಯೆಯಿಂದ ಪರಿಮಿತವಾಗಿದೆ.

೩. ಹೀಗಿರಲು ಆ ಸಗರ ರಾಜನ ಪುತ್ರರಿಂದ ಅಶ್ವವನ್ನು ಅನ್ವೇಷಣಮಾಡುವ ಸಮಯದಲ್ಲಿ ಎಂಟು ಸಹಸ್ರ ಯೋಜನ ಪರಿಮಾಣದ ಭಾಗಗಳನ್ನು ಅಗೆದು ಅಷ್ಟು ಪ್ರದೇಶವು ಕಳೆಯಲ್ಪಟ್ಟಿತು.

೪. ಯಾವ ಕಾರಣದಿಂದ ಮೊಸಳೆ ಮುಂತಾದ ಪ್ರಾಣಿಗಳಿಗೆ ಆಶ್ರಯವಾದ ಸಮುದ್ರವು ಸಗರ ಪುತ್ರರಿಂದ ಬೆಳೆಸಲ್ಪಟ್ಟಿತೊ ಆ ನಿಮಿತ್ತದಿಂದ ಆ ಮೊದಲು ಗೊಂಡು ಲೋಕದಲ್ಲಿ ಸಾಗರವೆಂಬ ಅನ್ವರ್ಥ ಸಂಜ್ಞೆಯನ್ನು ಹೊಂದಿತು.

ಬ್ರಹ್ಮಪಾದಾವಧಿ ಮಹೀಂ ಸತೀರ್ಥಕ್ಷೇತ್ರಕಾನನಾಮ್ ।
ಅಬ್ಧಿಃ ಸಂಕ್ರಮಯಾಮಾಸ ಪರಿಕ್ಷಿಪ್ಯ ನಿಜಾಂಭಸಾ ॥ ೫ ॥

ತತಸ್ತನ್ನಿಲಯಾಃ ಸರ್ವೇ ಸದೇವಾಸುರಮಾನವಾಃ ।
ಇತಸ್ತತಶ್ಚ ಸಂಜಾತಾ ದುಃಖೇನ ಮಹತಾನ್ವಿತಾಃ ॥ ೬ ॥

ಗೋಕರ್ಣಂ ನಾಮ ವಿಖ್ಯಾತಂ ಕ್ಷೇತ್ರಂ ಸರ್ವಸುರಾರ್ಚಿತಮ್ ।
ಸಾರ್ಧಯೋಜನವಿಸ್ತಾರಂ ತೀರೇ ಪಶ್ಚಿಮವಾರಿಧೇಃ ॥ ೭ ॥

ತತ್ರಾಸಂಖ್ಯಾನಿ ತೀರ್ಥಾನಿ ಮುನಿದೇವಾಲಯಾಶ್ಚ ವೈ ।
ವಸಂತಿ ಸಿದ್ಧಸಂಘಾಶ್ಚ ಕ್ಷೇತ್ರೇ ತಸ್ಮಿನ್ ಪುರಾ ನೃಪ ॥ ೮ ॥

ಕ್ಷೇತ್ರಂ ತಲ್ಲೋಕವಿಖ್ಯಾತಂ ಸರ್ವಪಾಪಹರಂ ಶುಭಮ್ ।
ತತ್ತೀರ್ಥಮಬ್ಧೇರಪತದ್ಭಾಗೇ ದಕ್ಷಿಣಪಶ್ಚಿಮೇ ॥ ೯ ॥

---

೫. ಸಮುದ್ರವು ಅನೇಕ ತೀರ್ಥ ಕ್ಷೇತ್ರ-ಅರಣ್ಯಗಳಿಂದ ಕೂಡಿದ ಮಹಾ ಭೂಮಿಯನ್ನು ಬ್ರಹ್ಮಪಾದದವರೆಗೆ ತನ್ನ ಜಲರಾಶಿಯಿಂದ ಮುಳುಗಿಸಿ ಆಕ್ರಮಣ ವನ್ನು ಮಾಡಿತು.

೬. ಅನಂತರದಲ್ಲಿ ಅಲ್ಲಿ ವಾಸಮಾಡಿದ್ದ ಎಲ್ಲ ದೇವ-ಅಸುರ-ಮಾನವರು ಹೆಚ್ಚಾದ ದುಃಖದಿಂದ ಪೀಡಿತರಾಗಿ ಅಲ್ಲಲ್ಲಿ ಬೇರೆ ಭಾಗಗಳಲ್ಲಿ ಜನಿಸಿದರು.

೭. ಪಶ್ಚಿಮ ಸಮುದ್ರದ ತೀರದಲ್ಲಿ ಒಂದೂವರೆ ಯೋಜನ ವಿಸ್ತಾರ ಪರಿಮಾಣ ವುಳ್ಳ, ಸಮಸ್ತ ದೇವತೆಗಳಿಂದ ಪೂಜಿಸಲ್ಪಟ್ಟ ಗೋಕರ್ಣವೆಂಬ ಒಂದು ಪವಿತ್ರ ಕ್ಷೇತ್ರವು ವಿಖ್ಯಾತಿಯನ್ನು ಹೊಂದಿರುವುದು.

೮. ರಾಜನೆ! ಪೂರ್ವದಲ್ಲಿ ಆ ಗೋಕರ್ಣ ಕ್ಷೇತ್ರದಲ್ಲಿ ಸಂಖ್ಯಾತೀತವಾದ ಅನೇಕ ತೀರ್ಥಗಳೂ, ಮುನಿಗಳ ವಾಸ ಶಾಲೆಗಳೂ, ದೇವಾಲಯಗಳೂ ಮತ್ತು ಸಿದ್ಧರ ವೃಂದಗಳೂ ಇರುವುವು.

೯. ಸಮಸ್ತ ಪಾಪಗಳನ್ನು ನಿವಾರಣಮಾಡುವ ಮಂಗಳಕರವಾದ ಆ ಕ್ಷೇತ್ರವು ಲೋಕಗಳಲ್ಲಿ ಖ್ಯಾತಿಯನ್ನು ಹೊಂದಿರುವುದು, ಆ ತೀರ್ಥವು ಸಮುದ್ರದ ದಕ್ಷಿಣ ಪಶ್ಚಿಮ ದಿಗಂತರದಲ್ಲಿ ಸಂಭವಿಸಿದೆ.

ಯತ್ರ ಸರ್ವೇ ತಪಸ್ತಪ್ತ್ವಾ ಮುನಯಃ ಸಂಶಿತವ್ರತಾಃ ।
ನಿರ್ವಾಣಂ ಪರಮಂ ಪ್ರಾಪ್ತಾಃ ಪುನರಾವೃತ್ತಿವರ್ಜಿತಮ್ ॥ ೧೦ ॥

ತತ್ಕ್ಷೇತ್ರಸ್ಯ ಪ್ರಭಾವೇಣ ಪ್ರೀತ್ಯಾ ಭೂತಗಣೈಃ ಸಹ ।
ದೇವ್ಯಾ ಚ ಸಕಲೈರ್ದೇವೈರ್ನಿತ್ಯಂ ವಸತಿ ಶಂಕರಃ ॥ ೧೧ ॥

ಏನಾಂಸಿ ಯತ್ಸಮುದ್ದಿಶ್ಯ ತೀರ್ಥಯಾತ್ರಾಂ ಪ್ರಕುರ್ವತಾಮ್ ।
ನೃಣಾಮಾಶು ಪ್ರಣಶ್ಯಂತಿ ಪ್ರವಾತೇ ಶುಷ್ಕಪರ್ಣವತ್ ॥ ೧೨ ॥

ತತ್ಕ್ಷೇತ್ರಸೇವನರತಿರ್ನೈವ ಜಾತ್ವಭಿಜಾಯತೇ ।
ಸಮೀಪೇ ವಸಮಾನಾನಾಮಪಿ ಪುಂಸಾಂ ದುರಾತ್ಮನಾಮ್ ॥ ೧೩ ॥

ಮಹತಾ ಸುಕೃತೇನೈವ ತತ್ಕ್ಷೇತ್ರಗಮನೇ ರತಿಃ ।
ನೃಣಾಂ ಸಂಜಾಯತೇ ರಾಜನ್ನಾನ್ಯಥಾ ತು ಕಥಂಚನ ॥ ೧೪ ॥

---

೧೦. ಆ ಪವಿತ್ರ ಕ್ಷೇತ್ರದಲ್ಲಿ ಕಠಿನ ತಪೋನಿಯಮಾಸಕ್ತರಾದ ಸಕಲ ಮುನಿಗಳು ತಪಸ್ಸನ್ನು ಆಚರಿಸಿ ಪುನರಾವೃತ್ತಿಯಿಲ್ಲದ ಪರಮ ಮುಕ್ತಿ ರೂಪವಾದ ಸೌಖ್ಯವನ್ನು ಹೊಂದುವರು.

೧೧. ಆ ಕ್ಷೇತ್ರದ ಮಹಿಮೆಯು ಆನಂದದಿಂದ ಶಂಕರನು ತನ್ನ ಅನೇಕ ಭೂತಗಣದ ಪರಿವಾರದಿಂದಲೂ ಸಕಲ ದೇವತೆಗಳಿಂದಲೂ ಮತ್ತು ಪಾರ್ವತೀ ದೇವಿಯಿಂದಲೂ ಸಹಿತನಾಗಿ ಯಾವಾಗಲೂ ಅಲ್ಲಿ ವಾಸಮಾಡುತ್ತಾನೆ.

೧೨. ಮಾನವರು ಯಾವ ಆ ಕ್ಷೇತ್ರವನ್ನು ಉದ್ದೇಶಿಸಿ ತೀರ್ಥಯಾತ್ರೆಯನ್ನು ಮಾಡುವರೋ ಅದರ ಪ್ರಭಾವದಿಂದ ಬಿರುಗಾಳಿಯಿಂದ ಒಣಗಿದ ಎಲೆಯು ಹಾರಿ ಹೋದಂತೆ ಅವರ ಸಕಲ ಪಾಪಗಳು ಬೇಗ ಲಯಹೊಂದುವುವು.

೧೩. ಅದರ ಸಮೀಪದಲ್ಲಿ ವಾಸಮಾಡಿದ್ದರೂ ದುಷ್ಟಾಂತಃಕರಣವುಳ್ಳ ಜನರಿಗೆ ಆ ಪವಿತ್ರ ಕ್ಷೇತ್ರವನ್ನು ಸೇವಿಸಬೇಕೆಂಬ ಅಭಿರುಚಿಯು ಹುಟ್ಟುವುದಿಲ್ಲ.

೧೪. ರಾಜನೆ ! ಮಾನವರಿಗೆ ಆ ಕ್ಷೇತ್ರವನ್ನು ಸೇವಿಸಬೇಕೆಂಬ ಅಭಿರುಚಿಯು ಮಹಾ ಸುಕೃತರಾಶಿಯಿಂದ ಸಂಭವಿಸುವುದು. ಅದಿಲ್ಲದಿದ್ದರೆ ಆ ಶ್ರೇಯೋ ಮಾರ್ಗದ ಅಭಿರುಚಿಯು ಹುಟ್ಟಲಾರದು.

ನಿರ್ಬಂಧೇನ ತು ಯೇ ತಸ್ಮಿನ್ ಪ್ರಾಣಿನಃ ಸ್ಥಿರಜಂಗಮಾಃ ।
ಮ್ರಿಯಂತೇ ನೃಪ ಸದ್ಯಸ್ತೇ ಸ್ವರ್ಗಂ ಪ್ರಾಪ್ಸ್ಯಂತಿ ಶಾಶ್ವತಮ್ ॥ ೧೫ ॥

ಸ್ಮೃತ್ವಾಪಿ ಸಕಲೈಃ ಪಾಪೈರ್ಯಸ್ಯ ಮುಚ್ಯೇತ ಮಾನವಃ ।
ಕ್ಷೇತ್ರಾಣಾಮುತ್ತಮಂ ಕ್ಷೇತ್ರಂ ಸರ್ವತೀರ್ಥನಿಕೇತನಮ್ ॥ ೧೬ ॥

ಸ್ನಾತ್ವಾ ಚೈತೇಷು ತೀರ್ಥೇಷು ಯಜಂತಶ್ಚ ಸದಾಶಿವಮ್ ।
ಸಿದ್ಧಿಕಾಮಾ ವಸಂತಿ ಸ್ಮ ಮುನಯಸ್ತತ್ರ ಕೇಚನ ॥ ೧೭ ॥

ಕಾಮಕ್ರೋಧವಿನಿರ್ಮುಕ್ತಾ ಯೇ ತಸ್ಮಿನ್ ವೀತಮತ್ಸರಾಃ ।
ನಿವಸಂತ್ಯಚಿರೇಣೈವ ತತ್ಸಿದ್ಧಿಂ ಪ್ರಾಪ್ನುವಂತಿ ಹಿ ॥ ೧೮ ॥

ಜಪಹೋಮರತಾಃ ಶಾಂತಾ ನಿಯತಾ ಬ್ರಹ್ಮಚಾರಿಣಃ ।
ವಸಂತಿ ತಸ್ಮಿನ್ ಯೇ ತೇ ಹಿ ಸಿದ್ಧಿಂ ಪ್ರಾಪ್ಸ್ಯಂತ್ಯಭೀಪ್ಸಿತಾಮ್ ॥ ೧೯ ॥

---

೧೫. ರಾಜನೆ! ಸ್ಥಾವರ-ಜಂಗಮಗಳ ಪೈಕಿ ಯಾವ ಪ್ರಾಣಿಗಳು ಆ ಕ್ಷೇತ್ರದಲ್ಲಿ ಮರಣಹೊಂದುತ್ತವೆಯೋ ಅವು ಕೂಡಲೆ ಶಾಶ್ವತವಾದ ಸ್ವರ್ಗ ಸುಖವನ್ನು ಹೊಂದುವುವು.

೧೬. ಯಾವ ಕ್ಷೇತ್ರದ ಮಹಿಮಾಸ್ಮರಣ ಮಾತ್ರದಿಂದಲೂ ಮಾನವನು ಸಕಲ ಪಾಪಗಳಿಂದ ವಿಮುಕ್ತನಾಗುವನೊ, ಅಂತಹ ಸಮಸ್ತ ತೀರ್ಥಗಳಿಗೆ ಆಸ್ಪದವಾದ ಆ ಕ್ಷೇತ್ರವು ಸರ್ವ ಕ್ಷೇತ್ರಗಳಲ್ಲಿ ಉತ್ತಮವಾದುದು.

೧೭. ಈ ಕ್ಷೇತ್ರ ತೀರ್ಥಗಳಲ್ಲಿ ಸ್ನಾನಮಾಡಿ ಮಹಾದೇವನನ್ನು ಪೂಜಿಸುತ್ತ ಕೆಲವರು ಮುನಿಗಳು ಸಿದ್ಧಿಯನ್ನು ಹೊಂದುವ ಇಷ್ಟವುಳ್ಳವರಾಗಿ ಆ ಕ್ಷೇತ್ರದಲ್ಲಿ ವಾಸಮಾಡುತ್ತಲಿರುವರು.

೧೮. ಆ ದಿವ್ಯಕ್ಷೇತ್ರದಲ್ಲಿ ಯಾವ ಪುಣ್ಯಾತ್ಮರು ಕಾಮ-ಕ್ರೋಧಗಳೆಂಬ ಅಂತಃಶತ್ರುಗಳಿಂದ ಮುಕ್ತರಾಗಿ, ತ್ಯಜಿಸಿದ ಮತ್ಸರ ದೋಷವುಳ್ಳವರಾಗಿ ವಾಸಮಾಡುವರೋ ಅವರು ಬಲು ಬೇಗ ಸಿದ್ಧಿಯನ್ನು ಹೊಂದುವರು.

೧೯. ಆ ಉತ್ತಮ ಕ್ಷೇತ್ರದಲ್ಲಿ ಜಪ-ಹೋಮ ಕರ್ಮಗಳಲ್ಲಿ ಆಸಕ್ತರೂ, ಶಾಂತರೂ, ಜಿತೇಂದ್ರಿಯರೂ ಮತ್ತು ಬ್ರಹ್ಮಚಾರಿಗಳೂ ಆಗಿ ವಾಸಿಸುವ ಮಾನವರು ಇಷ್ಟವಾದ ಸಿದ್ಧಿಯನ್ನು ಹೊಂದುವರು.

ದಾನಹೋಮಜಪಾದ್ಯಂ ವೈ ಪಿತೃದೇವದ್ವಿಜಾರ್ಚನಮ್ ।
ಅನ್ಯಸ್ಮಾತ್ ಕೋಟಿಗುಣಿತಂ ಭವೇತ್ತಸ್ಮಿನ್ ಫಲಂ ನೃಪ ॥ ೨೦ ॥

ಅಂಭೋಧಿಸಲಿಲೇ ಮಗ್ನೇ ತಸ್ಮಿನ್ ಕ್ಷೇತ್ರೇಽತಿಪಾವನೇ ।
ಮಹತಾ ತಪಸಾ ಯುಕ್ತಾ ಮುನಯಸ್ತನ್ನಿವಾಸಿನಃ ॥ ೨೧ ॥

ಸಹ್ಯಂ ಶಿಖರಿಣಂ ಶ್ರೇಷ್ಠಂ ನಿಲಯಾರ್ಥಂ ಸಮಾರುಹನ್ ।
ವಸಂತಸ್ತತ್ರ ತೇ ಸರ್ವೇ ಸಂಪ್ರಧಾರ್ಯ ಪರಸ್ಪರಮ್ ॥ ೨೨ ॥

ಮಹೇಂದ್ರಾದ್ರೌ ತಪಸ್ಯಂತಂ ರಾಮಂ ಗಂತುಂ ಪ್ರಚಕ್ರಮುಃ ।
ರಾಜೋವಾಚ :—
ಅಗಸ್ತ್ಯಪೀತತೋಯೇಽಬ್ಧೌ ಪರಿತೋ ರಾಜನಂದನೈಃ ॥ ೨೩ ॥

ಖಾತ್ವಾಧಃಪಾತಿತೇ ಕ್ಷೇತ್ರೇ ಸತೀರ್ಥಾಶ್ರಮಕಾನನೇ ।
ಭೂಭಾಗೇಷು ತಥಾನ್ಯೇಷು ಪುರಗ್ರಾಮಾಕರಾದಿಷು ॥ ೨೪ ॥

---

೨೦. ರಾಜನೆ ! ಆ ಕ್ಷೇತ್ರದಲ್ಲಿ ಆಚರಿಸಿದ ದಾನ, ಹೋಮ, ಜಪ, ಮುಂತಾದ ಸತ್ಕರ್ಮವೂ ಪಿತೃ, ದೇವ, ದ್ವಿಜರ ಅರ್ಚನೆಯೂ ಮತ್ತೊಂದು ಕ್ಷೇತ್ರದಲ್ಲಿ ಆಚರಿಸಿದುದಕ್ಕಿಂತಲೂ ಕೋಟಿ ಗುಣ ಅತಿಶಯ ಫಲವನ್ನು ಕೊಡುವುದು.

೨೧. ಅತ್ಯಂತ ಪವಿತ್ರವಾದ ಆ ದಿವ್ಯ ಕ್ಷೇತ್ರವು ಸಮುದ್ರದ ಜಲದಲ್ಲಿ ಮುಳುಗಿ ಹೋಗಲು ಮಹತ್ತರವಾದ ತಪಸ್ಸಿನಿಂದ ಕೂಡಿದ ಅಲ್ಲಿ ವಾಸಮಾಡುತ್ತಲಿದ್ದ ಮುನಿಗಳು ಅಲ್ಲಿಂದ ಚಲಿಸಿದರು.

೨೨. ಮತ್ತು ತಾವು ವಾಸಮಾಡಲು ಉತ್ತಮವಾದ ಸಹ್ಯಪರ್ವತವನ್ನು ಆಶ್ರಯಿಸಿದರು. ಆ ಸಹ್ಯಪರ್ವತದಲ್ಲಿ ಅವರೆಲ್ಲರೂ ವಾಸಮಾಡುತ್ತ ಇದ್ದು ಕ್ರಮವಾಗಿ ಒಂದು ಕರ್ತವ್ಯವನ್ನು ಚಿಂತಿಸಿ ನಿಶ್ಚಯಿಸಿದರು.

೨೩. ತರುವಾಯ ಮಹೇಂದ್ರ ಪರ್ವತದಲ್ಲಿ ತಪಸ್ಸನ್ನು ಮಾಡುತ್ತಲಿದ್ದ ಭಾರ್ಗವರಾಮನ ಸನ್ನಿಧಿಗೆ ಹೋಗಲು ಉಪಕ್ರಮಿಸಿದರು. ರಾಜನು ಇಂತೆಂದನು:- ಮುನಿಯೆ ! ಅಗಸ್ತ್ಯ ಮುನಿಯು ಜಲವನ್ನು ಪಾನಮಾಡಿರುವ ಸಮುದ್ರದಲ್ಲಿ ಸಗರ ರಾಜ ನಂದನರು ಕ್ಷೇತ್ರವನ್ನು ಕೆಡವಿದರು.

೨೪. ತೀರ್ಥ, ಪುಣ್ಯಾಶ್ರಮ, ಮತ್ತು ಅರಣ್ಯಗಳಿಂದ ಕೂಡಿದ ಆ ಕ್ಷೇತ್ರವನ್ನು ಅಗೆದು ಸಮುದ್ರಕ್ಕೆಹಾಕಿ ಪುರ-ಗ್ರಾಮಗಳ ಸಮೂಹವುಳ್ಳ ಅನೇಕ ಭೂಭಾಗಗಳನ್ನು ನಾಶಮಾಡಿದರು.

ವಿನಾಶಿತೇಷು ದೇಶೇಷು ಸಮುದ್ರೋಪಾಂತವರ್ತಿಷು ।
ಕಿಮಕಾರ್ಷುರ್ಮುನಿಶ್ರೇಷ್ಠ ಜನಾಸ್ತನ್ನಿಲಯಾಸ್ತತಃ ॥ ೨೫ ॥

ತತ್ರೈವ ಚಾವಸನ್ ಕೃಚ್ಛ್ರಾತ್ ಪ್ರಸ್ಥಿತಾನ್ಯತ್ರವಾ ತತಃ ।
ಕಿಯತಾ ಚೈವ ಕಾಲೇನ ಸಂಪೂರ್ಣೋಽಭೂದಪಾಂ ನಿಧಿಃ
ಕೇನ ವಾಪಿ ಪ್ರಕಾರೇಣ ಬ್ರಹ್ಮನ್ನೇತದ್ವದಸ್ವ ಮೇ ॥ ೨೬ ॥

ಜೈಮಿನಿರುವಾಚ :—
ಅನೂಪೇಷು ಪ್ರದೇಶೇಷು।ನಾಶಿತೇಷು ದುರಾತ್ಮಭಿಃ ॥ ೨೭ ॥

ಜನಾಸ್ತನ್ನಿಲಯಾಃ ಸರ್ವೇ ಸಂಪ್ರಯಾತಾ ಇತಸ್ತತಃ ।
ತತ್ರೈವ ಚಾವಸನ್ ಕೃಚ್ಛ್ರಾತ್ ಕೇಚಿತ್ ಕ್ಷೇತ್ರನಿವಾಸಿನಃ ॥ ೨೮ ॥

ಏತಸ್ಮಿನ್ನೇವ ಕಾಲೇ ತು ರಾಜನ್ನಂಶುಮತಃ ಸುತಃ ।
ಬಭೂವ ಭುವಿ ಧರ್ಮಾತ್ಮಾ ದಿಲೀಪ ಇತಿ ವಿಶ್ರುತಃ ॥ ೨೯ ॥

---

೨೫. ಹಾಗು ಸಮುದ್ರದ ಸಮೀಪದಲ್ಲಿದ್ದ ಅನೇಕ ಪ್ರದೇಶಗಳನ್ನು ಭಂಗಪಡಿಸಿದರು. ಮುನಿಶ್ರೇಷ್ಠನೆ! ಅಲ್ಲಿ ವಾಸವಾಗಿದ್ದ ಜನರು ತರುವಾಯ ಏನು ಮಾಡಿದರು?

೨೬. ಬಹಳ ಕಷ್ಟವನ್ನು ಸಹಿಸಿ ಅಲ್ಲಿಯೆ ಇದ್ದರೆ? ಅಥವಾ ಬೇರೊಂದು ಕಡೆಗೆ ಹೊರಟು ಹೋದರೆ? ಸಮುದ್ರವು ಮತ್ತೆಷ್ಟು ಕಾಲದಿಂದ ಪರಿಪೂರ್ಣವಾಯಿತು? ಮತ್ತು ಯಾವ ರೀತಿಯಲ್ಲಿ ಪರಿಪೂರ್ಣವಾಯಿತು? ಬ್ರಹ್ಮರ್ಷಿಯೆ! ಇದನ್ನು ನನಗೆ ಹೇಳಬೇಕು.

೨೭. ಜೈಮಿನಿ ಮುನಿಯು ಇಂತೆಂದನು :—ದುರಾತ್ಮರಾದ ಸಗರ ರಾಜಪುತ್ರರು ಜಲರಾಶಿಯ ಅನೇಕ ಪ್ರದೇಶಗಳನ್ನು ನಾಶಮಾಡಿದರಲ್ಲವೆ.

೨೮. ಅಲ್ಲಿ ವಾಸಮಾಡುತ್ತಲಿದ್ದ ಜನರು ಆಗ ಅಲ್ಲಲ್ಲಿ ಬೇರೊಂದು ಕಡೆಗೆ ಹೋದರು. ಮತ್ತೆ ಕೆಲವರು ಕಷ್ಟದಿಂದ ಆ ಕ್ಷೇತ್ರವಾಸಾಭಿರುಚಿಯುಳ್ಳವರಾಗಿ ಅಲ್ಲಿಯೆ ವಾಸಮಾಡಿದರು.

೨೯. ರಾಜನೆ! ಇದೇ ಸಮಯದಲ್ಲಿ ಧರ್ಮಾತ್ಮನೂ ಭೂಲೋಕದಲ್ಲಿ ದಿಲೀಪನೆಂಬ ಪ್ರಖ್ಯಾತಿಯುಳ್ಳವನೂ ಆದ ಅಂಶುಮಂತನ ಪುತ್ರನು ಜನಿಸಿದನು.

ರಾಜ್ಯೇಽಭಿಷಿಚ್ಯ ತಂ ಸಮ್ಯಗ್ಭುಕ್ತ್ವಭೋಗೋಂಽಶುಮಾನ್ನೃಪಃ ।
ವನಂ ಜಗಾಮ ಮೇಧಾವೀ ತಪಸೇ ಧೃತಮಾನಸಃ ॥ ೩೦ ॥

ದಿಲೀಪಸ್ತು ತತಃ ಶ್ರೀಮಾನಶೇಷಾಂ ಪೃಥಿವೀಮಿಮಾಮ್ ।
ಪಾಲಯಾಮಾಸ ಧರ್ಮೇಣ ವಿಜಿತ್ಯ ಸಕಲಾನರೀನ್ ॥ ೩೧ ॥

ಭಗೀರಥೋ ನಾಮ ಸುತಸ್ತಸ್ಯಾಸೀಲ್ಲೋಕವಿಶ್ರುತಃ ।
ಸರ್ವಧರ್ಮಾರ್ಥಕುಶಲಃ ಶ್ರೀಮಾನಮಿತವಿಕ್ರಮಃ ॥ ೩೨ ॥

ರಾಜ್ಯೇಽಭಿಷಿಚ್ಯ ತಂ ರಾಜಾ ದಿಲೀಪೋಽಪಿ ವನಂ ಯಯೌ ।
ಸ ಚಾಪಿ ಪಾಲಯನ್ನುರ್ವೀಂ ಸಮ್ಯಙ್ನಿಹತಕಂಟಕಾಮ್ ॥ ೩೩ ॥

ಮುಮುದೇ ವಿವಿಧೈರ್ಭೋಗೈರ್ದಿವಿ ದೇವಪತಿರ್ಯಥಾ ।
ಸ ಶುಶ್ರಾವಾತ್ಮನಃ ಪೂರ್ವಂ ಪೂರ್ವಜಾನಾಂ ಮಹೀಪತಿಃ ॥ ೩೪ ॥

---

೩೦. ಆಗ ಮೇಧಾವಿಯಾದ ಅಂಶುಮಂತ ರಾಜನು ಚನ್ನಾಗಿ ಭೋಗಗಳನ್ನು ಅನುಭವಿಸಿ ದಿಲೀಪ ರಾಜನನ್ನು ರಾಜ್ಯದಲ್ಲಿ ಅಭಿಷೇಕಮಾಡಿ ತಪಸ್ಸನ್ನು ಮಾಡಬೇಕೆಂಬ ಸ್ಥಿರಸಂಕಲ್ಪವುಳ್ಳವನಾಗಿ ಅರಣ್ಯಕ್ಕೆ ಹೋದನು.

೩೧. ತರುವಾಯ ಸಂಪತ್ತಿಯಿಂದ ಶೋಭಿಸುವ ದಿಲೀಪ ರಾಜನು ಸಮಸ್ತ ಶತ್ರುಗಳನ್ನು ನಿಗ್ರಹಿಸಿ ಸಂಪೂರ್ಣವಾದ ಈ ಭೂಮಿಯನ್ನು ಧರ್ಮದಿಂದ ಪರಿಪಾಲಿಸಿದನು

೩೨. ಆ ದಿಲಿಪನಿಗೆ ಸರ್ವ ಧರ್ಮ-ಅರ್ಥಪರಿಪಾಟಿಗಳಲ್ಲಿ ಕುಶಲನಾಗಿಯೂ, ಸಂಪತ್ತಿಯಿಂದ ಕೂಡಿದವನಾಗಿಯೂ, ಅತಿಯಾದ ವಿಕ್ರಮದಿಂದ ಕೂಡಿದವನಾಗಿಯೂ ಮತ್ತು ಭಗೀರಥನೆಂದು ಲೋಕದಲ್ಲಿ ಪ್ರಸಿದ್ಧನಾಗಿಯೂ ಇರುವ ಪುತ್ರನಿದ್ದನು.

೩೩. ದಿಲೀಪ ರಾಜನು ಆ ಭಗೀರಥನನ್ನು ಪಟ್ಟಾಭಿಷೇಕಮಾಡಿ ರಾಜ್ಯದಲ್ಲಿ ಇರಿಸಿ ತಪಸ್ಸಿಗೆ ಅರಣ್ಯಕ್ಕೆ ಹೋದನು, ಭಗೀರಥ ರಾಜನು ನಿಷ್ಕಂಟಕವಾದ ಪೃಥಿವಿಯನ್ನು ಪಾಲಿಸಿದನು.

೩೪. ಆಗ ರಾಜನು ದೇವಲೋಕದಲ್ಲಿ ದೇವೇಂದ್ರನಂತೆ ಅನೇಕ ವಿಧವಾದ ಭೋಗಗಳಿಂದ ತೃಪ್ತಿಯನ್ನು ಹೊಂದಿದನು, ಮತ್ತು ಆ ರಾಜನು ತಾನು ಹುಟ್ಟಲು ಪೂರ್ವದಲ್ಲಿ ಆದ ತನ್ನ ಪೂರ್ವಜರ ಚರಿತ್ರವನ್ನು ಕೇಳಿದನು.

ನಿರಯೇ ಪತನಂ ಘೋರಂ ವಿಪ್ರಕೋಪಸಮುದ್ಭವಮ್ ।
ಬ್ರಹ್ಮದಂಡಹತಾನ್ ಸರ್ವಾನ್ ಪಿತೄನ್ ಶ್ರುತ್ವಾತಿದುಃಖಿತಃ ॥ ೩೫ ॥

ರಾಜ್ಯೇ ಬಂಧುಷು ಭೋಗೇ ವಾ ನಿರ್ವೇದಂ ಪರಮಂ ಯಯೌ ।
ಸ ಮಂತ್ರಿಪ್ರವರೇ ರಾಜ್ಯಂ ವಿನ್ಯಸ್ಯ ತಪಸೇ ಯಯೌ ॥ ೩೬ ॥

ಪ್ರಯಯೌ ಸ್ವಪಿತೄನ್ನಾಕಂ ನಿನೀಷುರ್ನೃಪಸತ್ತಮಃ ।
ತಪಸಾ ಮಹತಾ ಪೂರ್ವಮಾಯುಷೇ ಕಮಲೋದ್ಭವಮ್ ॥ ೩೭ ॥

ಆರಾಧ್ಯ ತಸ್ಮಾಲ್ಲೇಭೇ ಚ ಯಾವದಾಯುರ್ನಿಜೇಪ್ಸಿತಮ್ ।
ತತೋ ಗಂಗಾಂ ಮಹಾರಾಜ ಸಮಾರಾಧ್ಯ ಪ್ರಸಾದ್ಯ ಚ ॥ ೩೮ ॥

ವರಮಾಗಮನಂ ವವ್ರೇ ದಿವಸ್ತಸ್ಯಾ ಮಹೀಂ ಪ್ರತಿ ।
ತತಸ್ತಾಂ ಶಿರಸಾ ಧರ್ತುಂ ತಪಸಾರಾಧಯಚ್ಛಿವಮ್ ॥ ೩೯ ॥

---

೩೫. ತನ್ನ ಪೂರ್ವಜರಿಗೆ ಬ್ರಾಹ್ಮಣ ಕೋಪದಿಂದ ಉಂಟಾದ ಘೋರ ನರಕಪ್ರಾಪ್ತಿಯನ್ನು ಕೇಳಿದನು. ಮತ್ತು ಸಮಸ್ತ ಪಿತೃಗಳಿಗೆ ಬ್ರಹ್ಮದಂಡದಿಂದ ಉಂಟಾದ ಮರಣ ವೃತ್ತಾಂತವನ್ನು ಕೇಳಿ ಹೆಚ್ಚಾಗಿ ದುಃಖಿತನಾದನು.

೩೬. ಮತ್ತು ದುಃಖದಿಂದ ತಾನು ರಾಜ್ಯ, ಬಂಧುವರ್ಗ, ಮತ್ತು ಭೋಗ– ಇವುಗಳಲ್ಲಿ ಹೆಚ್ಚಾಗಿ ವೈರಾಗ್ಯವನ್ನು ಹೊಂದಿದನು, ಅವನು ಶ್ರೇಷ್ಠನಾದ ಮಂತ್ರಿಯಲ್ಲಿ ರಾಜ್ಯಭಾರವನ್ನು ಒಪ್ಪಿಸಿ ತಪಸ್ಸಿಗೆ ಅರಣ್ಯಕ್ಕೆ ಹೋದನು.

೩೭. ರಾಜಶ್ರೇಷ್ಠನಾದ ಭಗೀರಥನು ತನ್ನ ಸಮಸ್ತ ಪಿತೃಗಳಿಗೆ ಸ್ವರ್ಗ ಸುಖವನ್ನು ದೊರಕಿಸಲು ತಪಸ್ಸಿಗೆ ಅರಣ್ಯಕ್ಕೆ ಹೋಗಿ ಮೊದಲು ದೀರ್ಘವಾದ ಆಯುಷ್ಯದ ಪ್ರಾಪ್ತಿಗೆ ಬ್ರಹ್ಮದೇವನನ್ನು ತಪಸ್ಸಿನಿಂದ ಆರಾಧಿಸಿದನು.

೩೮. ಮಹಾರಾಜನೆ! ಅದರಿಂದ ತನಗೆ ಇಷ್ಟವಿದ್ದಷ್ಟು ದೀರ್ಘಾಯುಷ್ಯವನ್ನು ಬ್ರಹ್ಮದೇವನಿಂದ ಹೊಂದಿದನು, ಅನಂತರದಲ್ಲಿ ಗಂಗಾದೇವಿಯನ್ನು ಆರಾಧಿಸಿ ಪ್ರಸನ್ನಳನ್ನಾಗಿ ಮಾಡಿದನು.

೩೯. ಮತ್ತು ಗಂಗೆಯನ್ನು ಕುರಿತು ಸ್ವರ್ಗಲೋಕದಿಂದ ಭೂಮಂಡಲಕ್ಕೆ ಬರುವಂತೆ ವರವನ್ನು ಕೇಳಿದನು, ಹಾಗು ಗಂಗೆಯನ್ನು ಶಿರದಿಂದ ಧರಿಸಲು ಈಶ್ವರನನ್ನು ತಪಶ್ಚರ್ಯೆಯಿಂದ ಆರಾಧಿಸಿದನು.

ಸ ಚಾಪಿ ತದ್ವರಂ ತಸ್ಮೈ ಪ್ರದದೌ ಭಕ್ತವತ್ಸಲಃ ।
ಮೇರೋರ್ಮೂರ್ಧ್ನಸ್ತತೋ ಗಂಗಾಂ ಪತಂತೀಂ ಶಿರಸಾತ್ಮನಃ ॥ ೪೦ ॥

ಸಗ್ರಾಹನಕ್ರಮಕರಾಂ ಜಗ್ರಾಹ ಜಗತಾಂ ಪತಿಃ ।
ಸಾ ತಚ್ಛಿರಃ ಸಮಾಸಾದ್ಯ ಮಹಾವೇಗಪ್ರವಾಹಿನೀ ॥ ೪೧ ॥

ತಜ್ಜಟಾಮಂಡಲೇ ಶುಭ್ರೇ ವಿಲಿಲ್ಯೇ ಸಾತಿಗಹ್ವರೇ ।
ಚುಲಕೋದಕವಚ್ಛಂಭೋರ್ವಿಲೀನಾಂ ಶಿರಸಿ ಪ್ರಭೋಃ ॥ ೪೨ ॥

ವಿಲೋಕ್ಯ ತತ್ರ್ವಮೋಕ್ಷಾಯ ಪುನರಾರಾಧಯದ್ಧರಮ್ ।
ಸ ತಾಂ ಶರ್ವಪ್ರಸಾದೇನ ಲಬ್ಧ್ವಾ ತು ಭುವಮಾಗತಾಮ್ ॥ ೪೩ ॥

ಆನಿನ್ಯೇ ಸಾಗರಾ ದಗ್ಧಾ ಯತ್ರ ತಾಂ ವೈ ದಿಶಂ ಪ್ರತಿ ।
ಸಾನುವ್ರಜಂತೀ ರಾಜಾನಂ ರಾಜರ್ಷೇರ್ಯಜತಃ ಪಥಿ ॥ ೪೪ ॥

---

೪೦. ಭಕ್ತರಲ್ಲಿ ಪ್ರೇಮಿಯಾದ ಶಂಕರನು ಗಂಗೆಯನ್ನು ಶಿರದಲ್ಲಿ ಧರಿಸುವ ವರವನ್ನು ರಾಜನಿಗೆ ಕೊಟ್ಟನು, ಆಗ ಗಂಗೆಯು ಮೇರುಪರ್ವತದಿಂದ ಶಂಕರನ ಶಿರಸ್ಸಿನಲ್ಲಿ ಧುಮುಕಿದಳು.

೪೧. ಜಗತ್ತುಗಳಿಗೆ ಈಶ್ವರನಾದ ಶಂಕರನು ಮೊಸಳೆ-ಮೀನು ಮುಂತಾದ ಜಲಚರ ಪ್ರಾಣಿಗಳಿಂದ ಕೂಡಿದ ಗಂಗೆಯನ್ನು ತನ್ನ ಶಿರಸ್ಸಿನಲ್ಲಿ ಧರಿಸಿದನು. ಮಹಾವೇಗದಿಂದ ಹರಿಯುತ್ತಲಿದ್ದ ಆ ಗಂಗೆಯು ಶಿವನ ಶಿರವನ್ನು ಹೊಂದಿದಳು.

೪೨. ಆಗ ಆ ಗಂಗಾ ನದಿಯು ಶುಭ್ರವೂ ಅತ್ಯಂತ ನಿಬಿಡವೂ ಆದ ಮಂಡಲಾಕಾರವಾದ ಶಿವನ ಜಡೆಯಲ್ಲಿ ಅದೃಶ್ಯವಾಯಿತು. ಆಗ ಪ್ರಭುವಾದ ಶಿವನ ಶಿರದಲ್ಲಿ ಆಪೋಶನಾರ್ಥವಾಗಿ ಅಂಗೈಯ್ಯಲ್ಲಿ ಹಿಡಿದ ಜಲಬಿಂದುವಿನಂತೆ ಕಾಣದಿರುವುದಾಯಿತು.

೪೩. ರಾಜನು ಅದನ್ನು ನೋಡಿ ಅಲ್ಲಿಂದ ಗಂಗೆಯ ಬಿಡುಗಡೆಗೋಸ್ಕರ ಮತ್ತೆ ಶಂಕರನನ್ನು ಆರಾಧಿಸಿದನು. ಆಗ ಶಂಕರನ ಪ್ರಸಾದದಿಂದ ಭೂಮಿಗೆ ಬರುವಂತೆ ಗಂಗೆಯನ್ನು ಹೊಂದಿದನು.

೪೪. ಯಾವ ಸ್ಥಳದಲ್ಲಿ ಸಗರ ಪುತ್ರರು ದಗ್ಧರಾಗಿದ್ದರೋ ಆ ದಿಕ್ಕಿಗೆ ಗಂಗೆಯನ್ನು ತರುತ್ತಿದ್ದನು. ಆಗ ಜಹ್ನುವೆಂಬ ರಾಜಋಷಿಯು ಯಾಗಮಾಡುತ್ತಲಿರುವ ಯಾಗಶಾಲೆಯಿಂದ ಕೂಡಿದ ಮಾರ್ಗದಿಂದ ಗಂಗೆಯು ಭಗೀರಥ ರಾಜನನ್ನು ಹಿಂಬಾಲಿಸಿ ಬಂದಿತು.

ತದ್ಯಜ್ಞವಾಟಮಖಿಲಂ ಪ್ಲಾವಯಾಮಾಸ ಸರ್ವತಃ ।
ಸ ತು ರಾಜಋಷಿಃ ಕ್ರುದ್ಧೋ ಯಜ್ಞವಾಟೇಽಖಿಲೇ ತಯಾ ॥ ೪೫ ॥

ಮಗ್ನೇ ಗಂಡೂಷಜಲವತ್ ಸ ಪಪೌ ತಾಮಶೇಷತಃ ।
ಅತಂದ್ರಿತೋ ವರ್ಷಶತಂ ಶುಶ್ರೂಷಿತ್ವಾ ಸ ತಂ ಪುನಃ ॥ ೪೬ ॥

ತಸ್ಮಾತ್ ಪ್ರಸನ್ನಾನ್ನೃಪತಿರ್ಲೇಭೇ ಗಂಗಾಂ ಮಹಾತ್ಮನಃ ।
ಉಷಿತ್ವಾ ಸುಚಿರಂ ತಸ್ಯ ನಿಃಸೃತಾ ಜಠರಾದ್ಯತಃ ॥ ೪೭ ॥

ಪ್ರಥಿತಂ ಜಾಹ್ನವೀತ್ಯಸ್ಯಾಸ್ತತೋ ನಾಮಾಭವದ್ಭುವಿ ।
ಭಗೀರಥಾನುಗಾ ಭೂತ್ವಾ ತತ್ಪಿತೄಣಾಮಶೇಷತಃ ॥ ೪೮ ॥

ನಿಜಾಂಭಸಾಸ್ಥಿಭಸ್ಮಾನಿ ಸಿಷೇಚ ಸುರನಿಮ್ನಗಾ ।
ತತಸ್ತದಂಭಸಾ ಸಿಕ್ತೇಷ್ವಸ್ಥಿಭಸ್ಮಸು ತತ್ಕ್ಷಣಾತ್ ॥ ೪೯ ॥

---

೪೫. ಆಗ ಗಂಗೆಯು ಆ ಯಜ್ಞಶಾಲೆಯನ್ನು ಎಲ್ಲ ಭಾಗದಲ್ಲಿಯೂ ಸಂಪೂರ್ಣವಾಗಿ ತೇಲಿಸಿದಳು, ಹೀಗೆ ಗಂಗಾನದಿಯಿಂದ ಸಂಪೂರ್ಣ ಯಜ್ಞಶಾಲೆಯು ಮುಳುಗಿ ಹೋಗಲು ಆ ರಾಜಋಷಿಯು ಕುಪಿತನಾದನು.

೪೬. ಕೋಪದಿಂದ ಒಂದು ಗುಟುಕು ನೀರನ್ನು ಕುಡಿಯುವಂತೆ ಆ ನದಿಯನ್ನು ನಿಶ್ಶೇಷವಾಗಿ ಪಾನಮಾಡಿದನು. ಆಗ ಭಗೀರಥ ರಾಜನು ಆಲಸ್ಯವಿಲ್ಲದೆ ನೂರಾರು ವರ್ಷಗಳವರೆಗೆ ಆ ರಾಜರ್ಷಿಯನ್ನು ಸೇವಿಸಿದನು.

೪೭. ಸೇವನೆಯಿಂದ ಪ್ರಸನ್ನನಾದ ಆ ಮಹಾತ್ಮ ರಾಜರ್ಷಿಯಿಂದ ಮತ್ತೆ ಆ ಗಂಗೆಯನ್ನು ಹೊಂದಿದನು. ಹೀಗೆ ಗಂಗೆಯು ಜಹ್ನುರಾಜರ್ಷಿಯ ಉದರದಲ್ಲಿ ಬಹು ಕಾಲ ಇದ್ದು ಅಲ್ಲಿಂದ ಹೊರಟು ಬಂದಿರುವುದು.

೪೮. ಆದ್ದರಿಂದ ಭೂಮಂಡಲದಲ್ಲಿ ಗಂಗಾ ನದಿಗೆ ಜಾಹ್ನವೀ ಎಂದು ಅನ್ವರ್ಥ ನಾಮವು ಪ್ರಸಿದ್ಧಿ ಹೊಂದಿತು. ಮುಂದೆ ಗಂಗಾ ನದಿಯು ಭಗೀರಥರಾಜನನ್ನು ಹಿಂಬಾಲಿಸಿ ಅವನ ಪಿತೃಗಣ ಸನ್ನಿಧಿಗೆ ಹೋಯಿತು.

೪೯. ಆ ಪಿತೃಗಣದ ಅಸ್ಥಿ, ದೇಹ ಭಸ್ಮಗಳನ್ನು ಆ ದೇವನದಿಯು ತನ್ನ ತೀರ್ಥದಿಂದ ನೆನೆಸಿದಳು, ಹೀಗೆ ಆ ಪಿತೃಗಳ ಅಸ್ಥಿ ಭಸ್ಮಗಳು ದೇವನದಿಯ ತೀರ್ಥೋದಕದಿಂದ ನೆನೆದು ಪವಿತ್ರವಾದುವು.

ನಿರಯಾತ್ ಸಾಗರಾಃ ಸರ್ವೇ ನಷ್ಟಪಾಪಾ ದಿವಂ ಯಯುಃ ।
ಏವಂ ಸಾ ಸಾಗರಾನ್ ಸರ್ವಾನ್ ದಿವಂ ನೀತ್ವಾ ಮಹಾನದೀ ॥ ೫೦ ॥

ತೇನೈವ ಮಾರ್ಗೇಣ ಜವಾತ್ ಪ್ರಯಾತಾ ಪೂರ್ವಸಾಗರಮ್ ।
ಮೇರೋರ್ಮೂರ್ಧ್ನಶ್ಚತುರ್ಭೇದಾ ಭೂತ್ವಾ ಯಾತಾ ಚತುರ್ದಿಶಮ್ ॥ ೫೧ ॥

ಚತುರ್ಭೇದತಯಾ ಚಾಭೂತ್ತಸ್ಯಾ ನಾಮ್ನಾಂ ಚತುಷ್ಟಯಮ್ ।
ಸೀತಾ ಚಾಲಕನಂದಾ ಚ ಸುಚಕ್ಷುರ್ಭದ್ರವತ್ಯಪಿ ॥ ೫೨ ॥

ಅಗಸ್ತ್ಯಪೀತಸಲಿಲಾಶ್ಚಿರಂ ಶುಷ್ಕೋದಕಾ ಅಪಿ ।
ಗಂಗಾಂಭಸಾ ಪುನಃ ಪೂರ್ಣಾಶ್ಚತ್ವಾರೋಽಂಬುಧಯೋಽಭವನ್ ॥ ೫೩ ॥

ಪೂರ್ಯಮಾಣೇ ಸಮುದ್ರೇ ತು ಸಾಗರೈಃ ಪರಿವರ್ಧಿತೇ ।
ಅಂತರ್ಹಿತಾಭವನ್ ದೇಶಾ ಬಹವಸ್ತತ್ಸಮೀಪಗಾಃ ॥ ೫೪ ॥

---

೫೦. ಅದರಿಂದ ಎಲ್ಲ ಸಗರ ಪುತ್ರರು ಪಾಪನಿರ್ಮುಕ್ತರಾಗಿ ನರಕದಿಂದ ಸ್ವರ್ಗ ಲೋಕಕ್ಕೆ ಹೋದರು. ಈ ರೀತಿಯಾಗಿ ಮಹಾ ನದಿಯು ಸಮಸ್ತ ಸಗರ ರಾಜ ನಂದನರನ್ನು ಸ್ವರ್ಗಕ್ಕೆ ಕಳುಹಿಸಿತು.

೫೧. ಮತ್ತು ಅದೇ ಮಾರ್ಗದಿಂದ ವೇಗವಾಗಿ ಹರಿದು ಹೋಗಿ ಪೂರ್ವ ಸಾಗರವನ್ನು ಸೇರಿತು, ಮೇರುಪರ್ವತದ ಶಿಖರದಿಂದ ನಾಲ್ಕು ಭಾಗಗಳಾಗಿ ನಾಲ್ಕು ದಿಕ್ಕುಗಳಲ್ಲಿ ಹರಿದು ಹೋಯಿತು.

೫೨. ನಾಲ್ಕು ಭೇದಗಳಿಂದ ನಾಲ್ಕು ದಿಕ್ಕುಗಳಲ್ಲಿ ಹರಿದುದರಿಂದ ನದಿಗೆ ಸೀತಾ, ಅಲಕನಂದಾ, ಸುಚಕ್ಷು ಮತ್ತು ಭದ್ರವತೀ ಎಂದು ನಾಲ್ಕು ಪವಿತ್ರ ನಾಮಗಳು ಉಂಟಾದುವು.

೫೩. ಹಿಂದೆ ಅಗಸ್ತ್ಯ ಮುನಿಯು ಜಲಪಾನವನ್ನು ಮಾಡಿ ಬಹುಕಾಲದಿಂದ ಒಣಗಿ ಹೋದ ಜಲವುಳ್ಳ ನಾಲ್ಕು ಸಮುದ್ರಗಳು ಮತ್ತೆ ಗಂಗಾನದಿಯ ಜಲದಿಂದ ಪೂರ್ಣವಾದುವು.

೫೪. ಸಗರ ಪುತ್ರರಿಂದ ವೃದ್ಧಿ ಹೊಂದಿಸಲ್ಪಟ್ಟ ಸಮುದ್ರವು ಪೂರ್ಣವಾಗುತ್ತಿರಲು ಅದರ ಸಮೀಪ ಪ್ರದೇಶದಲ್ಲಿ ಇದ್ದ ಅನೇಕ ದೇಶಗಳು ಜಲದಿಂದ ಮುಚ್ಚಿ ಹೋದುವು.

ಸಮುದ್ರೋಪಾಂತವರ್ತೀನಿ ಕ್ಷೇತ್ರಾಣಿ ಚ ಸಮಂತತಃ ।
ಇತಸ್ತತಃ ಪ್ರಯಾತಾಶ್ಚ ಜನಾಸ್ತನ್ನಿಲಯಾ ನೃಪ ॥ ೫೫ ॥

ಗೋಕರ್ಣಮಿತಿ ಚ ಕ್ಷೇತ್ರಂ ಪೂರ್ವಂ ಪ್ರೋಕ್ತಂ ತು ಯತ್ತವ ।
ಅರ್ಣವೋಪಾಂತಪರ್ತಿತ್ವಾತ್ ಸಮುದ್ರೇಽಂತರ್ಧಿಮಾಗಮತ್ ॥ ೫೬ ॥

ತತಸ್ತನ್ನಿಲಯಾಃ ಸರ್ವೇ ತದುದ್ಧಾರಾಭಿಕಾಂಕ್ಷಿಣಃ ।
ಸಹ್ಯಾದ್ರೇರ್ಭೃಗುಶಾರ್ದೂಲಂ ದ್ರಷ್ಟುಕಾಮಾ ಯಯುರ್ನೃಪಮ್ ॥ ೫೭ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ಷಟ್ಪಂಚಾಶತ್ತಮೋಽಧ್ಯಾಯಃ.

---

೫೫. ರಾಜನೆ! ಮತ್ತು ಅಲ್ಲಿ ಸುತ್ತುಮುತ್ತಲೂ ಇದ್ದ ಸಮುದ್ರ ಪ್ರಾಂತ ಪ್ರದೇಶದ ಅನೇಕ ಕ್ಷೇತ್ರಗಳು ಮುಳುಗಿದುವು, ಆಗ ಅಲ್ಲಿ ವಾಸಮಾಡಿದ್ದ ಜನಗಳು ಅಲ್ಲಿಂದ ಅಲ್ಲಲ್ಲಿ ಬೇರೆ ಸ್ಥಳಕ್ಕೆ ಹೋದರು.

೫೬. ಹಿಂದೆ ಹೇಳಲ್ಪಟ್ಟ ಗೋಕರ್ಣವೆಂಬ ಮಹಾ ಕ್ಷೇತ್ರವೂ ಸಮುದ್ರದ ಸಮೀಪದಲ್ಲಿದ್ದಿದ್ದರಿಂದ ಅದು ಸಮುದ್ರದಲ್ಲಿ ಮುಳುಗಿ ಅದೃಶ್ಯವಾಯಿತು.

೫೭. ರಾಜನೆ! ತರುವಾಯ ಅಲ್ಲಿ ವಾಸಮಾಡಿದ ಸಮಸ್ತ ಜನರು ಗೋಕರ್ಣ ಕ್ಷೇತ್ರವನ್ನು ಸಮುದ್ರದಿಂದ ಉದ್ಧಾರಮಾಡಬೇಕೆಂಬ ಆಕಾಂಕ್ಷೆಯುಳ್ಳವರಾಗಿ ಸಹ್ಯಾದ್ರಿಯಿಂದ ಭೃಗುವಂಶತಿಲಕನಾದ ಪರಶುರಾಮನನ್ನು ನೋಡಲು ಇಷ್ಟವುಳ್ಳವರಾಗಿ ಪ್ರಯಾಣ ಮಾಡಿದರು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಐವತ್ತಾರನೆಯ ಅಧ್ಯಾಯವು ಮುಗಿದುದು.

---

## ಸಪ್ತಪಂಚಾಶತ್ತಮೋಽಧ್ಯಾಯಃ

ಜೈಮಿನಿರುವಾಚ :—

ತತಃ ಶುಕ್ರಸುಮಿತ್ರಾದ್ಯಾ ಮುನಯಃ ಶಂಸಿತವ್ರತಾಃ ।
ಯಯುರ್ದಿದೃಕ್ಷವೋ ರಾಮಂ ಮಹೇಂದ್ರಮಚಲಂ ಪ್ರತಿ ॥ ೧ ॥

ಅತೀತ್ಯ ಸುಬಹೂನ್ ದೇಶಾನ್ ವನಾನಿ ಸರಿತಸ್ತಥಾ ।
ಆಸೇದುರಚಲಶ್ರೇಷ್ಠಂ ಕ್ರಮೇಣ ಮುನಿಪುಂಗವಾಃ ॥ ೨ ॥

ತಮಾರುಹ್ಯ ಶನೈಸ್ತಸ್ಯ ಖ್ಯಾತಮಾಶ್ರಮಮಂಡಲಮ್ ।
ಪ್ರಶಾಂತಕ್ರೂರಸತ್ತ್ವಾಢ್ಯಂ ಶುಭಂ ಮಧ್ಯೇತಪೋವನಮ್ ॥ ೩ ॥

ಸರ್ವರ್ತುಫಲಪುಷ್ಪಾಢ್ಯತರುಷಂಡಮನೋಹರಮ್ ।
ಸ್ನಿಗ್ಧಚ್ಛಾಯಮನೌಪಮ್ಯಂ ಸ್ವಾಮೋದಿಸುಖಮಾರುತಮ್ ॥ ೪ ॥

---

೧. ಜೈಮಿನಿಮುನಿಯು ಇಂತೆಂದನು :—ತರುವಾಯ ಶುಕ್ರ, ಸುಮಿತ್ರ ಮುಂತಾದ ಶ್ಲಾಘ್ಯವಾದ ತಪೋನಿಯಮಾಸಕ್ತರಾದ ಮುನಿ ಜನರು ಭಾರ್ಗವ ರಾಮನನ್ನು ನೋಡಲು ಮಹೇಂದ್ರ ಪರ್ವತವನ್ನು ಕುರಿತು ಪ್ರಯಾಣ ಬೆಳೆಸಿದರು.

೨. ಆ ಮುನಿಶ್ರೇಷ್ಠರು ಮಾರ್ಗದಲ್ಲಿ ಅನೇಕ ದೇಶಗಳನ್ನೂ ವನಗಳನ್ನೂ ಮತ್ತು ನದಿಗಳನ್ನೂ ದಾಟಿ ಪರ್ವತೋತ್ತಮವಾದ ಮಹೇಂದ್ರಗಿರಿಯನ್ನು ಹೊಂದಿದರು.

೩. ಮೆಲ್ಲಗೆ ಆ ಗಿರಿಯನ್ನು ಹತ್ತಿ ಶಾಂತಿಸ್ವಭಾವವನ್ನು ಹೊಂದಿದ ಕ್ರೂರ ಜಾತಿಯ ಪ್ರಾಣಿಗಳಿಂದ ಕೂಡಿದ, ತಪೋವನದ ಮಧ್ಯದಲ್ಲಿದ್ದ ಆ ಪರಶುರಾಮನ ಪ್ರಸಿದ್ಧವಾದ ಆಶ್ರಮಶ್ರೇಣಿಯನ್ನು ಹೊಂದಿದರು.

೪. ಆ ತಪೋವನವು ಸಮಸ್ತ ಋತುಗಳಲ್ಲಿ ಲಭಿಸುವ ಫಲ ಪುಷ್ಪಗಳಿಂದ ಸಮೃದ್ಧವಾದ ಅನೇಕ ವೃಕ್ಷಶ್ರೇಣಿಯಿಂದ ಮನೋಹರವೂ ದಟ್ಟವಾದ ಛಾಯೆಯುಳ್ಳದ್ದೂ ಸುಗಂಧದಿಂದ ಕೂಡಿದ ಸುಖಮಾರುತ ಸಹಿತವೂ ಮತ್ತು ಇಂತಹ ಗುಣಗಳಿಂದ ನಿರುಪಮವೂ ಆಗಿತ್ತು.

ತಂ ತದಾಶ್ರಮಮಾಸಾದ್ಯ ಬ್ರಹ್ಮಘೋಷೇಣ ನಾದಿತಮ್ ।
ವಿವಿಶುರ್ಹೃಷ್ಟಮನಸೋ ಯಥಾವೃದ್ಧಪುರಸ್ಸರಮ್ ॥ ೫ ॥

ಬ್ರಹ್ಮಾಸನೇ ಸುಖಾಸೀನಂ ಮೃದುಕೃಷ್ಣಾಜಿನೋತ್ತರೇ ।
ಶಿಷ್ಯೈಃ ಪರಿವೃತಂ ಶಾಂತಂ ದದೃಶುಸ್ತೇ ತಪೋಧನಾಃ ॥ ೬ ॥

ಕಾಲಾಗ್ನಿಮಿವ ಲೋಕಾಂಸ್ತ್ರೀನ್ ದಗ್ಧ್ವಾ ಪೂರ್ವಂ ನಿಜೇಚ್ಛಯಾ ।
ತದ್ದೋಷಶಾಂತ್ಯೈ ತಪಸಿ ಪ್ರವೃತ್ತಮಿವ ದೇಹಿನಮ್ ॥ ೭ ॥

ತೇ ಸಮೇತ್ಯ ಭೃಗುಶ್ರೇಷ್ಠಂ ವಿನಯಾಚಾರಶಾಲಿನಃ ।
ವವಂದಿರೇ ಮಹಾಮೌನಂ ಭಕ್ತಿಪ್ರಣತಕಂಧರಾಃ ॥ ೮ ॥

ತತಸ್ತಾನಾಗತಾನ್ ದೃಷ್ಟ್ವಾ ಮುನೀನ್ ಭೃಗುಕುಲೋದ್ವಹಃ ।
ಅರ್ಘ್ಯಪಾದ್ಯಾದಿಭಿಃ ಸಮ್ಯಕ್ ಪೂಜಯಾಮಾಸ ಸಾದರಮ್ ॥ ೯ ॥

---

೫. ಮುನಿ ಜನರು ಬ್ರಹ್ಮಘೋಷದಿಂದ ಶಬ್ದಮಯವಾಗಿ ಭಾಸಿಸುತ್ತಿದ್ದ ಆ ಆಶ್ರಮವನ್ನು ಕಂಡು ಅತ್ಯಂತ ಸಂತೋಷಗೊಂಡ ಮಾನಸವುಳ್ಳವರಾಗಿ ವೃದ್ಧರಿಂದ ಮೊದಲಾಗಿ ಕ್ರಮವಾಗಿ ಆಶ್ರಮವನ್ನು ಪ್ರವೇಶಿಸಿದರು.

೬. ಮತ್ತು ಆ ತಪಸ್ವಿಗಳು ಮೃದುವಾದ ಕೃಷ್ಣಾಜಿನವನ್ನು ಮೇಲುಗಡೆಯಲ್ಲಿ ಹಾಕಿರುವ ಬ್ರಹ್ಮಾಸನದಲ್ಲಿ ಶಿಷ್ಯರಿಂದ ಸುತ್ತುವರಿಯಲ್ಪಟ್ಟು ಶಾಂತನಾಗಿ ಸುಖದಿಂದ ಕುಳಿತಿರುವ ಭಾರ್ಗವರಾಮನನ್ನು ನೋಡಿದರು.

೭. ಪೂರ್ವದಲ್ಲಿ ತನ್ನ ಇಚ್ಛೆಯಿಂದ ಮೂರು ಲೋಕಗಳನ್ನು ಭಸ್ಮಮಾಡಿ ಆ ದೋಷ ಶಾಂತಿಗೋಸ್ಕರ ಪ್ರಲಯಕಾಲಾಗ್ನಿಯು ಮೂರ್ತಿಯನ್ನು ಧರಿಸಿ ತಪಸ್ಸಿನಲ್ಲಿ ಪ್ರವರ್ತಿಸಿದ್ದಂತೆ ರಾಮನು ಕಾಣುತ್ತಲಿದ್ದನು.

೮. ಮಹಾ ಮೌನವತ್ರದಲ್ಲಿದ್ದ ಭಾರ್ಗವರಾಮನನ್ನು ಹೊಂದಿ ಆ ತಪಸ್ವಿಗಳು ವಿನಯ-ಆಚಾರಗಳಿಂದ ಪ್ರಕಾಶಿಸುತ್ತ ಭಕ್ತಿಯಿಂದ ಶಿರವನ್ನು ಬಾಗಿಸಿದವರಾಗಿ ನಮಸ್ಕಾರ ಮಾಡಿದರು.

೯. ಅನಂತರದಲ್ಲಿ ಭೃಗುಕುಲ ಪ್ರಧಾನನಾದ ರಾಮನು ತಪಸ್ವಿಗಳು ಬಂದಿರುವುದನ್ನು ಕಂಡು ಅರ್ಘ್ಯ, ಪಾದ್ಯ ಮುಂತಾದ ಉಪಚಾರಗಳಿಂದ ಆದರಪೂರ್ವಕವಾಗಿ ಅವರನ್ನು ಸತ್ಕರಿಸಿದನು.

ತಾನಾಸೀನಾನ್ ಕೃತಾತಿಥ್ಯಾನೃಷೀನ್ ದೇಶಾಂತರಾಗತಾನ್ ।
ಉವಾಚ ಭೃಗುಶಾರ್ದೂಲಃ ಸ್ಮಿತಪೂರ್ವಮಿದಂ ವಚಃ ॥ ೧೦ ॥

ಸ್ವಾಗತಂ ವೋ ಮಹಾಭಾಗಾ ಯೂಯಂ ಸರ್ವೇ ಸಮಾಗತಾಃ ।
ಕರಣೀಯಂ ಕಿಮಸ್ಮಾಭಿರ್ವದಧ್ವಮವಿಚಾರಿತಮ್ ॥ ೧೧ ॥

ತತಸ್ತೇ ಮುನಯೋ ರಾಮಂ ಪ್ರಣಮ್ಯೇದಮಥಾಬ್ರುವನ್ ।
ಅವೇಹ್ಯಸ್ಮಾನ್ ಮುನಿಶ್ರೇಷ್ಠ ಗೋಕರ್ಣನಿಲಯಾನ್ ಮುನೀನ್ ॥ ೧೨ ॥

ಖನಂತಃ ಸಾಗರೈರ್ಭೂಮಿಂ ಕಸ್ಮಿಂಶ್ಚಿತ್ಕಾರಣಾಂತರೇ ।
ಸತೀರ್ಥಂ ತನ್ಮಹಾಕ್ಷೇತ್ರಂ ಪತಿತಂ ಸಾಗರಾಂಭಸಿ ॥ ೧೩ ॥

ಉತ್ಸಾರಿತಾರ್ಣವಜಲಂ ಕ್ಷೇತ್ರಂ ತತ್ಸರ್ವಪಾವನಮ್ ।
ಉಪಲಬ್ಧುಮಭೀಪ್ಸಾವೋ ಭವತಸ್ತು ನ ಸಂಶಯಃ ॥ ೧೪ ॥

---

೧೦. ಭೃಗುವಂಶಶ್ರೇಷ್ಠನಾದ ರಾಮನು ದೇಶಾಂತರದಿಂದ ಬಂದಿರುವ ಮಹರ್ಷಿಗಳು ಆತಿಥ್ಯವನ್ನು ಸ್ವೀಕರಿಸಿ ಆಸನದಲ್ಲಿ ಕುಳಿತಿರಲು ಅವರನ್ನು ಕುರಿತು ಮಂದಹಾಸಪೂರ್ವಕವಾಗಿ ಈ ವಚನವನ್ನು ಹೇಳಿದನು.

೧೧. ಮಹಾಭಾಗ್ಯವಂತರಾದ ಪೂಜ್ಯರೆ! ನೀವೆಲ್ಲರೂ ಸೇರಿ ಇಲ್ಲಿಗೆ ಬಂದಿರುತ್ತೀರಿ. ನಿಮಗೆಲ್ಲ ಸುಖಾಗಮನವೆ? ನಮ್ಮಿಂದ ನಿಮಗೋಸ್ಕರ ಯಾವ ಕಾರ್ಯವು ಕೂಡಲ್ಪಡಬೇಕೊ ನಿರ್ವಿಚಾರವಾಗಿ ಅದನ್ನು ಹೇಳಿರಿ.

೧೨. ಅನಂತರದಲ್ಲಿ ಆ ಮಹರ್ಷಿಗಳು ಭಾರ್ಗವನನ್ನು ನಮಸ್ಕರಿಸಿ ಈ ಮಾತನ್ನು ಹೇಳಿದರು, ಮುನಿಶ್ರೇಷ್ಠನೆ! ನಾವು ಗೋಕರ್ಣ ಕ್ಷೇತ್ರವನ್ನು ಆಶ್ರಯಿಸಿಕೊಂಡಿದ್ದ ಮುನಿಗಳೆಂದು ತಿಳಿ.

೧೩. ಒಂದಾನೊಂದು ಕಾರಣದಿಂದ ಸಗರ ರಾಜಪುತ್ರರು ಭೂಮಿಯನ್ನು ಅಗೆಯಲು ತೀರ್ಥಸಹಿತವಾದ ಆ ಗೋಕರ್ಣ ಮಹಾ ಕ್ಷೇತ್ರವು ಸಮುದ್ರದ ಜಲರಾಶಿಯಲ್ಲಿ ಬಿದ್ದಿತು.

೧೪. ಸಮುದ್ರದ ಜಲವನ್ನು ತಳ್ಳಿಹಾಕಿ ನಿನ್ನಿಂದ ಸಮಸ್ತರನ್ನು ಪವಿತ್ರರನ್ನಾಗಿ ಮಾಡುವ ಆ ದಿವ್ಯ ಕ್ಷೇತ್ರವನ್ನು ಮತ್ತೆ ಹೊಂದಲು ಇಷ್ಟವುಳ್ಳವರಾಗಿದ್ದೇವೆ. ನಿನ್ನಿಂದ ಈ ಕಾರ್ಯವಾಗುವುದರಲ್ಲಿ ಸಂಶಯವಿಲ್ಲ.

ವಿಷ್ಣೋರಂಶೇನ ಸಂಜಾತೋ ಭವಾನ್ ಭೃಗುಕುಲೇ ಕಿಲ ।
ತಸ್ಮಾತ್ ಕರ್ತುಮಶಕ್ಯಂ ತೇ ತ್ರೈಲೋಕ್ಯೇಽಪಿ ನ ಕಿಂಚನ ॥ ೧೫ ॥

ವಾಂಛಿತಾರ್ಥಪ್ರದೋ ಲೋಕೇ ತ್ವಮೇವೇತ್ಯನುಶುಶ್ರುಮ ।
ವಯಂ ತ್ವಾಮಾಗತಾಃ ಸರ್ವೇ ರಾಮೈತದಭಿಯಾಚಿತುಮ್ ॥ ೧೬ ॥

ಸ ತ್ವಮಾತ್ಮಪ್ರಭಾವೇಣ ಕ್ಷೇತ್ರಪ್ರವರಮದ್ಯ ತತ್ ।
ದಾತುಮರ್ಹಸಿ ವಿಪ್ರೇಂದ್ರ ಸಮುತ್ಸಾರ್ಯಾರ್ಣವೋದಕಮ್ ॥ ೧೭ ॥

ರಾಮ ಉವಾಚ : –

ಏತತ್ಸರ್ವಮಶೇಷೇಣ ವಿದಿತಂ ಮೇ ತಪೋಧನಾಃ ।
ಕರಣೀಯಂ ಚ ವಃ ಕೃತ್ಯಂ ಮಯಾ ನಾತ್ರ ವಿಚಾರಣಾ ॥ ೧೮ ॥

ಕಿಂತು ಯುಷ್ಮದಭಿಪ್ರೇತಂ ಕರ್ಮ ಲೋಕೇ ಸುದಾರುಣಮ್ ।
ಶಸ್ತ್ರಸಂಗ್ರಹಣಾಚ್ಛಕ್ಯಂ ಮಯಾಪಿ ನ ತದನ್ಯಥಾ ॥ ೧೯ ॥

---

೧೫. ನೀನು ಭೃಗುಮುನಿಯ ವಂಶದಲ್ಲಿ ಮಹಾ ವಿಷ್ಣುವಿನ ಅಂಶದಿಂದ ಹುಟ್ಟಿರುವವನಾಗಿದ್ದೀ, ಆದ್ದರಿಂದ ಮೂರು ಲೋಕದಲ್ಲಿಯೂ ನಿನ್ನಿಂದ ಮಾಡಲಾಗದ ಕಾರ್ಯವು ಯಾವುದೂ ಇಲ್ಲ.

೧೬. ಲೋಕದಲ್ಲಿ ಸಮಸ್ತರ ಇಷ್ಟಾರ್ಥವನ್ನು ಅನುಗ್ರಹಿಸುವವನು ನೀನು, ಎಂದು ನಾವು ಕೇಳಿರುವೆವು. ರಾಮನೆ! ಆದ್ದರಿಂದ ಈ ಕಾರ್ಯವನ್ನು ಪ್ರಾರ್ಥಿಸಿಕೊಳ್ಳಲು ನಾವೆಲ್ಲರೂ ನಿನ್ನ ಬಳಿಗೆ ಬಂದಿರುವೆವು.

೧೭. ವಿಪ್ರೇಂದ್ರನೆ! ಅಂತಹ ನೀನು ನಿನ್ನ ಪ್ರಭಾವದಿಂದ ಸಮುದ್ರದ ಜಲರಾಶಿಯನ್ನು ಹಿಂದಕ್ಕೆ ಒತ್ತಿ ಆ ಉತ್ತಮ ಕ್ಷೇತ್ರವನ್ನು ನಮಗೆ ಪ್ರದಾನಮಾಡಲು ಅರ್ಹನಾಗಿದ್ದೀಯೆ.

೧೮. ಪರಶುರಾಮನು ಇಂತೆಂದನು :— ತಪಸ್ಸೇ ಧನವಾಗಿ ಉಳ್ಳ ಮಹಾತ್ಮರೆ! ಇದೆಲ್ಲವೂ ಸಂಪೂರ್ಣವಾಗಿ ನನಗೆ ತಿಳಿದಿರುವುದು. ನನ್ನಿಂದ ನಿಮಗೆ ಇಷ್ಟವಾದ ಕಾರ್ಯವು ಮಾಡಲ್ಪಡಬೇಕಾದುದು, ಇದರಲ್ಲಿ ಸಂಶಯವಿಲ್ಲ.

೧೯. ಆದರೆ ನಿಮಗೆ ಇಷ್ಟವಾಗಿರುವ ಕಾರ್ಯವು ಲೋಕಗಳಲ್ಲಿ ಅತಿ ಭಯಂಕರವಾಗಿರುವುದು. ಆ ಕಾರ್ಯವು ನನ್ನಿಂದ ಶಸ್ತ್ರಧಾರಣದಿಂದ ಆಗಬೇಕು. ಮತ್ತಾವ ರೀತಿಯಿಂದಲೂ ಶಕ್ಯವಲ್ಲ.

ದತ್ತಸರ್ವಾಭಯೋಽಹಂ ವೈ ನ್ಯಸ್ತಶಸ್ತ್ರಃ ಶಮಾನ್ವಿತಃ ।
ತಪಃ ಸಮಾಸ್ಥಿತಶ್ಚರ್ತುಂ ಪ್ರಾಗೇವ ಪಿತೃಶಾಸನಾತ್ ॥ ೨೦ ॥

ನ ಜಾತು ಶಸ್ತ್ರಗ್ರಹಣಂ ಕರಿಷ್ಯಾಮೀತ್ಯಹಂ ಪುರಾ ।
ಪ್ರತಿಶ್ರುತ್ಯ ಸತಾಂ ಮಧ್ಯೇ ತಪಃ ಕರ್ತುಮಿಹಾನಘಾಃ ॥ ೨೧ ॥

ಶಸ್ತ್ರಗ್ರಹಣಸಾಧ್ಯತ್ವಾದ್ಯುಷ್ಮದೀಪ್ಸಿತವಸ್ತುನಃ ।

ಕಿಂ ಕರ್ತವ್ಯಂ ಮಯಾತ್ರೇತಿ ಮಮ ಡೋಲಾಯತೇ ಮನಃ ॥ ೨೨ ॥

ಶುಕ್ರ ಉವಾಚ :—

ಸತಾಂ ಸಂರಕ್ಷಣಾರ್ಥಾಯ ಶಸ್ತ್ರಸಂಗ್ರಹಣಂ ತು ಯತ್ ।
ತನ್ನ ಚ್ಯಾವಯತೇ ಸತ್ಯಾದ್ಯಥೋಕ್ತಂ ಬ್ರಹ್ಮಣಾ ಪುರಾ ॥ ೨೩ ॥

ತಸ್ಮಾದಸ್ಮದ್ಧಿತಾರ್ಥಾಯ ಭವತಾ ಗ್ರಾಹ್ಯಮಾಯುಧಮ್
ಧರ್ಮ ಏವ ಮಹಾಂಸ್ತೇನ ಚರಿತಸ್ತೇ ಭವಿಷ್ಯತಿ ॥ ೨೪ ॥

---

೨೦. ನಾನು ಹಿಂದೆಯೆ ಸರ್ವಪ್ರಾಣಿಗಳಿಗೆ ಅಭಯದಕ್ಷಿಣೆಯನ್ನಿತ್ತು, ಶಸ್ತ್ರವನ್ನು ಸನ್ನ್ಯಾಸಮಾಡಿ, ಶಾಂತಿಯಿಂದ ಕೂಡಿ ತಪಸ್ಸನ್ನು ಆಚರಿಸಲು ತಂದೆಯ ಆಜ್ಞೆಯಂತೆ ಪ್ರಾರಂಭಿಸಿರುವೆನು.

೨೧. ನಿಷ್ಕಲಂಕರಾದ ಮುನಿಗಳೆ! ಇನ್ನು ಯಾವಾಗಲೂ ಶಸ್ತ್ರಗ್ರಹಣವನ್ನು ಮಾಡುವುದಿಲ್ಲವೆಂದು ಸಾಧುಜನರ ಮಧ್ಯದಲ್ಲಿ ನಾನು ಪ್ರತಿಜ್ಞೆಮಾಡಿ ತಪೋಽನುಷ್ಠಾನಕ್ಕೆ ಇಲ್ಲಿಗೆ ಬಂದಿರುವೆನು.

೨೨. ನಿಮಗೆ ಇಷ್ಟವಾದ ಕಾರ್ಯವಸ್ತುವಿನ ಸಾಧನೆಯು ಶಸ್ತ್ರಗ್ರಹಣಮಾತ್ರದಿಂದಲೆ ಶಕ್ಯವಿರುವುದರಿಂದ ಈ ವಿಷಯದಲ್ಲಿ ನನ್ನಿಂದ ಏನುಮಾಡುವುದು ಉಚಿತವೆಂಬ ಈ ವಿಷಯದಲ್ಲಿ ನನ್ನ ಮನಸ್ಸು ತೂಗಾಡುತ್ತಿರುವುದು

೨೩. ಶುಕ್ರಮುನಿಯು ಹೀಗೆಂದನು :—ಶಿಷ್ಟರನ್ನು ಸಂರಕ್ಷಿಸಲೋಸ್ಕರ ಆಚರಿಸಲ್ಪಟ್ಟ ಶಸ್ತ್ರಧಾರಣವು ಬ್ರಹ್ಮದೇವನು ಪೂರ್ವದಲ್ಲಿ ಉಪದೇಶಿಸಿದ ವಚನದಂತೆ ಸತ್ಯದಿಂದ ಭ್ರಂಶವನ್ನು ಉಂಟುಮಾಡುವುದಿಲ್ಲ.

೨೪. ಆದುದರಿಂದ ನಮ್ಮೆಲ್ಲರ ಹಿತಸಾಧನೆಗೋಸ್ಕರ ನಿನ್ನಿಂದ ಈಗ ಆಯುಧವು ಹಿಡಿಯಲ್ಪಡಬೇಕು. ಇದರಿಂದ ಮಹತ್ತಾದ ಧರ್ಮಕಾರ್ಯವನ್ನು ನೀನು ಆಚರಿಸಿದಂತೆ ಆಗುವುದು.

ಜೈಮಿನಿರುವಾಚ :—

ಏವಂ ಸಂಪ್ರಾರ್ಥ್ಯಮಾನಸ್ತು ಮುನಿಭಿರ್ಭೃಗುಪುಂಗವಃ ।
ತಮನುದ್ಧೃತ್ಯ ಮೇಧಾವೀ ಧರ್ಮಮುದ್ದಿಶ್ಯ ಕೇವಲಮ್ ॥ ೨೫ ॥

ಸ ತೈಃ ಸಹ ಮುನಿಶ್ರೇಷ್ಠೋ ದಿಶಂ ದಕ್ಷಿಣಪಶ್ಚಿಮಾಮ್ ।
ಸಮುದ್ದಿಶ್ಯ ಯಯೌ ರಾಜನ್ ದ್ರಷ್ಟುಕಾಮಃ ಸರಿತ್ಪತಿಮ್ ॥ ೨೬ ॥

ಸ ಸಹ್ಯಮಚಲಶ್ರೇಷ್ಠಮವತೀರ್ಯ ಭೃಗೂದ್ವಹಃ ।
ತತ್ಪರಂ ಸರಿತಾಂ ಪತ್ಯುಸ್ತೀರಂ ಪ್ರಾಪ ಮಹಾಮನಾಃ ॥ ೨೭ ॥

ಸ ದದರ್ಶ ಮಹಾಭಾಗಃ ಪರಿತೋ ಮಾರುತಾಕುಲಮ್ ।
ಆಕರಂ ಸರ್ವರತ್ನಾನಾಂ ಪೂರ್ಯಮಾಣಮನಾರತಮ್ ॥ ೨೮ ॥

ಅಪರಿಜ್ಞೇಯಗಾಂಭೀರ್ಯಂ ಮಹತಾಮಿವ ಮಾನಸಮ್ ।
ದುಷ್ಪಾರಪಾರಂ ಸರ್ವಸ್ಯ ವಿವಿಧಗ್ರಾಹಸಂಹತಿಮ್ ॥ ೨೯ ॥

---

೨೫. ಜೈಮಿನಿಮುನಿಯು ಇಂತೆಂದನು :—ಮುನಿಜನರಿಂದ ಈರೀತಿಯಾಗಿ ಪ್ರಾರ್ಥಿಸಲ್ಪಟ್ಟ ಮೇಧಾವಿಯಾದ ಭೃಗುವಂಶ ಶ್ರೇಷ್ಠನಾದ ಪರಶುರಾಮನು ಕೇವಲ ಧರ್ಮಕಾರ್ಯವೆಂದು ಉದ್ದೇಶಿಸಿ ಅದನ್ನು ಅಂಗೀಕರಿಸಿದನು.

೨೬. ರಾಜನೆ! ಮತ್ತು ಆ ಮುನಿಗಳೊಂದಿಗೆ ಮುನಿಶ್ರೇಷ್ಠನಾದ ಭಾರ್ಗವ ರಾಮನು ಸಮುದ್ರವನ್ನು ನೋಡಬೇಕೆಂಬ ಇಷ್ಟವುಳ್ಳವನಾಗಿ, ದಕ್ಷಿಣ-ಪಶ್ಚಿಮ ದಿಗಂತರವನ್ನು ಕುರಿತು ಪ್ರಯಾಣಮಾಡಿದನು.

೨೭. ಉದಾರ ಮಾನಸವುಳ್ಳ ಆ ಭಾರ್ಗವರಾಮನು ಪರ್ವತೋತ್ತಮವಾದ ಸಹ್ಯಗಿರಿಗೆ ಇಳಿದು ಅಲ್ಲಿಂದ ಮುಂದುಗಡೆಯಲ್ಲಿರುವ ಸಮುದ್ರದ ತೀರವನ್ನು ಹೊಂದಿದನು.

೨೮. ಮಹಾಮಹಿಮನಾದ ಭಾರ್ಗವರಾಮನು ಸುತ್ತಲೂ ಮಾರುತದಿಂದ ಕ್ಷೋಭಗೊಂಡಿರುವುದೂ ಸರ್ವರತ್ನಗಳಿಗೆ ನಿಂಧಿಯಂತಿರುವುದೂ ಮತ್ತು ಸಂತತವಾಗಿ ಪರಿಪೂರ್ಣವಾಗುತ್ತಿರುವುದೂ ಆದ ಸಾಗರವನ್ನು ನೋಡಿದನು.

೨೯. ಮತ್ತು ಆ ಸಾಗರವು ಮಹಾತ್ಮರ ಚಿತ್ತದಂತೆ ತಿಳಿಯಲಾಗದಷ್ಟು ಗಾಂಭೀರ್ಯವುಳ್ಳದ್ದೂ, ಎಲ್ಲರಿಗೂ ಗಮ್ಯವಲ್ಲದ ಪಾರವುಳ್ಳದ್ದೂ ಮತ್ತು ನಾನಾ ವಿಧವಾದ ಮೊಸಳೆಗಳ ಸಮೂಹವುಳ್ಳದ್ದೂ ಆಗಿತ್ತು.

ಅಪ್ಯಧೃಷ್ಯತಮಂ ಲೋಕೇ ಧಾತಾರಮಿವ ಕೇವಲಮ್ ।
ಆತ್ಮಾನಮಿವ ಚಾತ್ಮಸ್ಥೇ ನ್ಯಕ್ಕೃತಾಖಿಲಮುದ್ಧತಮ್ ॥ ೩೦ ॥

ಆಶ್ರಯಂ ಸರ್ವಸತ್ತ್ವಾನಾಮಾಪಗಾನಾಂ ಚ ಪಾರ್ಥಿವಃ ।
ಅತ್ಯರ್ಥಚಪಲೋತ್ತುಂಗತರಂಗಶತಮಾಲಿನಮ್ ॥ ೩೧ ॥

ಉಪಾಂತೋಪಲಸಂಘಾತಕುಹರಾಂತರಸಂಶ್ರಯಾತ್ ।
ವಿಶೀರ್ಯಮಾಣಲಹರೀಶತಫೇನೌಘಶೋಭಿತಮ್ ॥ ೩೨ ॥

ಗಂಭೀರಘೋಷಂ ಜಲಧಿಂ ಪಶ್ಯನ್ಮುನಿಗಣೈಃ ಸಹ ।
ಸಂಸೇವ್ಯಮಾನಸ್ತರಲೈರ್ಲಹರೀಕಣಶೀತಲೈಃ ॥ ೩೩ ॥

ಮುಹೂರ್ತಮಿವ ರಾಜೇಂದ್ರ ತೀರೇ ನದನದೀಪತೇಃ ।
ವಿಶಶ್ರಮೇ ಮಹಾಬಾಹುರ್ದ್ರಷ್ಟುಕಾಮಃ ಪ್ರಚೇತಸಮ್ ॥ ೩೪ ॥

---

೩೦. ಮತ್ತು ಲೋಕದಲ್ಲಿ ಕೇವಲ ಸೃಷ್ಟಿ ನಿಯಾಮಕನಾದ ವಿಧಿಯಂತೆ ಯಾರಿಂದಲೂ ತಿರಸ್ಕರಿಸಲು ಆಗದಿರುವುದೂ ಆತ್ಮವಸ್ತುವಿನಂತೆ ತನ್ನ ರೂಪದಿಂದ ಸಮಸ್ತ ವಸ್ತುಜಾಲವನ್ನೂ ತಿರಸ್ಕರಿಸಿರುವುದೂ ಉದ್ಧತವೂ ಆಗಿದೆ.

೩೧. ಹಾಗು ಸಮಸ್ತ ಜಲಚರ ಪ್ರಾಣಿಗಳಿಗೆ ಆಶ್ರಯವೂ, ನದಿಗಳಿಗೆಲ್ಲ ರಾಜನೂ, ಮತ್ತು ಅತ್ಯಂತ ಚಂಚಲವಾದ ಉನ್ನತವಾದ ಅನೇಕ ತರಂಗಮಾಲೆಗಳಿಂದ ಶೋಭಿತವೂ ಆಗಿತ್ತು.

೩೨. ಮತ್ತು ಸಮೀಪದಲ್ಲಿದ್ದ ಶಿಲೆಗಳ ಸಂಘಾತದ ಗುಹಾಂತರಗಳಲ್ಲಿ ಪ್ರವೇಶಿಸುವುದರಿಂದ ಸೀಳಿ ಭಂಗಹೊಂದುತ್ತಿರುವ ನೂರಾರು ತರಂಗಗಳ ನೊರೆಯ ಸಮೂಹದಿಂದ ಶೋಭಿತವಾಗಿತ್ತು.

೩೩. ರಾಮನು ಆ ಮುನಿವೃಂದದಿಂದ ಸಹಿತನಾಗಿ ಗಂಭೀರವಾದ ಧ್ವನಿಯುಳ್ಳ ಸಮುದ್ರವನ್ನು ನೋಡುತ್ತ ಚಂಚಲವಾದ ಅಲೆಗಳ ಶೀತಲ ಜಲಕಣಗಳಿಂದ ಸೇವಿಸಲ್ಪಟ್ಟವನಾದನು.

೩೪. ರಾಜೇಂದ್ರನೆ! ನದ-ನದಿಗಳ ಅಧಿಪತಿಯಾದ ಸಮುದ್ರದ ತೀರದಲ್ಲಿ ಮಹಾಬಾಹು ಬಲಶಾಲಿಯಾದ ಭಾರ್ಗವನು ವರುಣನನ್ನು ನೋಡಬೇಕೆಂಬ ಇಷ್ಟವುಳ್ಳವನಾಗಿ ಮುಹೂರ್ತಕಾಲ ವಿಶ್ರಮಿಸಿಕೊಂಡನು.

ತತೋ ರಾಮಃ ಸಮುತ್ಥಾಯ ದಕ್ಷಿಣಾಭಿಮುಖಃ ಸ್ಥಿತಃ ।
ಮೇಘಗಂಭೀರಯಾ ವಾಚಾ ವರುಣಂ ವಾಕ್ಯಮಬ್ರವೀತ್ || ೩೫ ||

ಅಹಂ ಮುನಿಗಣೈಃ ಸಾರ್ಧಮಾಗತಸ್ತ್ವದ್ದಿದೃಕ್ಷಯಾ ।
ತಸ್ಮಾತ್ತ್ವರೂಪಧೃಙ್ಮಹ್ಯಂ ಪ್ರಚೇತೋ ದೇಹಿ ದರ್ಶನಮ್ || ೩೬ ||

ಇತಿ ಶ್ರುತ್ವಾಪಿ ತದ್ವಾಕ್ಯಂ ವರುಣೋ ಯಾದಸಾಂ ಪತಿಃ ।
ನ ಚಚಾಲ ನಿಜಸ್ಥಾನಾನ್ನೃಪ ಧೀರತರಸ್ತ್ವಯಮ್ || ೩೭ ||

ಪುನಃ ಪುನಶ್ಚ ರಾಮೇಣ ಸಮಾಹೂತೋಽಪಿ ತೋಯರಾಟ್ ।
ನ ದದೌ ದರ್ಶನಂ ತಸ್ಮೈ ಪ್ರತಿವಾಕ್ಯಂ ಚ ನಾಭ್ಯಧಾತ್ || ೩೮ ||

ಅಲಂಘನೀಯಂ ತದ್ವಾಕ್ಯಂ ವರುಣೇನಾವಧೀರಿತಮ್ ।
ಅತ್ಯಂತಮಿತಿ ಕಾರ್ಯಾರ್ಥಿ ವಿದುಷಾ ಸಮುಪೇಕ್ಷಿತಮ್ || ೩೯ ||

---

೩೫. ತರುವಾಯ ಭಾರ್ಗವನು ಎದ್ದು ದಕ್ಷಿಣದಿಕ್ಕಿಗೆ ಅಭಿಮುಖನಾಗಿ ನಿಂತು ಕೊಂಡು ಮೇಘಗಳ ಗರ್ಜನೆಯಂತೆ ಗಂಭೀರವಾದ ಧ್ವನಿಯಿಂದ ವರುಣನಿಗೆ ಈ ವಚನವನ್ನು ಹೇಳಿದನು.

೩೬. ವರುಣನೆ! ನಾನು ನಿನ್ನನ್ನು ನೋಡಬೇಕೆಂಬ ಆಕಾಂಕ್ಷೆಯಿಂದ ಮುನಿ ವೃಂದದಿಂದ ಕೂಡಿ ಬಂದಿರುವೆನು. ಆದುದರಿಂದ ನೀನು ಮೂರ್ತಿಯನ್ನು ಧರಿಸಿ ನನಗೆ ದರ್ಶನವನ್ನು ಕೊಡು.

೩೭. ರಾಜನೆ! ಜಲಚರಪ್ರಾಣಿಗಳ ಅಧಿಪತಿಯಾದ ವರುಣನು ಭಾರ್ಗವನ ಈ ವಚನವನ್ನು ಕೇಳಿದರೂ ತಾನು ಬಹು ಧೀರಸ್ವಭಾವನಾದುದರಿಂದ ತನ್ನ ಸ್ಥಾನ ದಿಂದ ಚಲಿಸಲಿಲ್ಲ.

೩೮. ರಾಮನಿಂದ ಮತ್ತೆ ಮತ್ತೆ ಅನೇಕಾವರ್ತಿಯಾಗಿ ಕರೆಯಲ್ಪಟ್ಟರೂ ಜಲ ರಾಜನಾದ ವರುಣನು ಅವನಿಗೆ ದರ್ಶನವನ್ನು ಕೊಡಲಿಲ್ಲ. ಪ್ರತ್ಯುತ್ತರವನ್ನೂ ಹೇಳಲೇ ಇಲ್ಲ.

೩೯. ಉಲ್ಲಂಘಿಸಲು ಆಗದ ಭಾರ್ಗರಾಮನ ಆ ವಚನವು ಜ್ಞಾನಿಯಾದ ವರುಣನಿಂದ ಮುಂದಾಗುವುದನ್ನು ನೋಡುತ್ತ ಅತ್ಯಂತವಾಗಿ ಉಪೇಕ್ಷೆಮಾಡಿ ತಿರಸ್ಕ ರಿಸಲ್ಪಟ್ಟಿತು.

ತತಃ ಪ್ರಚೇತಸಾ ವಾಕ್ಯಂ ಮನ್ಯಮಾನೋಽವಧೀರಿತಮ್ ।
ಚುಕೋಪ ತಮಭಿಪ್ರೇಕ್ಷ್ಯ ರಾಮಃ ಶಸ್ತ್ರಭೃತಾಂ ವರಃ ॥ ೪೦ ॥

ಸಂಕ್ಷುಬ್ಧಸಾಗರಾಕಾರಃ ಸ ತದಾ ಸ್ವಬಲಾಶ್ರಯಾಶ್ ।
ನಿಸ್ತೋಯಮರ್ಣವಂ ಕರ್ತುಮಿಯೇಷ ರುಷಿತೋ ಭೃಶಮ್ ॥ ೪೧ ॥

ತತೋ ಜಲಮುಪಸ್ಪೃಶ್ಯ ಸಮೀಪೇ ವಿಜಯಂ ಧನುಃ ।
ತತಃ ಪ್ರಣಮ್ಯ ಮನಸಾ ಶರ್ವಂ ರಾಮೋ ಮಹದ್ಧನುಃ ॥ ೪೨ ॥

ಗೃಹೀತ್ವಾರೋಪಯಾಮಾಸ ಕ್ರೋಧಸಂರಕ್ತಲೋಚನಃ ।
ಅಭಿಮೃಶ್ಯ ಧನುಃಶ್ರೇಷ್ಠಂ ಸಗುಣಂ ಭೃಗುಸತ್ತಮಃ ॥ ೪೩ ॥

ಪಶ್ಯತಾಂ ಸರ್ವಭೂತಾನಾಂ ಜ್ಯಾಘೋಷಮಕರೋತ್ತದಾ ।
ಜ್ಯಾಘೋಷಃ ಶುಶ್ರುವೇ ತಸ್ಯ ದಿವಿಸ್ಪೃಗತಿನಿಷ್ಠುರಃ ॥ ೪೪ ॥

---

೪೦. ತರುವಾಯ ಶಸ್ತ್ರಧಾರಿಗಳಲ್ಲಿ ಅಗ್ರಗಣ್ಯನಾದ ರಾಮನು ವರುಣನಿಂದ ತನ್ನ ವಚನವು ತಿರಸ್ಕರಿಸಲ್ಪಟ್ಟಿರುವುದನ್ನು ತಿಳಿದು ವರುಣನ ವಿಷಯದಲ್ಲಿ ಕೋಪ ಗೊಂಡನು.

೪೧. ಆಗ ಅತಿಯಾಗಿ ಕೋಪಗೊಂಡಿರುವ ಭಾರ್ಗವನು ತನ್ನ ಬಲಪ್ರಯೋಗದ ಆಶ್ರಯ ಪ್ರಸಂಗದಿಂದ ಕ್ಷೋಭಗೊಂಡಿರುವ ಸಮುದ್ರದಂತೆ ಆಕಾರವುಳ್ಳವನಾಗಿ ಸಮುದ್ರವನ್ನು ಜಲವಿಲ್ಲದಂತೆ ಮಾಡಲು ಸಂಕಲ್ಪಿಸಿದನು.

೪೨. ಅನಂತರದಲ್ಲಿ ರಾಮನು ಜಲವನ್ನು ಆಚಮನಮಾಡಿ ಮಾನಸದಲ್ಲಿ ಶಂಕರನನ್ನು ಧ್ಯಾನಿಸಿ ಸಮೀಪದಲ್ಲಿದ್ದ ವಿಜಯಸಾಧನವಾದ ಮಹಾ ಧನುಸ್ಸನ್ನು ಸ್ವೀಕರಿಸಿದನು.

೪೩. ಭೃಗುವಂಶ ಶ್ರೇಷ್ಠನಾದ ರಾಮನು ಕೋಪದಿಂದ ಕೆಂಪಾದ ನೇತ್ರಗಳುಳ್ಳವನಾಗಿ ಮೌರ್ವೀಹುರಿಯಿಂದ ಕೂಡಿದ ಪ್ರಶಸ್ತವಾದ ಬಿಲ್ಲನ್ನು ತೆಗೆದುಕೊಂಡು ಹೆದೆಯೇರಿಸಿದನು.

೪೪. ಆಗ ರಾಮನು ಸರ್ವಪ್ರಾಣಿಗಳು ಪ್ರತ್ಯಕ್ಷ ನೋಡುತ್ತಿರುವಂತೆ ಮೌರ್ವೀ ಬಂಧನದಿಂದ ಧನುಷ್ಟಂಕಾರವನ್ನು ಮಾಡಿದನು. ಆ ಧ್ವನಿಯು ಆಕಾಶವನ್ನು ವ್ಯಾಪಿಸಿ ಅತ್ಯುಗ್ರವಾಗಿ ಎಲ್ಲರಿಗೂ ಕೇಳಿಸಿತು

ಚಚಾಲ ನಿಖಿಲಾ ಯೇನ ಸಪ್ತದ್ವೀಪಾರ್ಣವಾ ಮಹೀ ।
ತತಃ ಸರಭಸಂ ರಾಮಶ್ಚಾಪೇ ಕಾಲಾನಲೋಪಮಮ್ ॥ ೪೫ ॥

ಸುವರ್ಣಪುಂಖಂ ವಿಶಿಖಂ ಸಂದಧೇ ಶರಸತ್ತಮಮ್ ।
ತಸ್ಮಿನ್ನಸ್ತ್ರಂ ಮಹಾಘೋರಂ ಭಾರ್ಗವಂ ವಹ್ನಿದೈವತಮ್ ॥ ೪೬ ॥

ಯುಯೋಜ ಭೃಗುಶಾರ್ದೂಲಃ ಸಮಂತ್ರಾಭ್ಯಾಸಮೋಕ್ಷಣಮ್ ।
ತತಶ್ಚಚಾಲ ವಸುಧಾ ಸಶೈಲವನಕಾನನಾ ॥ ೪೭ ॥

ಪ್ರಕ್ಷೋಭಂ ಪರಮಂ ಜಗ್ಮುರ್ದೇವಾಸುರಮಹೋರಗಾಃ ।
ಸಂಧಿತಾಸ್ತ್ರಂ ಭೃಗುಶ್ರೇಷ್ಠಂ ಕ್ರೋಧಸಂರಕ್ತಲೋಚನಮ್ ॥ ೪೮ ॥

ದೃಷ್ಟ್ವಾಸಂಭ್ರಾಂತಮನಸೋ ಬಭೂವುಃ ಸಚರಾಚರಾಃ ।
ಸ ದಿಗ್ದಾಹಾಭ್ರಪಟಲೈರಭವನ್ ಸಂವೃತಾ ದಿಶಃ ॥ ೪೯ ॥

---

೪೫. ಆ ಧನುಷ್ಟಂಕಾರದಿಂದ ಸಪ್ತದೀಪಗಳಿಂದಲೂ ಸಮುದ್ರಗಳಿಂದಲೂ ಸೇರಿದ ಭೂಮಿಯೆಲ್ಲವೂ ನಡುಗಿತು. ಆ ಮೇಲೆ ರಾಮನು ರಭಸದಿಂದ ಬಿಲ್ಲಿನಲ್ಲಿ ಪ್ರಲಯಾಗ್ನಿ ಸಮಾನವಾದ ಬಾಣದ ಸಂಧಾನಕ್ಕೆ ಯತ್ನಿಸಿದನು.

೪೬. ಸುವರ್ಣದ ಗರಿಗಳುಳ್ಳ, ಉತ್ತಮ ಬಾಣವನ್ನು ಆ ಬಿಲ್ಲಿನಲ್ಲಿ ಸಂಧಾನ ಮಾಡಿದನು. ಮತ್ತು ಆ ಬಾಣದಲ್ಲಿ ಅಗ್ನಿ ಅಭಿಮಾನಿ ದೇವತೆಯುಳ್ಳ ಮಹಾ ಘೋರವಾದ ಭಾರ್ಗವಾಸ್ತ್ರವನ್ನು ಇರಿಸಿದನು.

೪೭. ಭೃಗುವಂಶತಿಲಕನಾದ ರಾಮನು ಪ್ರಯೋಗ ಮಂತ್ರಜಪಾಭ್ಯಾಸಪೂರ್ವಕವಾಗಿ ಅಸ್ತ್ರವನ್ನು ಬಾಣದಲ್ಲಿ ಅಭಿಮಂತ್ರಿಸಿದ್ದರಿಂದ ಗಿರಿ-ವನ ದುರ್ಗಗಳಿಂದ ಕೂಡಿದ ಭೂಮಿಯು ಚಲಿಸಿತು.

೪೮. ಕೋಪದಿಂದ ಕೆಂಪಾದ ನೇತ್ರಗಳುಳ್ಳ, ಮತ್ತು ಅಸ್ತ್ರವನ್ನು ಸಂಧಾನ ಮಾಡಿರುವ ಭೃಗು ಶ್ರೇಷ್ಠನಾದ ರಾಮನನ್ನು ನೋಡಿ ದೇವ-ಅಸುರ ನಾಗೇಂದ್ರ-ಇವರೆಲ್ಲರೂ ಹೆಚ್ಚಾದ ಕ್ಷೋಭವನ್ನು ಹೊಂದಿದರು.

೪೯. ಚರ–ಅಚರ ಸಹಿತವಾದ ಸಕಲ ಪ್ರಪಂಚವು ಇದನ್ನು ನೋಡಿ ಭಯಗೊಂಡ ಮಾನಸವುಳ್ಳದ್ದು ಆಯಿತು. ಆಗ ಎಲ್ಲ ದಿಕ್ಕುಗಳು ದಾಹದಿಂದ ಕೂಡಿದ ಮೇಘಮಂಡಲಗಳಿಂದ ಮುಚ್ಚಲ್ಪಟ್ಟುವು.

ವವುಶ್ಚ ಪರುಷಾ ವಾತಾ ರಜೋವ್ಯಾಪ್ತಾ ಮಹಾರವಾಃ ।
ಮಂದಶಶ್ಮಿರಶೀತಾಂಶುರಭೂತ್ಸಂರಕ್ತಮಂಡಲಃ ॥ ೫೦ ॥

ಸೋಲ್ಕಾಪಾತಾಶನಿರ್ವೃಷ್ಟಿರ್ಬಭೂವ ರುಧಿರೋದಕಾ ।
ಕಿಮೇತದಿತಿ ಸಂಭ್ರಾಂತಾ ಧೂಮೋದ್ಗಾರಾತಿಭೀಷಣಮ್ ॥ ೫೧ ॥

ಅಧಿರೋಪಿತದಿವ್ಯಾಸ್ತ್ರಂ ಪ್ರಚಕರ್ಷ ಮಹಾಶರಮ್ ।
ಧನುರ್ವಿಕರ್ಷಮಾಣಂ ತಂ ಸ್ಫುರಜ್ಜ್ವಾಲಾಗ್ರಸಾಯಕಮ್ ॥ ೫೨ ॥

ದದೃಶುರ್ಮುನಯೋ ರಾಮಂ ಕಲ್ಪಾಂತಾನಿಲಸನ್ನಿಭಮ್ ।
ಆಕರ್ಣಾಕೃಷ್ಟಕೋದಂಡಮಂಡಲಾಭ್ಯಂತರಸ್ಥಿತಮ್ ॥ ೫೩ ॥

ತಸ್ಯ ಪ್ರತಿಭಯಾಕಾರಂ ದುಷ್ಪ್ರಾಪಮಭವದ್ವಪುಃ ।
ವಿಕೃಷ್ಟನುಷಸ್ತಸ್ಯ ರೂಪಮುಗ್ರಂ ರವೇರಿವ ॥ ೫೪ ॥

---

೫೦. ಮತ್ತು ಅತ್ಯುಗ್ರವೂ, ಹೆಚ್ಚಾದ ಧೂಳಿಯಿಂದ ವ್ಯಾಪಿಸಲ್ಪಟ್ಟಿರುವುದೂ ಮತ್ತು ಮಹಾಧ್ವನಿ ಗೆಯ್ಯುತ್ತಿರುವುದೂ ಆದ ಬಿರುಗಾಳಿಯು ಬೀಸಿತು. ಸೂರ್ಯನು ಶಾಂತವಾದ ರಶ್ಮಿಗಳುಳ್ಳವನಾಗಿ ಕೆಂಪಾದ ಬಿಂಬದಿಂದ ಕೂಡಿದವನಾದನು.

೫೧. ಬೆಂಕಿಯಕೊಳ್ಳಿಯ ಪತನ, ಸಿಡಿಲುಗಳಿಂದ ಕೂಡಿದ ರಕ್ತಧಾರೆಗಳ ಮಳೆಯು ಉಂಟಾಯಿತು. ಆಗ ಧೂಮಜಾಲೋದ್ಗಮದಿಂದ ಉಂಟಾದ ಭಯಂಕರ ಸನ್ನಿವೇಶವು ಇದೇನೆಂದು ಎಲ್ಲರನ್ನೂ ಭಯಚಕಿತರನ್ನಾಗಿ ಮಾಡಿತು.

೫೨. ಆಗ ರಾಮನು ದಿವ್ಯಾಸ್ತ್ರವನ್ನು ಇರಿಸಿರುವ ಮಹಾಶರವನ್ನು ಪ್ರಯೋಗಿಸಲು ಬಿಲ್ಲನ್ನು ಆಕರ್ಷಿಸಿದನು. ಪ್ರಕಾಶಿಸುತ್ತಿರುವ ಜ್ವಾಲೆಗಳ ಅಗ್ರಭಾಗವುಳ್ಳ ಬಾಣದಿಂದ ಕೂಡಿದ ಬಿಲ್ಲಿನ ಮೌರ್ವಿಯನ್ನು ಎಳೆಯುತ್ತಲಿದ್ದನು.

೫೩. ಆಗ ಕಿವಿಯ ವರೆಗೆ ಸೆಳೆದು ಮಂಡಲಾಕಾರವಾದ ಧನುಸ್ಸಿನ ಮಧ್ಯದಲ್ಲಿದ್ದ ಪ್ರಲಯಾಗ್ನಿಗೆ ಸಮಾನನಾದ ಭಾರ್ಗವನನ್ನು ಮುನಿಗಳು ನೋಡಿದರು.

೫೪. ಆಗ ರಾಮನ ವಿಗ್ರಹವು ಭಯಂಕರವಾದ ಆಕಾರವುಳ್ಳದ್ದಾಗಿ ನೋಡಲು ಅಶಕ್ಯವಾಯಿತು. ಧನುಸ್ಸನ್ನು ಸೆಳೆದಿರುವ ಭಾರ್ಗವ ರಾಮನ ಆ ಉಗ್ರರೂಪವು ಸೂರ್ಯ ಬಿಂಬದಂತೆ ಇತ್ತು.

ಕಲ್ಪಾಂತೇಽಭ್ಯುದಿತಸ್ಯೇವ ಮಂಡಲಂ ಪರಿವೇಷಿತಮ್ ।
ಕಲ್ಪಾಂತಾಗ್ನಿಸಮಜ್ವಾಲಾಭೀಷಣಂ ಸ್ಫುರತೋ ವಪುಃ ॥ ೫೫ ॥

ತಸ್ಯಾಲಕ್ಷ್ಯತ ಚಕ್ರಸ್ಯ ಹರೇ ರಿವ ಚ ಮಂಡಲಮ್ ।
ಸ್ಫುರತ್ಕ್ರೋಧಾನಲಜ್ವಾಲಾಪರೀತಸ್ಯಾತಿರೌದ್ರತಾಮ್ ॥ ೫೬ ॥

ಅವಾಪ ವಿಷ್ಣೋಃ ಸ ತದಾ ನರಸಿಂಹಾಕೃತೇರಿವ ।
ವಪುರ್ವಿಕೃಷ್ಟಚಾಪಸ್ಯ ಭ್ರುಕುಟೀಕುಟಿಲಾನನಮ್ ॥ ೫೭ ॥

ರಾಮಸ್ಯಾಭೂದ್ಭವಸ್ಯೇವ ದಿಧಕ್ಷೋಸ್ತ್ರಿಪುರಂ ಪುರಾ ।
ಜಾಜ್ವಲ್ಯಮಾನವಪುಷಂ ತಂ ದೃಷ್ಟ್ವಾ ಸಹಸಾ ಭಯಾತ್ ॥ ೫೮ ॥

ಪ್ರಸೀದ ಜಯ ರಾಮೇತಿ ತುಷ್ಟುವುರ್ಮುನಯೋಽಖಿಲಾಃ ।
ತತೋಽಸ್ತ್ರಾಗ್ನಿಸ್ಫುರದ್ಧೂಮಪಟಲೈಃ ಶಕಲೀಕೃತಮ್ ॥ ೫೯ ॥

---

೫೫. ಕಲ್ಪಾಂತಕಾಲದಲ್ಲಿ ಉದಯಿಸಿದ, ಪರಿವೇಷಮಂಡಲದಿಂದ ಕೂಡಿರುವ ಸೂರ್ಯಬಿಂಬದಂತೆ ಬಿಲ್ಲಿನ ಮಧ್ಯದಲ್ಲಿ ರಾಮನ ದೇಹವು ಕಾಣಿಸಿತು. ಹಾಗೆ ಸ್ಫುರಿಸುತ್ತಿದ್ದ ರಾಮನ ದೇಹವು ಕಲ್ಪಾಂತಕಾಲದ ಅಗ್ನಿಜ್ವಾಲೆಗಳಂತೆ ಭೀಷಣ ವಾಯಿತು.

೫೬. ಅಂತಹ ಶರೀರವು ಮಹಾ ವಿಷ್ಣುವಿನ ಚಕ್ರಾಯುಧ ಮಂಡಲದಂತೆ ಕಾಣಿಸುತ್ತಿತ್ತು. ಇದರ ಜೊತೆಗೆ ಸ್ಫುರಿಸುವ ಕ್ರೋಧಾಗ್ನಿ ಜ್ವಾಲೆಗಳ ವ್ಯಾಪ್ತಿ ಯಿಂದ ಹೆಚ್ಚು ರೌದ್ರರೂಪವನ್ನು ಹೊಂದಿತು.

೫೭. ಆ ರೂಪವು ನರಸಿಂಹ ಆಕೃತಿಯನ್ನು ಧರಿಸಿದ ವಿಷ್ಣುವಿನ ರೂಪದಂತೆ ಉಗ್ರವಾಗಿತ್ತು. ಬಿಲ್ಲಿನ ಹುರಿಯನ್ನು ಸೆಳೆದ ಭಾರ್ಗವನ ಶರೀರದಲ್ಲಿ ಮುಖವು ಕೋಪದಿಂದ ಹುಬ್ಬನ್ನು ಗಂಟಿಕ್ಕಿ ಕುಟಿಲವಾಗಿತ್ತು.

೫೮. ಆ ಮುಖವು ಪೂರ್ವದಲ್ಲಿ ತ್ರಿಪುರಾಸುರನನ್ನು ದಹಿಸುವ ಶಿವನ ಮುಖ ದಂತೆ ಭೀಷಣವಾಗಿತ್ತು. ಮುನಿಗಳು ಆಕಸ್ಮಿಕವಾಗಿ ಹೀಗೆ ಜ್ವಲಿಸುವ ಕೋಪಾಗ್ನಿ ಯಿಂದ ಕೂಡಿದ ಭಾರ್ಗವ ಮೂರ್ತಿಯನ್ನು ನೋಡಿ ಭಯಗೊಂಡರು.

೫೯. ಆಗ ಎಲ್ಲ ಮುನಿಗಳು "ರಾಮನೆ ಪ್ರಸನ್ನನಾಗು, ಜಯಶೀಲನಾಗು" ಮುಂತಾದ ವಚನಗಳಿಂದ ಸ್ತುತಿಮಾಡಿದರು. ತರುವಾಯ ಸಮುದ್ರದ ಗೃಹಾಂತವು ಅಸ್ತ್ರಾಗ್ನಿಜ್ವಾಲೆಯಿಂದ ಸ್ಫುರಿಸುವ ಧೂಮಜಾಲದಿಂದ ಭೇದಿಸಲ್ಪಟ್ಟಿತು.

ಬಭೂವ ಚ್ಛನ್ನಮಂಭೋಧೇರಂತಃಪುರಮಶೇಷತಃ ।
ಜ್ವಲದಸ್ತ್ರಾನಲಜ್ವಾಲಾಪರಿತಾಪಪರಾಹತಃ ॥ ೬೦ ॥

ಅತ್ಯರಿಚ್ಯತ ಸಂಭ್ರಾಂತಸಲಿಲೌಘ ಉದನ್ವತಃ ।
ತಿಮಿಂಗಿಲತಿಮಿಗ್ರಾಹನಕ್ರಮತ್ಸ್ಯಾಹಿಕಚ್ಛಪಾಃ ॥ ೬೧ ॥

ಪ್ರಜಗ್ಮುಃ ಪರಮಾಮಾರ್ತಿಂ ಪ್ರಾಣಿನಃ ಸಲಿಲೇಶಯಾಃ ।
ಉತ್ಪತನ್ನಿಪತತ್ತಾಮ್ಯನ್ನಾನಾಸತ್ತ್ವೋದ್ಧತೋರ್ಮಿಭಿಃ ॥ ೬೨ ॥

ಪ್ರಕ್ಷೋಭಂ ಭೃಶಮಂಭೋಧಿಃ ಸಹಸಾ ಸಮುಪಾಗಮತ್ ।
ತ್ರಾಸರಾಸಂ ಚ ವಿಪುಲಮಂಭಸಾ ಪ್ಲವತಾ ಸಹ ॥ ೬೩ ॥

ಉದ್ವೇಲತಾಮಿತಾಸ್ತಪ್ತಾಃ ಸಲಿಲಾಂತರಚಾರಿಣಃ ॥ ೬೪ ॥

---

೬೦. ಹೀಗೆ ಸಮುದ್ರರಾಜನ ಸಂಪೂರ್ಣ ಅಂತಃಪುರವು ಮುಚ್ಚಿಹೋಯಿತು. ಆಗ ಸಮುದ್ರದ ಜಲರಾಶಿಯು ಜ್ವಲಿಸುವ ಅಸ್ತ್ರಾಗ್ನಿಜ್ವಾಲೆಗಳ ತಾಪದಿಂದ ಬಹಳ ಪೀಡಿತವಾಯಿತು.

೬೧. ಆಗ ಸಮುದ್ರದ ಜಲರಾಶಿಯು ಅಸ್ತ್ರಾಗ್ನಿ ಸಂಭ್ರಮದಿಂದ ಅತಿರೇಕವನ್ನು ಹೊಂದಿತು. ಅಲ್ಲಿದ್ದ ತಿಮಿಂಗಿಲ, ತಿಮಿ, ಗ್ರಾಹ, ನಕ್ರ, ಮತ್ಸ್ಯ, ಸರ್ಪ, ಮತ್ತು ಆಮೆ ಮುಂತಾದ ಪ್ರಾಣಿಗಳು ಪೀಡಿತವಾದುವು.

೬೨. ಹೀಗೆ ಜಲದಲ್ಲಿ ವಾಸಮಾಡಿದ್ದ ಪ್ರಾಣಿಗಳು ಅತಿಯಾದ ಪೀಡೆಯನ್ನು ಹೊಂದಿದುವು. ಆಗ ಮೇಲೆ ಹಾರುವ, ಕೆಳಕ್ಕೆ ಬೀಳುವ, ದಣಿದಿರುವ ಅನೇಕ ಜಲಚರ ಪ್ರಾಣಿಗಳಿಂದ ಅಲೆಗಳು ಹೊಡೆಯಲ್ಪಟ್ಟುವು.

೬೩. ಇದರಿಂದ ಸಮುದ್ರವು ಅಕಸ್ಮಾತ್ತಾಗಿ ಹೆಚ್ಚಾದ ಕ್ಷೋಭವನ್ನು ಹೊಂದಿತು. ಮತ್ತು ಅತ್ತಿತ್ತ ಹೊಡೆತದಿಂದ ಪ್ರವಹಿಸುತ್ತಿರುವ ನೀರಿನಿಂದ ಭಯದಿಂದ ಗರ್ಜಿಸಿತು.

೬೪. ಆಗ ಆ ಸಮುದ್ರದ ಜಲರಾಶಿಯಲ್ಲಿ ವಾಸಮಾಡಿ ಸಂಚರಿಸುತ್ತಲಿದ್ದ ಅನೇಕ ಬಗೆಯ ಜಲಚರ ಪ್ರಾಣಿಗಳು ಮಿತಿಯಿಲ್ಲದಿರುವಷ್ಟು ತಪಿಸಲ್ಪಟ್ಟು ಶ್ರಾಂತವಾದುವು.

ತತಸ್ತಸ್ಮಾಚ್ಛರಾಜ್ಜ್ವಾಲಾಃ ಫೂತ್ಕೃತಾಶೇಷಭೀಷಣಾಃ ।
ನಿರೂಪಿತಮಿವ ವ್ಯಕ್ತಂ ನಿಶ್ಚೇರುಃ ಸರ್ವತೋದಿಶಮ್ || ೬೫ ||

ತತಃ ಪ್ರಚಂಡಪವನೈಃ ಸರ್ವತಃ ಪರಿವರ್ತಿತಮ್ ।
ಅಗ್ನಿಜ್ವಾಲಾಮಯಂ ರಕ್ತವಿತಾನಾಭಮಲಕ್ಷ್ಯತ || ೬೬ ||

ಪ್ರಲಯಾಬ್ಧೇರಿವಾತ್ಯರ್ಥಮಸ್ತ್ರಾಗ್ನಿವ್ಯಾಕುಲಾಂಭಸಃ ।
ಸಮುದ್ರಿಕ್ತತಯಾ ತಸ್ಯ ತರಂಗಾಸ್ತೀರಮಭ್ಯಯುಃ || ೬೭ ||

ಅಸ್ತ್ರಾಗ್ನಿವಿದ್ಧಾಕುಲಿತ ಜಲಘೋಷೇಣ ಭೂಯಸಾ ।
ಕಕುಭೋ ಬಧಿರೀಕುರ್ವನ್ನಲಕ್ಷ್ಯತ ಪಯೋನಿಧಿಃ || ೬೮ ||

ಪರಿತೋಽಸ್ತ್ರಾನಲಜ್ವಾಲಾಪರಿವೀತಜಲಾವಿಲಮ್ ।
ಜಗಾಮ ಪರಮಾಮಾರ್ತಿಂ ಸಹ್ಯಃ ಸದ್ಯಸ್ತದಾಶ್ರಯಃ || ೬೯ ||

---

೬೫. ತರುವಾಯ ಆ ಬಾಣದಿಂದ ಫೂತ್ಕಾರ ಮಾಡುತ್ತಲಿರುವುದರಿಂದ ಸಮಸ್ತ ಜನರಿಗೆ ಭಯವನ್ನು ಉಂಟುಮಾಡುವ ಅಗ್ನಿಜ್ವಾಲೆಗಳು ಎಲ್ಲವನ್ನೂ ಪ್ರಕಾಶಪಡಿಸುವುದಕ್ಕೋಸ್ಕರವೋ ಎಂಬಂತೆ ಸಮಸ್ತ ದಿಕ್ಕುಗಳಲ್ಲಿಯೂ ಹೊರಟುವು.

೬೬. ಅನಂತರದಲ್ಲಿ ಪ್ರಚಂಡವಾದ ಮಾರುತದಿಂಪ ಸುತ್ತಲೂ ಪರಿವರ್ತಿಸಲ್ಪಟ್ಟಿದ್ದ ಬಾಣಾಗ್ನಿಜ್ವಾಲಾಮಯಮಾದ ತೇಜೋಮಂಡಲವು ಕೆಂಪಾದ ಮೇಲುಗಟ್ಟನ್ನು ಹಾಕಿರುವಂತೆ ಕಾಣಿಸಿತು.

೬೭. ಆ ಅಸ್ತ್ರಜ್ವಾಲೆಗಳಿಂದ ವ್ಯಾಕುಲವಾದ ಜಲರಾಶಿಯುಳ್ಳ ಮತ್ತು ಪ್ರಲಯದಕಾಲದ ಸಮುದ್ರದಂತೆ ಉಕ್ಕಿಬರುತ್ತಿರುವ ಆ ಸಮುದ್ರದ ತರಂಗಗಳು ತೀರಭೂಮಿಗೆ ಬಂದುವು.

೬೮. ಸಮುದ್ರವು ಅಸ್ತ್ರಾಗ್ನಿಜ್ವಾಲೆಗಳಿಂದ ಹೊಡೆಯಲ್ಪಟ್ಟು ವ್ಯಾಕುಲವಾದ ಜಲರಾಶಿಯ ಹೆಚ್ಚಾದ ಉಗ್ರಶಬ್ದದಿಂದ ದಿಕ್ಕುಗಳನ್ನು ಕಿವುಡನ್ನಾಗಿ ಮಾಡುತ್ತಿರುವಂತೆ ಪ್ರಕಾಶವಾಯಿತು.

೬೯. ಹೀಗೆ ಸುತ್ತಲೂ ಅಸ್ತ್ರಾಗ್ನಿಜ್ವಾಲೆಗಳಿಂದ ಸುತ್ತಿಕೊಂಡಿರುವ ತಪ್ತ ಜಲಗಳಿಂದ ವ್ಯಾಪ್ತವಾದ ಸಮುದ್ರವನ್ನು ಆಶ್ರಯಿಸಿದ ಸಹ್ಯಪರ್ವತವು ಕೂಡಲೆ ಅತಿಶಯವಾದ ಕ್ಲೇಶವನ್ನು ಹೊಂದಿತು.

ಆಕರ್ಣಾಕೃಷ್ಟಕೋದಂಡಂ ದೃಷ್ಟ್ವಾ ರಾಮಂ ಪಯೋನಿಧಿಃ ।
ವಿಷಾದಮಗಮತ್ತೀವ್ರಂ ಯಮಂ ದೃಷ್ಟ್ವೇವ ಪಾತಕೀ ॥ ೭೦ ॥

ಭಯಕಂಪಿತಸರ್ವಾಂಗಸ್ತತೋ ನದನದೀಪತಿಃ ।
ವಿಹಾಯ ಸಹಜಂ ಧೈರ್ಯಂ ಭೀರುತ್ವಂ ಸಮುಪಾಗಮತ್ ॥ ೭೧ ॥

ತತಃ ಸ್ವರೂಪಮಾಸ್ಥಾಯ ಸರ್ವಾಭರಣಭೂಷಿತಃ ।
ಉತ್ತೀರ್ಯಮಾಣಃ ಸ್ವಜಲಂ ವರುಣಃ ಪ್ರತ್ಯದೃಶ್ಯತ ॥ ೭೨ ॥

ಕೃತಾಂಜಲಿಃ ಸಾರ್ವಹಸ್ತಃ ಪ್ರಚೇತಾ ಭಾರ್ಗವಾಂತಿಕಮ್ ।
ತ್ವರಯಾಭ್ಯಾಯಯೌ ಶೀಘ್ರಂಸಾಯಕಾದ್ಭೀತಭೀತವತ್ ॥ ೭೩ ॥

ಅಭ್ಯೇತ್ಯಾಕೃಷ್ಟಧನುಷಃ ಸ ತಸ್ಯ ಚರಣಾಬ್ಜಯೋಃ ।
ಅಬ್ರವೀಚ್ಚ ಭೃಶಂ ಭೀತಃ ಸಂಭ್ರಮಾಕುಲಿತಾಕ್ಷರಮ್ ॥ ೭೪ ॥

---

೭೦. ಆಗ ಸಮುದ್ರವು ಕಿವಿಯವರೆಗೆ ಸೆಳೆದಿರುವ ಬಿಲ್ಲಿನಿಂದ ಕೂಡಿದ ಭಾರ್ಗವರಾಮನನ್ನು ಕಂಡು ಮಹಾಪಾತಕವನ್ನು ಆಚರಿಸಿದ ಮನುಷ್ಯನು ಯಮನನ್ನು ಕಂಡು ಭಯಪಡುವಂತೆ ವಿಶೇಷವಾಗಿ ವಿಷಾದವನ್ನು ಹೊಂದಿತು.

೭೧. ತರುವಾಯ ಹೀಗೆ ಭಯದಿಂದ ನಡುಗುತ್ತಿದ್ದ ಸಕಲಾವಯವಗಳುಳ್ಳ, ನದ-ನದಿಗಳ ಪತಿಯಾದ ಸಮುದ್ರರಾಜನು ತನಗೆ ಸಹಜವಾಗಿದ್ದ ಧೈರ್ಯವನ್ನು ತ್ಯಜಿಸಿ ಭಯಸ್ವಭಾವವನ್ನು ಹೊಂದಿತು.

೭೨. ಅನಂತರದಲ್ಲಿ ದಿವ್ಯಮೂರ್ತಿಯನ್ನು ಧರಿಸಿ ಸಮಸ್ತ ಆಭರಣಗಳಿಂದ ಅಲಂಕರಿಸಲ್ಪಟ್ಟ ವರುಣರಾಜನು ತನ್ನ ಜಲರಾಶಿಯಿಂದ ದಾಟಿಬರುತ್ತಿರುವಂತೆ ಕಾಣಿಸಿಕೊಂಡನು.

೭೩. ಅನೇಕ ಕಾಣಿಕೆಗಳನ್ನು ಧರಿಸಿದ ವರುಣನು ಭಾರ್ಗವರಾಮನ ಬಾಣದಿಂದ ಅತಿಯಾಗಿ ಭಯಪಟ್ಟವನಾಗಿ ವಿನಯ ಅಂಜಲಿಕಟ್ಟಿಕೊಂಡು ವೇಗದಿಂದ ಶೀಘ್ರವಾಗಿ ಭಾರ್ಗವರಾಮನ ಸನ್ನಿಧಿಗೆ ಬಂದನು.

೭೪. ಬಿಲ್ಲನ್ನು ಹೆದೆ ಏರಿಸಿ ಆಕರ್ಷಿಸಿರುವ ಭಾರ್ಗವರಾಮನ ಪಾದಾರವಿಂದ ಸನ್ನಿಧಿಗೆ ವರುಣನು ಬಂದು ಹೆಚ್ಚಾಗಿ ಭಯಪಟ್ಟವನಾಗಿ ಸಂಭ್ರಮದಿಂದ ವ್ಯಾಕುಲವಾದ ಅಕ್ಷರಗಳಿಂದ ಕೂಡಿದ ವಚನವನ್ನು ಆಡಿದನು.

**ರಕ್ಷ ಮಾಂ ಭೃಗುಶಾರ್ದೂಲ ಕೃಪಯಾ ಶರಣಾಗತಮ್ ।**
**ಅಪರಾಧಮಿಮಂ ರಾಮ ಮಯಾ ಕೃತಮಜಾನತಾ ॥ ೭೫ ॥**

**ಸ್ಥಿತೋಽಸ್ಮಿ ತವ ನಿರ್ದೇಶೇ ಶಾಧಿ ಕಿಂ ಕರವಾಣಿ ವೈ ॥ ೭೬ ॥**

**ಇತಿ ಶ್ರೀ ಬ್ರಹಾಂಡಪುರಾಣೇ ಉತ್ತರಾರ್ಧೇ**
**ಸಪ್ತಪಂಚಾಶತ್ತಮೋಽಧ್ಯಾಯಃ.**

---

೭೫. ಭೃಗುಮುನಿ ಶ್ರೇಷ್ಠನೆ! ಶರಣಾಗತನಾಗಿ ಬಂದ ದೀನನಾದ ನನ್ನನ್ನು ದಯೆಯಿಂದ ರಕ್ಷಿಸು, ರಾಮನೆ! ಈ ಅಪರಾಧವು ನನ್ನಿಂದ ಅಜ್ಞಾನದಿಂದ ಮಾಡಲ್ಪಟ್ಟಿರುವುದು, ಕ್ಷಮಿಸು.

೭೬. ಈಗ ನಾನು ನಿನ್ನ ಆಜ್ಞಾಪಾಲಕನಾದ ಸೇವಕನಾಗಿರುವೆನು. ನನಗೆ ಆಜ್ಞೆಯನ್ನು ಕೊಡು. ಈಗ ನಾನು ಯಾವ ನಿನ್ನ ಕರ್ತವ್ಯವನ್ನು ಮಾಡಲಿ?

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಐವತ್ತೇಳನೆಯ ಅಧ್ಯಾಯವು
ಸಮಾಪ್ತವು.

# ಅಷ್ಟಪಂಚಾಶತ್ತಮೋಽಧ್ಯಾಯಃ

ಜೈಮಿನಿರುವಾಚ :—

ಏವಂ ಬ್ರುವಾಣಂ ವರುಣಂ ವಿಲೋಕ್ಯ ಪತಿತಂ ಭುವಿ ।
ಸಂಜಹಾರ ಪುನರ್ಧೀಮಾನಸ್ತ್ರಂ ಭೃಗುಕುಲೋದ್ವಹಃ ॥ ೧ ॥

ಸಂಹೃತಾಸ್ತ್ರಸ್ತತೋರಾಮೋ ವರುಣಂ ಪುರತಃ ಸ್ಥಿತಮ್ ।
ವಿಲೋಕ್ಯ ವಿಗತಕ್ರೋಧಸ್ತಮುವಾಚ ಹಸನ್ನಿವ ॥ ೨ ॥

ಗೋಕರ್ಣನಿಲಯಾಃ ಪೂರ್ವಮಿಮೇ ಮಾಂ ಮುನಿಪುಂಗವಾಃ ।
ಸಮಾಯಾತಾ ಮಹೇಂದ್ರಾದ್ರೌ ನಿವಸಂತಂ ಸರಿತ್ಪತೇ ॥ ೩ ॥

ತ್ವತ್ತೋಯೇ ಮೇದಿನೀಂ ಪೂರ್ವಂ ಖನದ್ಭಿಃ ಸಗರಾತ್ಮಜೈಃ ।
ಅಧೋ ನಿಪಾತಿತಂ ಕ್ಷೇತ್ರಂ ಗೋಕರ್ಣಮೃಷಿಸೇವಿತಮ್ ॥ ೪ ॥

---

೧. ಜೈಮಿನಿ ಮುನಿಯು ಈ ರೀತಿಯಾಗಿ ಹೇಳಿದನು :—ವಿವೇಕಿಯೂ ಭೃಗುಕುಲ ತಿಲಕನೂ ಆದ ರಾಮನು ನೆಲದಲ್ಲಿ ಬಿದ್ದು ಈ ರೀತಿಯಾಗಿ ಅರಿಕೆ ಮಾಡುತ್ತಲಿದ್ದ ವರುಣರಾಜನನ್ನು ಕಂಡು ತನ್ನ ಅಸ್ತ್ರವನ್ನು ಮತ್ತೆ ಉಪಸಂಹಾರ ಮಾಡಿದನು.

೨. ತರುವಾಯ ಮುಂದುಗಡೆಯಲ್ಲಿ ನಿಂತಿರುವ ವರುಣನನ್ನು ನೋಡಿ ಅಸ್ತ್ರವನ್ನು ಉಪಸಂಹಾರಮಾಡಿದ ರಾಮನು ಕೋಪದಿಂದ ನಿರ್ಮುಕ್ತನಾಗಿ ನಗುತ್ತ ವರುಣನಿಗೆ ಹೀಗೆ ಹೇಳಿದನು.

೩. ಜಲಾಧಿಪತಿಯಾದ ವರುಣನೆ! ಹಿಂದೆ ಗೋಕರ್ಣಕ್ಷೇತ್ರದಲ್ಲಿ ವಾಸ ಮಾಡುತ್ತಲಿದ್ದ ಈ ಮಹರ್ಷಿಶ್ರೇಷ್ಠರು ಮಹೇಂದ್ರಗಿರಿಯಲ್ಲಿ ವಾಸಿಸುವ ನನ್ನ ಸಮೀಪಕ್ಕೆ ಬಂದಿರುವರು.

೪. ಪೂರ್ವದಲ್ಲಿ ಭೂಮಿಯನ್ನು ಅಗೆಯುತ್ತಿದ್ದ ಸಗರರಾಜ ಕುಮಾರರಿಂದ ಅನೇಕ ಮುನಿವೃಂದದಿಂದ ಸೇವಿಸಲ್ಪಟ್ಟ ಗೋಕರ್ಣಕ್ಷೇತ್ರವು ನಿನ್ನ ಜಲರಾಶಿಯ ಕೆಳಭಾಗದಲ್ಲಿ ಬೀಳಿಸಲ್ಪಟ್ಟಿರುವುದು.

ಉಪಲಬ್ಧುಮಿಮೇ ಭೂಯಃ ಕ್ಷೇತ್ರಂ ತದ್ಭವವಲ್ಲಭಮ್ ।
ಅಧಾವನ್ಮಾಮುಪಾಗಮ್ಯ ಮುನಯಸ್ತೀರ್ಥವಾಸಿನಃ ॥ ೫ ॥

ಏಷಾಮರ್ಥೇ ತತಃ ಸೋಽಹಂ ಮಹೇಂದ್ರಾದಚಲೋತ್ತಮಾತ್ ।
ಭವಂತಮಾಗತೋ ದ್ರಷ್ಟುಂ ಸಹೈಭಿರ್ಮುನಿಪುಂಗವೈಃ ॥ ೬ ॥

ತಸ್ಮಾನ್ಮದರ್ಥೇ ಸಲಿಲಂ ಸಮುತ್ಸಾರ್ಯಾತ್ಮನೋ ಭವಾನ್ ।
ದಾತುಮರ್ಹತಿ ತತ್ಕ್ಷೇತ್ರ ಮೇಷಾಂ ತೋಯೇ ಚ ಪೂರ್ವವತ್ ॥ ೭ ॥

ಜೈಮಿನಿರುವಾಚ :—

ಇತಿ ತಸ್ಯ ವಚಃ ಶ್ರುತ್ವಾ ವರುಣೋ ಯಾದಸಾಂ ಪತಿಃ ।
ನಿರೂಪ್ಯ ಮನಸಾ ರಾಮಮಿದಂ ಭೂಯೋಽಬ್ರವೀದ್ವಚಃ ॥ ೮ ॥

ವರುಣ ಉವಾಚ :—

ನ ಶಕ್ಯಮುತ್ಸಾರಯಿತುಂ ಮದಂಭಃ ಕೇನ ಚಿದ್ಭವೇತ್ ।
ತಥಾ ಹಿ ಮೇ ವರೋ ದತ್ತಃ ಪುರಾನೇನ ವಿರಿಂಚಿನಾ ॥ ೯ ॥

---

೫. ಆ ಉತ್ತಮ ತೀರ್ಥದಲ್ಲಿ ವಾಸಮಾಡುವ ಈ ಮಹರ್ಷಿಗಳು ಶಂಕರನಿಗೆ ಅತಿಪ್ರಿಯವಾದ ಕ್ಷೇತ್ರವನ್ನು ಮತ್ತೆ ಹೊಂದಲೋಸ್ಕರ ವೇಗವಾಗಿ ಧಾವಿಸಿ ನನ್ನ ಸನ್ನಿಧಿಗೆ ಬಂದಿರುವರು.

೬. ಆದ್ದರಿಂದ ಈ ಮುನಿಗಳಿಗೋಸ್ಕರ ಆ ನಾನು ನಿನ್ನನ್ನು ನೋಡುವುದಕ್ಕೋಸ್ಕರ ಈ ವಂದ್ಯರಾದ ಮುನಿಜನರೊಡನೆ ಪರ್ವತೋತ್ತಮವಾದ ಮಹೇಂದ್ರಗಿರಿಯನ್ನು ಬಿಟ್ಟು ಇಲ್ಲಿಗೆ ಬಂದಿರುವೆನು.

೭. ಆದುದರಿಂದ ನೀನು ನನಗೋಸ್ಕರವಾಗಿ ನಿನ್ನ ಜಲರಾಶಿಯನ್ನು ಒಂದೆಡೆಗೆ ಒತ್ತಿ ಜಲದಲ್ಲಿ ಮುಳುಗಿದ್ದ ಆ ಕ್ಷೇತ್ರವನ್ನು ಮೊದಲಿನಂತೆ ಅವರಿಗೆ ಕೊಡಲು ಅರ್ಹನಾಗಿದ್ದೀಯೆ.

೮. ಜೈಮಿನಿ ಮುನಿಯು ಮುಂದುವರಿಸಿ ಹೇಳಿದನು ;—ಜಲಜಂತುಗಳಿಗೆ ಪತಿಯಾದ ವರುಣರಾಜನು ಈ ಭಾರ್ಗವನ ವಚನವನ್ನು ಕೇಳಿ ಮನಸ್ಸಿನಲ್ಲಿ ಯೋಚಿಸಿ ಮತ್ತೆ ರಾಮನನ್ನು ಕುರಿತು ಈ ರೀತಿಯಾಗಿ ವಚನವನ್ನಿತ್ತನು.

೯. ವರುಣನು ಇಂತೆಂದನು :—ನನ್ನ ಜಲರಾಶಿಯು ಯಾರೊಬ್ಬನಿಂದಲೂ ಹಿಂದಕ್ಕೆ ಹೋಗುವಂತೆ ಪರಿವರ್ತಿಸಲಾಗುವುದಿಲ್ಲ. ಇದು ಸೃಷ್ಟಿಕರ್ತನಾದ ಬ್ರಹ್ಮದೇವನಿಂದ ಪೂರ್ವದಲ್ಲಿ ನನಗೆ ದತ್ತವಾದ ವರವಾಗಿರುವುದು.

ಸೋಽಹಂ ತ್ವತ್ತೇಜಸೇದಾನೀಂ ವಿಹಾಯ ಸಹಜಾಂ ಧೃತಿಮ್
ಕಾತರಂ ಸಮುಪಾಯಾತೋ ವಶತಾಂ ತವ ಭಾರ್ಗವ ॥ ೧೦ ॥

ವಿಶಾಮರ್ಥೇ ವಿಶೇಷೇಣ ಭವತಾ ಪರಿಚೋದಿತಃ ।
ಕಥಂ ನ ಕುರ್ಯಾಂ ಕರ್ಮೇದಮಹಂ ಕ್ಷತ್ರಕುಲಾಂತಕ ॥ ೧೧ ॥

ತಸ್ಮಾದ್ಯಾವತ್ಪ್ರಮಾಣಂ ಮೇ ಭವಾನ್ ಸಂಕಲ್ಪಯಿಷ್ಯತಿ ।
ತಾವತ್ಸಂಧಾರಯಿಷ್ಯಾಮಿ ಭೂಮೌ ಸಲಿಲಮಾತ್ಮನಃ ॥ ೧೨ ॥

ಇತಿ ತಸ್ಯ ವಚಃ ಶ್ರುತ್ವಾ ತಥೇತ್ಯುಕ್ತ್ವಾ ಸ ಸಾಯಕಮ್ ।
ಯಥಾಗತಂ ಪ್ರಚಿಕ್ಷೇಪ ಧನುರ್ನಿರ್ಭಿದ್ಯ ಭಾರ್ಗವಃ ॥ ೧೩ ॥

ತತೋ ನಿರೂಪ್ಯ ಸೀಮಾನಂ ದರ್ಶಯಾನೋ ಮಹೀಪತೇ
ಸ್ರುವಂ ಜಗ್ರಾಹ ಮತಿಮಾನ್ ಕ್ಷೇಪ್ತುಕಾಮೋ ಜಲಾಶಯೇ ॥ ೧೪ ॥

---

೧೦. ಭಾರ್ಗವರಾಮನೆ! ಅಂತಹ ನಾನು ನಿನ್ನ ಪ್ರಭಾವದಿಂದ ಈಗ ನನ್ನ ಸಹಜವಾದ ಧೀರತೆಯನ್ನು ಬಿಟ್ಟು ಹೇಡಿತನವನ್ನು ಹೊಂದಿ ನಿನಗೆ ವಶ್ಯನಾಗಿ ಬಂದಿರುವೆನು.

೧೧. ಕ್ಷತ್ರಿಯರ ವಂಶಕ್ಕೆ ಅಂತಕನಾದ ರಾಮನೆ! ಈ ಮುನಿಜನರಿಗೋಸ್ಕರ ವಿಶೇಷವಾಗಿ ನಿನ್ನಿಂದ ಆಜ್ಞಾಪಿಸಲ್ಪಟ್ಟವನಾಗಿ ನಾನು ಈ ಕರ್ಮವನ್ನು ಹೇಗೆತಾನೆ ಮಾಡದೆ ಇರುವೆನು.

೧೨. ಆದುದರಿಂದ ನನ್ನ ಅಗಾಧ ಜಲರಾಶಿಯಲ್ಲಿ ಎಷ್ಟು ಪ್ರಮಾಣವನ್ನು ನೀನು ಸಂಕಲ್ಪಿಸುವೆಯೊ, ಅಷ್ಟು ಪರಿಮಾಣದ ಭೂಮಿಯನ್ನು ನನ್ನ ಜಲಪ್ರಸಾರವನ್ನು ಉಪಸಂಹರಿಸಿ ಧರಿಸುತ್ತೇನೆ.

೧೩. ಆ ಭಾರ್ಗವರಾಮನು ವರುಣದೇವನು ಆಡಿದ ಮಾತನ್ನು ಕೇಳಿ ಹಾಗೆ ಆಗಲೆಂದು ಹೇಳಿ ಬಿಲ್ಲನ್ನು ಭೇದಿಸಿ ಬಾಣವನ್ನು ಜಲಾಧಿಪತಿಯನ್ನು ಗುರಿಯಿಡದೆ ಎಲ್ಲೋ ಹೋಗುವಂತೆ ಎಸೆದನು.

೧೪. ರಾಜನೆ! ತರುವಾಯ ವಿವೇಕಿಯಾದ ಭಾರ್ಗವನು ಸಮುದ್ರದ ಎಲ್ಲೆಯನ್ನು ಯೋಚಿಸಿ ತೋರಿಸುವುದಕ್ಕೋಸ್ಕರ ಜಲಾಶಯದಲ್ಲಿ ಎಸೆಯುವ ಉದ್ದೇಶದಿಂದ ತನ್ನ ಹಸ್ತದಲ್ಲಿ ಸ್ರುವವನ್ನು ಧರಿಸಿದನು.

ಪ್ರಸನ್ನಚೇತಸಂ ರಾಮಂ ಗತರೋಷಮುಥಾತ್ಮನಿ ॥ ೧೫ ॥

ಅಂತರ್ಹಿತೇ ಸರಿನ್ನಾಥೇ ರಾಮಃ ಸ್ರುವಮುದಙ್ಮುಖಃ ।
ಭ್ರಾಮಯಿತ್ವಾತಿವೇಗೇನ ಚಿಕ್ಷೇಪ ಲವಣಾರ್ಣವೇ ॥ ೧೬ ॥

ಕ್ಷಿಪ್ತಸ್ತೇನ ಸಮುದ್ರೇ ತು ದಿಶಮುತ್ತರಪಶ್ಚಿಮಾಮ್ ।
ಗತ್ವಾ ಸ್ರುವೋಽಪತದ್ರಾಜನ್ ಯೋಜನಾನಾಂ ಶತದ್ವಯಮ್॥ ೧೭ ॥

ತೀರ್ಥಂ ಶೂರ್ಪಾರಕಂ ನಾಮ ಸರ್ವಪಾಪವಿಮೋಚನಮ್ ।
ವಿಶ್ರುತಂ ಯತ್ತ್ರಿಲೋಕೇಷು ತೀರೇ ನದನದೀಪತೇಃ ॥ ೧೮ ॥

ತೀರ್ಥಂ ತದಂತರೀಕೃತ್ಯ ಸ್ರುವೋ ರಾಮಕರಾಚ್ಚ್ಯುತಃ ।
ನಿಪಪಾತ ಮಹಾರಾಜ ಸೂಚಯನ್ ರಾಮವಿಕ್ರಮಮ್ ॥ ೧೯ ॥

---

೧೫. ಅನಂತರದಲ್ಲಿ ಕೋಪವನ್ನು ಬಿಟ್ಟು ತನ್ನಲ್ಲಿ ಪ್ರಸನ್ನವಾದ ಅಂತಃಕರಣವುಳ್ಳ ರಾಮನನ್ನು ನೋಡಿ ವರುಣನು ಅದೃಶ್ಯನಾದನು.

೧೬. ಆಗ ಭಾರ್ಗವರಾಮನು ಉತ್ತರದಿಕ್ಕಿಗೆ ಅಭಿಮುಖನಾಗಿ ನಿಂತುಕೊಂಡು ಅತಿವೇಗದಿಂದ ಸ್ರುವವನ್ನು ತಿರುಗಿಸಿ ಅದನ್ನು ಲವಣಸಮುದ್ರದಲ್ಲಿ ಎಸೆದನು.

೧೭. ರಾಜನೆ! ಸಮುದ್ರಕ್ಕೆ ಎಸೆಯಲ್ಪಟ್ಟ ಆ ಸ್ರುವವು ಪಶ್ಚಿಮ–ಉತ್ತರ ದಿಗಂತರಕ್ಕೆ ಎರಡು ನೂರು ಯೋಜನ ಪರಿಮಾಣದಷ್ಟು ದೂರಸ್ಥಳಕ್ಕೆ ಹೋಗಿ ನೀರಿನಲ್ಲಿ ಬಿದ್ದಿತು.

೧೮. ನದ–ನದಿಗಳ ಪತಿಯಾದ ಸಮುದ್ರದ ತೀರದಲ್ಲಿ ಸಮಸ್ತ ಪಾಪಗಳಿಂದ ಮೋಕ್ಷವನ್ನು ಸಂಪಾದಿಸುವ ಶೂರ್ಪಾರಕವೆಂಬ ತೀರ್ಥವಿರುವುದು. ಅದು ಮೂರು ಲೋಕಗಳಲ್ಲಿಯೂ ಪ್ರಖ್ಯಾತಿಯನ್ನು ಹೊಂದಿರುವುದು.

೧೯. ಮಹಾರಾಜನೆ! ಭಾರ್ಗವರಾಮನ ಹಸ್ತದಿಂದ ಪ್ರಯೋಗಿಸಲ್ಪಟ್ಟ ಸ್ರುವವು ಆ ತೀರ್ಥವನ್ನು ಅವಧಿಯನ್ನಾಗಿ ಮಾಡಿ ರಾಮನ ವಿಕ್ರಮವನ್ನು ಸೂಚಿಸುತ್ತ ಕೆಳಗೆ ಬಿದ್ದಿತು.

ಯತ್ರಾಭೂದ್ರಾಮಸೃಷ್ಟಾಯಾ ಭುವೋ ನಿಷ್ಠಾಥ ಪಾರ್ಥಿವ ।
ತೀರ್ಥಂ ಶೂರ್ಪಾರಕಂ ತತ್ತು ಶ್ರೀಮಲ್ಲೋಕಪರಿಶ್ರುತಮ್ ॥ ೨೦ ॥

ಉತ್ಸಾರಯಿತ್ವಾ ಸಲಿಲಂ ಸಮುದ್ರಸ್ತಾವದಾತ್ಮನಃ ।
ಅತಿಷ್ಠದಪಸೃತ್ಯೋರ್ವೀಂ ದತ್ತ್ವಾ ರಾಮಾಯ ಪಾರ್ಥಿವ ॥ ೨೧ ॥

ಅನತಿಕ್ರಾಂತಮರ್ಯಾದೋ ಯಥಾಕಾಲಂ ಭೃಗೂದ್ವಹಃ ।
ಸಮಯಂ ಸ್ಥಾಪಯಾಮಾಸ ತಸ್ಯೈವಾನುಮತೇ ಭುವಿ ॥ ೨೨ ॥

ವಿಜ್ಞಾಯ ಪೂರ್ವಸೀಮಾಂತಾಂ ಭುವಮಭ್ಯುತ್ಸಸರ್ಜ ಹ ॥ ೨೩ ॥

ವ್ಯಸ್ಮಯಂತ ಸುರಾಃ ಸರ್ವೇ ದೃಷ್ಟ್ವಾ ರಾಮಸ್ಯ ವಿಕ್ರಮಮ್ ।
ನಗರ ಗ್ರಾಮಸೀಮಾನಃ ಕಿಂಚಿತ್ಕಿಂಚಿತ್ಕ್ವಚಿತ್ಕ್ವಚಿತ್ ॥ ೨೪ ॥

---

೨೦. ಪಾರ್ಥಿವನೆ! ತರುವಾಯ ಭಾರ್ಗವನಿಂದ ಸೃಷ್ಟಿಸಲ್ಪಟ್ಟ ಭೂಮಿಯ ಸೀಮಾಭಾಗವು ಎಲ್ಲಿದ್ದಿತೋ ಅಲ್ಲಿರುವುದು ಮೂರುಲೋಕಗಳಲ್ಲಿ ಪ್ರಖ್ಯಾತಿಯನ್ನು ಪಡೆದ ಮಾಹಾತ್ಮ್ಯದಿಂದ ಕೂಡಿದ ಶೂರ್ಪಾರಕವೆಂಬ ತೀರ್ಥವು.

೨೧. ಪಾರ್ಥಿವನೆ! ಸಮುದ್ರವು ತನ್ನ ಜಲರಾಶಿಯನ್ನು ಹಿಂದಕ್ಕೆ ಸೆಳೆದುಕೊಂಡು ಭೂಮಿಯನ್ನು ಮೇಲಕ್ಕೆ ಎತ್ತಿ ಅದನ್ನು ರಾಮನಿಗೆ ಒಪ್ಪಿಸಿ ತನ್ನ ಸ್ಥಾನದಲ್ಲಿ ನಿಂತಿತು.

೨೨. ಆಗ ಭಾರ್ಗವನು ಕಾಲವನ್ನು ಅನುಸರಿಸಿ ಮರ್ಯಾದೆಯನ್ನು ಅತಿಕ್ರಮಿಸದೆ ಸಮುದ್ರವು ಒಪ್ಪುವ ತನ್ನ ಇಷ್ಟವಾದ ಸಮಯವನ್ನು ಪರಿಪಾಲಿಸುವಂತೆ ಇರಿಸಿದನು.

೨೩. ಸಮುದ್ರವು ಸಮಯವನ್ನು ಅಂಗೀಕರಿಸಿ ಪೂರ್ವ ಸೀಮೆಯ ಒಳಗಿರುವ ಭೂಮಿಯನ್ನು ಅರಿತು ಅದನ್ನು ಬಿಟ್ಟುಕೊಟ್ಟಿತು.

೨೪. ಆಗ ಭಾರ್ಗವರಾಮನ ಅಸಾಧಾರಣ ವಿಕ್ರಮವನ್ನು ನೋಡಿ ಎಲ್ಲ ದೇವತೆಗಳು ವಿಸ್ಮಯಗೊಂಡರು. ಮತ್ತು ಸಮುದ್ರದಿಂದ ಬಿಡಲ್ಪಟ್ಟ ಭೂಮಿಯಲ್ಲಿ ನಗರ ಗ್ರಾಮಗಳ ಸೀಮಾಭಾಗಗಳು ಅಲ್ಲಲ್ಲಿ ಒಂದೊಂದು ಕಾಣಿಸಿಕೊಂಡುವು.

ಸಹ್ಯೇ ತು ಪೂರ್ವವತ್ತಸ್ಮಿನ್ ಅಬ್ಧೇರಪಸೃತೇಽಂಭಸಿ ।
ತತ್ರ ದೈವಾತ್ತಥಾ ಸ್ಥಾನಾನ್ನಿಮ್ನತ್ವಾತ್ಸ ಪ್ರಲಕ್ಷ್ಯತ ॥ ೨೫ ॥

ತತಸ್ತೇಷಾಂ ಭೃಗುಶ್ರೇಷ್ಠೋ ಮುನೀನಾಂ ಭಾವಿತಾತ್ಮನಾಮ್ ।
ಯಥಾಭಿಲಷಿತಂ ಸ್ಥಾನಂ ಪ್ರದದೌ ಪ್ರೀತಿಪೂರ್ವಕಮ್ ॥ ೨೬ ॥

ತತಸ್ತೇ ಮುನಯಃ ಸರ್ವೇ ಹರ್ಷೇಣ ಮಹತಾನ್ವಿತಾಃ ।
ಕೃತಕೃತ್ಯಾ ಭೃಶಂ ರಾಮಮಾಶಿಷಾ ಸಮಪೂಜಯನ್ ॥ ೨೭ ॥

ಅಥೈತೈರಭ್ಯನುಜ್ಞಾತೋ ಯಯೌ ಪ್ರಾಪ್ತಮನೋರಥಃ ॥ ೨೮ ॥

ಗತೇ ಮುನಿವರೇ ರಾಮೇ ದೇಶಾತ್ತಸ್ಮಾನ್ನಿಜಾಶ್ರಮಮ್ ।
ಸಂಭೂಯ ಮುನಯಃ ಸರ್ವೇ ಪ್ರಜಗ್ಮುಸ್ತೀರಮಂಬುಧೇಃ ॥ ೨೯ ॥

---

೨೫. ಮೊದಲಿನಂತೆ ಸಮುದ್ರದ ನೀರಿನಿಂದ ಆ ಸಹ್ಯಪರ್ವತವು ಬಿಡಲ್ಪಡಲಾಗಿ ದೇವತಾವಾಸವಾದುದರಿಂದ ಆ ಪರ್ವತವು ಕೆಳಗಿನ ಭಾಗದಲ್ಲಿಯೆ ಕಾಣಿಸಿಕೊಳ್ಳಲು ಆರಂಭವಾಯಿತು.

೨೬. ಅನಂತರದಲ್ಲಿ ಭೃಗುಶ್ರೇಷ್ಠನಾದ ರಾಮನು ಸಮಾಧಿಭಾವನೆಯಿಂದ ಪವಿತ್ರವಾದ ಅಂತಃಕರಣವುಳ್ಳ ಮುನಿಗಳಿಗೆ ಅವರ ಇಷ್ಟವನ್ನು ಅನುಸರಿಸಿ ಪ್ರೀತಿ ಪೂರ್ವಕವಾಗಿ ಆ ಸ್ಥಾನವನ್ನು ಕೊಟ್ಟನು.

೨೭. ತರುವಾಯ ಆ ಎಲ್ಲ ಮುನಿಗಳು ಅಪಾರವಾದ ಆನಂದದಿಂದ ಕೂಡಿದವರೂ ಕೃತಕೃತ್ಯರೂ ಆಗಿ ಈ ಉಪಕಾರ ಮಾಡಿದ ರಾಮನನ್ನು ಹೆಚ್ಚಾದ ಆಶೀರ್ವಾದೋಕ್ತಿಗಳಿಂದ ಗೌರವಿಸಿದರು.

೨೮. ಅನಂತರದಲ್ಲಿ ರಾಮನು ತನ್ನ ಇಷ್ಟಾರ್ಥವನ್ನು ಸಾಧಿಸಿ ಕೃತಕೃತ್ಯನಾಗಿ ಆ ಮುನಿವೃಂದದಿಂದ ಸಮ್ಮತಿಯನ್ನು ತೆಗೆದುಕೊಂಡು ಪ್ರಯಾಣಮಾಡಿದನು.

೨೯. ಹೀಗೆ ಮುನಿವರನಾದ ಪರಶುರಾಮನು ಆ ಸ್ಥಳದಿಂದ ತನ್ನ ಆಶ್ರಮಕ್ಕೆ ಹೊರಟುಹೋಗಲಾಗಿ ಎಲ್ಲ ಮಹರ್ಷಿಗಳು ಸೇರಿ ಸಮುದ್ರದ ತೀರ ಸಮೀಪಕ್ಕೆ ಹೋದರು.

ಪರಿಚಂಕ್ರಮ್ಯ ತಾಂ ಭೂಮಿಂ ಯತ್ನೇನ ಮಹತಾನ್ವಿತಾಃ ।
ದದೃಶುಃ ಸರ್ವತೋ ರಾಜನ್ ಹ್ಯರ್ಣವಾಂತಃ ಸ್ಥಿತಾಂ ಮಹೀಮ್ ॥ ೩೦ ॥

ನಿತ್ಯತ್ವಾತ್ ಸರ್ವದೇವಾನಾಮಧಿಷ್ಠಾನತಯಾ ತಥಾ ।
ಖಾತಮಬ್ಧೌ ನಿಪತಿತಂ ನಷ್ಟತೋಯಂ ಚಿರೋಷಿತಮ್ ।
ಅಪಿ ರುದ್ರಪ್ರಭಾವೇಣ ಪ್ರಾಯಾನ್ನಾತ್ಯಂತವಿಪ್ಲವಮ್ ॥ ೩೧ ॥

ತತ್ತೋಯನಿಃಸೃತಂ ಕ್ಷೇತ್ರಮಭೂತ್ಪೂರ್ವದೇವ ಹಿ ।
ಏತದ್ಧಿ ದೇವಸಾಮರ್ಥ್ಯಮಚಿಂತ್ಯಂ ನೃಪಸತ್ತಮ ॥ ೩೨ ॥

ಏವಂ ರಾಮೇಣ ಜಲಧೇಃ ಪುನಃ ಸೃಷ್ಟಾ ವಸುಂಧರಾ ।
ದಕ್ಷಿಣೋತ್ತರತೋ ರಾಜನ್ ಯೋಜನಾನಾಂ ಚತುಃಶತಮ್ ॥ ೩೩ ॥

ನಾತಿಕ್ರಾಮತಿ ಸೋಽದ್ಯಾಪಿ ಸೀಮಾನಂ ಪಯಸಾಂ ನಿಧಿಃ ।
ಕೃಶಂ ರಾಮೇಣ ಮಹತಾ ನ ತು ಸಜ್ಜಂ ಮಹದ್ಧನುಃ ॥ ೩೪ ॥

---

೩೦. ರಾಜನೆ! ಮತ್ತು ಬಹಳ ಪ್ರಯತ್ನದಿಂದ ಕೂಡಿ ಆ ಭೂಮಿಯನ್ನು ಸುತ್ತುತ್ತ ಸಮುದ್ರದ ಒಳಗಿದ್ದ ಎಲ್ಲ ಭೂಭಾಗವನ್ನು ನೋಡಿದರು.

೩೧. ಆದರೆ ಆ ಕ್ಷೇತ್ರಭೂಮಿಯು ನಿರಂತರವಾಗಿ ಸರ್ವ ದೇವತೆಗಳಿಗೆ ಆವಾಸಸ್ಥಳವಾದುದರಿಂದ ಅಗೆಯಲ್ಪಟ್ಟು ಸಮುದ್ರದಲ್ಲಿ ಬಿದ್ದು ಬಹುಕಾಲ ನೀರಿನಲ್ಲಿ ವಾಸಿಸಿ ನೀರಿನಿಂದ ಎದ್ದು ಮೇಲಕ್ಕೆ ಬಂದಿದ್ದರೂ ರುದ್ರದೇವನ ಪ್ರಭಾವದಿಂದ ಹೆಚ್ಚಾದ ಹೀನಸ್ಥಿತಿಯನ್ನು ಹೊಂದಿರಲಿಲ್ಲ.

೩೨. ರಾಜಶ್ರೇಷ್ಠನೆ! ಸಮುದ್ರದ ಜಲದಿಂದ ಹೊರಕ್ಕೆ ಬಂದ ಆ ಕ್ಷೇತ್ರವು ಮೊದಲಿನಂತೆಯೇ ಇತ್ತು. ಇದೊಂದು ದೇವತಾ ಮಾಹಾತ್ಮ್ಯವು. ಇದನ್ನು ಯೋಚಿಸಿ ತಿಳಿಯಲಾಗುವುದಿಲ್ಲ.

೩೩. ರಾಜನೆ! ಈ ರೀತಿಯಾಗಿ ದಕ್ಷಿಣ ಮತ್ತು ಉತ್ತರ ಭಾಗಗಳಲ್ಲಿ ನಾಲ್ಕು ನೂರು ಯೋಜನ ಪರಿಮಿತವಾದ ಭೂಮಿಯು ಸಮುದ್ರದಿಂದ ಮೇಲಕ್ಕೆ ಎತ್ತಿ ಪುನಃ ಸೃಷ್ಟಿಮಾಡಲ್ಪಟ್ಟಿತು.

೩೪. ಆ ಸಮುದ್ರವು ಈಗಲೂ ಕೂಡ ತನ್ನ ಎಲ್ಲೆಯನ್ನು ಸ್ವಲ್ಪವೂ ಮೀರಿ ಬರುವುದಿಲ್ಲ. ಆದರೆ ರಾಮನಿಂದ ಮಹಾಪ್ರಯತ್ನದಿಂದ ತನ್ನ ದೃಢವಾದ ಧನುಸ್ಸು ನಿಗ್ರಹಕ್ಕೆ ಸಜ್ಜವಾಗಿ ಮಾಡಲ್ಪಡಲಿಲ್ಲ.

ಏವಂಪ್ರಭಾವೋ ರಾಮೋಽಸೌ ಸಗರಶ್ಚ ಮಹೀಪತಿಃ ।
ಯಸ್ಯ ಪುತ್ರೈರಯಂ ಖಂಡೋ ಭಾರತೋಽಬ್ಧೌ ನಿಪಾತಿತಃ ॥ ೩೫ ॥

ಯೋಜನಾನಾಂ ಸಹಸ್ರಂ ತು ವರ್ಧಿತಶ್ಚ ಮಹೋದಧಿಃ ।
ರಾಮೇಣಾಭೂತ್ ಪುನಃ ಸೃಷ್ಟಂ ಯೋಜನಾನಾಂ ತು ಷಟ್ಶತಮ್
॥ ೩೬ ॥

ಸಗರಸ್ಯ ಸುತೈರ್ಯಸ್ಮಾದ್ವರ್ಧಿತೋ ಮಕರಾಲಯಃ ।
ತತಃ ಪ್ರಭೃತಿ ಲೋಕೇಷು ಸಾಗರಾಖ್ಯಾಮವಾಪ್ತವಾನ್ ॥ ೩೭ ॥

ಏತತ್ತೇಽಭಿಹಿತಂ ಸಮ್ಯಙ್ಮಹತಶ್ಚರಿತಂ ಮಯಾ ।
ರಾಮಸ್ಯ ಕಾರ್ತವೀರ್ಯಸ್ಯ ಸಗರಸ್ಯ ಮಹೀಪತೇಃ ॥ ೩೮ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ
ಅಷ್ಟಪಂಚಾಶತ್ತಮೋಽಧ್ಯಾಯಃ.

---

೩೫. ಈ ಪರಶುರಾಮನು ಹೀಗೆ ಇಂತಹ ಆಶ್ಚರ್ಯಕರ ಪ್ರಭಾವವುಳ್ಳವನು. ಮತ್ತು ಸಗರ ಚಕ್ರವರ್ತಿಯು ಇಂತಹ ಪ್ರಭಾವಾತಿಶಯವುಳ್ಳವನು. ಆ ಸಗರ ರಾಜಪುತ್ರರಿಂದ ಈ ಭಾರತ ಖಂಡವು ಸಮುದ್ರದಲ್ಲಿ ಕೆಡವಲ್ಪಟ್ಟಿತು.

೩೬. ಮತ್ತು ಒಂದು ಸಹಸ್ರಯೋಜನ ಪರಿಮಾಣದಷ್ಟು ಮಹಾಸಾಗರವು ವೃದ್ಧಿಗೊಳಿಸಲ್ಪಟ್ಟಿತು. ಆದರಲ್ಲಿ ಭಾರ್ಗವನಿಂದ ಮತ್ತೆ ನಾಲ್ಕುನೂರು ಯೋಜನ ಪರಿಮಾಣದ ಭೂಭಾಗವನ್ನು ಬಿಟ್ಟು ಆರುನೂರು ಯೋಜನಗಳು ಮಾತ್ರ ಸಮುದ್ರ ಪರಿಮಾಣವು ನಿರ್ಮಿಸಲ್ಪಟ್ಟಿತು.

೩೭. ಮಕರ-ಮುಂತಾದ ಪ್ರಾಣಿಗಳಿಗೆ ಆವಾಸವಾದ ಸಮುದ್ರವು ಸಗರ ರಾಜನ ಪುತ್ರರಿಂದ ವೃದ್ಧಿಗೊಳಿಸಲ್ಪಟ್ಟಿದ್ದರಿಂದ ಆ ಮೊದಲುಗೊಂಡು ಲೋಕಗಳಲ್ಲ "ಸಾಗರ" ಎಂಬ ಅನ್ವರ್ಥವಾದ ಸಂಜ್ಞೆಯನ್ನು ಹೊಂದಿತು.

೩೮. ರಾಜನೆ! ಈ ರೀತಿಯಾಗಿ ಭಾರ್ಗವರಾಮ, ಕಾರ್ತವೀರ್ಯಾರ್ಜುನ, ಮತ್ತು ಸಗರ ರಾಜರೆಂಬ ಮಹಾತ್ಮರ ಚರಿತ್ರೆಯು ನನ್ನಿಂದ ನಿನಗೆ ಚನ್ನಾಗಿ ಉಪದೇಶಿಸಲ್ಪಟ್ಟಿತು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಐವತ್ತೆಂಟನೆಯ
ಅಧ್ಯಾಯವು ಸಮಾಪ್ತವು.